# ಸ್ವಾತಂತ್ರ್ಯಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ವೈಧವ್ಯದ ಪ್ರತಿನಿಧೀಕರಣ

(ಹಂಪಿ ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು :
ಕೆ.ಟಿ. ಪಾರ್ವತಮ್ಮ

ಮಾರ್ಗದರ್ಶಕರು :
ಡಾ.ಕೆ.ಸಿ.ಶಿವಾರೆಡ್ಡಿ




ಅಧ್ಯಯನಾಂಗ : ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ಕುವೆಂಪು ಅಧ್ಯಯನ ಕೇಂದ್ರ, ಕುಪ್ಪಳಿ.
ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ.

೨೦೧೨

# ಸ್ವಾತಂತ್ರ್ಯಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ವೈಧವ್ಯದ ಪ್ರತಿನಿಧೀಕರಣ

(ಹಂಪಿ ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು :

ಕೆ.ಟಿ. ಪಾರ್ವತಮ್ಮ

ಮಾರ್ಗದರ್ಶಕರು :

ಡಾ.ಕೆ.ಸಿ.ಶಿವಾರೆಡ್ಡಿ




ಅಧ್ಯಯನಾಂಗ : ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕುವೆಂಪು ಅಧ್ಯಯನ ಕೇಂದ್ರ, ಕುಪ್ಪಳಿ.

ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ.

೨೦೧೨

# ಪ್ರಮಾಣ ಪತ್ರ

**'ಸ್ವಾತಂತ್ರ್ಯಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ವೈಧವ್ಯದ ಪ್ರತಿನಿಧೀಕರಣ'** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನಾನು ಪಿ.ಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಒಪ್ಪಿಸಲು ಡಾ.ಕೆ.ಸಿ.ಶಿವಾರೆಡ್ಡಿಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧ ಅಥವಾ ಯಾವುದೇ ಭಾಗವನ್ನು ಹಿಂದೆ ಯಾವುದೇ ಪದವಿ, ಡಿಪ್ಲೊಮೊ, ಫೆಲೋಷಿಪ್ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಘೋಷಿಸುತ್ತೇನೆ.

ವಿದ್ಯಾರಣ್ಯ
ದಿನಾಂಕ : 17·08·2012·

(ಕೆ.ಟಿ.ಪಾರ್ವತಮ್ಮ)
ಕನ್ನಡ ಉಪನ್ಯಾಸಕಿ
ಶರಾವತಿ ಪ್ರಥಮ ದರ್ಜೆ ಕಾಲೇಜು
ಕೋಣಂದೂರು

# <u>ದೃಢೀಕರಣ ಪತ್ರ</u>

ಕೆ.ಟಿ.ಪಾರ್ವತಮ್ಮ ಇವರು **"ಸ್ವಾತಂತ್ರ್ಯಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ವೈಧವ್ಯದ ಪ್ರತಿನಿಧೀಕರಣ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ ಹಂಪಿಯ 'ಭಾಷಾನಿಕಾಯ' ವಿಭಾಗಕ್ಕೆ ಪಿ.ಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢಪಡಿಸುತ್ತೇನೆ.

ವಿದ್ಯಾರಣ್ಯ
ದಿನಾಂಕ : 17.08.2012

**(ಡಾ. ಕೆ.ಸಿ.ಶಿವಾರೆಡ್ಡಿ)**
ಮುಖ್ಯಸ್ಥರು
ಭಾಷಾಂತರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ

**"ಸ್ವಾತಂತ್ರ್ಯಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ವೈಧವ್ಯದ ಪ್ರತಿನಿಧೀಕರಣ"**

## ಪರಿವಿಡಿ

**ಅಧ್ಯಾಯ ೧**

## "ಸ್ವಾತಂತ್ರ್ಯ ಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ವೈಧವ್ಯದ ಪ್ರತಿನಿಧೀಕರಣ" ಅಧ್ಯಯನದ ಉದ್ದೇಶ – ಸ್ವರೂಪ ಹಾಗೂ ವ್ಯಾಪ್ತಿ

ಸ್ವಾತಂತ್ರ್ಯ ಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ಪ್ರತಿನಿಧೀಕರಣಗೊಂಡಿರುವ ವಿಭಿನ್ನ ನೆಲೆಗಳನ್ನು ಶೋಧಿಸುವುದು ಈ ಮಹಾಪ್ರಬಂಧದ ಉದ್ದೇಶವಾಗಿದೆ. ಈ ಅಧ್ಯಯನ ಆಧುನಿಕ ಕನ್ನಡ ಕಥನ ಸಾಹಿತ್ಯವನ್ನು ಮುಖ್ಯವಾಗಿ ಪರಿಸೀಲಿಸುತ್ತದೆ.. ಈ ಪರಿಶೀಲನೆ 'ಕುಟುಂಬ' 'ವಿವಾಹ' 'ವೈಧವ್ಯ' 'ಮರುವಿವಾಹ'ದ ಸ್ವರೂಪವನ್ನು ಗುರುತಿಸುವ, ವಿಶ್ಲೇಷಿಸುವ, ವಿಮರ್ಶಿಸುವ ಉದ್ದೇಶವನ್ನು ಹೊಂದಿದೆ.

ಮಾತೃಪ್ರಧಾನ ವ್ಯವಸ್ಥೆಯಿಂದ ಪಿತೃಪ್ರಧಾನ ವ್ಯವಸ್ಥೆಯಾಗಿ ಪರಿವರ್ತನೆ ಪಡೆಯುವ ನಾಗರಿಕ ಸಮಾಜದಲ್ಲಿ ಮಹಿಳೆ ಪುರುಷರ ಪ್ರಪಂಚವನ್ನೇ ತನ್ನದೆಂದು ಭಾವಿಸುತ್ತ ಬಂದಿದ್ದಾಳೆ. ಇದನ್ನು ಸಾರ್ವತ್ರಿಕ ಸ್ವರೂಪದಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಇದರಿಂದ ಮಹಿಳೆಯ ಬದುಕನ್ನು ನಿರ್ದೇಶಿಸುತ್ತ ಬಂದಿರುವ ಪುರುಷ ಪ್ರಧಾನ ಸಮಾಜದಲ್ಲಿ ಲಿಂಗ ಅಸಮಾನತೆ ನೆಲೆಯಾಗಿದೆ. ತನ್ನಿಷ್ಟಕ್ಕೆ ತಕ್ಕಂತೆ ರೂಪಿಸಿಕೊಂಡ ಪುರುಷನ ಬದುಕಿನೊಳಗೆ ಮಹಿಳೆ ಅಂಚಿಗೆ ಸರಿದಿದ್ದಾಳೆ. ಕುಟುಂಬದೊಳಗೆ ಪುರುಷನ ಪ್ರಾಬಲ್ಯದಿಂದ ನರಳುವ ಮಹಿಳೆಗೆ ಸಾಮಾಜಿಕ ಮೌಲ್ಯಗಳನ್ನು ಒತ್ತಾಯ ಪೂರ್ವಕವಾಗಿ ಹೇರಲಾಗಿದೆ. ಈ ಮೇಲೆ ಪ್ರಸ್ತಾಪಿಸಿದಂತೆ 'ಬಾಲ್ಯವಿವಾಹ' 'ಸತಿಪದ್ಧತಿ' 'ವೈಧವ್ಯ' ಮುಂತಾದವು ಅಮಾನವೀಯವಾಗಿದ್ದು ಇದನ್ನು ಕನ್ನಡ ಕಥನ ಸಾಹಿತ್ಯ ನಿರ್ವಹಿಸುವುದನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸುವ ಉದ್ದೇಶವಿದೆ. ಪ್ರಧಾನ ವಾಹಿನಿಯಿಂದ ಅಂಚಿಗೆ ಒತ್ತರಿಸಲಾದ ಮಹಿಳಾ ಬದುಕಿನ ದ್ರವ್ಯಗಳು ನಿರೀಕ್ಷಿತ ಮೌಲ್ಯಗಳಿಗೆ ಪೂರಕವಾಗಿ ಮತ್ತು ಪ್ರತಿಯಾಗಿ ದಾಖಲಾಗಿರುವ ರೀತಿಯನ್ನು ಅನಾವರಣಗೊಳಿಸುವ ಉದ್ದೇಶವಿದೆ. ವೈಧವ್ಯ ವಿವಾಹ ಮೂಲದ್ದಾಗಿದ್ದು 'ವಿವಾಹ' ಮತ್ತು 'ಕುಟುಂಬ'ದ ನೆಲೆ ಮಹಿಳೆಯ ಇರುವಿಕೆಯ ಸ್ಥಿತಿಯಾಗಿರುವುದರಿಂದ ಇವು ಮಹಿಳೆಯರ ಸಮಗ್ರ ಬದುಕನ್ನು ಹೇಗೆ ನಿರ್ವಹಿಸುತ್ತಿವೆ ಎನ್ನುವುದನ್ನು ಕಂಡುಕೊಳ್ಳುವ ಉದ್ದೇಶ ಈ ಅಧ್ಯಯನಕ್ಕಿದೆ.

ಪರಂಪರೆಯಲ್ಲಿ ಹರಡಿಕೊಂಡಿದ್ದ ಸ್ಥಾಪಿತ ಮೌಲ್ಯಗಳಿಗೆ ಸ್ವಾತಂತ್ರ್ಯಪೂರ್ವದ ಕನ್ನಡದ ಕಥನ ಸಾಹಿತ್ಯ ತೀವ್ರವಾಗಿ ಪ್ರತಿಕ್ರಿಯಿಸಿತು. ಜನಪದ ಸಾಹಿತ್ಯ ಮೊದಲುಗೊಂಡು ಆಧುನಿಕ ಕಾಲಘಟ್ಟದ ಕಥೆಗಾರರ ಕೃತಿಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ವೈಧವ್ಯವನ್ನು ಕುರಿತು ಸ್ವಾನುಭವದಿಂದ ಬರೆಯುವ ತಿರುಮಲಾಂಬಾ, ಕಲ್ಯಾಣಮ್ಮ, ಸರಸ್ವತಿಬಾಯಿ ರಾಜವಾಡೆ ಸ್ವಾತಂತ್ರ್ಯ ಪೂರ್ವ ಕಾಲಘಟ್ಟದ ಸಾಂಪ್ರದಾಯಿಕ ಕಟ್ಟುಪಾಡುಗಳನ್ನು ವಿರೋಧಿಸುವುದು ವಿಶೇಷ

ಸಂಗತಿಯಾಗಿದೆ. ಆ ಕಾಲದಲ್ಲಿ ಅಭಿವ್ಯಕ್ತವಾದ ಕಷ್ಟ ಪರಂಪರೆಯನ್ನು ಈ ಅಧ್ಯಯನದಲ್ಲಿ ಗಮನಿಸಲಾಗಿದೆ. 'ವೈಧವ್ಯ' ಒಂದು ಸಾಮಾಜಿಕ ರೋಗವಾಗಿ ಹೆಚ್ಚು ಬಲಿಯಾದವರು ಬ್ರಾಹ್ಮಣ ಸಮುದಾಯದ ಮಹಿಳೆಯರು ಎನ್ನುವುದು ಮುಖ್ಯವಾಗಿದೆ. ಇಂದಿಗೂ ವಿಧವಾ ಮೌಲ್ಯಾಚರಣೆ ಚಾಲ್ತಿಯಲ್ಲಿರುವುದರ ಹಿಂದಿರುವ ಸಾಮಾಜಿಕ 'ವ್ಯವಸ್ಥೆ'ಯ ಅಧ್ಯಯನ ಈ ಮಹಾಪ್ರಬಂಧದ ವ್ಯಾಪ್ತಿಗೆ ಒಳಪಡುತ್ತದೆ. ಕುಟುಂಬದ ಒಳಗೆ ಮತ್ತು ಹೊರಗೆ ದೈಹಿಕ ಮತ್ತು ಮಾನಸಿಕ ಒತ್ತಡಕ್ಕೊಳಗಾಗಿ ಬದುಕುವ, ವಿಧವೆ ವ್ಯವಸ್ಥೆಯ ಒಳಗೆ ತೀಕ್ಷ್ಣವಾದ ವೈರುಧ್ಯಗಳನ್ನು ಎದುರಿಸುತ್ತಲೇ ಅವುಗಳ ನಡುವೆ ಬೆಳೆದು ಬಂದಿದ್ದಾಳೆ. ಈ ನೆಲೆಗಟ್ಟುಗಳಿಂದಲೇ ಸ್ವಾತಂತ್ರ್ಯ ಪೂರ್ವದಿಂದ ಆಧುನಿಕ ಕಾಲಘಟ್ಟದವರೆಗೆ ವಿಧವೆ ಕೇಂದ್ರ ಪಾತ್ರವಾಗಿ ರಚನೆಯಾದ ಕಥನಗಳು ಅಧ್ಯಯನದ ವಿಷಯಕ್ಕೆ ವ್ಯಾಪಕವಾದ ಒಳನೋಟಗಳನ್ನು ನೀಡಬಹುದೆಂದು ಭಾವಿಸಲಾಗಿದೆ. ಪುರುಷ ಸಮಾಜ ರೂಪಿಸಿದ 'ವಿವಾಹ' 'ಕುಟುಂಬ'ಗಳ ಹಿನ್ನೆಲೆಯಲ್ಲಿ 'ವೈಧವ್ಯ'ದ ಮೌಲ್ಯಾಚರಣೆಗಳು 'ಜೀವವಿರೋಧಿ' ನೆಲೆಯಲ್ಲಿ ಹರಡಿಕೊಂಡಿರುವುದನ್ನು ವಿಶ್ಲೇಷಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಭಾರತೀಯ ಸಂಸ್ಕೃತಿಯಲ್ಲಿ ಮಹಿಳೆಯ ಬದುಕನ್ನು ನಿರ್ದೇಶಿಸುವ ಹಕ್ಕು ಗಂಡಿನದಾಗಿದೆ. ಆದಿಮ ಸಮಾಜದಲ್ಲಿ ಮಹಿಳೆ ಬಲಿಷ್ಠಳಾಗಿದ್ದು ಮಾತೃಪ್ರಧಾನ ವ್ಯವಸ್ಥೆಯಲ್ಲಿ 'ತಾಯಿ' ಕುಟುಂಬದ ಮೇಲೆ ಬಿಗಿಯಾದ ಹಿಡಿತವನ್ನು ಹೊಂದಿದ್ದಳು. ಹೆಣ್ಣು ಗಂಡಿನ ಸಂಬಂಧ ಸಹಜ ಪ್ರಕ್ರಿಯೆಯಾಗಿಯೇ ಇತ್ತು. ಮಾತೃಪ್ರಧಾನ ಕುಟುಂಬ ಪುರುಷ ಪ್ರಾಧಾನ್ಯತೆಯನ್ನು ಪಡೆದುಕೊಂಡಿರುವುದು ಚಾರಿತ್ರಿಕ ಅಂಶ. ಮಹಿಳೆ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಅಧೀನಕ್ಕೊಳಪಟ್ಟಾಗಲೂ 'ವಿವಾಹ' ಸಂಸ್ಥೆಯೊಳಗೆ ತನ್ನ ಅಸ್ತಿತ್ವಕ್ಕಾಗಿ ಸಂಘರ್ಷಿಸುತ್ತಲೇ ಬಂದಿದ್ದಾಳೆ. ಅಂತಹ ಸಂಘರ್ಷಗಳನ್ನು ಮಾನವ ಚರಿತ್ರೆ ದಾಖಲಿಸುತ್ತಾ ಬಂದಿದೆ. ಮಾತೃಪ್ರಧಾನ ಸಂಸ್ಕೃತಿಯಿಂದ ಪಿತೃಪ್ರಧಾನ ವ್ಯವಸ್ಥೆಗೆ ಬದಲಾದ ಆದಿಮ ಸಮಾಜ ತನ್ನ ಹಲವು ಮಾದರಿಗಳನ್ನು ಮಹಿಳೆಯ ಮೇಲೆ ಹೇರುತ್ತಾ ಬಂದಿದೆ. ಆಸ್ತಿಯ ವಿಚಾರದಲ್ಲಿ 'ವಿವಾಹ'ದ ಚೌಕಟ್ಟಿನೊಳಗೆ ದ್ವಿಸ್ತರನೀತಿಯನ್ನು ಅನುಸರಿಸಿದ ಪ್ರಧಾನ ವ್ಯವಸ್ಥೆ ಆಕೆಯ ಕ್ರಿಯಾಶೀಲ ಬದುಕನ್ನು ನಿಷ್ಕ್ರಿಯಗೊಳಿಸಿದೆ. ಇದಕ್ಕೆ ಎಂದಿನಿಂದಲೂ ಪ್ರತಿರೋಧವನ್ನೊಡ್ಡುತ್ತ ಬಂದಿರುವ ಮಹಿಳೆಗೆ ನ್ಯಾಯಿಕ ಹಕ್ಕು ದೊರಕಿದೆಯೆ ಎಂದು ಚರ್ಚಿಸುವುದು ಈ ಅಧ್ಯಯನದ ಮುಖ್ಯ ಆಶಯವಾಗಿದೆ.

ನಾಗರಿಕ ಪೂರ್ವಯುಗದಲ್ಲಿ ತನ್ನ ವ್ಯಾಪಕವಾದ ಹಿಡಿತವನ್ನು ಹೊಂದಿದ್ದ ಪಿತೃಪ್ರಧಾನ ಸಮಾಜ ಮಹಿಳೆಯ ಸತ್ವವನ್ನು ದುರ್ಬಲಗೊಳಿಸಿ ತನ್ನ ಅಧಿಕಾರವನ್ನು ಸಂಸ್ಥಾಪಿಸಿದೆ. ಮಹಿಳೆಯ ಮೇಲಿನ ಅಧೀನತೆ ರ್ಗನೇ

ಶತಮಾನದವರೆಗೂ ಅನೇಕ ಸ್ಥಿತ್ಯಂತರಗಳನ್ನು ಕಂಡುಕೊಳ್ಳುತ್ತ ಮುಂದುವರಿದಿದೆ. ಆದಿಮ ಸಮಾಜದ ಪುರುಷ ತನ್ನಿಷ್ಟಕ್ಕೆ ತಕ್ಕಂತೆ ಲೋಕವನ್ನು ರೂಪಿಸಿಕೊಂಡು ತನ್ನನ್ನು ಕುರಿತು ಚಿಂತಿಸತೊಡಗಿದಾಗ ಲಿಂಗ ತಾರತಮ್ಯ ನೆಲೆಯಾಗಿದೆ ಎಂದು ಊಹಿಸಬಹುದು. ಮಹಿಳೆಯ ಬದುಕನ್ನು ವ್ಯಾಖ್ಯಾನಿಸುವ ನಿರ್ದೇಶಿಸುವ ಹಕ್ಕು ಗಂಡಿನದಾದ ಮೇಲೆ ಆಕೆ ತನ್ನ ಹಕ್ಕು ಪ್ರಸ್ಥಾಪಿಸುವ ಸಂದರ್ಭವೇ ಬರಲಿಲ್ಲ. ಇಂತಹ ಹಕ್ಕುಗಳಿಗಾಗಿ ನಿಷ್ಕ್ರಿಯತೆಯಿಂದ ಕ್ರಿಯಾಶೀಲತೆಗೆ ಚಲಿಸುವುದನ್ನು ಸ್ವಾತಂತ್ರ್ಯ ಪೂರ್ವದ ಕನ್ನಡ ಕಥನ ಸಾಹಿತ್ಯದ ಹಿನ್ನೆಲೆಯಲ್ಲಿ ಗುರುತಿಸಲು ಈ ಅಧ್ಯಯನ ನಡೆದಿದೆ.

ಭಾರತೀಯ ಸಮಾಜದಲ್ಲಿ ಬೆಳೆದು ಬಂದ ಸಾಂಸ್ಕೃತಿಕ ಪರಂಪರೆ ಮಹಿಳೆಯರನ್ನು ಅನೇಕ ಅಸಮಾನ ನೆಲೆಯಲ್ಲಿ ನಿಲ್ಲಿಸಿದೆ. ಅದರಲ್ಲೂ ಬಹಳ ಮುಖ್ಯವಾದ ಲಿಂಗಾಧಾರಿತ ನೆಲೆ ಮಹಿಳೆಯನ್ನು ಅಮಾನವೀಯವಾಗಿ ಕಂಡಿದೆ. ಈ ನೆಲೆ ಹೊಮ್ಮಿಸುವ ಕ್ರೌರ್ಯ, ವಂಚನೆ ನೋವುಗಳು ಮಹಿಳೆಯ ಬದುಕಿನ ಕರಾಳತೆಯನ್ನು ಅಭಿವ್ಯಕ್ತಿಸುತ್ತವೆ. ಲಿಂಗಾಧಾರಿತ ಅಸಮಾನತೆಯನ್ನು ತೊಡೆದು ಹಾಕಲು ಬೇಕಾದ ಬೌದ್ಧಿಕ, ಭೌತಿಕ ಸಂದರ್ಭ, ಸಿದ್ಧತೆಗಳ ಕೊರತೆಯನ್ನು ಸ್ವಾತಂತ್ರ್ಯ ಪೂರ್ವದ ಕನ್ನಡ ಕಥನ ಸಾಹಿತ್ಯ ಎದುರಿಸಬೇಕಾಯಿತು. ಈ ಅಸಮಾನತೆಯ ನೆಲೆಯನ್ನು ಸ್ವಾತಂತ್ರ್ಯ ಪೂರ್ವದ ಕಥನ ಸಾಹಿತ್ಯ ಮತ್ತು ಆಧುನಿಕ ನವೋದಯ ಸಾಹಿತ್ಯ ಕೃತಿಗಳು ವಿಶ್ಲೇಷಿಸುವುದನ್ನು ಈ ಅಧ್ಯಯನ ಒಳಗೊಂಡಿದೆ. ಲಿಂಗಾಧಾರಿತ ಅಸಮಾನತೆ ನಮ್ಮ ವ್ಯವಸ್ಥೆಗೆ ಕೊಟ್ಟ ಅನಿಷ್ಟ ಪದ್ಧತಿಗಳಲ್ಲಿ 'ವೈಧವ್ಯ'ವೂ ಒಂದು.

ವೈಧವ್ಯ ಹೆಣ್ಣಿಗೆ 'ಶಾಪ'ವಾಗಿ ಪರಿಣಮಿಸಿ ಹಲವಾರು ಶತಮಾನಗಳೇ ಕಳೆದಿವೆ. ಪುರುಷ ಪ್ರಧಾನ ಸಮಾಜ 'ವೈಧವ್ಯ'ವನ್ನು 'ರಕ್ಷಣೆ' 'ಸಾಕುವ' ನೆಪದಲ್ಲಿ ಪರಾಲಂಬಿಯಾಗಿ ಬದುಕುವುದಕ್ಕೆ ಪೂರಕವಾದ ವಾತಾವರಣವನ್ನು ಅವಳ ಮೇಲೆ ಹೇರಿದೆ. ಪುರುಷರು ಹೇರಿದ ಈ 'ಮೌಲ್ಯ' ಅಮಾನವೀಯ ನೆಲೆಯಲ್ಲಿ ಸಂಸ್ಕೃತಿಯಲ್ಲಿ ಹರಡಿಕೊಂಡಿರುವುದನ್ನು ಈ ಅಧ್ಯಯನ ವಿಶ್ಲೇಷಿಸುತ್ತದೆ. 'ಕುಟುಂಬ ವ್ಯವಸ್ಥೆ'ಯ ಪುರುಷ ಪ್ರಧಾನ ಸಮಾಜ ಜಾತಿ ಮೂಲವಾದ ನೆಲೆಯಲ್ಲಿ ಮಹಿಳೆ ಮಹಿಳೆಯನ್ನು ತುಳಿಯುವ ಮೌಲ್ಯವನ್ನು ಪೋಷಿಸಿಕೊಂಡು ಬಂದಿರುವುದು ನವೋದಯ ಸಾಹಿತ್ಯ ಕೃತಿಗಳಲ್ಲಿ ಅಭಿವ್ಯಕ್ತವಾಗಿರುವುದನ್ನು ವಿಶ್ಲೇಷಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಮಹಿಳೆಯ ಹಕ್ಕುಭಾದ್ಯತೆಗಳು ಸ್ಥಗಿತವಾಗಿದ್ದು ಪುರುಷಾಧಿಕಾರ ಮೇಲ್ಮೈಯನ್ನು ಸಾಧಿಸಿದ ದೃಷ್ಟಾಂತಗಳನ್ನು ಆರಂಭದ ಸಾಹಿತ್ಯ ಕೃತಿಗಳು ಅಭಿವ್ಯಕ್ತಿಪಡಿಸಿವೆ. ಭಾರತೀಯ ಸಮಾಜ, ಇತಿಹಾಸ ಪೂರ್ವದಿಂದಲೂ ಕಟ್ಟಿಕೊಂಡ

ಸಾಮಾಜಿಕ ಮೌಲ್ಯಗಳನ್ನು ಸಂಘರ್ಷಿಸುತ್ತಲೇ ಸಾಂಸ್ಕೃತಿಕ ಜೀವಂತಿಕೆಯನ್ನು ಪ್ರಕಟಿಸುತ್ತ ಬಂದಿರುವುದು ಕನ್ನಡ ಕಥನ ಸಾಹಿತ್ಯದಿಂದ ತಿಳಿಯುತ್ತದೆ. ಈ ಸಂಘರ್ಷ ಮುಂದಿನ ಕಾಲಮಾನದಲ್ಲೂ ಬೆಳೆಯುತ್ತ ಬೇರೆ ಬೇರೆ ವಿನ್ಯಾಸಗಳನ್ನು ಪಡೆದುಕೊಂಡಿದೆ. ಈ ಸಂಘರ್ಷಕ್ಕೆ ಜನಪದ ಸಾಹಿತ್ಯ ಮತ್ತು ನವೋದಯ ಕಾಲದಲ್ಲಿ ಬೆಳೆದು ನಿಂತ ಕಥನ ಕೃತಿಗಳು ಮುಖ್ಯ ಆಕರವಾಗಿವೆ. ಹೀಗಾಗಿ ಕನ್ನಡ ಸಂಸ್ಕೃತಿಯಲ್ಲಿ ಬೇರುಬಿಟ್ಟ ಸಾಮಾಜಿಕ ಸಮಸ್ಯೆಗಳಿಗೆ ಹಾಗೂ ಸಾಮಾಜಿಕ ಜೀವವಿರೋಧಿ ಮೌಲ್ಯಗಳಿಗೆ ಕನ್ನಡ ಸಾಹಿತ್ಯ ತನ್ನ ವಿರೋಧವನ್ನು ವ್ಯಕ್ತಪಡಿಸುತ್ತಾ ಬಂದಿದೆ.

ಮಾನವ ಕಟ್ಟಿಕೊಂಡ ಇತಿಹಾಸ ಅಗಾಧವಾದುದು. ಆರಂಭದ ಕಾಲದಲ್ಲಿ ಮಾತೃಪ್ರಧಾನ ವ್ಯವಸ್ಥೆ ರೂಪುಗೊಂಡಿವುದನ್ನು ಇತಿಹಾಸ ನಿರೂಪಿಸುತ್ತದೆ. ಆಳುವ ವರ್ಗವಾಗಿ ಪರಿವರ್ತನೆಯಾದ ಪಿತೃಪ್ರಧಾನ ಸಮಾಜ ಆರ್ಥಿಕ, ಧಾರ್ಮಿಕ, ಭಾಷಿಕ, ನೈತಿಕ ಪ್ರಭಾವಗಳ ಮೂಲಕ ಮಹಿಳೆಯರನ್ನು ನಿಯಂತ್ರಿಸುವುದು ಸಾಧ್ಯವಾಗಿದೆ. ಹೀಗೆ ಪುರುಷ ಪ್ರಧಾನ ವ್ಯವಸ್ಥೆ ತನ್ನೆಲ್ಲ ಪ್ರಭಾವವನ್ನು, ಸಾಮಾಜಿಕ ಮೌಲ್ಯಗಳನ್ನು ಮಹಿಳಾ ಸಾಂಸ್ಕೃತಿಕ ಬದುಕಿನ ಮೇಲೆ ಹೇರಿತು. ಇದಕ್ಕೆ ಕನ್ನಡ ಕಥನ ಪರಂಪರೆ ಎಲ್ಲಾ ಕಾಲಕ್ಕೂ ತೀವ್ರ ಪ್ರತಿರೋಧವನ್ನೊಡುತ್ತಾ ಬಂದಿದೆ. ಮಹಿಳಾ ಹಕ್ಕುಗಳನ್ನು ಮೊಟಕುಗೊಳಿಸಿ ತನ್ನ ಪ್ರಾಭಲ್ಯವನ್ನು ಮೆರೆದಿರುವ ಪುರುಷ ಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸುತ್ತಲೇ ಬಂದಿರುವುದು ಕನ್ನಡ ಕಥನ ಸಾಹಿತ್ಯದ ಎಲ್ಲ ಕಾಲದ ಆಶಯ ಎಂಬುದನ್ನು ಈ ಅಧ್ಯಯನ ವಿಶ್ಲೇಷಿಸಿದೆ.

ತನ್ನ ಬಿಗಿ ಹಿಡಿತದಿಂದ ನೆಲೆಗೊಂಡ ಪುರುಷ ಪ್ರಧಾನ ಸಂಸ್ಕೃತಿ ಮಹಿಳಾ ಹಕ್ಕು ಮತ್ತು ಸ್ವಾತಂತ್ರ್ಯವನ್ನು ದುರ್ಬಲಗೊಳಿಸಿ ತನ್ನ ವಿಚಾರ ಮತ್ತು ಸಂಸ್ಕೃತಿಯನ್ನು ಹೇರಿದಾಗ ಅದಕ್ಕೆ ಎದುರಾಗಿ ಕನ್ನಡ ಕಥನ ಸಾಹಿತ್ಯ ಸ್ವಾತಂತ್ರ್ಯ ಪೂರ್ವದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಪ್ರತಿಕ್ರಿಯಿಸಿತು. ಇಂತಹ ಪ್ರತಿಕ್ರಿಯೆ ಕನ್ನಡದ ಮೊದಲ ಕಾದಂಬರಿಯಾದ 'ಇಂದಿರಾಬಾಯಿ' (೧೮೯೯) ಮತ್ತು 'ಇಂದಿರಾ' 'ನಭಾ' 'ವಿರಾಗಿಣಿ'– ಮುಂತಾದ ಕಾದಂಬರಿಗಳು, ನವೋದಯದ ಕುವೆಂಪು, ಕಾರಂತ, ಮಾಸ್ತಿ, ಚದುರಂಗ, ನಿರಂಜನ ಮುಂತಾದ ಕವಿಗಳ ಕೃತಿಗಳು ಮಹತ್ವದ ಮಾದರಿಯನ್ನು ಕಟ್ಟಿಕೊಟ್ಟವು. ಸಾಮಾಜಿಕ ಮೌಲ್ಯಗಳು ಮಾನವ ವಿರೋಧಿ ನೀತಿಯನ್ನು ತನ್ನೊಳಗೆ ಬಚ್ಚಿಟ್ಟುಕೊಂಡು ಮಹಿಳಾ ವಿರೋಧಿಯಾಗಿ ಚಲಾವಣೆಗೆ ಬಂದಿರುವುದು ಅಮಾನವೀಯವೆಂದು ಪ್ರಶ್ನಿಸುವುದು ಹಾಗೂ ಆಕೆಯ ಭೌತಿಕ ಮತ್ತು ಮಾನಸಿಕ ರೋಧನವನ್ನು ಹಾಗೂ ದುರಂತಗಳನ್ನು ಈ ಸಾಹಿತ್ಯ ಕೃತಿಗಳು ವಿಶ್ಲೇಷಿಸುವುದು ಈ ಅಧ್ಯಯನದ ಹಿನ್ನೆಲೆಗಿದೆ.

ಚರಿತ್ರೆ ಮಹಿಳೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕನ್ನು ದಾಖಲಿಸುತ್ತಾ ಬಂದಿದೆ. ಆರಂಭದ ಕಾಲಮಾನದಿಂದ ವ್ಯವಸ್ಥೆಯಲ್ಲಿ ಮಹಿಳೆ ಬದುಕಿ ಬಂದ ದಾರಿ ದುರ್ಗಮವಾಗಿತ್ತು. ಕುಟುಂಬ ಜೀವನ ಪ್ರಾರಂಭವಾದ ಕಾಲದಿಂದ 'ವೈವಾಹಿಕ ಸಂಸ್ಥೆ' ನೆಲೆಯಾಗಿದೆ. ಪ್ರಾರಂಭದ ಕುಟುಂಬ ರಚನೆಯಲ್ಲಿ ಮಾತೃಪ್ರಧಾನ ವ್ಯವಸ್ಥೆ ಪ್ರಧಾನವಾಗಿತ್ತು. ಕಾಲಾಂತರದಲ್ಲಿ ಪಿತೃಪ್ರಧಾನ ವ್ಯವಸ್ಥೆಗೆ ಪ್ರಾಧಾನ್ಯತೆ ನೀಡಿದ್ದು ವೈವಾಹಿಕ ಬದುಕಿನಲ್ಲಿ ಮಹಿಳೆಯನ್ನು ಕಡೆಗಣಿಸಲಾಗಿದೆ. ಪಿತೃಪ್ರಧಾನ ವ್ಯವಸ್ಥೆ ಲಿಂಗಾಧಾರಿತ ಅಸಮಾನತೆಯಿಂದ ಮಹಿಳೆಗೆ ಭದ್ರತೆ ಒದಗಿಸುವ ಹೊಣೆಹೊತ್ತು ವೈವಾಹಿಕ ವ್ಯವಸ್ಥೆಯನ್ನು ಗಟ್ಟಿಗೊಳಿಸುತ್ತಾ ಬಂದಿದೆ. ವಿವಾಹ ಪದ್ಧತಿ ಕುಟುಂಬದಲ್ಲಿ ನೆಲೆಯಾಗುತ್ತಿದ್ದಂತೆ ಹೆಣ್ಣು-ಗಂಡು ಎಂಬ ಅಸಮಾನತೆ ಪ್ರಾರಂಭವಾಗಿದೆ. ಅಲೆಮಾರಿ ಬದುಕಿನಿಂದ ಒಂದೆಡೆ ನೆಲೆನಿಂತು ಕುಟುಂಬಗಳಾಗುತ್ತಿದ್ದಂತೆ ವಿವಾಹ ಸಂಸ್ಥೆ ಹುಟ್ಟಿಕೊಂಡಿದೆ. 'ವಿವಾಹ' ಸಂಸ್ಥೆ ಪ್ರಾಚೀನ ಕಾಲದಿಂದಲೂ ಮಹಿಳೆಗೆ ಹೇರಿದ ಸಾಮಾಜಿಕ ಮೌಲ್ಯಗಳು ಕಾಲಕಳೆದಂತೆ ಪ್ರಶ್ನೆಗೆ ಒಳಪಟ್ಟವು. ಮಹಿಳೆ ಕೌಟುಂಬಿಕ ಚೌಕಟ್ಟಿನಲ್ಲಿ ವೈವಾಹಿಕ ಬಂಧನಕ್ಕೊಳಗಾಗಿ ಪ್ರಧಾನಸಂಸ್ಕೃತಿಗೆ ತಲೆಬಾಗಿ ಬದುಕಿ ಬಂದ ಹಿನ್ನೆಲೆ ಇದೆ. 'ಪಾತಿವ್ರತ್ಯ' 'ಶೀಲ' ಮುಂತಾದ ಸಾಮಾಜಿಕ ಮೌಲ್ಯಗಳು ಪುರುಷ ಪ್ರಧಾನ ವ್ಯವಸ್ಥೆ ರೂಪಿಸಿದ ಏಕಮುಖ ಸೂತ್ರವನ್ನು ಮನನ ಮಾಡಿಸುತ್ತಲೇ ಬಂದಿವೆ. ಇಂತಹ ಸೂತ್ರವನ್ನು ಪಾಲಿಸದಿರುವ ಮಹಿಳೆ ತನ್ನ ತಪ್ಪಿಗೆ ತನ್ನನ್ನೇ ಆರೋಪಿಸಿಕೊಳ್ಳುವುದನ್ನು ಮಾನಸಿಕ ಒತ್ತಡವನ್ನಾಗಿ ಸಮಾಜ ಹೇರಿರುವುದು ಸ್ವಾತಂತ್ರ್ಯ ಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ರೂಪುಗೊಂಡಿವೆ.

ನಾಗರಿಕತೆಯ ಪೂರ್ವಯುಗದಲ್ಲಿ ಮಾತೃಪ್ರಧಾನ ಕುಟುಂಬಗಳು ಪಿತೃಪ್ರಧಾನ ಕುಟುಂಬಗಳಾಗಿ ಮಹಿಳೆಯರ ಮೇಲೆ ತಮ್ಮ ಹಿಡಿತವನ್ನು ಹೊಂದಿದವು. ಮಾತೃಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ದೃಢಕಾಯಳಾಗಿ ಗುಂಪಿನ ನಾಯಕಿಯಾಗಿದ್ದಳು. ಇಷ್ಟೆಲ್ಲ ವೈವಿಧ್ಯತೆಯ ವ್ಯಕ್ತಿತ್ವವುಳ್ಳ ಮಹಿಳೆಯನ್ನು ಹೇಗಾದರೂ ಹತೋಟಿಯಲ್ಲಿಟ್ಟುಕೊಳ್ಳುವ ಸಲುವಾಗಿ ರೂಢಿ, ಸಂಪ್ರದಾಯ ಮತ್ತು ಧರ್ಮಾಚರಣೆಯನ್ನು ಜಾರಿಗೊಳಿಸಿರುವುದು ಇತಿಹಾಸವಾಗಿದೆ. ಅವುಗಳ ಮರೆಯಲ್ಲಿ 'ಪುರುಷ' ಪ್ರಧಾನ ಧಾರೆಗೆ ಬಂದಿರುವುದನ್ನು ಮಾನವನ ಇತಿಹಾಸ ಹೇಳುತ್ತದೆ. ಹೀಗೆ ಪುರುಷ ಮಹಿಳೆಯನ್ನು ಆಳುವ ಪ್ರಭುತ್ವ ದೃಢವಾಗುತ್ತ ಸಾಗಿದೆ. ಪ್ರಧಾನ ಸಂಸ್ಕೃತಿ ಹತೋಟಿಯಲ್ಲಿಟ್ಟುಕೊಳ್ಳುವ ಪ್ರವೃತ್ತಿ ಮುಂದುವರಿದಂತೆ ಮಹಿಳೆ ಅಂಚಿಗೆ ಸರಿದಿದ್ದಾಳೆ. ಮಹಿಳೆ ಅಂಚಿಗೆ ಸರಿದು ಸೇವೆಗೆ ಸೀಮಿತಳಾಗುತ್ತಿದ್ದಂತೆ ಆಕೆಯ ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಗಳು ಅವಲಂಬನೆಯ ಅನಿವಾರ್ಯತೆಯನ್ನು ತಲುಪಿದವು. ಕುಟುಂಬದಲ್ಲಿ ತಂದೆ ಅಥವಾ ಗಂಡ ಅವಳಿಗೆ ರಕ್ಷಣೆ ಒದಗಿಸುವುದು ಆದ್ಯ ಕರ್ತವ್ಯ

ಎಂದು ಭಾವಿಸುತ್ತ ಬರಲಾಗಿದೆ. ಈ ಕಾರಣಕ್ಕಾಗಿ ಕಟ್ಟುಪಾಡುಗಳನ್ನು ವಿಧಿಸಲಾಯಿತು. ಇವನ್ನು ದಾಟಿದರೆ ಬದುಕು ದುರ್ಬರವಾಗುವ ಭಯವನ್ನೂ ಹೇರಲಾಯಿತು. ಇಂತಹ ಸಂದರ್ಭಗಳಲ್ಲೆಲ್ಲ ಮಹಿಳೆ ಒಪ್ಪಿ ಅಥವಾ ವಿರೋಧಿಸಿ ಬದುಕಿ ಬಂದಿದ್ದಾಳೆ ಎಂದು ನಿರೂಪಿಸುವ ಜನಪದ ಸಾಹಿತ್ಯ ಮತ್ತು ಸ್ವಾತಂತ್ರ್ಯಪೂರ್ವ ಗದ್ಯಸಾಹಿತ್ಯದ ಹಿನ್ನೆಲೆಯಲ್ಲಿ ಈ ಅಧ್ಯಯನ ನಡೆದಿದೆ.

ಮಹಿಳೆಯ ಜೀವನ ಮಟ್ಟವನ್ನು ಗುರುತಿಸುವಲ್ಲಿ 'ವೈವಾಹಿಕ ಬದುಕು' ಮುಖ್ಯವಾಗಿದೆ. ವೈವಾಹಿಕ ಬದುಕು ಪ್ರೀತಿವಿಶ್ವಾಸದಿಂದ ಬದುಕುವ ತಾತ್ವಿಕತೆಯನ್ನು ಕಟ್ಟಿಕೊಡಬೇಕಾದಲ್ಲಿ ಮಹಿಳೆಯ ಬದುಕು ಅಭದ್ರತೆಯಿಂದ ನರಳುವಂತೆ ಮಾಡಿದೆ. ಹೆಣ್ಣಿನ ಯೌವನ, ಸೌಂದರ್ಯ ಆರ್ಥಿಕಗಳಿಕೆಯೇ ಪ್ರಧಾನ ನೆಲೆಯಲ್ಲಿ ನಿಂತಾಗ ಆಯ್ಕೆ ಗಂಡಿನದಾಗಿದೆ. ಆರ್ಥಿಕ ಅಭಿವೃದ್ಧಿಯ ಉದ್ದೇಶದಿಂದ ವೈವಾಹಿಕ ಸಂಸ್ಥೆಯನ್ನು ಹುಟ್ಟುಹಾಕಿರಬಹುದೆಂದು ಇತಿಹಾಸ ನಿರೂಪಿಸುತ್ತದೆ. ಇದರಿಂದ ವೈವಾಹಿಕ ಸಂಸ್ಥೆಯ ಒಳಗೂ ಮಹಿಳೆಗೆ ಗೌರವ ಹೆಚ್ಚಾಗಲಿಲ್ಲ ಬದಲಿಗೆ ತನ್ನ ಅಸ್ಮಿತೆಗಾಗಿ ಹೋರಾಡುತ್ತಲೇ ಬದುಕುವುದು ಈ ಕಾಲಕ್ಕೂ ನಿರಂತರವಾಗಿದೆ. ಮನುಷ್ಯನ ವೈವಾಹಿಕ ಜೀವನದ ಬಗ್ಗೆ ವಿಲ್‌ಡ್ಯೂರಾಂಟ್ ಹೀಗೆ ಅಭಿಪ್ರಾಯ ಪಡುತ್ತಾರೆ.

> *"ನಾಗರಿಕತೆಯ ಇತಿಹಾಸದಲ್ಲಿ ಮಹಿಳೆಯು ವಿವಾಹದ ಮೂಲಕ ಎಲ್ಲೆಲ್ಲಿ ಒಂದು ಆರ್ಥಿಕ ಆಸ್ತಿಯಂತಾಗಿಲ್ಲವೋ ಅಲ್ಲೆಲ್ಲ ಮದುವೆಯೆಂಬುದು ನಶಿಸಿದೆ."*[೧]

'ವಿವಾಹ' ನಾಗರಿಕ ಜಗತ್ತಿನಲ್ಲಿ ಅನೇಕ ಸ್ಥಿತ್ಯಂತರಗಳನ್ನು ಹೊಂದಿದೆ. ವಿವಾಹ ಮಹಿಳೆಯ ಬದುಕಿನ ಗುರಿಯಾಗಲಾರದು. ಪರಾವಲಂಬಿ ಲಕ್ಷಣ ಅವಳಲ್ಲಿ ಅಂತಸ್ಥವಾಗಿದ್ದು ಅವಳು ತೋರಿಕೆಯ ಧೈರ್ಯವನ್ನು ತೋರಿಸುವಂತದ್ದು. ಇಂತಹ ಬಂಧನ ಅವಳಿಗೆ ಹೇರಿದ್ದು ವಿವಾಹ ಬಂಧನದಿಂದ ಮುಕ್ತಿ ಸಿಗುವಂತಾಗಬೇಕೆಂದು ಸ್ತ್ರೀವಾದಿ ಚಿಂತಕಿ ಸಿಮೊನ್‌ದಬೋವಾ ಅಭಿಪ್ರಾಯ ಪಡುತ್ತಾ ಹೀಗೆ ಹೇಳುತ್ತಾರೆ.

> *"ಹೆಂಗಸು ತನ್ನ ಕಾಲಮೇಲೆ ತಾನು ನಿಲ್ಲಲು ಅವಕಾಶ ನೀಡದೆ ಅವಳು ಗಂಡಸಿಗೆ ಜೋತು ಬೀಳುವಂತೆ ಮಾಡಲಾಗಿದೆ. ಅವಳಿಗೆ ಬಿಡುಗಡೆ ನೀಡಿದರೆ ಅವನಿಗೂ ಬಿಡುಗಡೆ ದೊರಕುತ್ತದೆ. ಅಂದರೆ ಈ ಲೋಕದಲ್ಲಿ ಅವಳೂ ಏನಾದರೂ ಮಾಡಲು ಅವಕಾಶ ದೊರಕಬೇಕು"*[೨].

---

೧. 'ನಾಗರಿಕತೆಯ ಕಥೆ' – ೧ ವಿಲ್‌ಡ್ಯೂರಾಂಟ್ – (ಪ್ರಸಂ) – ಪ್ರದಾನ ಗುರುದತ್–ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ – ಬೆಂಗಳೂರು– ೨೦೦೭ ಪು. ೪೪

೨. ದ ಸೆಕೆಂಡ್ ಸೆಕ್ಸ್ – ಸಿಮೊನ್‌ದ ಬೋವಾ–(ಅನು) ಶ್ರೀಮತಿ ಹೆಚ್.ಎಸ್. ಅಧ್ಯಯನ ಮಂಡಲ – ಬೆಂಗಳೂರು–೨೦೦೭– ಪು – ೫೦೪

ವಿವಾಹ ಪದ್ಧತಿಯೊಳಗಿನ ವಿಕೃತಾವಸ್ಥೆಯನ್ನು ಬಿಚ್ಚಿಡುತ್ತಾ ವಿವಾಹದ ಸುತ್ತ ಹೆಣೆದುಕೊಂಡ ಅನಿಷ್ಟ ಪದ್ಧತಿಗಳನ್ನು ಸಿಮೋನ್ ದ ಬೋವಾ ವಿರೋದಿಸುತ್ತಾರೆ. ಪ್ರಾಚೀನ ಕಾಲದಿಂದಲೂ ವಿವಾಹ ಸಂಸ್ಕೃತಿಯನ್ನು ಸುತ್ತಿಕೊಂಡ ಅನಿಷ್ಟ ಪದ್ಧತಿಗಳನ್ನು ಕನ್ನಡ ಸಾಹಿತ್ಯ ಕೃತಿಗಳು ಪ್ರಶ್ನೆ ಮಾಡುತ್ತಲೇ ಬಂದಿವೆ. ಅನಿಷ್ಟ ಪದ್ಧತಿಗಳ ಆಚರಣೆಯ ಹೇರಿಕೆಯನ್ನು ವಿರೋಧಿಸುವುದು ಸ್ವಾತಂತ್ರ್ಯ ಪೂರ್ವದ ಕಥನ ಸಾಹಿತ್ಯದ ಆಶಯ ಎಂಬುದು ಈ ಅಧ್ಯಯನದ ಹಿನ್ನೆಲೆಯಾಗಿದೆ.

ಪ್ರಾಚೀನ ನಾಗರಿಕ ಭಾರತೀಯ ಸಮಾಜ ತನ್ನ ವ್ಯಾಪಕ ಹಿಡಿತದಿಂದ ನೆಲೆಗೊಂಡ ಸಾಂಪ್ರದಾಯಿಕ ಮೌಲ್ಯಗಳು ಅನಿಷ್ಟ ಪದ್ದತಿಗಳನ್ನು ಗಟ್ಟಿಗೊಳಿಸಿ ಬಿತ್ತರಿಸಿದಾಗ ಕನ್ನಡದ ಸ್ವಾತಂತ್ರ್ಯಪೂರ್ವ ಕಥನ ಸಾಹಿತ್ಯ ಎದುರಾಗಿ ತೀವ್ರವಾಗಿ ಪ್ರತಿಕ್ರಿಯಿಸಿತು. ಇಂತಹ ಪ್ರತಿಕ್ರಿಯೆ ಜನಪದ ಸಾಹಿತ್ಯದಿಂದ ಪ್ರಾರಂಭವಾಗಿದೆ. ಭಾರತೀಯ ಸಮಾಜದ ಸ್ಥಾಪಿತ ಮೌಲ್ಯಗಳಲ್ಲಿ ಒಳಗೊಂಡ ಅನಿಷ್ಟ ಪದ್ಧತಿಗಳಿಗೆ ಸಾಮಾಜಿಕ ಎಚ್ಚರ ಮುಖಾಮುಖಿಯಾಗುವುದನ್ನು ಈ ಅಧ್ಯಯನ ವಿಶ್ಲೇಷಿಸಿದೆ.

ಕನ್ನಡದ ಮೊದಲ ಕಾದಂಬರಿಗಳು ಪ್ರಾದೇಶಿಕ ಸಂಸ್ಕೃತಿಯಲ್ಲಿದ್ದ ಅನಿಷ್ಟಗಳನ್ನು ವಿರೋಧಿಸುತ್ತವೆ. ಪಿತೃಪ್ರಧಾನ ವ್ಯವಸ್ಥೆ ಹೇರಲ್ಪಟ್ಟ ಪದ್ಧತಿಗಳನ್ನು ವಿರೋಧಿಸುತ್ತ ಮಾನವೀಯ ನೆಲೆಗಳನ್ನು ಪ್ರಸ್ತುತ ಪಡಿಸಿದ ಸ್ವರೂಪವನ್ನು ಈ ಅಧ್ಯಯನ ಸ್ವೀಕರಿಸುತ್ತದೆ. ಆಕಾಲಕ್ಕೆ ಪಿತೃಪ್ರಧಾನ ವ್ಯವಸ್ಥೆ ಮಹಿಳೆಯ ಮೇಲೆ ಸಾಕಷ್ಟು ಬಿಗುವಾದ ಹಿಡಿತವನ್ನೆ ಹೊಂದಿತ್ತು. ಇದರೊಂದಿಗೆ ಮಹಿಳೆ ತನ್ನ ಪ್ರತಿರೋಧವನ್ನು ಅಭಿವ್ಯಕ್ತ ಪಡಿಸಿದ್ದಾಳೆ. ಪುರುಷನ ಆಳುವ ನೀತಿಯನ್ನು ಪ್ರಶ್ನಿಸುತ್ತಾ ಕುಟುಂಬದಲ್ಲಿ ಕ್ರಿಯಾಶೀಲಳಾಗಿದ್ದು ತನ್ನ ಬುದ್ಧಿಮತ್ತೆಯನ್ನು ಅನುಕರಿಸುವಂತೆ ಪ್ರಭಾವಿಸುತ್ತಾ ಬಂದಿದ್ದಾಳೆ. ಪ್ರಾಚೀನ ಸಂಸ್ಕೃತಿಯಲ್ಲಿ ಬೇರುಬಿಟ್ಟ ಅಸಮಾನತೆಯನ್ನು ಕೌಟುಂಬಿಕ ಜೀವನದ ಕಡೆಗೆ ಮುಖಮಾಡಿಯೇ ಪ್ರತಿಭಟನೆಯನ್ನು ಮಾಡಿದ್ದಾಳೆ ಎಂಬುದನ್ನು ಪ್ರಾರಂಭದ ಕಥನ ಸಾಹಿತ್ಯ ಕಟ್ಟಿಕೊಡುತ್ತವೆ. ವೈವಾಹಿಕ ಬದುಕಿನಿಂದ ದುರ್ಬಲಳಾದ ಮಹಿಳೆ ನಿರ್ಬಂಧಿತ ವೈವಾಹಿಕ ಬದುಕಿನಿಂದಲೇ ಉತ್ತರವನ್ನು ಕಂಡುಕೊಂಡಿದ್ದಾಳೆ ಎಂದು ಬಹುತೇಕ ಲೇಖಕಿಯರು ಬಿಂಬಿಸಿದ್ದಾರೆ. ವೈಯಕ್ತಿಕ ಸಂಬಂಧಗಳಲ್ಲಿ ಹೆಣ್ಣು-ಗಂಡು ಪರಸ್ಪರ ಸಹಾನುಭೂತಿ, ಪ್ರೀತಿ ಕರುಣೆ ಹೊಂದಿದ್ದರೂ ಸಮಾಜದ ಹಿಡಿತ ವ್ಯಕ್ತಿಯ ನೋವನ್ನು ಮರೆತು ತುಳಿದಿದೆ. ಇವು ಆರ್ಥಿಕ ಬದುಕಿನೊಂದಿಗೂ ಹೆಣೆದುಕೊಂಡಿವೆ ಎಂಬುದನ್ನು ಗಮನಿಸಬಹುದು. ಕೌಟುಂಬಿಕ ಮೌಲ್ಯಗಳು ಹಾಗೂ ಆರ್ಥಿಕ ಅವಲಂಬನೆ ಮಹಿಳೆಯನ್ನು ಪ್ರತಿಭಟನೆಯ ಜಾಡಿನಿಂದ ಹಿಮ್ಮೆಟ್ಟಿಸಿದೆ. ತನ್ನ ಅನುಕೂಲಕ್ಕಾಗಿ ಪುರುಷ ಸ್ತ್ರೀಗೆ ಸೃಷ್ಟಿಸಿಕೊಟ್ಟಿರುವ ಮೌಲ್ಯಗಳಲ್ಲಿರುವ ದ್ವಂದ್ವ ಮೌಲ್ಯಗಳ ಹೆಸರಿನಲ್ಲಿ ನಡೆಯುವ ನವಿರಾದ ಕ್ರೌರ್ಯ ನವೋದಯ ಕಾಲದ ಕಥನಗಳಲ್ಲಿ ಪ್ರಶ್ನೆಗೊಳಗಾಗುತ್ತವೆ.

ಮಹಿಳಾ ವಿಮೋಚನೆ ಸಮಕಾಲೀನ ಜಗತ್ತಿನ ಅಗತ್ಯ ಚಾರಿತ್ರಿಕ ಅನಿವಾರ್ಯತೆಗಳಲ್ಲಿ ಒಂದು. ಮಾನವ ಇತಿಹಾಸದಲ್ಲಿ ಆಕೆ ದಾಸ್ಯಕ್ಕೊಳಗಾಗುವುದರೊಂದಿಗೆ ದಾಸ್ಯದೊಂದಿಗೆ ಅಸಮಾನತೆಯ ಪರಂಪರೆ ಬೆಳೆದು ಬಂದಿರುವುದನ್ನು ಈ ಪ್ರಬಂಧ ವಿಶ್ಲೇಷಿಸಿದೆ. ಮಹಿಳೆ ಸಾಂಸ್ಕೃತಿಕ ವಲಯದ ಮುಖ್ಯ ಪ್ರವಾಹದಿಂದ ಹೊರದಬ್ಬಲ್ಪಟ್ಟು ಕುಟುಂಬದೊಳಗೆ ಬಂದಿತಳಾದಳು. ಅವಳಿಗೆ 'ಮಾತೃತ್ವ', 'ಪತ್ನಿತ್ವ' ಹಾಗೂ 'ಸ್ತ್ರೀತ್ವ'ದ ಆದರ್ಶಗಳನ್ನು ಹೇರಲಾಯಿತು. ಈ ಆದರ್ಶಗಳು ಅವಳನ್ನು ಆಳಲು ಅನುಕೂಲವಾಗಿದ್ದು ಅವಳ ಹಿತವನ್ನು ನಿರ್ಲಕ್ಷಿಸುವುದೇ ಆಗಿದೆ.

ಕನ್ನಡ ಕಥನ ಸಾಹಿತ್ಯ ಪ್ರಕಾರದಲ್ಲಿ 'ವೈಧವ್ಯ'ವನ್ನು ಪ್ರತಿನಿಧಿಸುವ ಬಗೆ, ಅದರ ಚಾರಿತ್ರಿಕ ಸನ್ನಿವೇಶ, ಸಮಾಜಶಾಸ್ತ್ರೀಯ ವಿವರಣೆ ಈ ಅಧ್ಯಯನದ ಹಿನ್ನೆಲೆಗಿದೆ. ಈ ವಿವರಣೆ ವಿಶ್ಲೇಷಣೆಗಳ ಮೊದಲ ಮತ್ತು ಅಂತಿಮ ಆಸಕ್ತಿಯೆಂದರೆ, ಪ್ರಾಚೀನ ಸಂಸ್ಕೃತಿಯ ವೈವಾಹಿಕ ಪದ್ಧತಿ ಕುಟುಂಬದೊಳಗೆ ಮೈತಳೆದ ರೀತಿ ಅದು ಎತ್ತುವ ಪ್ರಶ್ನೆಗಳು, ವಿವಾಹ ಪದ್ಧತಿಯಿಂದ ಹೊರಬರಲು ಮಾಡಿದ ಹೋರಾಟಕ್ಕೆ ಪಿತೃಪ್ರಧಾನ ಸಮಾಜ ಸೃಷ್ಟಿಸಿದ ಮೌಲ್ಯಗಳು ಸಂಘರ್ಷಕ್ಕೆಡೆ ಮಾಡಿರುವುದು ಈ ಅಧ್ಯಯನದ ಹಿನ್ನೆಲೆಗಿದೆ.. 'ವೈಧವ್ಯ'ದ ಅಧ್ಯಯನವನ್ನು 'ವಿವಾಹ'ದ ಪ್ರಶ್ನೆಯಿಂದಲೇ ಆರಂಭಿಸುವುದಾಗಿದೆ. ಈ ಹಿನ್ನೆಲೆಯಲ್ಲಿ ವಿಲ್‌ಡ್ಯೂರಾಂಟ್ ಮತ್ತು ಸಿಮೋನ್ ದ ಬೋವಾರವರ ಐತಿಹಾಸಿಕ ಮತ್ತು ಸಮಾಜ ಶಾಸ್ತ್ರೀಯ ನಿರೂಪಣೆಗಳು ದಿಕ್ಸೂಚಿಯಾಗಿವೆ. ನಾಗರೀಕತೆಯ ಬೆಳವಣಿಗೆಯೊಂದಿಗೆ ಪರಿಪೂರ್ಣ ಜಗತ್ತು ವಿಸ್ತರಿಸುತ್ತಾ ಬದಲಾವಣೆಯಾಗುತ್ತ ಸಾಗಿದೆ. ಇದರೊಂದಿಗೆ ಹೊಸ ಮಧ್ಯಮ ವರ್ಗ ಹುಟ್ಟಿಕೊಂಡಿತು. ಹಳೆಯ ಜಗತ್ತಿನ ನಂಬಿಕೆಗಳನ್ನು ಸಾರ್ವತ್ರಿಕ, ಸಾರ್ವಕಾಲಿಕ ಎಂದು ನಂಬಲಾಗಿದ್ದ ಸಮಷ್ಟಿಯ ಮೌಲ್ಯಗಳನ್ನು ಮಧ್ಯಮ ವರ್ಗ ಪ್ರಶ್ನಿಸುತ್ತದೆ. ಈ ಹಿನ್ನಲೆಯಲ್ಲಿ 'ವೈಧವ್ಯ'ದ ಸಮಸ್ಯೆಯನ್ನು ಅರಿಯುವ ಪ್ರಯತ್ನ ಈ ಅಧ್ಯಯನದಲ್ಲಿ ನಡೆದಿದೆ.

ಮಹಿಳೆಗೆ ಸಂಬಂಧಿಸಿದ ಎಲ್ಲಾ ಸಮಸ್ಯೆಗಳೂ ವಿವಾಹಮೂಲದವೆ. ಕೌಟುಂಬಿಕ ಚೌಕಟ್ಟಿನೊಳಗೆ ತನ್ನ ವ್ಯಾಪಕ ಹಿಡಿತಕ್ಕೊಳಗಾದ 'ವಿವಾಹ ಸಂಸ್ಥೆ' ಮಹಿಳೆಯ ಬೌದ್ಧಿಕ ಹಾಗೂ ಮಾನಸಿಕ ಸತ್ವವನ್ನು ದುರ್ಬಲಗೊಳಿಸಿ ಪ್ರಧಾನ ಸಂಸ್ಕೃತಿ ತನ್ನ ವಿಚಾರ ಸಂಸ್ಕೃತಿಯನ್ನು ಹೇರಿದಾಗ ಬಾಲ್ಯವಿವಾಹ, ವೈಧವ್ಯ, ಸತಿ ಪದ್ಧತಿಯಂತಹ ಅನಿಷ್ಟಗಳು ಸಾಮಾಜಿಕ ಮೌಲ್ಯಗಳಾಗಿ ತಲೆದೋರಿದವು. (ನೆಲೆಯಾದವು) ಬಾಲ್ಯವಿವಾಹ, ಸತಿಪದ್ಧತಿಯಂತಹ ಸ್ಥಾಪಿತ ಮೌಲ್ಯಗಳನ್ನು ಪ್ರತಿಭಟಿಸುವ ಪ್ರಯತ್ನ ಹತ್ತೊಂಬತ್ತನೇ ಶತಮಾನದಲ್ಲಿ ನಡೆಯಿತು. ಭಾರತೀಯ

ಪರಂಪರೆಯಲ್ಲಿ ಸ್ಥಗಿತವಾದ ಸಾಂಪ್ರದಾಯಿಕ ಮೌಲ್ಯಗಳು ಹರಡಿದಾಗ ಅದಕ್ಕೆ ಎದುರಾಗಿ ಪ್ರಾದೇಶಿಕ ಸಂಸ್ಕೃತಿಯ ಮುಖ್ಯ ವಾಹಿನಿಯಾದ ಜನಪದ ಸಾಹಿತ್ಯ ಮೊದಲುಗೊಂಡು ಸ್ವಾತಂತ್ರ್ಯ ಪೂರ್ವದ ಕನ್ನಡ ಸಾಹಿತ್ಯ ತನ್ನೆಲ್ಲ ಸೃಜನಶೀಲ ಕೃತಿಗಳ ಮೂಲಕ ತೀವ್ರವಾಗಿ ಪ್ರತಿಕ್ರಿಯಿಸಿತು. ಇಂಥ ಪ್ರತಿಕ್ರಿಯೆ ಕನ್ನಡದ ಮೊದಲ ಮಹತ್ವದ ಕಾದಂಬರಿಗಳಾದ ಇಂದಿರಾ, ಇಂದಿರಾಬಾಯಿ ಹಾಗೂ ನವೋದಯದ ಮಹತ್ವದ ಲೇಖಕರಾದ ಕುವೆಂಪು ಬೇಂದ್ರೆ ನಿರಂಜನ, ಚದುರಂಗ ಹಾಗೂ ಲೇಖಕಿಯರಾದ ತಿರುಮಲಾಂಬಾ, ಕಲ್ಯಾಣಮ್ಮ, ಕೊಡಗಿನ ಗೌರಮ್ಮ ಸರಸ್ವತಿಬಾಯಿ ರಾಜವಾಡೆಯವರ ಕಥನಗಳ ಮುಖೇನ ಮಹತ್ವದ ಮಾದರಿಗಳನ್ನು ಕಂಡುಕೊಂಡಿತು. ಸಾಂಪ್ರದಾಯಿಕ ಮೌಲ್ಯಗಳ ವಿರೋಧ-ವಿಶ್ಲೇಷಣೆಯ ಜೊತೆಗೆ ಈ ಲೇಖಕರ ಮುಖ್ಯ ಆಶಯಗಳೇನು ಎಂದು ಈ ಅಧ್ಯಯನ ಪರಿಶೀಲನೆಗೆ ಒಳಪಡಿಸಿದೆ.

ಸ್ವಾತಂತ್ರಪೂರ್ವದ ಕನ್ನಡ ಕಥನ ಸಾಹಿತ್ಯ 'ವೈಧವ್ಯ'ವೆಂಬ ಅನಿಷ್ಟ ಪದ್ಧತಿಯನ್ನು ವಿರೋಧಿಸುತ್ತದೆ. ಅದರೊಂದಿಗೆ ಪಿತೃಪ್ರಧಾನ ವ್ಯವಸ್ಥೆ ಹೇರಲ್ಪಟ್ಟ ಕಟ್ಟುಪಾಡುಗಳನ್ನು ಪ್ರತಿರೋಧಿಸುತ್ತ ಜೀವಂತ ಮಾನವೀಯ ನೆಲೆಗಳನ್ನು ಕಂಡುಕೊಳ್ಳುವ ಸ್ವರೂಪವನ್ನು ಒಂದು ತಾತ್ವಿಕ ಹಿನ್ನೆಲೆಯಾಗಿ ಈ ಅಧ್ಯಯನ ಸ್ವೀಕರಿಸಿದೆ. ಹೀಗಾಗಿ ಪ್ರಧಾನ ಸಂಸ್ಕೃತಿಯು ಹೇರಿದ ಸಾಂಪ್ರದಾಯಿಕ ಮೌಲ್ಯಗಳು, ವೈಚಾರಿಕ ನೆಲೆಯಲ್ಲಿ ಪ್ರಶ್ನೆಗೊಳಗಾಗಿ ತಮ್ಮ ಅನುಕೂಲಕ್ಕಾಗಿ ಸೃಷ್ಟಿಸಿದ ಮೌಲ್ಯಗಳು ಕರಗತೊಡಗಿದಾಗ ಸಂಘರ್ಷವಾಗಿ ಪಡೆದ ಸ್ವರೂಪವನ್ನು ಈ ಅಧ್ಯಯನ ಗಮನಿಸಿದೆ.

ಸತಿಪದ್ಧತಿಯನ್ನು ಪ್ರತ್ಯಕ್ಷವಾಗಿ ಪರೋಕ್ಷವಾಗಿ ನಿರ್ಭಿಡೆಯಿಂದ ಪ್ರತಿಭಟಿಸಿದ ಪ್ರಾದೇಶಿಕ ಸಂಸ್ಕೃತಿಯ ಮುಖ್ಯ ವಾಹಿನಿಯಾದ ಜನಪದ ಸಾಹಿತ್ಯ ನಮ್ಮ ಮೊದಲ ಕಥನ ಸಾಹಿತ್ಯಕ್ಕೆ ಒಂದು ಮುಖ್ಯ ಹಿನ್ನೆಲೆಯಾಗಿದೆ. ಈ ಹಿನ್ನೆಲೆ ಈ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿದೆ.

ಸಾಮಾಜಿಕ ಮೌಲ್ಯಗಳು ನಮ್ಮ ಬೌತಿಕ ಹಾಗೂ ಮಾನಸಿಕ ಜಗತ್ತಿನ ಮೇಲೆ ಉಂಟು ಮಾಡಿದ ಪರಿಣಾಮ. ಸ್ವಾತಂತ್ರ್ಯ ಪೂರ್ವದಲ್ಲಿ ಚಿಂತಿತವಾದ ರೀತಿ ಸ್ವಾತಂತ್ರ್ಯಾ ನಂತರದ ಕಾಲಮಾನದಲ್ಲೂ ಮುಂದುವರಿದಿದೆ. ಸಾಮಾಜಿಕ ಮೌಲ್ಯಗಳು ಬದಲಾಗುತ್ತಿವೆ. ಬದಲಾವಣೆಯನ್ನು ಬಯಸುವ ಈ ಹೊತ್ತಿನಲ್ಲಿ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳು ತುಂಬಾ ವಿಚಿತ್ರವೂ, ವಿಶಿಷ್ಟವೂ ಆಗಿದೆ. ಹಿಂದಿನ ಕಾಲಮಾನದ ಅನೇಕ ಒತ್ತಡಗಳೊಂದಿಗೆ ಹೊಸ ಜಗತ್ತಿನ ಸಮಸ್ಯೆಯೂ ಸೇರಿಕೊಂಡಿದೆ. ಉದ್ಯೋಗ, ಎಚ್ಚರ ಇವುಗಳಲ್ಲಿ ಒಂದಿಲ್ಲದಿದ್ದರೂ ಬದಲಾವಣೆಗಾಗಿ ಯತ್ನಿಸುವುದು ಕಷ್ಟ. ಉದ್ಯೋಗ ಎಚ್ಚರ ಇದ್ದಾಗ್ಯೂ ವೈಯಕ್ತಿಕ ಬದುಕನ್ನು ಅಪಾಯಕ್ಕೊಡ್ಡಿಕೊಳ್ಳಬೇಕಾದ ಸ್ಥಿತಿ ಇದೆ. ಕೇವಲ ಬದಲಾವಣೆಯ ಅರಿವು ಕೂಡ

ಈಗಿನ ಸಾಮಾಜಿಕ, ಆರ್ಥಿಕ ಕೌಟುಂಬಿಕ ನೆಲೆಯಲ್ಲಿ ಕ್ಲಿಷ್ಟವಾದುದು ಎನ್ನುವುದು ನವೋದಯ ಕಥನ ಸಾಹಿತ್ಯದ ಪ್ರಮುಖ ಧ್ವನಿಯಾಗಿದೆ ಎಂದು ಈ ಅಧ್ಯಯನ ವಿಶ್ಲೇಷಿಸುತ್ತದೆ.

ಕನ್ನಡ ಕಥನ ಸಾಹಿತ್ಯ ಹುಟ್ಟುಪಡೆಯುತ್ತಿದ್ದಂತೆ ಸಮಕಾಲೀನ ಜೀವನಕ್ರಮ ಪ್ರವೇಶಿಸಿದೆ. ಪ್ರಗತಿಪರ ವಸ್ತುವಿನ ಆಯ್ಕೆಯೊಂದಿಗೆ ಸಾಮಾಜಿಕ ವಿಮರ್ಶೆಯೂ ಸೇರಿಕೊಂಡಿತು. ವ್ಯಕ್ತಿಯ ಮಾನಸಿಕ ಜಗತ್ತನ್ನು ಅನಾವರಣಗೊಳಿಸುವ ಮೌಲ್ಯಶೋಧನೆ ಮಾಡುವ ಪ್ರಯತ್ನ ನಡೆಯಿತು. ಆಧುನಿಕ ಜಗತ್ತಿನ ದಟ್ಟ ಅನುಭವಗಳನ್ನು ತೆರೆದು ತೋರಿಸುವಾಗ ಎದುರಾದ ಹೊಸ ಕಾಲಮಾನದ ಸಮಸ್ಯೆಗಳು ಐವತ್ತರ ದಶಕದ ಅನಂತರ ಸೃಷ್ಟಿಯಾದ ಹಾಗೂ ಸೃಷ್ಟಿಯಾಗುತ್ತಿರುವ ಕಥನ ಸಾಹಿತ್ಯದಲ್ಲಿ ಬಿಂಬಿತವಾಗಿವೆ. ಇದನ್ನು ನವೋದಯ ನಂತರದ ಕಥನ ಸಾಹಿತ್ಯದ ಮೂಲಕ ಈ ಅಧ್ಯಯನ ವಿಶ್ಲೇಷಿಸುತ್ತದೆ.

'ಇಂದಿರಾ' 'ಇಂದಿರಾಬಾಯಿ' ಕಾದಂಬರಿಯಲ್ಲಿ ನಾವು ಕಾಣುವುದು ಸಾಂಪ್ರದಾಯಕತೆ ಮತ್ತು 'ಆಧುನಿಕತೆ'ಯೊಂದಿಗಿನ ಮುಖಾಮುಖಿ. ಧರ್ಮದ ಪರದೆಯ ಹಿಂದೆ ನುಸುಳಿಕೊಂಡಿರುವ ಭ್ರಷ್ಟ ಆಚರಣೆಗಳ ಗೊಂದಲ ಜಗತ್ತು ಆರಂಭದ ಕಾದಂಬರಿಗಳಲ್ಲಿ ಚರ್ಚೆಗೊಳಪಟ್ಟಿದೆ. ವಸಾಹತುಶಾಹಿ ಪ್ರವೇಶದಿಂದ ಇಂಗ್ಲಿಷ್ ಶಿಕ್ಷಣದ ಅರಿವಿನೊಂದಿಗೆ ಧಾರ್ಮಿಕ ಸಿದ್ಧಾಂತಗಳನ್ನು ಪ್ರಶ್ನೆಮಾಡಲಾಯಿತು. ಇದರಿಂದ ಮತಾದೀಶರಿಗೂ ಸಮಾಜಸುಧಾರಕರಿಗೂ ನಡುವೆ ತಾತ್ವಿಕ ಹಾಗೂ ಧಾರ್ಮಿಕ ಘರ್ಷಣೆಗಳುಂಟಾಗಿರುವುದನ್ನು. ಈ ಅಧ್ಯಯನದಲ್ಲಿ ಗಮನಿಸಲಾಗಿದೆ.

ಆರಂಭದ ಕಾದಂಬರಿಗಳು ಶಿಕ್ಷಣದಿಂದ ಪಡೆಯುವ 'ನಿಷ್ಠೆ' ಮತ್ತು 'ಮೌಲ್ಯ'ಗಳನ್ನು ಕುರಿತು ಚರ್ಚಿಸುವುದರೊಂದಿಗೆ ಹಿಂದೂಧರ್ಮದ ಚೌಕಟ್ಟಿನೊಳಗೇ ಸಮಾಜ ಸುಧಾರಣೆ ಸಾಧ್ಯವಾಗದೆ ಹೊರಗಿನಿಂದಲೇ ಬರಬೇಕಾಗುತ್ತದೆ. ಶಿಕ್ಷಣ ಮಾತ್ರ ಪ್ರತಿಭಟನೆಯ ಶಕ್ತಿ ನೀಡಬಲ್ಲದು, ಎನ್ನುವುದನ್ನು ಶಿವರಾಮ ಪಡಿಕ್ಕಲ್‌ರವರು ಇಂದಿರಾಬಾಯಿ ಕಾದಂಬರಿಯ ವಿಶ್ಲೇಷಣೆಯಲ್ಲಿ ಹೀಗೆ ಅಭಿಪ್ರಾಯಪಡುತ್ತಾರೆ.

> *"ವಸಾಹತುಶಾಹಿ ಸಾಮಾಜಿಕ ಸಂಸ್ಥೆಗಳು ಸಹ ಸಮಾಜವನ್ನು ರೂಪಾಂತರಗೊಳಿಸಲಾರವು. ಯಾಕೆಂದರೆ ಅವೂ ಸಹ ಭ್ರಷ್ಟ ಆಚರಣೆಗಳ ಸೋಂಕಿಗೆ ಒಳಗಾಗಿವೆ. ಹಾಗಿರುವಾಗ ಒಬ್ಬ ಪ್ರಾಮಾಣಿಕ ಮತ್ತು ಸತ್ಯದ ಪ್ರತಿಪಾದಕ ವ್ಯಕ್ತಿ ಮಾತ್ರ ರೂಪಾಂತರದ ನಿಯೋಗಿಯಾಗಬಲ್ಲ. ಕಾದಂಬರಿಯಲ್ಲಿ ಭಾಸ್ಕರರಾವ್ ಮತ್ತು ಇಂದಿರಾ ಈ ನಿಯೋಗಿಗಳನ್ನು ಪ್ರತಿನಿಧಿಸುತ್ತಾರೆ"*[೧]

---

೧. ಉದ್ಧೃತ – ಭಾರತದ ಮೊದಲ ಕಾದಂಬರಿಗಳು – (ಸಂ) ಮೀನಾಕ್ಷಿ ಮುಖರ್ಜಿ– (ಅನು) ಜಿ. ಬಾಲಕೃಷ್ಣ – ಸಾಹಿತ್ಯ ಅಕಾಡೆಮಿ – ಬೆಂಗಳೂರು – ೨೦೧೧ ಪು –೨೨೪–೨೨೫

ವಸಾಹತುಶಾಹಿ ಸಂಸ್ಕೃತಿಗೆ ಸಮಕಾಲೀನ ಸಾಂಪ್ರದಾಯಿಕ ಮೌಲ್ಯಗಳು ಎದುರಾಗುವುದನ್ನು ಇಂದಿರಾ 'ಇಂದಿರಾಬಾಯಿ' ಕಾದಂಬರಿಗಳು ಅಭಿವ್ಯಕ್ತಿಸುತ್ತವೆ. ಆಧುನಿಕತೆಯನ್ನು ಭ್ರಷ್ಟಧಾರ್ಮಿಕ ಆಚರಣೆಗಳನ್ನು 'ಇಂದಿರಾಬಾಯಿ' ಲೇವಡಿ ಮಾಡುತ್ತದೆ. ಬ್ರಹ್ಮಚರ್ಯೆಯ ಆಯ್ಕೆ ವಿಧವೆಯ ಮುಂದಿದ್ದರೂ ಕಾದಂಬರಿ ಮರುವಿವಾಹಕ್ಕೆ ಕಾಲ ಸಜ್ಜಾಗಿರುವುದನ್ನು, ವೈವಾಹಿಕ ಲೈಂಗಿಕ ಚರ್ಚೆಯನ್ನು ಕೇಂದ್ರವಾಗಿಟ್ಟುಕೊಂಡು ಚರ್ಚಿಸುವುದನ್ನು ಈ ಅಧ್ಯಯನ ಗಮನಿಸಿದೆ.

ಕನ್ನಡದ ಮೊದಲ ಕಾದಂಬರಿ ೧೮೯೯ರ 'ಇಂದಿರಾಬಾಯಿ' ಕಾದಂಬರಿಯಿಂದ ಹಿಡಿದು ೧೯೩೦ರ ವರೆಗಿನ ಕನ್ನಡದ ಅನುವಾದಿತ ಹಾಗೂ ಸ್ವತಂತ್ರ ಕಾದಂಬರಿಗಳಲ್ಲಿ ೧೯ನೇ ಶತಮಾನದ ಸ್ತ್ರೀಯರ ಸಾಮಾಜಿಕ ಸ್ಥಿತಿಗತಿಗಳ ಕುರಿತ ಚರ್ಚೆ ತೀವ್ರವಾಗಿಯೇ ಇತ್ತು. ಈ ಹಿನ್ನೆಲೆಯಲ್ಲಿ ಅನುವಾದಿತ ಕಾದಂಬರಿಯನ್ನು ಗಮನಿಸಲಾಗಿದೆ. ವೈಧವ್ಯವನ್ನು ಕರ್ಮಸಿದ್ಧಾಂತದ ಹಿನ್ನೆಲೆಯಲ್ಲಿ ನೋಡುವ ತಿರುಮಲಾಂಬ 'ನಭಾ' ವಿರಾಗಿಣಿ ಕೃತಿಗಳಲ್ಲಿ ವಿಧವಾ ವಿವಾಹವನ್ನು ನಿರಾಕರಿಸುತ್ತಾರೆ.

ಮಹಿಳೆಯ ದುಡಿಮೆಗೆ ಗೌರವ, ಮತ್ತು ಆರ್ಥಿಕ ಸ್ವಾವಲಂಬನೆಯ ಪರವಾಗಿ ಬರೆದ ಕಲ್ಯಾಣಮ್ಮ ವಿಧವಾವಿವಾಹದ ಪರವಾದ ನಿಲುವನ್ನು ತಾಳುವುದರಿಂದ ತಿರುಮಲಾಂಬಾರವರಿಗಿಂತ ಭಿನ್ನರಾಗುತ್ತಾರೆ. ಬಾಲ್ಯವಿವಾಹ, ಕೇಶಮುಂಡನ, ವೈಧವ್ಯ ಮುಖ್ಯ ಸಮಸ್ಯೆಯಾಗಿದ್ದ ಕಾಲಮಾನದಲ್ಲಿ ಸ್ವಾನುಭವದ ಲೇಖಕಿಯರು ವಿಧವಾ ವಿವಾಹದ ಸಾಧಕಬಾಧಕಗಳನ್ನು ಪ್ರಶ್ನಿಸುವುದನ್ನು ಈ ಅಧ್ಯಯನ ತನ್ನ ವ್ಯಾಪ್ತಿಯಲ್ಲಿ ಚರ್ಚಿಸುತ್ತದೆ.

ವಿಧವೆಯರ ಮುಂದಿದ್ದ ಅವಕಾಶಗಳು, ಸವಾಲುಗಳು, ವಿದ್ಯಾಭ್ಯಾಸದಲ್ಲಿ ತೊಡಗಿದ ವಿಧವೆಯರು ಎದುರಿಸುವ ಸಮಸ್ಯೆಗಳು ಹಾಗೂ ಯುವತಿಯರಾದ ವಿಧವೆಯರ ಮುಂದಿದ್ದ ಕಾಮಪ್ರೇಮಗಳ ಸಮಸ್ಯೆ ಆರಂಭದ ಲೇಖಕಿಯರಾದ ತಿರುಮಲಾಂಬಾ ಕಲ್ಯಾಣಮ್ಮ ರಾಜವಾಡೆ, ಕೊಡಗಿನ ಗೌರಮ್ಮರ ಕಥನ ಸಾಹಿತ್ಯದಲ್ಲಿ ಒಡಮೂಡಿದ ಚಿಂತನೆಯ ಆಧಾರದಲ್ಲಿ ಈ ಅಧ್ಯಯನ ವಿವೇಚಿಸಿದೆ.

ವಸಾಹತುಶಾಹಿ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ಅನೇಕ ಹೊಸ ಸಾಂಸ್ಕೃತಿಕ ಚಿಂತನೆಗಳು ಶತಮಾನದ ಕೊನೆಯವರೆಗೂ ನಡೆದಿದೆ. ಸಾಮಾಜಿಕ ಮೌಲ್ಯಗಳ ಚರ್ಚೆ ಬಹಳ ಮುಖ್ಯವಾಗುತ್ತವೆ. ಈ ನಿಟ್ಟಿನಲ್ಲಿ ಕುವೆಂಪು, ಕಾರಂತ, ಮಾಸ್ತಿ, ಗೊರೂರು, ನಿರಂಜನ, ಎಂ.ಕೆ.ಇಂದಿರಾ, ಚದುರಂಗರ ಕೃತಿಗಳ ಪರಿಶೀಲನೆ ಈ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತವೆ. ಹಾಗೆಯೇ ಬೈರಪ್ಪ, ಅನಂತಮೂರ್ತಿ, ಲಂಕೇಶ್ ಮುಂತಾದ ಲೇಖಕರು ಮಹಿಳೆಯನ್ನು ಅದರಲ್ಲೂ ವಿಧವೆಯನ್ನು

ಬೌದ್ಧಿಕವಲಯದಿಂದ ದೂರ ಇಟ್ಟು ಕುಟುಂಬವೇ ಅವಳ ಜೀವನ ಎನ್ನುವುದನ್ನು ಹೇಗೆ ಹೇರಲ್ಪಟ್ಟಿತ್ತು ಎಂದು ಅಭಿವ್ಯಕ್ತಿಸಿರುವುದನ್ನು ಚರ್ಚಿಸುತ್ತವೆ. ಹಾಗೂ ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಗೆ ಶತಮಾನಗಳಿಂದ ನೈತಿಕ ಸಂಬಂಧದ ಏಕಮುಖ ಸೂತ್ರವನ್ನು ಮನನ ಮಾಡಿಸುತ್ತಲೇ ಬಂದಿದೆ. ಅನೈತಿಕ ಸಂಬಂಧದ ವಿಧವೆ ಹೆಚ್ಚು ದುಃಖಿತಳಾಗುತ್ತಾಳೆ. ಇದರಿಂದ ಸಮಾಜ ಅವಳನ್ನು ಕ್ಷಮಿಸುವುದಿಲ್ಲ ಎಂಬ ಸತ್ಯ ಅನಾವರಣಗೊಂಡಿರುವುದನ್ನು ಈ ಅಧ್ಯಯನ ಗಮನಿಸಿದೆ.

ಮಹಿಳೆಯ ಆಂತರ್ಯದಲ್ಲಿ ಸ್ಥಗಿತವಾದ ಸಹನೆ, ಕ್ಷಮೆ ವಿಧೇಯತೆಯನ್ನು ಚಲಾವಣೆಯಲ್ಲಿಟ್ಟ ವ್ಯವಸ್ಥೆ 'ಹಕ್ಕು ಸ್ಥಾಪನೆ'ಯ ಮಾರ್ಗವನ್ನು ಬೆಂಬಲಿಸಿಲ್ಲ. ಕನ್ನಡ ಸಾಹಿತ್ಯದಲ್ಲಿ ಮಹಿಳೆಯರ ಪ್ರತಿಭಟನೆ ತೀರ ಇತ್ತೀಚಿನದಲ್ಲ. ಆ ಕಾಲದ ಮಹಿಳೆ ತನ್ನ ತಲೆಕೂದಲನ್ನು ಉಳಿಸಿಕೊಳ್ಳಲು, ಪುಸ್ತಕವನ್ನು ಹಿಡಿಯಲು ಹೋರಾಡಬೇಕಾದ ತುರ್ತು ಇತ್ತು. ಆಕಾಲದ ಸಮಸ್ಯೆಗಳು ಈ ಕಾಲದ ಸಮಸ್ಯೆಗಳಾಗಿ ಉಳಿದಿಲ್ಲ. ಆದರೂ ಆ ಕಾಲದ ಕಥನ ಸಾಹಿತ್ಯ ಪ್ರಚಲಿತ ಮೌಲಿಕ ವ್ಯವಸ್ಥೆಯನ್ನೇ ಬೆಂಬಲಿಸಿರುವುದನ್ನು ತಿರುಮಲಾಂಬಾ, ಕಲ್ಯಾಣಮ್ಮ, ಕೊಡಗಿನ ಗೌರಮ್ಮ, ಸರಸ್ವತಿ ಬಾಯಿ ರಾಜವಾಡೆಯವರ ಕೃತಿಗಳು ಅನಾವರಣಗೊಳಿಸಿದವು. ಹಾಗೂ ಸ್ವಾನುಭವದಿಂದ ತಮ್ಮ ವೈಯಕ್ತಿಕ ತೀವ್ರ ತುಡಿತದಿಂದ ಬರೆಯ ತೊಡಗಿದರು. ಬಾಲ್ಯವಿವಾಹ ವಿರೋಧ, ವೈಧವ್ಯ, ಸ್ತ್ರೀ ಶಿಕ್ಷಣದಂತಹ ಸಮಸ್ಯೆಗಳು ಸುಧಾರಣೆಯ ಕೇಂದ್ರವಾಗಿದ್ದುವು.

ಶಿಷ್ಟ ಕನ್ನಡ ಸಾಹಿತ್ಯದಲ್ಲಿ ಬೌದ್ಧಿಕ ಚಟುವಟಿಕೆಗಳಿಗೆ ಆ ಕಾಲದಲ್ಲಿ ಪ್ರೋತ್ಸಾಹ ದೊರೆತಿದ್ದರ ಫಲವಾಗಿ ತಮ್ಮನ್ನು ತಾವು ಅಭಿವ್ಯಕ್ತಿಸಿಕೊಳ್ಳುವ ಪ್ರಯತ್ನವನ್ನು ಮಹಿಳೆಯರು ಮಾಡಿದ್ದಾರೆ. ಎಂ.ಕೆ.ಇಂದಿರಾ, ತ್ರಿವೇಣಿ ಮುಂತಾದ ನವೋದಯ ಕಾಲದ ಆರಂಭದ ಲೇಖಕಿಯರು ಪ್ರತಿಕ್ರಿಯಿಸಿದ್ದಾರೆ. ಮನೆವಾಳ್ತೆಯ ಕಾಯಕ ಶತಮಾನಗಳಿಂದಲೂ ಮಹಿಳೆಯನ್ನು ತೊಡಗಿಸಿಕೊಂಡಿದೆ. ಆದರೆ ಆರ್ಥಿಕ ಅನುಕೂಲವಾಗಲೀ ಸಾಮಾಜಿಕ ಮಾನ್ಯತೆಯಾಗಲೀ ಅವಳಿಗೆ ಸಿಕ್ಕಿಲ್ಲ. ಕೆಳವರ್ಗದ ಮಹಿಳೆ ಹಾಗೂ ವಿಧವೆಯರ ನಿರಂತರ ದುಡಿಮೆ ಆಕೆಗೆ ಆರ್ಥಿಕ ಸ್ವಾತಂತ್ರ್ಯ ನೀಡುವಲ್ಲಿ ವಿಫಲವಾಗಿದೆ. ಅದರಲ್ಲೂ ವಿಧವೆಯರ ಆರ್ಥಿಕ ಸ್ಥಿತಿ ಅಷ್ಟೇನು ಚನ್ನಾಗಿಲ್ಲದ ಕಾರಣ ಆಕೆ ಅಂಚಿಗೆ ಸರಿಯುವುದನ್ನು ಲೇಖಕಿಯರು ವಿವರಿಸಿದ್ದಾರೆ. ವಿಧವೆ ಅನೇಕ ರೀತಿಯಲ್ಲಿ ದೌರ್ಬಲ್ಯಕ್ಕೊಳಗಾಗಿ ಆಳಿಸಿಕೊಳ್ಳುವ ಸ್ಥಿತಿ ತಲುಪಿದಾಗ ಪ್ರತಿಯೊಬ್ಬ ಆಳುವವರ ಇಚ್ಛೆ ಪ್ರಬಲವಾಗಿದೆ. ಈ ಸೇವಾಕ್ರಮ ಬೆಳೆದುನಿಂತು ಬೇರೆಯ ಸಾಧ್ಯತೆಗಳನ್ನು ಯೋಚಿಸಲು ಮತ್ತು ಪ್ರಶ್ನಿಸಲು ಸಾಧ್ಯವಾಗದೆ ಕಾಲಕ್ರಮದಲ್ಲಿ ದಮನಿತ ಜೀವನ ಕ್ರಮಕ್ಕೆ ಹೆಚ್ಚು ಹೆಚ್ಚು ನಿಷ್ಠೆ ತೋರುತ್ತಾ

ಬಂದಿರುವುದನ್ನು ಸ್ವಾತಂತ್ರ್ಯ ಪೂರ್ವ ಕನ್ನಡ ಸಾಹಿತ್ಯ ಅನಾವರಣಗೊಳಿಸಿರುವುದರ ಹಿನ್ನೆಲೆಯನ್ನು ಈ ಅಧ್ಯಯನ ಒಳಗೊಂಡಿದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಜೈವಿಕ ಲಕ್ಷಣಗಳನ್ನು ಒಳಗೊಂಡಂತೆ ಮಹಿಳೆಯ ವ್ಯಕ್ತಿತ್ವದ ಎಲ್ಲ ಅಂಶಗಳನ್ನು ಅಧೀನದಲ್ಲಿರಿಸಿಕೊಳ್ಳಲಾಗಿದೆ ಹಾಗೂ ಸಾಮಾಜಿಕ ಕಟ್ಟುಪಾಡುಗಳು ಮಹಿಳೆಯ ಬದುಕಿನಲ್ಲಿ ಅನಿವಾರ್ಯ ಅಗತ್ಯಗಳು. ಈ ಅಗತ್ಯಗಳನ್ನು ಮೆಟ್ಟಿ ನಿಂತಾದರೂ ಪುರುಷ ಸಂಬಂಧವನ್ನು ವಿರೋಧಿಸುವ ನಿರ್ಧಾರ ಮಾಡುತ್ತಿರುವ ಈ ಕಾಲಮಾನದ ಮಹಿಳೆ ಎಂತಹ ನೋವು ಸಂಕಟಕ್ಕೆ ಸಿಲುಕಿದ್ದಾಳೆ ಎಂಬ ಪ್ರಶ್ನೆ ಪುರುಷ ಸಮಾಜದ ಎದುರುಗಿದೆ. ಆದರೂ ಈ ಶತಮಾನದ ಅಂಚಿನಲ್ಲಿ ನಿಂತು ಕಳೆದಕಾಲದ ಸಾಧನೆಗಳನ್ನು, ತಪ್ಪು ಹೆಜ್ಜೆಗಳನ್ನು ಗುರುತಿಸುವುದು ಒಂದು ಸವಾಲಾಗಿದೆ. ಈ ಬಗೆಯ ಹುಡುಕಾಟವೇ ಹೊಸ ಅರಿವಿಗೆ ಮಾರ್ಗಸೂಚಿಯಾಗಬಲ್ಲದು. ಶತಮಾನದ ಹರಹಿನಲ್ಲಿ ಹರಡಿಕೊಂಡಿದ್ದ ಚಿಂತನೆಗಳನ್ನು ಒಂದೆಡೆ ತಂದು 'ವೈಧವ್ಯ'ದ ಬದುಕನ್ನು ಅವಲೋಕಿಸುವ ಪ್ರಯತ್ನ ಮಾಡಲಾಗಿದೆ. ಈ ಪ್ರಯತ್ನದಿಂದ ಇತಿಹಾಸ ಪಥದಲ್ಲಿ ಮರೆಯಾಗಿದ್ದ ವಿಷಯಗಳು ಮತ್ತೆ ಮುನ್ನೆಲೆಗೆ ಬರಲು ಅವಕಾಶವಾಗಿದೆ ಎಂದು ಊಹಿಸಲಾಗಿದೆ. ನಾಗರಿಕತೆಯಲ್ಲಿ ಒಡಮೂಡಿದ ಜೀವನ ಮೌಲ್ಯಗಳು ಮಹಿಳೆಯನ್ನು ಶಾಪದಂತೆ ಕಾಡಿರುವುದನ್ನು ಬಿಂಬಿಸುವುದು ಕನ್ನಡ ಕಥನ ಸಾಹಿತ್ಯದ ಎಲ್ಲ ಕಾಲದ ಮುಖ್ಯ ಆಶಯ ಎಂಬುದು ಈ ಅಧ್ಯಯನದ ಹಿನ್ನೆಲೆಗೆ ಇದೆ.

ಬಾಲ್ಯವಿವಾಹ ನಿಷೇಧ ಕಾಯ್ದೆ ಇನ್ನೂ ರೂಪುಗೊಂಡಿರದ, ಮಹಿಳೆಯರಿನ್ನೂ ಆಧುನಿಕ ಕನ್ನಡ ಸಾರಸ್ವತ ಲೋಕಕ್ಕೆ ಅಡಿ ಇಡದ ಕಾಲಕ್ಕೆ ಹದಿಮೂರು ವರ್ಷದ ವಿಧವೆ ತಿರುಮಲಾಂಬಾ ಪಾದಾರ್ಪಣೆ ಮಾಡಿದರು. ತಮ್ಮ ಕೆಲವೇ ಜೊತೆಗಾರ್ತಿಯರೊಂದಿಗೆ ಸಂಪಾದಕಿಯಾಗಿ, ಲೇಖಕಿಯಾಗಿ, ಪ್ರಕಾಶಕಿಯಾಗಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹೊಸಪುಟವನ್ನು ತೆರೆದರು. ತಮ್ಮ ವೈಯಕ್ತಿಕ ಜೀವನದ ದೊಡ್ಡ ದುರಂತವಾದ 'ವೈಧವ್ಯ' ಅವರ ಬರಹಗಳ ವಸ್ತುವಾಗಿದ್ದು ವೈಧವ್ಯ ಸಾಮಾಜಿಕ ಮೌಲ್ಯವಾಗಿ ಮಹಿಳೆಯ ಬದುಕಿನ ದುರಂತವಾಗುವುದನ್ನು ಈ ಅಧ್ಯಯನ ವಿಶ್ಲೇಷಿಸುತ್ತದೆ. ಬ್ರಾಹ್ಮಣ ಸಮುದಾಯದಲ್ಲಿ 'ವೈಧವ್ಯ' ಬಹುದೊಡ್ಡ ಸಮಸ್ಯೆಯಾಗಿ ಹರಡಿಕೊಂಡು ವಿಧವೆ ಕ್ರೌರ್ಯಕ್ಕೊಳಗಾಗುವುದು ಈ ಅಧ್ಯಯನದ ಕಕ್ಷೆಗೆ ಒಳಪಟ್ಟಿದೆ.

ಸ್ವಾತಂತ್ರ್ಯಪೂರ್ವದ ಕನ್ನಡ ಕಥನ ಸಾಹಿತ್ಯ 'ವೈಧವ್ಯ'ದಂತಹ ಸಾಮಾಜಿಕ ಪಿಡುಗಿಗೆ ತೋರಿದ ಪ್ರತಿರೋಧಗಳು ಇದರಿಂದ ಒಡಮೂಡಿದ ಹೊಸ ಎಚ್ಚರ ಈ ಅಧ್ಯಯನಕ್ಕೆ ಹೊಸ ಆಯಾಮವನ್ನು ನೀಡಿವೆ. ಮಹಿಳೆಯರ ಮೇಲೆ ಪ್ರಧಾನ

ಸಂಸ್ಕೃತಿ ಹೇರಿದ ಸಾಮಾಜಿಕ ಮೌಲ್ಯಗಳು. ಅವರ ಕ್ರಿಯಾಶೀಲತೆಗೆ, ಪ್ರಗತಿಗೆ ಹಿನ್ನಡೆಯನ್ನುಂಟುಮಾಡಿವೆ. ರಾಷ್ಟ್ರೀಯ ಭಾವೈಕ್ಯತೆಗೆ ದೇಶೀಯ ಅನನ್ಯತೆಗೆ ಧಕ್ಕೆಯುಂಟುಮಾಡಿವೆ. ಪುರುಷ ಪ್ರಧಾನ ಸಂಸ್ಕೃತಿಯನ್ನು ವಿರೋಧಿಸುತ್ತಲೇ ಬಂದಿರುವ ಕನ್ನಡ ಸಾಹಿತ್ಯ ಕೃತಿಗಳು ಸಾಂಸ್ಕೃತಿಕ ಚರ್ಚೆಗೊಳಪಡಿಸುವುದನ್ನು ಈ ಅಧ್ಯಯನ ವಿಶ್ಲೇಷಿಸುತ್ತದೆ.

ಈ ಹಿನ್ನೆಲೆಯಲ್ಲಿ ಸಾಮಾಜಿಕ ಸಮಸ್ಯೆಗಳಾದ ವಿವಾಹ, ಬಾಲ್ಯವಿವಾಹ, ಸತಿಪದ್ಧತಿ, ವಿಧವಾ ವಿವಾಹಗಳನ್ನು ಕುರಿತ ಚಿಂತನೆಗಳು ಅನೇಕ ಸಮಾಜ ಚಿಂತಕರಿಂದ ಹರಿದು ಬಂದಿವೆ. ಎಪ್ಪತ್ತರ ದಶಕದ ನಂತರ ಬೆಳೆದು ಬಂದ ಚಿಂತನೆಗಳಿಗೂ, ನಂತರದಲ್ಲಿ ಬೆಳೆದುಬಂದ ಚಿಂತನೆಗೂ ಬಹಳಷ್ಟು ಅಂತರಗಳಿವೆ. ಎತ್ತಪ್ಪರ ದಶಕದಲ್ಲಿ ವಿಲ್‌ಡ್ಯೂರಾಂಟ್, ಆಶಿಶ್ ನಂದಿ, ಸಿಮೊನ್ ದ ಬೋವಾ ಮೊದಲಾದವರು ತಮ್ಮ ವಿಚಾರಗಳನ್ನು ಮಂಡಿಸಿದ್ದಾರೆ. ಈ ಚಿಂತಕರ ಅಭಿಪ್ರಾಯಗಳನ್ನು ಉದ್ಧರಿಸುವುದರೊಂದಿಗೆ ನಾಗರಿಕ ಪೂರ್ವದ ಅನಿಷ್ಟ ಪದ್ಧತಿಗೆ ಪ್ರತಿಕ್ರಿಯಿಸಿದ ರೀತಿಯನ್ನು ಕಾಣಬಹುದು.

> *"ಅನಾಗರಿಕ ಮನುಷ್ಯನಿಗೆ ಮದುವೆಯೆಂಬುದು ಪವಿತ್ರ ಬಂಧನವಲ್ಲ. ಬಹಳ ಅಪರೂಪವಾಗಿ ಅದೊಂದು ವೈಭವದ ಸಮಾರಾಧನೆಗೆ ಕಾರಣ. ಆದಿಮಾನವರು ವಿವಾಹವನ್ನು ಲೈಂಗಿಕತೆಗೆ ರಹದಾರಿಯೆಂದು ಭಾವಿಸದೆ ಅದಕ್ಕೊಂದು ಆರ್ಥಿಕ ಸಹಕಾರದ ಸ್ಥಾನಮಾನಕೊಟ್ಟು ಆತ ಮಹಿಳೆಯಲ್ಲಿ ಹಾಗೂ ಮಹಿಳೆಯು ತನ್ನಲ್ಲಿ ಅಷ್ಟೇನೂ ಸೊಬಗನ್ನಾಗಲಿ, ಸೌದಂರ್ಯವನ್ನಾಗಲಿ ನಿರೀಕ್ಷಿಸದೆ (ಅವಿದ್ದಲ್ಲಿ ಆತ ಮೆಚ್ಚುತ್ತಿದ್ದನೇನೋ ಸರಿಯೆ) ಮುಖ್ಯವಾಗಿ ಉಪಯೋಗಕಾರಿಯೂ ಕಷ್ಟಪಟ್ಟು ಕೆಲಸ ಮಾಡುವವಳೂ ಆಗಿರಬೇಕೆಂದು ಬಯಸುತ್ತಿದ್ದ. ಆಕೆಯೊಂದು ಆರ್ಥಿಕ ಆಸ್ತಿಯಾಗಿರಬೇಕೇ ವಿನಾ ಪೂರ್ಣ ನಷ್ಟದವಳಾಗಿರಬಾರದು. ಇಲ್ಲವಾದಲ್ಲಿ ವ್ಯಾವಹಾರಿಕ 'ಅನಾಗರಿಕನು' ಮದುವೆಯ ಯೋಚನೆಯನ್ನೇ ಮಾಡುತ್ತಿರಲಿಲ್ಲ, ಮದುವೆಯೆಂಬುದು ಲಾಭದಾಯಕ ಪಾಲ್ದಾರಿಕೆಯೇ ವಿವಾಹ ವೈಯಕ್ತಿಕ ಹಾದರವಲ್ಲ ಇದರ ರೀತಿಯೆಂದರೆ ಗಂಡು ಮತ್ತು ಹೆಣ್ಣು ಒಟ್ಟಾಗಿ ಕೆಲಸಮಾಡುತ್ತಾ ತಮ್ಮೊಬ್ಬರದೇ ಕೆಲಸಕ್ಕಿಂತ ಹೆಚ್ಚು ಸಂಪತ್ತನ್ನು ತರಬೇಕು. ನಾಗರಿಕತೆಯ ಇತಿಹಾಸದಲ್ಲಿ ಮಹಿಳೆಯೂ ವಿವಾಹದ ಮೂಲಕ ಎಲ್ಲೆಲ್ಲಿ ಒಂದು ಆರ್ಥಿಕ ಆಸ್ತಿಯಂತಾಗಿಲ್ಲವೋ ಅಲ್ಲೆಲ್ಲ ಮದುವೆಯೆಂಬುದು ನಶಿಸಿದೆ. ಕೆಲವೊಮ್ಮೆ ಅದರೊಂದಿಗೆ ನಾಗರಿಕತೆಯೂ ನಶಿಸಿದೆ"*[೧]

---

೧. ನಾಗರಿಕತೆಯ ಕಥೆ – ೧ – ವಿಲ್‌ಡ್ಯೂರಾಂಟ್ – (ಪ್ರಸಂ) ಪ್ರಧಾನ ಗುರುದತ್ – ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ – ಬೆಂಗಳೂರು – ೨೦೦೭–ಪು. ೪೪

ಬಾಲ್ಯವಿವಾಹವನ್ನು ಕುರಿತು ವಿಲ್‌ಡ್ಯೂರಾಂಟ್ ಹೀಗೆ ಹೇಳುತ್ತಾರೆ.

> *"ಅಂಗೋಲಾದ ನೀಗ್ರೋಗಳು ಹೇಳುವಂತೆ ಅವರಿಗೆ "ಪ್ರತಿದಿನ ಒಂದೇ ಊಟ ಸರಿಹೊಂದುವುದಿಲ್ಲ. ಅಲ್ಲದೆ ಪುರುಷರಿಗೆ ತಮ್ಮ ಸಂಗಾತಿಗಳು ಯೌವನ ಭರಿತರಾಗಿರಬೇಕು. ಆದರೆ ಪ್ರಾಚೀನ ಸಮುದಾಯಗಳಲ್ಲಿ ಮಹಿಳೆಯರು ಬಹುಬೇಗ ಯೌವನ ಕಳೆದುಕೊಳ್ಳುತ್ತಿದ್ದರು."*[1]

ಗಾಂಧೀಜಿಯವರು ಸ್ವಾನುಭವದಿಂದ ತಮ್ಮ ಆತ್ಮಚರಿತ್ರೆಯಲ್ಲಿ ಬಾಲ್ಯವಿವಾಹದ ಬಗ್ಗೆ ಬರೆಯುತ್ತಾರೆ.

> *"ನನ್ನ ಮದುವೆ ಹದಿಮೂರನೆ ವಯಸ್ಸಿನಲ್ಲಿ ನಡೆಯಿತೆಂಬುದನ್ನು ನಾನು ವ್ಯಥೆಯಿಂದ ಇಲ್ಲಿ ಬರೆಯಬೇಕಾಗಿದೆ. ಅದೇ ವಯಸ್ಸಿನ ಹುಡುಗರನ್ನು ನೋಡಿ ನನ್ನ ಮದುವೆಯನ್ನು ಜ್ಞಾಪಿಸಿಕೊಂಡರೆ ನನ್ನಲ್ಲಿ ಕನಿಕರ ಉಂಟಾಗುತ್ತದೆ. ನನ್ನ ಅವಸ್ಥೆ ಅವರಿಗೆ ತಪ್ಪಿತಲ್ಲ ಎಂದು ಅವರನ್ನು ಅಭಿನಂದಿಸುವಂತೆ ಆಗುತ್ತದೆ"*[2].

> *"ಮೂಢನಂಬಿಕೆಗಳು ಇರುವ ಹಾಗೆಯೇ ಮೂಢನಂಬಿಕೆಗಳ ಬಗ್ಗೆ ಮೂಢನಂಬಿಕೆಗಳು ಇದ್ದಾವೆ. ಸತಿಪದ್ಧತಿ ತಮ್ಮ ಗಂಡಂದಿರ ಮರಣಾ ನಂತರ ವಿಧವೆಯರು ಆತ್ಮಹತ್ಯೆ ಮಾಡಿಕೊಳ್ಳುವ ಹಿಂದೂ ವಿಧಿ. ೧೮೨೯ರಲ್ಲಿ ಕಾನೂನುಬಾಹಿರವೆಂದು ಘೋಷಿಸಲ್ಪಟ್ಟಾಗಿನಿಂದ ಕಳೆದ ೧೫೦ ವರ್ಷಗಳಾದ್ಯಂತ, ಇದು ಹಿಂದೂ ಅಂಧಶ್ರದ್ಧೆ ಮತ್ತು ಅಸಂಸ್ಕೃತಿಗಳ ವಿರುದ್ಧ ಆಧುನಿಕ ಜಗತ್ತು ಸಾಧಿಸಿದ ಮೊದಲ ವಿಜಯ ಎಂದು ನಾವು ನಂಬಿಕೊಂಡೇ ಬಂದಿದ್ದೇವೆ"*[3]

> *"ದಾಂಪತ್ಯದ ಗುಲಾಮಗಿರಿ ಗಂಡನಿಗೆ ದಿನದಿನದ ಗುಲಾಮಗಿರಿ, ಹೆಂಡತಿ ಗಂಡನಿಗೆ ಹೊರೆಯೇ ಎನಿಸಿದರೂ ಆಕೆ ಇಲ್ಲದೆ ಇರುವಷ್ಟು ಸುಲಭವಾಗಿ ಆತನಿಲ್ಲದ ಆಕೆ ಇರಲಾರಳು ಆತ ತೊರೆದರೆ ಅವಳ ಬದುಕೆ ನಿರ್ನಾಮವಾಗುತ್ತದೆ. ಹೆಂಗಸಿನ ಪರಾವಲಂಬಿ ಲಕ್ಷಣ ಅವಳಲ್ಲಿ ಅಂತಸ್ಥವಾಗಿಬಿಟ್ಟಿರುತ್ತದೆ. ಅವಳು ತೋರಿಕೆಯ ನಿರ್ಭಿಡೆಯನ್ನು ಪ್ರದರ್ಶಿಸುವಾಗಲೂ ಗುಲಾಮಳಾಗಿಯೇ ಇರುತ್ತಾಳೆ. ಗಂಡ ಮಾತ್ರ ಮೂಲತಃ ಸ್ವತಂತ್ರ ಅವನ ಬಂಧನ ಯಾರೂ ಹೇರಿದ್ದಲ್ಲ. ಹೆಣ್ಣಿಗೆ ಮದುವೆ ಬದುಕಿನ ಗುರಿಯಾಗಲಾರದು, ಈ ಬದಲಾವಣೆ ಅಗತ್ಯ ಇದರಲ್ಲಿ ಇಬ್ಬರ ಒಳಿತೂ*

---

೧. ನಾಗರಿಕತೆಯ ಕಥೆ – ೧ – ವಿಲ್‌ಡ್ಯೂರಾಂಟ್ – (ಪ್ರಸಂ) ಪ್ರಧಾನ ಗುರುದತ್ – ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ – ಬೆಂಗಳೂರು – ೨೦೦೭–ಪು. ೪೦

೨. ನನ್ನ ಸತ್ಯಾನ್ವೇಷಣೆ – ಮೋ.ಕ. ಗಾಂಧಿ – (ಅನು) ಗೊರೂರು ರಾಮಸ್ವಾಮಿ ಐಯ್ಯಂಗಾರ್ – ನವಜೀವನ ಪ್ರಕಾಶನ ಮಂದಿರ – ಅಹಮದಾಬಾದ್ – ೧೯೯೫ – ಪು. ೭–೮

೩. ಆಶಿಶ್ ನಂದಿ ವಿಚಾರ – ಆಶಿಶ್ ನಂದಿಯವರ ಆಯ್ದ ಬರಹಗಳು (ಅನು) ಕೆ.ವಿ.ಸುಬ್ಬಣ್ಣ – ಅಕ್ಷರ ಪ್ರಕಾಶನ ಹೆಗ್ಗೋಡು–೧೯೯೫ –ಪು.೩೩

*ಅಡಗಿದೆ. ಸ್ತ್ರೀವಿರೋಧಿ ಗಂಡಸರು "ಹೆಂಗಸರು ಈಗಾಗಲೆ ಸಾಕಷ್ಟು ಹಾಳಾಗಿದ್ದಾರೆ" ಎನ್ನುತ್ತಾರೆ. ಅವರದ್ದು ಕುತರ್ಕ. ಹೆಂಗಸನ್ನೇ "ಪ್ರೇಯಿಂಗ್ ಮಾಂಟಿಸ್" ಆಗಿ ಪರಿವರ್ತಿಸುವುದು ಮದುವೆ ಎಂಬ ವ್ಯವಸ್ಥೆ. ಅದರಿಂದಾಗಿಯೇ ಅವರು ಜಿಗಣೆಗಳಾಗಿದ್ದಾರೆ. ವಿಷಪೂರಿತರಾಗಿದ್ದಾರೆ. ಮದುವೆಯನ್ನು ಬದಲಿಸುವುದು ಆ ಮೂಲಕ ಹೆಂಗಸಿನ ಸನ್ನಿವೇಶವನ್ನು ಉತ್ತಮಗೊಳಿಸುವುದು ಅತ್ಯಗತ್ಯ. ಹೆಂಗಸು ತನ್ನ ಕಾಲಮೇಲೆ ತಾನು ನಿಲ್ಲಲು ಅವಕಾಶ ನೀಡದೆ ಅವಳು ಗಂಡಸಿಗೆ ಜೋತುಬೀಳುವಂತೆ ಮಾಡಲಾಗಿದೆ. ಅವಳಿಗೆ ಬಿಡುಗಡೆ ನೀಡಿದರೆ ಅವನಿಗೂ ಬಿಡುಗಡೆ ದೊರಕುತ್ತದೆ. ಅಂದರೆ ಈ ಲೋಕದಲ್ಲಿ ಅವಳೂ ಏನಾದರೂ ಮಾಡಲು ಅವಕಾಶ ದೊರಕಬೇಕು."*[೧]

ಈ ಮೇಲಿನ ಉದ್ಧರಣೆಗಳಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ಸಾಮಾಜಿಕ, ಕೌಟುಂಬಿಕ ವಲಯಗಳಲ್ಲಿ ಅನೇಕ ಜೀವವಿರೋಧಿ ನಿಲುವುಗಳಿಗೆ ಪ್ರತಿಭಟನೆಯನ್ನು ಹೊಂದಿದ್ದ ಚಿಂತನೆಗಳು ಚಾರಿತ್ರಿಕ ಮಹತ್ವವನ್ನು ಪಡೆದಿರುವುದನ್ನು ಗಮನಿಸಬಹುದು. ಸಾಮಾಜಿಕ ಮೌಲ್ಯಗಳ ಆಚರಣೆಗಳು ಮಹಿಳೆಯ ಅಸ್ತಿತ್ವಕ್ಕೆ ಧಕ್ಕೆತರುವಂತೆ ಹಿಂಸೆಯ ನೆಲೆಯಲ್ಲಿ ಹೇರಲ್ಪಟ್ಟು ಸಂಘರ್ಷಕ್ಕೊಡ್ಡುವುದನ್ನು ಗಮನಿಸಬಹುದು. ಇಂತಹ ಚಿಂತನೆಗಳ ಹಿನ್ನೆಲೆಯಲ್ಲಿ ಸ್ವಾತಂತ್ರ್ಯಪೂರ್ವದ ಕಥನ ಸಾಹಿತ್ಯ ರೂಪಪಡೆದಿರುವುದನ್ನು ಗುರುತಿಸಿಕೊಳ್ಳಬಹುದು.

'ವೈಧವ್ಯ' ವಿವಾಹ ಮೂಲವಾದುದು. ಸಹಜವಾಗಿಯೋ ಆಕಸ್ಮಿಕವಾಗಿಯೋ ಪತಿ ಮರಣ ಹೊಂದಿದರೆ ಪತ್ನಿ 'ವಿಧವೆ'ಯಾಗುತ್ತಾಳೆ. ಮಧ್ಯಕಾಲೀನ ಯುಗದಿಂದ ವಿಧವೆಯನ್ನು 'ಸತಿಪದ್ಧತಿ'ಯ ಕ್ರೌರ್ಯದಡಿಯಲ್ಲಿ ಸುಡಲಾಗುತ್ತಿತ್ತು. ಇಂತಹ ದೌರ್ಜನ್ಯಗಳು ಸಾವಿರಾರು ವರ್ಷಗಳಿಂದಲೂ ನಿರಂತರವಾಗಿ ನಡೆದಿದೆ. ಇದರಿಂದ ಸಾಮಾಜಿಕ ಪ್ರಗತಿಗೆ ಹಿನ್ನಡೆಯುಂಟಾಗಿದೆ. ಇಂತಹ ಆಕ್ರಮಣಗಳನ್ನು ಸಾಮಾಜಿಕ ಚಿಂತಕರು, ಕವಿಗಳು, ಸೃಷ್ಟಿಶೀಲ ಲೇಖಕರು ಪ್ರತಿರೋಧ ಒಡ್ಡುತ್ತಾ ಬಂದಿದ್ದಾರೆ. ಈ ಬಗೆಯ ಚಿಂತನೆ ಸ್ವಾತಂತ್ರ್ಯ ಪೂರ್ವ ಕನ್ನಡ ಕಥನ ಸಾಹಿತ್ಯದ ಮುಖೇನ ಪರಿಶೀಲಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಇಂದಿಗೂ ವಿಧವಾ ಸಮಸ್ಯೆ ಜೀವಂತವಾಗಿದ್ದು ವ್ಯವಸ್ಥೆಯೊಳಗೆ ಬಹುವಿಧದಲ್ಲಿ ಮಹಿಳೆಯನ್ನು ದಾಸ್ಯಕ್ಕೊಳಪಡಿಸಿದೆ. ಇಂತಹ ಸಾಮಾಜಿಕ ರೋಗವನ್ನು ಸ್ವಾತಂತ್ರ್ಯನಂತರದ ಕಥನ ಸಾಹಿತ್ಯ ಕೃತಿಗಳು ಅನಾವರಣಗೊಳಿಸುತ್ತವೆ. 'ವೈಧವ್ಯ' ಸಾಮಾಜಿಕ ಅನಿಷ್ಟ ಪದ್ಧತಿಯಾಗಿ ಆಳವಾಗಿ ಬೇರುಬಿಟ್ಟು ಆಧುನಿಕ ಬದುಕಿನ ಹೊಸ ಸಮಸ್ಯೆಗಳೊಂದಿಗೆ ತಳುಕುಹಾಕಿಕೊಂಡಿರುವುದನ್ನು ಹೊಸ ತಲೆಮಾರಿನ ಕೃತಿಗಳು ಚರ್ಚಿಸುವುದು ಈ ಅಧ್ಯಯನದ ಹಿನ್ನೆಲೆಗಿದೆ. ಭಾರತೀಯ ಸಮಾಜದಲ್ಲಿ ಶತಮಾನಗಳಿಂದ ಮಹಿಳೆಯ

---

೧. **ದ ಸೆಕೆಂಡ್ ಸೆಕ್ಸ್ – ಸಿಮೋನ್‌ದ ಬೋವಾ – (ಅನು) ಹೆಚ್.ಎಸ್. ಶ್ರೀಮತಿ – ಅಧ್ಯಯನ ಮಂಡಲ – ಬೆಂಗಳೂರು – ೨೦೦೭– ಪು. ೫೦೪**

ಬದುಕಿನಲ್ಲಿ ಆವರಿಸಿದ್ದ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಂಪರೆ ಸಾಮಾಜಿಕ ಪಿಡುಗುಗಳನ್ನು ನೆಲೆಯಾಗಿಸಿದೆ. ಅವುಗಳನ್ನು ನಿವಾರಿಸುವಲ್ಲಿ ಉಂಟಾದ ತೊಡಕನ್ನು ಕನ್ನಡದ ಕಥನ ಸಾಹಿತ್ಯಗಳು ವಿಶ್ಲೇಷಿಸುವುದರ ಸ್ವರೂಪವನ್ನು ಈ ಅಧ್ಯಯನದಲ್ಲಿ ಗಮನಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ :**

ಈ ಅಧ್ಯಯನದಲ್ಲಿ ಸ್ವಾತಂತ್ರ್ಯಪೂರ್ವದ ಲೇಖಕರ ಕಾದಂಬರಿಗಳೆಂದು (ಕೆರೂರು ವಾಸುದೇವಾಚಾರ್ಯರ 'ಇಂದಿರಾ', ಹಾಗೂ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ') ಎರಡು ಕಾದಂಬರಿಗಳನ್ನು ಶರಶ್ಚಂದ್ರ ಚಟರ್ಜಿಯವರ (ಶುಭದಾ) ಒಂದು ಕೃತಿಯನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಸ್ವಾತಂತ್ರ್ಯ ಪೂರ್ವದ ಲೇಖಕಿಯರಾದ ತಿರುಮಲಾಂಬಾ (ನಭಾ ವಿರಾಗಿಣಿ) ಆರ್. ಕಲ್ಯಾಣಮ್ಮನವರ ಒಂದು ಕಾದಂಬರಿ (ನಿರ್ಭಾಗ್ಯವನಿತೆ) ಸರಸ್ವತಿಬಾಯಿ ರಾಜವಾಡೆಯವರ (ಅವಳ ಉದ್ಧಾರ) ದೇವಾಂಗನಾಶಾಸ್ತ್ರಿಯವರ (ವೇಣಿಸಂಹಾರ) ಕೊಡಗಿನ ಗೌರಮ್ಮನವರ (ಜೀವನ ಪ್ರೀತಿ ಕಥಾ ಸಂಕಲನ) ಕೃತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ನವೋದಯ ಕಾಲಘಟ್ಟದ ಪ್ರಮುಖ ಸಾಹಿತಿಗಳಾದ ಕುವೆಂಪುರವರ (ನನ್ನ ದೇವರು ಮತ್ತು ಇತರ ಕಥೆಗಳು, ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು) ಮೂರು ಕೃತಿಗಳು, ಮಾಸ್ತಿವೆಂಕಟೇಶ್ ಐಯ್ಯಂಗಾರ್‌ರವರ (ಶೇಷಮ್ಮ) ಒಂದು ಕೃತಿ ಹಾಗೂ ಶಿವರಾಮಕಾರಂತರ (ಕನ್ಯಾಬಲಿ, ಮರಳಿ ಮಣ್ಣಿಗೆ, ಅಳಿದ ಮೇಲೆ, ಮೂಕಜ್ಜಿಯ ಕನಸುಗಳು) ನಾಲ್ಕು ಕೃತಿಗಳು. ತ್ರಿವೇಣಿಯವರ (ದೂರದ ಬೆಟ್ಟ) ಒಂದು ಕೃತಿ ಹಾಗೂ ಎಂ.ಕೆ.ಇಂದಿರಾವರ (ಹೆಣ್ಣಿನ ಆಕಾಂಕ್ಷೆ, ಮಧುವನ, ಫಣಿಯಮ್ಮ) ಮೂರು ಕೃತಿಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ನವೋದಯ ನಂತರದ ಕಾಲಘಟ್ಟದ ಮಹತ್ವದ ಲೇಖಕರಾದ ಚದುರಂಗರ – 'ವೈಶಾಖ', ನಿರಂಜನರ 'ಬನಶಂಕರಿ' ವ್ಯಾಸರಾಯ ಬಲ್ಲಾಳರ – 'ಉತ್ತರಾಯಣ', ಎಸ್.ಎಲ್.ಭೈರಪ್ಪನವರ ವಂಶವೃಕ್ಷ, ಗೃಹಭಂಗ, ಪಿ.ಲಂಕೇಶರವರ 'ಮುಸ್ಸಂಜೆಯ ಕಥಾಪ್ರಸಂಗ', ಯು.ಆರ್.ಅನಂತಮೂರ್ತಿಯವರ 'ಘಟಾಶ್ರಾದ್ಧ' ಕೃತಿಗಳು ಮಹಾ ಪ್ರಬಂಧದ ಭೂಮಿಕೆಯಲ್ಲಿ ಚರ್ಚೆಯಾಗಿವೆ. ಆಧುನಿಕ ಕಾಲಘಟ್ಟದ ಕಥನ ಸಾಹಿತ್ಯದಲ್ಲಿ ಗಂಗಾಪಾದೇಕಲ್‌ರವರ 'ಹೊಸಹೆಜ್ಜೆ', ಪ.ರಾಮಕೃಷ್ಣ ಶಾಸ್ತ್ರಿಯವರ – 'ಬದುಕು' ಮನೋರಮಾ ಎಂ.ಭಟ್‌ರವರ 'ಮುಖವಾಡ', ಲೀಲಾಮಣ್ಣಾಲರವರ – ಗಾಜಿನ ಗೊಂಬೆಗಳು – ಬಿಳುಮನೆ ರಾಮದಾಸ್‌ರವರ – 'ವ್ಯಾಮೋಹ' ಹೆಚ್.ಎಸ್. ನಾಗವೇಣಿಯವರ 'ಗಾಂಧಿಬಂದ' ಕೃತಿಗಳನ್ನು ಅಧ್ಯಯನದ ಪ್ರಧಾನ ಭೂಮಿಕೆಯಲ್ಲಿ ವಿಶ್ಲೇಷಿಸಿ ವೈಧವ್ಯದ ಪರಿಕಲ್ಪನೆಯನ್ನು ನಿರ್ವಚಿಸುವ ಪ್ರಯತ್ನ ಮಾಡಲಾಗಿದೆ.

ಈ ಮಹಾಪ್ರಬಂಧದ ವಿಷಯವನ್ನು ಒಟ್ಟು ಏಳು ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡು ವೈಧವ್ಯದ ಪರಿಕಲ್ಪನೆಯನ್ನು ಕನ್ನಡದ ಕಥನ ಸಾಹಿತ್ಯದ ನೆಲೆಯಲ್ಲಿ ಶೋಧಿಸುವ ಕಾರ್ಯವನ್ನು ಮಾಡಲಾಗಿದೆ.

# ಅಧ್ಯಾಯ – ೨

## ಮಹಿಳೆ–ವಿವಾಹ–ವೈಧವ್ಯ–ಚಾರಿತ್ರಿಕ ಹಿನ್ನೆಲೆ

೧. ಆದಿಮ ಸಮಾಜದಲ್ಲಿ ಕುಟುಂಬ ವ್ಯವಸ್ಥೆ

೨. ಆದಿಮ ಸಮಾಜದಲ್ಲಿ ವಿವಾಹ ಸಂಸ್ಥೆಯ ಹುಟ್ಟು

೩. ಮಾತೃಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ

೪. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ

೫. ಆದಿಮ ಕುಟುಂಬದಲ್ಲಿ ಮಹಿಳೆ

೬. ಪಿತೃಪ್ರಧಾನ ವ್ಯವಸ್ಥೆಯಲ್ಲಿ ವಿವಾಹ

೭. ಆಧುನಿಕ ಸಮಾಜದಲ್ಲಿ ವಿವಾಹ ಪದ್ಧತಿ

೮. ನಾಗರಿಕ ಸಮಾಜದಲ್ಲಿ ವೈಧವ್ಯಾಚರಣೆ

೯. ನಾಗರಿಕ ಸಮಾಜದ ಸತಿಪದ್ಧತಿ

೧೦. ಸಾಮಾಜಿಕ ಅನಿಷ್ಟ ಪದ್ಧತಿಗಳ ಸುಧಾರಣೆ

ಅಧ್ಯಾಯ ೨

## ಮಹಿಳೆ – ವಿವಾಹ – ವೈಧವ್ಯ – ಚಾರಿತ್ರಿಕ ಹಿನ್ನೆಲೆ

ಮಹಿಳೆ ಬಿಡುಗಡೆಗಾಗಿ ಹುಡುಕಲು ಹೊರಟಿರುವ ಹಾದಿಗಳೇ ಭ್ರಮಾಜನಕವಾಗಿವೆ. ಗಂಡು–ಹೆಣ್ಣಿನ ಸಂಬಂಧದ ಸ್ವರೂಪವನ್ನು ವಿಶ್ಲೇಷಿಸುತ್ತಾ 'ಸಮಾನತೆ'ಯನ್ನು ಹುಡುಕುತ್ತಿದ್ದಾಳೆ. ಜೈವಿಕವಾದ ಹಾಗೂ ಚಾರಿತ್ರಿಕವಾದ ಕಾರಣಕ್ಕಾಗಿ ಹೆಣ್ಣುಗಂಡಿನ ಸಂಬಂಧದ ಸ್ವರೂಪದಲ್ಲಿನ ವ್ಯತ್ಯಾಸವನ್ನು ಬದಲಿಸುವುದು ಅಸಾಧ್ಯ. ಆದರೆ ಹೆಣ್ಣುಗಂಡಿನ ಸಂಬಂಧ ಹೆಣ್ಣಿನ ಅಧೀನತೆ ಅಲ್ಲದಿದ್ದರೂ ಆ ಸಂಬಂಧಕ್ಕೆ ಹೊಂದಿಕೊಂಡಿರುವುದು ಸತ್ಯ. ಇದರಿಂದಾಗಿಯೇ ಹೆಣ್ಣು ಗಂಡಿನ ಸಂಬಂಧದಲ್ಲಿ ಕಂದಕ ವೇರ್ಪಟ್ಟಿದೆ ಎಂದು ಊಹಿಸಬಹುದು. ಇಂತಹ ಬದುಕಿನಲ್ಲಿ ಅವಳು ಸಿಲುಕಿಕೊಂಡಿದ್ದಾಳೆ. ಈ ಸನ್ನಿವೇಶ ಬದಲಾಗದೆ ಬಂಧನದಿಂದ ಮುಕ್ತಿ ಸಿಗುವುದು ಕಷ್ಟ. ಇದಕ್ಕಾಗಿ ಸಮಾಜವನ್ನು ಬದಲಾಯಿಸುವ ಕ್ರಿಯಾಯೋಜನೆ ಸಿದ್ಧವಾಗಬೇಕು. ಇದರ ಹೊಣೆ ಹೊರಬೇಕಾದವಳು ಮಹಿಳೆಯೇ. ಆದರೆ ಹೆಣ್ಣು ಇಂತಹ ಹೊಣೆಯನ್ನು ಗಂಡಿಗೆ ವಹಿಸಿ ತಾನು ಅನಿವಾರ್ಯ ನಿರ್ಬಂಧಗಳಿವೆ ಎಂದು ನೆವಹೇಳಿ ತಪ್ಪಿಸಿಕೊಳ್ಳುತ್ತಿರುವುದು ಪುರುಷನ ಯಜಮಾನಿಕೆಗೆ ಅವಕಾಶವಾಗಿದೆ. ಇದು ಹೆಣ್ಣು ತನಗೆ ತಾನೇ ಮಾಡಿಕೊಳ್ಳುವ ವಂಚನೆ. ಈ ಭ್ರಮೆಯ ಒಳಗಿಂದ ಹೊರಬರಲು ಹೋರಾಡಬೇಕಾಗಿದೆ.

ಮಹಿಳೆಯ ಬದುಕನ್ನು ನಿರ್ದೇಶಿಸುವ, ವ್ಯಾಖ್ಯಾನಿಸುವ ಹಕ್ಕು ಗಂಡಿನದಾದ ಮೇಲೆ ಮಹಿಳೆ ತನ್ನ ಹಕ್ಕನ್ನು ಪ್ರಸ್ಥಾಪಿಸುವ ಸಂದರ್ಭವೇ ಇಲ್ಲ. ಅವಳಿಗೆ ನೀಡಿದ ಹಕ್ಕುಗಳು ಭ್ರಮೆಯನ್ನಷ್ಟೇ ಹುಟ್ಟಿಸುವಂತವು. ಇವು ಮಹಿಳೆಗೆ ವಾಸ್ತವತೆಯನ್ನು ಮರೆಮಾಚುತ್ತವೆ. ಇಂಥ ಹಕ್ಕುಗಳಿಗಾಗಿ ಕ್ರಿಯಾಶೀಲರಾಗುತ್ತಿದ್ದೇವೆಯೇ ಎಂದು ಪ್ರಶ್ನೆಮಾಡಿಕೊಂಡು ನಿಷ್ಕ್ರಿಯತೆಯಿಂದ ಕ್ರಿಯಾಶೀಲತೆಗೆ ಚಲಿಸಿದರೆ ಮಾತ್ರ ಹತಾಶೆಯಿಂದ ಹೊರಬಹುದು. ಮಹಿಳೆಯ ಮೇಲಿರುವ ಇಬ್ಬಂದಿತನ ಪುರುಷನ ಅಪೇಕ್ಷೆಗೆ ತಕ್ಕಂತೆ ಹೆಜ್ಜೆ ಹಾಕುವುದೇ ಆಗಿದ್ದು ಇದು ಮುಂದಿನ ಚರಿತ್ರೆಯಾಗಿ ಮುಂದುವರಿಯಬಹುದು. ಪುರುಷನ ಸಂಪತ್ತು ಮತ್ತು ವಿಜಯಗಳ ಪ್ರದರ್ಶನ ಮಹಿಳೆಯನ್ನು ಹಿಮ್ಮೆಟ್ಟಿಸುತ್ತಿವೆ. ಆದರೆ ಮಹಿಳೆಯನ್ನು ಸೇವಕಿಯಾಗಿ ಸಖಿಯಾಗಿ ನಿರ್ವಹಿಸುವುದು ಪುರುಷನಿಗೆ ಸಮಸ್ಯೆಯಾಗಿ ಇಂದಿಗೂ ಕಾಡುತ್ತಿರುವುದು ಗಮನಾರ್ಹವಾದುದು.

ಪಿತೃಪ್ರಧಾನ ವ್ಯವಸ್ಥೆಯ 'ವಿವಾಹ' 'ಕುಟುಂಬ'ಗಳಂತಹ ಸಾಮಾಜಿಕ ಮೌಲ್ಯಗಳನ್ನು ಒಪ್ಪಿ ಬದುಕುವ ಮಹಿಳೆಯರು ತಮ್ಮ ಹಕ್ಕುಗಳನ್ನು ಕಳೆದುಕೊಂಡಿದ್ದಾರೆ. 'ವಿವಾಹ' ಸಂಸ್ಥೆಗೆ ಒಳಪಡುವ ಮಹಿಳೆ ಅಸಮಾನತೆಯ

ನೆಲೆಯಲ್ಲಿ ಬದುಕುತ್ತಿದ್ದಾಳೆ. ಪುರುಷ ಪ್ರಧಾನ ವ್ಯವಸ್ಥೆಯ ದ್ವಿಸ್ತರನೀತಿಯನ್ನು ಒಪ್ಪಿ ಬದುಕಿಬಂದ ಮಹಿಳೆ ತನ್ನ ಶರೀರದ ಮೇಲೆ ತನ್ನ ಹಕ್ಕನ್ನು ಉಳಿಸಿಕೊಳ್ಳುವ ಆಲೋಚನೆಯಲ್ಲಿ ತೊಡಗಿದ್ದಾಳೆ. ವೈವಾಹಿಕ ಬಂಧನದಿಂದ ಹೊರಬರುವ ಪ್ರಯತ್ನವನ್ನೂ ಮಾಡುತ್ತಿದ್ದಾಳೆ. ಇದನ್ನು ಅನೇಕ ಮಹಿಳಾ ಚಳುವಳಿಗಳು ಪ್ರತಿಬಿಂಬಿಸುತ್ತವೆ. ಇಂದಿಗೂ ಮಹಿಳೆಯನ್ನು ಆಳುವ ಎಲ್ಲಾ ಸಾಮಾಜಿಕ ಮೌಲ್ಯಗಳು 'ವಿವಾಹ'ಮೂಲದವೇ. 'ಶೀಲ' 'ಪಾತಿವ್ರತ್ಯ' 'ತಾಳ್ಮೆ' ಮುಂತಾದ ಮೌಲ್ಯಗಳು ಮಹಿಳೆಯ ಸಾಧನೆಯ ಹಾದಿಗೆ ತೊಡಕಾಗಿವೆ. ಆದರೂ 'ವಿವಾಹ'ದಿಂದ ಮಾತ್ರ ಸಮಾಜದಲ್ಲಿ ಹೆಣ್ಣಿಗೆ ಸ್ವಲ್ಪಮಟ್ಟಿನ ಸ್ಥಾನಮಾನಗಳು ಲಭಿಸಬಲ್ಲವು ಎನ್ನುವುದೇ ದೃಢವಾದ ನಂಬಿಕೆಯಾಗಿ ಮುಂದುವರಿದಿದೆ. ೧೯ನೇ ಶತಮಾನದ ಅಂತ್ಯದಿಂದ ೨೦ನೇ ಶತಮಾನದ ಸುಮಾರು ಐವತ್ತು ವರ್ಷಗಳಲ್ಲಿ ರಚನೆಯಾದ ಕಥನ ಸಾಹಿತ್ಯದಲ್ಲಿ 'ವೈಧವ್ಯ'ದ ಪ್ರತಿನಿಧೀಕರಣದ ಅಧ್ಯಯನವನ್ನು ಮಾಡಲು ನಾವು ಪಿತೃಪ್ರಧಾನ ವ್ಯವಸ್ಥೆಯ 'ಕುಟುಂಬ' ಮತ್ತು 'ವಿವಾಹ'ದಿಂದಲೇ ಪ್ರಾರಂಭಿಸಬೇಕಾಗುತ್ತದೆ.

### ೧. ಆದಿಮ ಸಮಾಜದಲ್ಲಿ ಕುಟುಂಬ ವ್ಯವಸ್ಥೆ

ಪ್ರಾಚೀನ ಭಾರತದ ಇತಿಹಾಸ ನಿರೂಪಿಸುವಂತೆ ಆದಿಮ ಕಾಲದ ಆರ್ಯರು ಸಂಘಜೀವಿಗಳಾಗಿದ್ದರು. ಕಾಲದಿಂದ ಕಾಲಕ್ಕೆ ಬದಲಾವಣೆ ಪಡೆದ ಸಾಂಘಿಕ ಬದುಕು ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುವ ಸಾಮಾಜಿಕ ಸಂಸ್ಕೃತಿಗೆ ತಕ್ಕಹಾಗೆ ಬದುಕನ್ನು ಪರಿಷ್ಕರಿಸುತ್ತ ಬಂದಿರುವುದು ಮಾನವ ಇತಿಹಾಸದಿಂದ ತಿಳಿದುಬರುತ್ತದೆ. ಮೂಲದಲ್ಲಿದ್ದ ಅಲೆಮಾರಿ ಬದುಕಿನಿಂದ ಕೃಷಿ ಮತ್ತು ಪಶುಸಂಗೋಪನೆಗೆ ಒಳಪಡಿಸಿಕೊಂಡಾಗ ಕುಟುಂಬದ ಕಲ್ಪನೆಗೆ ಚಾಲನೆ ದೊರಕಿದೆ. ಮೂಲತಃ ಮಾತೃಪ್ರಧಾನವಾಗಿ ಸಂಘಟಿತಗೊಂಡ ಗುಂಪುಗಳು ಕೃಷಿಗೆ ಪ್ರಾಧಾನ್ಯತೆಯನ್ನು ನೀಡಿವೆ. ಕ್ರಮೇಣ ಮಹಿಳೆಯ ಪ್ರಾಧಾನ್ಯತೆಯನ್ನು ಪಲ್ಲಟಿಸಿ ಅಧೀನತ್ವವನ್ನು ಬಲವಾಗಿಸಿ ಪುರುಷನನ್ನು ವೈಭವೀಕರಿಸಿವೆ. ಆದಿಕಾಲದಲ್ಲಿ ತಂದೆ ಮಕ್ಕಳ ಸಂಬಂಧ ತೆಳುವಾಗಿದ್ದು ಸ್ತ್ರೀಪುರುಷರು ಬೇರೆಬೇರೆಯಾಗಿಯೇ ಬದುಕುತ್ತಿದ್ದರು. ಕಾರಣ ಲೈಂಗಿಕ ಸಂಬಂಧಗಳು ಅಷ್ಟೇನೂ ಕ್ರಮಬದ್ಧವಾಗಿರಲಿಲ್ಲ ಪರಿಣಾಮವಾಗಿ ಆದಿಕಾಲದ ತಾಯಿ ತನ್ನ ಮಗುವಿನ ತಂದೆ ಯಾರು ಎಂಬ ವಿಷಯದಲ್ಲಿ ಆಸಕ್ತಳಾಗಿರಲಿಲ್ಲ. ಹಾಗಾಗಿ ಆ ಕಾಲದ ಅತ್ಯಂತ ಸರಳವಾದ ಕುಟುಂಬ ಸ್ವರೂಪವೆಂದರೆ ಒಂದು ಬುಡಕಟ್ಟು ಜನಾಂಗದಲ್ಲಿ ತನ್ನ ತಾಯಿಯೊಂದಿಗೋ ಸೋದರನೊಂದಿಗೋ ಬಾಳುತ್ತಿದ್ದ ಮಹಿಳೆ ಮತ್ತು ಮಕ್ಕಳು. ಕ್ರಮೇಣ ಪಶುಸಂಗೋಪನೆ ಮತ್ತು ಕೃಷಿ ಎರಡರಲ್ಲೂ ಪಡೆದ ಆರ್ಥಿಕ ಪ್ರಗತಿ ಪುರುಷನಿಗೆ ಶಕ್ತಿಯನ್ನೂ ಸಂಪತ್ತನ್ನೂ ನೀಡಿತ್ತು.

ಹೆಚ್ಚಿನ ಕೃಷಿ ಅಭಿವೃದ್ಧಿಯಲ್ಲಿ ತೊಡಗಿಕೊಂಡ ಪುರುಷ ಕೃಷಿಯಲ್ಲಿ ಹೊಸ ಆವಿಷ್ಕಾರದೊಂದಿಗೆ ತನ್ನ ಶಕ್ತಿಯನ್ನು ಮೆರೆಯುತ್ತಾ ಮಹಿಳೆಯನ್ನು ಲೈಂಗಿಕವಾಗಿ ಅಧೀನಕ್ಕೊಳಪಡಿಸಿಕೊಂಡಿದ್ದಾನೆ. ಕ್ರಮೇಣ ಮಾತೃಪ್ರಧಾನ ಕುಟುಂಬಗಳು ಪಿತೃಪ್ರಧಾನ ಕುಟುಂಬಗಳಾದವು.

ಕುಟುಂಬವು ಪಿತೃಪ್ರಧಾನವಾದದ್ದು ಮಹಿಳೆಯ ಸ್ಥಾನಕ್ಕೆ ಮಾರಕವಾಯಿತು. ಆದಿಮ ಸಮಾಜದಲ್ಲಿ ಅನೇಕ ಕುಟುಂಬಗಳಲ್ಲಿ ತಾಯಿ ಮಕ್ಕಳ ತಂದೆ ಮಕ್ಕಳ ಸಂಬಂಧ ಗಟ್ಟಿಯಾಗಿತ್ತು. ಹಾಗಾಗಿ ಸ್ತ್ರೀಪುರುಷರು ಬೇರೆಬೇರೆಯಾಗಿಯೇ ಬದುಕುತ್ತಿದ್ದರು ಎಂದು ತಿಳಿಯುತ್ತದೆ. ಅನೇಕ ಪ್ರದೇಶಗಳಲ್ಲಿ ಕೌಟುಂಬಿಕ ಜೀವನ ಇಲ್ಲದ ಬುಡಕಟ್ಟುಗಳೂ ಇದ್ದವು ಎಂದು ಊಹಿಸಲಾಗಿದೆ.

> *"ಆದ್ದರಿಂದ ಸರಳವಾದ ಕುಟುಂಬದ ಸ್ವರೂಪವೆಂದರೆ ಒಂದು ಬುಡಕಟ್ಟು ಜನಾಂಗದಲ್ಲಿ ತನ್ನ ತಾಯಿಯೊದಿಗೋ ಸೋದರನೊಂದಿಗೋ ಬಾಳುತ್ತಿದ್ದ ಮಹಿಳೆ ಮತ್ತು ಅವಳ ಮಕ್ಕಳು ಆ ವ್ಯವಸ್ಥೆಯು ತಾಯಿ ಪ್ರಾಣಿಯ ಪ್ರಾಣಿಕುಟುಂಬ ಹಾಗೂ ಆದಿ ಮಾನವನ ಜೈವಿಕ ಅಜ್ಞಾನದ ಸಹಜ ಬೆಳವಣಿಗೆಯ ಹಂತ. ಇದಕ್ಕೆ ಪರ್ಯಾಯವಾದ ಪ್ರಾರಂಭದ ಸ್ವರೂಪವೆಂದರೆ ಗಂಡನು ತನ್ನ ಬಣವನ್ನು ಬಿಟ್ಟು ತನ್ನ ಹೆಂಡತಿಯ ಕುಟುಂಬ ಮತ್ತು ಬಣದವರೊಂದಿಗೆ ವಾಸಿಸಲು ಹೋಗುತ್ತಿದ್ದುದು. ಅವನು ವಾಸಿಸಲು ಹೋಗುತ್ತಿದ್ದುದು ಮಾತ್ರವಲ್ಲ ಆಕೆಯ ತಂದೆ ತಾಯಿಗಳನ್ನು ಸಾಕಲು ಆಕೆಗಾಗಿ ಅಥವಾ ಆಕೆಯೊಡನೆ ದುಡಿಯಬೇಕಾಗಿತ್ತು. ಕುಲವನ್ನು ಅಂಥ ಸಂದರ್ಭಗಳಲ್ಲಿ ಸ್ತ್ರೀಯ ಮೂಲದಿಂದ ಗುರುತಿಸುತ್ತಿದ್ದರು. ಪುರುಷನ ಕುಲದ ಮೂಲಕ ಅಲ್ಲ. ರಾಜತ್ವವೂ ಕೂಡ ಆಕೆಯ ಮುಖಾಂತರವೇ ಮುಂದಿನ ತಲೆಮಾರಿಗೆ ಹೋಗುತ್ತಿತ್ತೇ ಹೊರತು ಪುರುಷನ ಮೂಲಕ ಅಲ್ಲ."*[೧]

ಮಹಿಳಾ ಪ್ರಾಧಾನ್ಯತೆ ಕುಟುಂಬದೊಳಗೆ ಕೀಳಾಗುತ್ತಿದ್ದಂತೆ ದಾಸ್ಯಕ್ಕೆ ಅಡಿಯಾಳುತನಕ್ಕೆ ಒಗ್ಗುವಂತೆ ನೋಡಿಕೊಂಡಿರುವುದರ ಹಿಂದೆ ಪುರುಷನ ಪ್ರಾಬಲ್ಯವಿದೆ. ಅಲ್ಲದೆ ಅತ್ಯಂತ ಕೀಳಾದ ಮತ್ತು ಅತ್ಯಂತ ಮೇಲಾದ ಸಮಾಜಗಳಲ್ಲಲ್ಲದೆ ಉಳಿದ ಕಡೆ ಅವಳ ಸ್ಥಾನಮಾನಗಳು ತಗ್ಗಿರುವುದು ಗಮನಾರ್ಹವಾದುದು. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಆದಿಮ ಸಮಾಜದ ಕುಟುಂಬಗಳು ಮಹಿಳೆಯರನ್ನು ಹದ್ದುಬಸ್ತಿನಲ್ಲಿಟ್ಟು, ಗುಲಾಮರಂತೆ ನಡೆಸಿಕೊಳ್ಳುವುದು ಸಾಮಾನ್ಯವಾಗಿತ್ತು. ಪುರುಷ ಒಡೆಯ ಮಹಿಳೆ ಗುಲಾಮಳು ಎನ್ನುವ ಭಾವನೆ ಶಾಶ್ವತವಾಗಿ ನೆಲೆಯಾಗಿದೆ.

---

೧. ಉದ್ಧೃತ – ನಾಗರಿಕತೆಯ ಕಥೆ.–೧ – ವಿಲ್‌ಡ್ಯೂರಾಂಟ್ – (ಪ್ರ.ಸಂ.) ಪ್ರಧಾನ ಗುರುದತ್ – ಕರ್ನಾಟಕ ಅನುವಾದ ಅಕಾಡೆಮಿ – ಬೆಂಗಳೂರು – ೨೦೦೭ ಪು. ೩೩

*"ಕೃಷಿ ಯೋಗ್ಯ ಭೂಮಿಯ ಒಡೆತನ ಆರ್ಥಿಕ ಯಜಮಾನ್ಯ ಅಧಿಕಾರ ಮತ್ತು ಮನೋಭಾವದಲ್ಲಿ ರೂಢಿಸಿಕೊಂಡ ಬದಲಾವಣೆ ಮುಂತಾದ ಅಂಶಗಳು ಸಂಘ ಜೀವನದ ತಳಹದಿಯ ಕುಟುಂಬ ಪರಿಪ್ರೇಕ್ಷ್ಯದಲ್ಲಿ ಮಹಿಳೆಯ ಸ್ಥಾನವನ್ನು ಪಲ್ಲಟಿಸಿ, ಅಧೀನತ್ವಗೊಳಿಸಿ ಪುರುಷನನ್ನು ವೈಭವೀಕರಿಸಿವೆ. ಇದಕ್ಕೆ ಸಾಕ್ಷೀಭೂತವಾಗಿ ಭಾತರದ ಮಹಾಸಂಸ್ಕೃತಿ ಎಂದು ಇತಿಹಾಸದಲ್ಲಿ ಗುರುತಿಸಲಾಗುವ ಆರ್ಯರ ಕುಟುಂಬ ಜೀವನವನ್ನು ನೋಡಬಹುದು"*[೧]

ಸಾಮಾಜಿಕ ಸಂಸ್ಕೃತಿಯಲ್ಲಾದ ಬದಲಾವಣೆಯೊಂದಿಗೆ ಕುಟುಂಬದಲ್ಲಿ ಮಹಿಳೆಯರ ಬದುಕಿನಲ್ಲಿ ಮಹತ್ತರವಾದ ಬದಲಾವಣೆಗಳು ನಡೆದಿವೆ. ಮಾನವ ಜೀವಿತದಲ್ಲಿ ಸಾಂಘಿಕ ಬದುಕು ಭಿನ್ನತೆಯಿಂದ ಕೂಡಿದುದಾಗಿದ್ದು ವಿಶಿಷ್ಟವಾದ ಬದುಕಿನ ವಿನ್ಯಾಸವನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತಲೇ ಸಾಗಿರುವುದು ಮಾನವ ಇತಿಹಾಸದಿಂದ ಅವಲೋಕಿಸಬಹುದು. ಕುಟುಂಬದೊಳಗೆ ಮಹಿಳೆ ಗುಲಾಮಗಿರಿಗೆ ಬಂದಿತಳಾದಾಗ ಆರ್ಥಿಕ ಸೋಲು ಆಕೆಯನ್ನು ದೈಹಿಕವಾಗಿ ಮತ್ತು ನೈತಿಕವಾಗಿ ಕುಗ್ಗಿಸುವುದರೊಂದಿಗೆ ಪುರುಷನಿಗೆ ಮತ್ತು ಆಸ್ತಿಗೆ ಬಲಿಯಾಗುವಂತೆ ಮಾಡಿತು. ಪಿತೃಪ್ರಧಾನತೆ ಪತ್ನಿಯನ್ನು ಮಕ್ಕಳನ್ನು ಒತ್ತೆ ಇಡುವುದು, ಮಾರುವುದು, ಕೊಲ್ಲುವುದು ಮುಂತಾದ ಕ್ರೂರ ಪದ್ಧತಿಯನ್ನು ಚಾಲ್ತಿಯಲ್ಲಿಟ್ಟಿರುವುದು ಕಂಡುಬರುತ್ತದೆ. ಇಂತಹ ಮಹಿಳಾ ಗುಲಾಮಗಿರಿಯನ್ನು ಆಸ್ತಿಯನ್ನಾಗಿ ಪರಿವರ್ತಿಸಿಕೊಂಡ ಪುರುಷರು ಮಹಿಳೆಯರ ಮೇಲೆ ಅಧಿಕಾರ ಹೊಂದಿರುವುದು ಗಮನಾರ್ಹವಾಗಿದೆ. ಇದರಿಂದಾಗಿ ಪಿತೃ ವ್ಯವಸ್ಥೆಯ ಒಳಗೇ ಕೆಲವು ಹಳೆಯ ಕ್ರೂರ ಪದ್ಧತಿಗಳು ಉಳಿದು ಬಂದವು. ಆದರೆ ಇದರ ವಿರುದ್ಧ ನಡೆದ ಮಹಿಳೆಯರ ಹೋರಾಟವನ್ನು ಗುಲಾಮರ ಯಜಮಾನನಾದ ಪುರುಷ ಹತ್ತಿಕ್ಕಿರುವ ನಿದರ್ಶನಗಳೂ ನಮಗೆ ಇತಿಹಾಸ ಪರಿಚಯಿಸುತ್ತದೆ. ಹಾಗಾಗಿ ಕುಟುಂಬಗಳ ಬೆಳವಣಿಗೆಯೊಂದಿಗೆ ಕಾಣಿಸಿಕೊಳ್ಳುವ ಮಹಿಳೆ ವರ್ಣವರ್ಗ ಸಮಾಜದ ಕ್ರೌರ್ಯದ ಹಿನ್ನೆಲೆಯಿಂದ ಹುಟ್ಟಿಬಂದವಳು ಎನ್ನುವುದನ್ನು ಗ್ರಹಿಸಬಹುದು.

ಮಹಿಳೆಯರಲ್ಲಿ ಹುಟ್ಟುವ ಮಕ್ಕಳು ಮುಖ್ಯರಾಗಿದ್ದು ಆಸ್ತಿಯ ಹಕ್ಕಿನ ಬಗ್ಗೆ ನಿರ್ದಿಷ್ಟ ನೀತಿಯನ್ನು ರೂಪಿಸಿದ ಸ್ಮೃತಿಕಾರರು ಮಹಿಳೆಯ ಭಾವನೆಗಳಿಗಾಗಲಿ, ವ್ಯಕ್ತಿತ್ವಕ್ಕಾಗಲಿ ಯಾವುದೇ ರೀತಿಯ ಮನ್ನಣೆಯನ್ನು ನೀಡಲಿಲ್ಲ. ಮಹಿಳೆಯನ್ನು ಹೆರುವ ಯಂತ್ರವನ್ನಾಗಿ ರೂಪಿಸಿದ ನಿಯಮಗಳು ಗುಲಾಮಗಿರಿಯನ್ನು ಹೇರಿರುವುದು ಸ್ಪಷ್ಟವಾಗುತ್ತದೆ. ಹೆಂಗಸರನ್ನು ಗುಲಾಮರಂತೆ ವಿನಿಮಯ ಮಾಡಿಕೊಂಡು ಸಂಪತ್ತನ್ನು ಹೆಚ್ಚಿಸಿಕೊಂಡಿರುವ ನಿದರ್ಶನಗಳೂ ದೊರೆಯುತ್ತವೆ. ಪಿತೃಪ್ರಧಾನ ಆಡಳಿತ ಹುಟ್ಟನ್ನು

೧. ಮಹಿಳೆ ಅಸ್ತಿತ್ವದ ಸಂಕಥನ – ಕವಿತಾರೈ – ಸಿ.ವಿ.ಜಿ – ಪಬ್ಲಿಕೇಷನ್–ಬೆಂಗಳೂರು – ೨೦೦೫. ಪು. ೪೩

ಪಡೆಯುತ್ತಿದ್ದಂತೆ ಆಕೆಯನ್ನು ಅಂಚಿಗೆ ಸರಿಸಿರುವುದು ಸ್ಪಷ್ಟವಾಗುತ್ತದೆ.

> *"ತಾಯಿಯ ಹಕ್ಕಿನ ಉಚ್ಚಾಟನೆ ಮಹಿಳಾ ಜಗತ್ತಿನ ಚಾರಿತ್ರಿಕ ಸೋಲಾಯಿತು, ಮನೆಯ ಆಡಳಿತ ಸೂತ್ರವನ್ನು ಗಂಡಸೇ ಸ್ವಾಧೀನ ಪಡಿಸಿಕೊಂಡ, ಹೆಂಗಸು ಗುಲಾಮಳಾಗಿ, ಗಂಡಸಿನ ಭೋಗದ ವಸ್ತು ಮಾತ್ರವಾಗಿ ಮಕ್ಕಳನ್ನು ಹೆರುವ ಯಂತ್ರವಾಗಿ ಪರಿವರ್ತನೆಗೊಂಡಳು."*[೧]

ಗುಲಾಮಗಿರಿಯಲ್ಲಿ ಮಹಿಳೆಯನ್ನು ಕೊಂಡುಕೊಳ್ಳುವುದು, ಮಾರುವುದು ಅಥವಾ ಸಾಯಿಸುವುದು ಬಳಕೆಯಲ್ಲಿತ್ತು. ಗುಲಾಮ ಹೆಂಗಸರಲ್ಲಿ ಹುಟ್ಟಿದ ಮಕ್ಕಳು ಕೆಲಸಗಾರರಾಗಿ ಆಸ್ತಿಯನ್ನು ಅಭಿವೃದ್ಧಿಪಡಿಸುವುದೂ, ಸ್ವಂತ ಹೆಂಡತಿಯ ಮಕ್ಕಳು ಆಸ್ತಿಯ ಉತ್ತರಾಧಿಕಾರಿಗಳಾಗಿರುತ್ತಿದ್ದುದು ಕಂಡುಬರುತ್ತದೆ.

> *"ಪಿತೃವಿನ ಅಧಿಕಾರ ವ್ಯಾಪ್ತಿ ಪತ್ನಿಯನ್ನು ಮಗಳನ್ನು ಮತ್ತು ಮಕ್ಕಳನ್ನು ಒತ್ತೆ ಇಡುವುದಕ್ಕೆ ಮಾತ್ರ ಸೀಮಿತಗೊಂಡಿರಲಿಲ್ಲ. ಬದಲಾಗಿ ಅವರ ಜೀವನದ ಮೇಲೂ ಪರಿಪೂರ್ಣವಾದ ಅಧಿಕಾರ ಸ್ಥಾಪಿಸುತ್ತದೆ. ಇಚ್ಛೆಬಂದಾಗ ಅವರನ್ನು ಮಾರುವಂತೆ ಕೊಲ್ಲುವ ಅಧಿಕಾರವೂ ಪುರುಷನಿಗಿತ್ತು. ಗೋತ್ರ ಪದ್ಧತಿಯಲ್ಲಿ ಸ್ತ್ರೀಯರು ಅನುಭವಿಸುತ್ತಿದ್ದ ಸ್ವಾತಂತ್ರ್ಯಕ್ಕೂ ಗುಲಾಮಗಿರಿಯ ಪದ್ಧತಿಯ ಸ್ತ್ರೀಯರ ಬದುಕಿಗೂ ಅಜಗಜಾಂತರ ವ್ಯತ್ಯಾಸವಿದೆ. ಗುಲಾಮಗಿರಿಯ ನೀತಿನಿಯಮಗಳನ್ನು ಒಳಗೊಂಡ ಪಿತೃಸತ್ತೆಯ ವ್ಯವಸ್ಥೆಯ ಒಳಗೆ ಹೆಂಡತಿ ಮಕ್ಕಳು ಗುಲಾಮರನ್ನು ಆಸ್ತಿಯೆಂಬಂತೆ ಪರಿಗಣಿಸುವುದರ ಮೂಲಕವಾಗಿ ಪುರುಷ ಅವರ ಮೇಲೆ ಸರ್ವಸ್ವಾಮ್ಯವನ್ನು ಸಾಧಿಸುವುದು ಕಂಡು ಬರುತ್ತದ"*[೨]

'ಗಣಗೋತ್ರ' ಪದ್ಧತಿ ರೂಢಿಯಲ್ಲಿದ್ದ ಕಾಲಮಾನದಲ್ಲಿ ಮಹಿಳೆಯರು ಗುಂಪು ಮದುವೆಯನ್ನು ವಿರೋಧಿಸಿ ಒಬ್ಬನೇ ಪುರುಷನ ಜೊತೆಗೆ ಬದುಕುವ ನಿರ್ಧಾರ ಮಾಡಿರುವ ಸಾಧ್ಯತೆಗಳು ಹೆಚ್ಚಾಗಿವೆ. ಹಾಗಾಗಿ ಗಣಗಳು ಒಡೆದು ಬೇರೆಬೇರೆ ಕಡೆ ಸ್ವತಂತ್ರ ಕುಟುಂಬಗಳಾಗಿ ನೆಲೆಯೂರಿರುವುದನ್ನು ಗಮನಿಸಬಹುದು.

> *"ಗಣ್ಯವ್ಯವಸ್ಥೆಯ ನಾಶ ಸ್ವಂತ ಆಸ್ತಿಯ ಉದಯದೊಂದಿಗೆ ಕಾಣಿಸಿಕೊಂಡ ವರ್ಣವ್ಯವಸ್ಥೆ (ಬ್ರಾಹ್ಮಣ, ಕ್ಷತ್ರಿಯ, ಶೂದ್ರ, ವೈಶ್ಯ) ಇದರೊಂದಿಗೆ ಜಾತಿ ಉಪಜಾತಿ ವಿಂಗಡಣೆ ಇವುಗಳಲ್ಲಿ. ಆಸ್ತಿಯ ಕೂಡಿಡುವಿಕೆಯಿಂದ ಉಂಟಾದ ವರ್ಗ ಸೂಚನೆ ಇವುಗಳೆಲ್ಲವುಗಳಿಂದ ಹೆಂಗಸಿನ ಮನೆಕೆಲಸಕ್ಕೆ ಯಾವುದೇ ಸಾಮಾಜಿಕ ಮೌಲ್ಯವಿರದಿದ್ದ ಒಂದು ಕುಟುಂಬ ವ್ಯವಸ್ಥೆ ಭಾರತದಲ್ಲಿ ಹುಟ್ಟಿಕೊಂಡಿತು. ಇದರೊಳಗೆ ಹೆಂಗಸು ಶೂದ್ರ ಗುಲಾಮರಂತೆ ಸ್ವಾತಂತ್ರ್ಯ*

---

೧. ಉದ್ಧೃತ – ಮಹಿಳಾ ಅಸ್ತಿತ್ವದ ಸಂಕಥನ–ಕವಿತಾ ರೈ–ಜಿ.ವಿ.ಜಿ–ಪಬ್ಲಿಕೇಷನ್–ಬೆಂಗಳೂರು – ೨೦೦೫ ಪು. ೪೮

೨. ಮಹಿಳಾ ಅಸ್ತಿತ್ವದ ಸಂಕಥನ – ಕವಿತಾ ರೈ – ಜಿ.ವಿ.ಜಿ ಪಬ್ಲಿಕೇಷನ್ – ಬೆಂಗಳೂರು – ೨೦೦೫ ಪು. ೫೦–೫೧

*ಕಳೆದುಕೊಳ್ಳಬೇಕಾಯಿತು. ಭಾರತದ "ಸುವರ್ಣಯುಗ" ಚರಿತ್ರೆಯಲ್ಲಿ ಕಾಣಿಸಿಕೊಳ್ಳುವ ಮೌರ್ಯರ ಇತಿಹಾಸದಿಂದ ತೊಡಗುವ ರಾಜ-ರಾಜ್ಯ ಆಡಳಿತ ವ್ಯವಸ್ಥೆಯಲ್ಲಿ ಗುಲಾಮಳಾಗಿ ಮಾರ್ಪಟ್ಟ ಸ್ತ್ರೀಯರು ಜೀತದ ಆಳಾಗಿ ಮಾರ್ಪಾಡು ಹೊಂದುವುದು ವ್ಯಕ್ತವಾಗುತ್ತದೆ."*[೧]

ವ್ಯವಸ್ಥೆಯೊಳಗೆ ಸ್ತ್ರೀಯರು ನಿರಂತರವಾಗಿ ಜೀತದಾಳಾಗಿ ಬದುಕುವುದು ಅನಿವಾರ್ಯವಾಗಿ ಮುಂದುವರಿದು ಆರ್ಥಿಕ ಅವಲಂಬನೆಗೆ ಒಳಗಾಗಿದ್ದಾಳೆ. ಇದರಿಂದ ದಾಸ್ಯದ ಬದುಕಿಗೆ ನಿರಂತರವಾಗಿ ಒಗ್ಗಿಹೋಗಿದ್ದಾಳೆ. ಆಕೆಯ ದಾಸ್ಯವು ಸಾಮಾಜಿಕ ಆರ್ಥಿಕ ತಳಹದಿಯ ಮೇಲೆ ರೂಪಿತಗೊಂಡಿವೆ. ಮಾತೃಪ್ರಧಾನತೆಯಿಂದ ಪಿತೃಪ್ರಧಾನತೆಗೆ ಪಲ್ಲಟಗೊಂಡ ಕುಟುಂಬ ವ್ಯವಸ್ಥೆಯಲ್ಲಿ ತಾಯಿ, ತಂದೆ, ಮಕ್ಕಳು ಎಂಬ ಬಾಂಧವ್ಯ ಬಲವಾಗಿ ಕುಟುಂಬದ ಕಲ್ಪನೆಗೆ ಭದ್ರವಾದ ಬುನಾದಿ ನೀಡಿದೆ. ಅದೇ ಕಾಲಮಾನದಲ್ಲಿ ವ್ಯವಸ್ಥೆಯೊಳಗೆ 'ವಿವಾಹ'ವೂ ಪರಿಗ್ರಹಿತವಾಗಿದೆ.

## ೨. ಆದಿಮ ಸಮಾಜದಲ್ಲಿ 'ವಿವಾಹ' ಸಂಸ್ಥೆಯ ಹುಟ್ಟು

ಆದಿಮ ಸಮುದಾಯಗಳಲ್ಲಿ ಮಹಿಳೆ ಕಷ್ಟದಲ್ಲಿ ಬದುಕಿ ಬಂದಿದ್ದಾಳೆ. ಒಂದೆಡೆ ನೆಲೆನಿಂತ ಅಲೆಮಾರಿಗಳು ಕೃಷಿಕರಾಗಿ ಬೆಳೆದಿದ್ದಾರೆ. ಪುರುಷ ತನ್ನಿಷ್ಟಕ್ಕೆ ತಕ್ಕಂತೆ ಲೋಕವನ್ನು ಸೃಷ್ಟಿಸಿಕೊಂಡು ತನ್ನನ್ನೇ ಕುರಿತು ಚಿಂತಿಸತೊಡಗಿದ. ಇಲ್ಲಿಂದ ಲಿಂಗಬೇಧ ನೀತಿ ಪ್ರಾರಂಭವಾಗಿರಬಹುದು. ತಾವು ವಾಸಿಸುತ್ತಿದ್ದ ಭೂಮಿಯ ಮೇಲೆ ಪುರುಷನ ಹಕ್ಕು ಸ್ಥಾಪನೆಯಾಗಿದೆ. ಆದರೆ ಕೃಷಿಯಲ್ಲಿ ತೊಡಗಿಸಿಕೊಂಡ ಮಹಿಳೆಯ ಮಹತ್ವದ ಅರಿವಿನಿಂದ ಹೆಚ್ಚಿನ ಸ್ಥಾನವನ್ನು ನೀಡಿ ಅವಳ ಮಗುವಿಗೂ ಮನ್ನಣೆ ನೀಡಿರುವ ಸಾಧ್ಯತೆಗಳು ಸ್ಪಷ್ಟವಾಗುತ್ತವೆ. ಆಸ್ತಿಯನ್ನು ಮುಂದಿನ ತಲೆಮಾರಿನವರಿಗೆ ದಾಟಿಸುತ್ತಾ ಬಂದಾಗ ಮಹಿಳೆ ಹೆರುವುದನ್ನು ಪವಿತ್ರವಾದುದು ಎಂದು ಭಾವಿಸಿದರು. ಹೆಣ್ಣು-ಗಂಡು ಇಬ್ಬರಿಗೂ ಸಮುದಾಯದ ಬದುಕು ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಅಸ್ತಿತ್ವವನ್ನು ನೀಡಿತ್ತು. ವ್ಯಕ್ತಿ ಬೇಧವೆಂಬುದು ಕೇವಲ ಜೈವಿಕ ನೆಲೆಗಷ್ಟೇ ಸೀಮಿತವಾಗಿತ್ತು. 'ವಿವಾಹ' ಎಂಬುದು ಒಂದು ಲೌಕಿಕ ಆಕಸ್ಮಿಕ ಮಾತ್ರವಾಗಿತ್ತು. ವಿವಾಹಿತ ಮಹಿಳೆ ಗಂಡಿನ ಅಧೀನವಾಗದೆ ಸಮುದಾಯದ ಭಾಗವಾಗಿದ್ದಳು ಎನ್ನುವುದನ್ನು ಚಾರಿತ್ರಿಕ ಅಧ್ಯಯನದ ಹಿನ್ನೆಲೆಯಲ್ಲಿ ಗಮನಿಸಬಹುದು. ಅಲೆಮಾರಿ ಬದುಕಿಗೂ ಸಮುದಾಯದ ಬದುಕಿಗೂ ವ್ಯತ್ಯಾಸವಿದ್ದು, ಅಲೆಮಾರಿ ಜನಾಂಗ ಅಂದಂದಿನ ಬದುಕಿಗೆ ಮಾತ್ರ ಹೋರಾಡುತ್ತಿದ್ದರು. ಆದರೆ ಸಮುದಾಯಗಳು ಭೂತದಲ್ಲಿ ಬೇರುಬಿಟ್ಟ ಜೀವನವು ಭವಿಷ್ಯದಲ್ಲಿ ಮುಂದುವರಿಯುವ

೧. ಉದ್ಧೃತ –ಮಹಿಳಾ ಅಸ್ತಿತ್ವದ ಸಂಕಥನ – ಕವಿತಾ ರೈ – ಜಿ.ವಿ.ಜಿ–ಪಬ್ಲಿಕೇಷನ್ – ಬೆಂಗಳೂರು – ೨೦೦೫ ಪು. ೫೨–೫೩

ಕಡೆಗೆ ಚಿಂತಿಸತೊಡಗಿದವು. ತನ್ನ ಮುಂದಿನ ಜನಾಂಗದ ಬಗ್ಗೆ ಆಸಕ್ತಿ ಹೊಂದತೊಡಗಿದವು.

ನಾಗರಿಕ ಪೂರ್ವದ ಹಲವಾರು ಜನಾಂಗಗಳಲ್ಲಿ ಮಕ್ಕಳು ಹುಟ್ಟುವಲ್ಲಿ ತಂದೆಯ ಪಾತ್ರವೇನೆಂದು ಗೊತ್ತಿರಲಿಲ್ಲ. ಪೂರ್ವಿಕರ ಆತ್ಮಗಳು ಹೆಂಗಸರ ದೇಹದಲ್ಲಿ ಸೇರಿ ಮಕ್ಕಳಾಗಿ ಹುಟ್ಟುತ್ತಾರೆಂದು ತಾಯಿಯ ಅಗತ್ಯವನ್ನು ಮನಗಂಡಿದ್ದರು. ಅವಳಿಂದಲೇ ಸಮುದಾಯದ ಮುಂದುವರಿಕೆ ಎಂದು ತಿಳಿದು ಅವಳ ಮಕ್ಕಳು ಕುಲದ ಹಕ್ಕನ್ನು ಪಡೆಯುತ್ತಿದ್ದರು. ಹೀಗೆ ತಮ್ಮ ಸಮುದಾಯದ ಆಸ್ತಿ ತಾಯಿಯಿಂದ ಮಕ್ಕಳಿಗೆ ಮುಂದುವರಿಯುತ್ತಿತ್ತು. ತಾಯಿಯಿಂದ ಪಡೆದ ಆಸ್ತಿಯಿಂದ ಮಕ್ಕಳು ಒಂದೆಡೆ ನೆಲೆಯಾಗುತ್ತಿದ್ದುದರಿಂದ ಇಡೀ ಭೂಮಿ ಹೆಣ್ಣಿಗೆ ಸೇರಿದ್ದಾಗಿರುತ್ತಿತ್ತು. ಭೂಮಿ ಹೊಸ ಬೆಳೆಗೆ ಕಾರಣವಾದಂತೆ ಹೆಣ್ಣು ಹೊಸ ಜೀವಗಳ ಸೃಷ್ಟಿಗೆ ಕಾರಣಳಾಗಿ ಮಾತೃವಂಶೀಯ ಹಂತದಲ್ಲಿ ನೆಲೆಯಾದಳು. ಇದರಿಂದ ಹೊಸಹೊಸ ಬೆಳೆಯನ್ನು ಕೊಡುವ ಭೂಮಿಯನ್ನು ತಾಯಿಯ ಸ್ಥಾನದಲ್ಲಿಟ್ಟು ನೋಡಲಾರಂಭಿಸಿದರು. ನೆಲದ ರಹಸ್ಯಗಳೆಲ್ಲವೂ ಹೆಣ್ಣಿನಲ್ಲೂ ಕಾಣತೊಡಗಿ ರಹಸ್ಯಮಯವಾದ ಹೆಣ್ಣಿನ ದೇಹದ ಮಹತ್ವವನ್ನು ಮನಗಂಡಿದ್ದಾರೆ.

ಸಮುದಾಯದ ಒಳಿತಿಗಾಗಿ ಹಲವಾರು ಮೊದಲ ಕೆಲಸಗಳು ಹೆಣ್ಣಿಂದಲೇ ಪ್ರಾರಂಭ ಮಾಡಿಸುವ ಪದ್ಧತಿಯೂ ಇತ್ತು. ಆದರೆ ತಾಯ್ತನ ಹೆಣ್ಣನ್ನು ಒಂದೇ ಕಡೆ ಇರುವಂತೆ ಮಾಡುತ್ತಿತ್ತು. ಹೀಗಾಗಿ ಅವಳು ಅಡಿಗೆ ಮನೆಗೆ ಅಂಟಿಕೊಂಡಳು. ಕೃಷಿ ಕೆಲಸ ಮತ್ತು ಮನೆ ಕೆಲಸ ಅವಳ ಪಾಲಿಗೆ ಕುಟುಂಬದ ನಿರ್ವಹಣೆಯ ಜವಾಬ್ದಾರಿ ಹೆಚ್ಚಿಸಿದುವು. ಜೀವನಾವಶ್ಯಕ ವಸ್ತುಗಳನ್ನು ತಯಾರಿಸಿ ವಿನಿಮಯಮಾಡಿ ಸಂಸಾರ ನಿರ್ವಹಿಸುವಾಗ ಮಹಿಳೆಯರ ಬಗ್ಗೆ ಭಯ ಮಿಶ್ರಿತ ಗೌರವ ಪುರುಷನಲ್ಲಿ ನೆಲೆಯಾಗಿತ್ತು. ಆದರೂ ಆಕೆಯಲ್ಲಿದ್ದ ಶಕ್ತಿಯನ್ನು ಮಾಂತ್ರಿಕವಾದುದು ಎಂದು ಭಾವಿಸಲಾಗಿತ್ತು. ಆಕೆಯಲ್ಲಿ ಗೌರವ ಭಾವನೆಯನ್ನು ಮೀರುವ ಪ್ರಯತ್ನ ಪುರುಷನಿಂದ ನಿರಂತರ ನಡೆಯುತ್ತಲೇ ಇತ್ತು. ಹೆಂಗಸು ಇಡೀ ಸಮುದಾಯಕ್ಕೆ ಮಕ್ಕಳನ್ನು ಆಹಾರವನ್ನು ನೀಡುತ್ತಾ ಅಶಾಶ್ವತವಾದ ಸ್ಥಿತಿಗೆ ಕಟ್ಟುಬಿದ್ದಳು. ಪುರುಷ ಸಮಾಜವನ್ನು ಮಾನವ ಜನಾಂಗಕ್ಕೆ, ನಿಸರ್ಗಕ್ಕೆ ತೆರೆದಿರಿಸುವ ಹೊಣೆ ಹೊತ್ತುಕೊಂಡನು. ಯುದ್ಧ, ಬೇಟೆ, ಮೀನುಗಾರಿಕೆಯಲ್ಲಿ ಪುರುಷ ತನ್ನ ಅಸ್ತಿತ್ವವನ್ನು ಹೊಂದಿ ಲೋಕವನ್ನೆಲ್ಲ ಆವರಿಸಿದನು. ಮೀರುವಿಕೆ ಅವನಿಗೆ ಮಾತ್ರ ಸೀಮಿತವಾಗಿದ್ದು, ಹೆಣ್ಣು ಮತ್ತು ಭೂಮಿಯ ಜೋಡಿಯನ್ನು ಮೀರಿನಿಲ್ಲುವುದು ಅವನಿಗೆ ಸುಲಭವಾಗಿರಲಿಲ್ಲ. ಇವರನ್ನು ಮೀರುವುದರಲ್ಲಿ ಅವನ ಶ್ರಮ ಬಯಕೆ ತೀವ್ರವಾಗಿತ್ತು.

ಈ ಬಯಕೆಯೇ ಅವನಲ್ಲಿ ಕುಲದ ಹೊರಗಿನ 'ಸಂಬಂಧವನ್ನು ಕಟ್ಟುವ' ಪದ್ಧತಿ ಬೆಳೆದು ಬಂದಿದೆ. ಮಾತೃವಂಶೀಯ ಸಮಾಜದಲ್ಲಿ ಈ ಪದ್ಧತಿ

ರೂಢಿಯಲ್ಲಿದ್ದು 'ವಿವಾಹ'ಕ್ಕೆ ಅವನು ಹೆಚ್ಚು ಪ್ರಾಧಾನ್ಯತೆ ನೀಡುತ್ತಿದ್ದ. ವಿವಾಹದಿಂದಾಗಿಯೇ ಅವನಿಗೆ ಗಂಡಸಿನ ಸ್ಥಾನ ಸ್ಥಿರಗೊಳ್ಳುತ್ತಿತ್ತು. ಭೂಮಿಯ ಅಲ್ಪ ಭಾಗ ಅವನದಾಗುತ್ತಿತ್ತು. ತಾಯಿಯ ಮೂಲಕ ಅವನಿಗೆ ಆಸ್ತಿ, ಕುಲ, ಪೂರ್ವಿಕರು ಲಭಿಸುತ್ತಿದ್ದು ಇವು ಅವನ ಅಸ್ತಿತ್ವವನ್ನು ರೂಪಿಸುತ್ತಿದ್ದವು. ಆದರೆ ಈ ವರ್ತುಲದಿಂದ ಹೊರಬಂದು ಮೀರುವಿಕೆಯನ್ನು ಸಾಧಿಸುವ ಅಪೇಕ್ಷೆ ಹೊಂದಿಲ್ಲ. ಪುರುಷ ತನ್ನ ಬೇರುಗಳಿರುವ ಭೂತಕಾಲಕ್ಕಿಂತ ಬೇರೆಯದೇ ಆದ ಭವಿಷ್ಯಕ್ಕೆ ತೆರೆದುಕೊಳ್ಳುವ ಮಹತ್ವಾಕಾಂಕ್ಷೆಯಿಂದ ತನ್ನ ಕುಲದಿಂದ ಹೊರಗಿನವಳನ್ನು ವಿವಾಹವಾಗಲು ಬಯಸುತ್ತಿದ್ದ. ಹಾಗಾಗಿ ಆದಿಮ ಕಾಲದ ವಿವಾಹಗಳಲ್ಲಿ ಹಾರಿಸಿಕೊಂಡು ತಂದು ಮದುವೆಯಾಗುವ ಪದ್ಧತಿ ರೂಢಿಯಲ್ಲಿತ್ತು. ಹೀಗೆ ಹಾರಿಸಿಕೊಂಡು ತಂದವಳಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸುವ ಹಂಬಲವೂ ಎದ್ದು ಕಾಣುತ್ತದೆ. ಇದರಲ್ಲಿ ಪುರುಷ ತನ್ನ ಸಾಹಸವನ್ನು ಮೆರೆದು ಯೋಧ ಎಂದು ಸಾಬೀತು ಪಡಿಸಿ ಅಪರಿಚಿತರ ಸಂಪತ್ತನ್ನು ದೋಚುತ್ತಿದ್ದ. ಹೆಣ್ಣನ್ನು ಬೇರೆ ಬೇರೆ ಬಗೆಯಲ್ಲಿ ಪಡೆದುಕೊಂಡರೂ ಉದ್ದೇಶ ಒಂದೇ ಆಗಿತ್ತು 'ಆಳುವುದು'.

ಪುರುಷ ಮೀರುವಿಕೆಗೆ, ಚೈತನ್ಯಕ್ಕೆ ಚರ್ಚೆಗೆ, ತಂತ್ರಜ್ಞಾನಕ್ಕೆ ಹೆಚ್ಚಿನ ಆದ್ಯತೆ ನೀಡುತ್ತಾ ಹೆಣ್ಣಿನ ಸ್ಥಾನಮಾನದಲ್ಲಿ ಅಪಮೌಲ್ಯೀಕರಣ ಪ್ರಾರಂಭವಾಯಿತು. ಇದುವರೆಗೂ ಅವಳಿಗೆ ದೊರಕಿದ್ದ ಉನ್ನತಿಗೆ ಅವಳ ಅಂತಸ್ಥ ಸಾಮರ್ಥ್ಯವಾಗಿರದೆ ಪುರುಷನ ದುರ್ಬಲತೆಯೆ ಕಾರಣ ಎಂದು ಭಾವಿಸಲಾಯಿತು. ಹಾಗಾಗಿ ಪುರುಷ ಮಹಿಳೆಯ ಹಿಡಿತದಿಂದ ಹೊರಬರುವ ಪ್ರಯತ್ನಗಳು ನಡೆದವು. ಶಿಲಾಯುಗದಿಂದ ಕಂಚಿನ ಯುಗಕ್ಕೆ ಬರುವ ಕಾಲ ಅವನಲ್ಲಿ ಯಜಮಾನ್ಯವನ್ನು ಸ್ಥಾಪಿಸಿ, ತನ್ನನೆ ತಾನು ನಿಯಂತ್ರಿಸಿಕೊಳ್ಳಲು ನೆರವಾಯಿತು. ಭೂಮಿಯನ್ನು ನಂಬಿದ್ದರಿಂದ ಪ್ರಕೃತಿಯ ಬದಲಾವಣೆಗೆ ಕಾಯಬೇಕಾಯಿತು. ಪ್ರಕೃತಿ ಶಕ್ತಿಯ ಕೃಪೆಗಾಗಿ ಕಾಯತೊಡಗಿದ. ಆದರೆ ಇದಕ್ಕೆ ಬದಲಾಗಿ ತನ್ನ ಕಾರ್ಯಶಕ್ತಿಯಲ್ಲಿ ನಂಬಿಕೆ ಹೆಚ್ಚಿ ಕಾರ್ಯೋನ್ಮುಕನಾದ. ಪ್ರಕೃತಿಯ ಅವಲಂಬನೆಯಿಂದ ಹೊರಬರಲು ತನ್ನ ಜಾಣತನಕ್ಕೆ ತಾನೇ ಹೆಮ್ಮೆ ಪಟ್ಟುಕೊಳ್ಳುವಂತಹ ಸೂಕ್ಷ್ಮತೆಗಳನ್ನು ಅರಿತುಕೊಳ್ಳ ತೊಡಗಿದ. ಹಾಗಾಗಿ ದೈವಿಕ ಆಸಕ್ತಿಗಳು ಹಿಂದೆ ಸರಿದು ತಂತ್ರಗಾರಿಕೆಯೇ ಯಶಸ್ಸಿಗೆ ಕಾರಣ ಎಂದು ತಿಳಿದವನಾಗಿದ್ದ. ದೇವರುಗಳನ್ನು ಸ್ವರ್ಗಕ್ಕೆ ತಳ್ಳಿ ಈ ಭೂಮಿಯನ್ನು ತನಗಾಗಿ ಕಾಯ್ದಿರಿಸಿಕೊಂಡು ಬೀಗತೊಡಗಿದ. ಹೀಗೆ ಪುರುಷ ತನ್ನ ಸಾಮರ್ಥ್ಯವನ್ನು ಕಂಡುಕೊಂಡು ಬೀಗುತ್ತಾ ಬಂದಿದ್ದಾನೆ.

ಭೂಮಿಯಲ್ಲಿ ಬೆಳೆದ ಬೆಳೆಯ ಬಗ್ಗೆ ಪೂರ್ಣ ಪ್ರಮಾಣದ ಲಾಭ ಪಡೆಯಲಾಗದೆ ಲೋಹದ ಬಳಕೆಯಲ್ಲಿ ಯಶಸ್ವಿಯಾದ. ಲೋಹದ ಜಗತ್ತಿನಲ್ಲಿ ಗೊಂದಲಗಳಿರಲಿಲ್ಲ. ಇದರಿಂದ ಗಣಿತ, ತರ್ಕ, ಆಲೋಚನೆ, ಚಿಂತನೆಗಳು ಬೆಳೆದು

ವಿಶ್ವದ ಕಲ್ಪನೆಯೇ ಬದಲಾಯಿತು. ಮಹಿಳೆ ಕೃಷಿಗೆ ಬದ್ಧಳಾದಳು. ಪುರುಷ ಜಗತ್ತಿನಲ್ಲಿ ಕಾಲದೇಶಗಳನ್ನು ಅವುಗಳ ಕ್ರಿಯೆ, ಪರಿಣಾಮಗಳನ್ನು ನಿಯಂತ್ರಿಸಬಹುದಾಗಿತ್ತು. ಕೃಷಿಯಲ್ಲಿ ಮಾರ್ಪಾಡು ಕಂಡುಕೊಂಡ. ರಸ್ತೆ ದೇವಾಲಯ, ನಿರಾವರಿ ವ್ಯವಸ್ಥೆಗಳನ್ನು ಸಿದ್ಧಗೊಳಿಸಿ ಹೊಸಜಗತ್ತನ್ನು ನಿರ್ಮಿಸುವಲ್ಲಿ ಯಶಸ್ವಿಯಾದೆ.

ಆದಿಮ ಕಾಲದ ಕುಟುಂಬಗಳಲ್ಲಿ 'ವಿವಾಹ'ದ ಕಲ್ಪನೆ ತಮ್ಮ ಸಮುದಾಯದ ಸಂಖ್ಯಾಬಲವನ್ನು ಹೆಚ್ಚಿಸಿಕೊಳ್ಳುವುದೇ ಆಗಿತ್ತು. ಮಹಿಳೆಯನ್ನು ಸರ್ವಶಕ್ತಳು ಎಂದು ಒಪ್ಪಿಕೊಂಡ ಪುರುಷ ಆಕೆಯಿಂದ ಮಕ್ಕಳನ್ನು ಸಂಬಂಧಿಕರನ್ನು ಆಸ್ತಿಯನ್ನು ಪಡೆದು 'ವಿವಾಹ' ಬಂಧನವನ್ನು ಗಟ್ಟಿಗೊಳಿಸಿರುವ ಸಾಧ್ಯತೆಗಳೇ ಹೆಚ್ಚಿವೆ. 'ವಿವಾಹ' ಬಂಧನದೊಂದಿಗೆ ಪರಾವಲಂಬಿಯಾದ ಮಹಿಳೆ ಆದಿಮಕಾಲದಿಂದ ಇಂದಿನವರೆಗೂ ತನ್ನ ಅಸ್ತಿತ್ವಕ್ಕಾಗಿ, ಕೌಟುಂಬಿಕ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಲೇ ಬಂದಿರುವುದು ಇತಿಹಾಸ ನಿರೂಪಿಸುತ್ತದೆ.

೩. <u>ಮಾತೃಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ</u> :

ಅಲೆಮಾರಿ ಬದುಕಿನಿಂದ ಒಂದೆಡೆ ನೆಲೆಗಿಂತ ಮಾನವರು ಮಹಿಳೆಯ ಚಾಣಾಕ್ಷತನದ ದೈಹಿಕಶ್ರಮದ ಬೆಂಬಲದೊಂದಿಗೆ ಸಮುದಾಯಗಳನ್ನು ಹುಟ್ಟುಹಾಕಿದ್ದಾರೆ. ಮಹಿಳೆಯಿಂದ ಪ್ರಾರಂಭವಾದ ಮಕ್ಕಳ ಪಾಲನೆಪೋಷಣೆಗಳು ಒಂದೆಡೆ ನೆಲೆನಿಲ್ಲುವಂತೆ ಮಾಡಿ 'ಕುಟುಂಬ'ಗಳ ಹುಟ್ಟಿಗೆ ಕಾರಣವಾಗಿವೆ. ಗಂಡ ಮಕ್ಕಳನ್ನು ಪಾಲನೆ ಮಾಡುವ ಜವಾಬ್ದಾರಿ ಹೊತ್ತ ಮಹಿಳೆ ಕೃಷಿ ಪಶುಸಂಗೋಪನೆ ಮುಂತಾದ ಕೆಲಸಗಳೊಂದಿಗೆ ಆಹಾರ ಸಂಗ್ರಹಣೆ ಮಾಡಿ ಕುಟುಂಬದ ಜವಾಬ್ದಾರಿ ಹೊತ್ತು ಯಜಮಾನಿಕೆಯನ್ನು ತನ್ನದಾಗಿಸಿಕೊಂಡಿದ್ದಳು. ಅಲ್ಲಿಂದ ಪ್ರಾರಂಭವಾದ ಮಾತೃಪ್ರಧಾನ ಕುಟುಂಬಗಳು ಕಾಲಕ್ರಮೇಣ ಪಿತೃಪ್ರಾಧ್ಯಾನ್ಯತೆಯನ್ನು ಪಡೆದಿರುವುದನ್ನು ಇತಿಹಾಸದಿಂದ ಅರಿಯಬಹುದು. ಆಕೆಯನ್ನು ಶಕ್ತಿದೇವತೆ ಎಂದು ಪೂಜಿಸುವುದು ಆದಿಮ ಸಮಾಜದಲ್ಲಿ ನಿರೂಪಿತವಾಗಿವೆ. ಮಹಿಳೆ ಉತ್ಪಾದಕತೆಯಿಂದ ದೂರವಾಗುತ್ತಿದ್ದಂತೆ ಪಿತೃಪ್ರಧಾನತೆ ಪ್ರಾರಂಭವಾಗಿದೆ. ಮಾತೃದೇವತೆಯ ಪರಿಕಲ್ಪನೆ ಆದಿಮ ಸಮಾಜದಲ್ಲೆ ಉಳಿದುಕೊಂಡಿತು. ಪುರುಷ 'ಮಾತೃ' ಎಂದು ಪೂಜಿಸಿದ್ದು ಭಯದಿಂದಲೇ ಹೊರತು ಭಕ್ತಿಯಲ್ಲ. ಆ ಸ್ಥಾನದಿಂದ ಆಕೆಯನ್ನು ಕೆಳಗೆ ತಳ್ಳಿದಾಗಲೇ ತಾನು ಗುರಿಯನ್ನು ಸಾಧಿಸಬಲ್ಲವನಾದ. ನಂತರದಿಂದ ಪುರುಷ ಪ್ರಾಭಲ್ಯವನ್ನು ಮಾತ್ರ ನಂಬಿದವನಾಗಿ ಕಾಣುತ್ತಾನೆ.

'ಮಹಿಳೆ' ದೇವತೆಯ ಸ್ಥಾನದಿಂದ ವಂಚಿತಳಾದಳು. ಪುರುಷ ಶೌರ್ಯದ ಅಧಿದೇವತೆ ಎಂದು ಬಂಧಿಸಲಾಯಿತು. ಪುರುಷ ದೈವಗಳಿಗೆ ಮೊದಲ ಮಣೆಹಾಕಿ ಇವರ ಪತ್ನಿಯರನ್ನು ದ್ವಿತೀಯ ಸ್ಥಾನಕ್ಕೆ ತಳ್ಳಲಾಯಿತು.

*"ಹೀಗಾಗಿ ಪಿತೃಪ್ರಧಾನ ವ್ಯವಸ್ಥೆ ನೆಲೆಗೊಂಡದ್ದು ಆಕಸ್ಮಿಕವೂ ಅಲ್ಲ, ಹಿಂಸಾತ್ಮಕ ಕ್ರಾಂತಿಯ ಫಲವೂ ಅಲ್ಲ ಮಾನವ ಜನಾಂಗದ ಉಗಮಕಾಲದಿಂದಲೂ ಗಂಡಸರಿಗಿದ್ದ ಜೈವಿಕ ನೆಲೆಯ ಮೇಲುಗೈ ಅವರಿಗೆ ಏಕೈಕ ಅಧಿಪತಿಗಳಾಗುವ ಅವಕಾಶವನ್ನೊದಗಿಸಿತು. ಈ ಅವಕಾಶವನ್ನೆಂದೂ ಅವರು ಬಿಟ್ಟುಕೊಟ್ಟಿಲ್ಲ. ತಮ್ಮ ಸ್ವಾತಂತ್ರ್ಯದ ಕೊಂಡಭಾಗವನ್ನಷ್ಟೆ ನಿಸರ್ಗ ಮತ್ತು ಹೆಣ್ಣಿಗೆ ಬಿಟ್ಟುಕೊಟ್ಟಿದ್ದಾರೆ. ಕೊನೆಗೆ ಅದನ್ನು ಅವರೇ ಹಿಂದಕ್ಕೆ ಪಡೆದುಕೊಂಡರು. ಹೆಣ್ಣು ಯಾವಾಗಲೂ ಅನ್ಯವಕ್ತಿಯಾಗಿ ಜೀವಿಸಬೇಕಾಗಿ ಬಂದ ಅಸ್ಪಷ್ಟವಾದ ಅಧಿಕಾರವನ್ನು ಮಾತ್ರವೇ ಪಡೆದುಕೊಂಡಿದ್ದಾಳೆ. ಗುಲಾಮಳಾಗಿರಬೇಕೋ ಅಥವಾ ಆರಾಧಿಸುವ ದೈವವಾಗಿರವೇಕೋ ಎಂಬುದು ಅವಳ ಆಯ್ಕೆಯಾಗಿರಲಿಲ್ಲ. ಪ್ರೇಜರ್ ಹೇಳುವಂತೆ "ಗಂಡಸರು ದೇವರನ್ನು ಸೃಷ್ಟಿಸುತ್ತಾರೆ. ಆ ದೇವರನ್ನು ಹೆಂಗಸರು ಪೂಜಿಸುತ್ತಾರೆ. ಪರಮ ದೈವಗಳು ಹೆಣ್ಣೋ ಅಥವಾ ಗಂಡೋ ಎಂಬುದನ್ನು ಗಂಡಸರೇ ನಿರ್ಧರಿಸಿದರು. ಹೆಂಗಸಿಗೆ ಯಾವ ಸ್ಥಾನ ಸಮಾಜದಲ್ಲಿ ಇರಬೇಕು ಎಂಬುದನ್ನು ತೋರಿಸಿಕೊಟ್ಟವರು ಗಂಡಸರೇ. ಆಕೆ ಎಂದಿಗೂ ತನ್ನ ಕಟ್ಟಳೆಗಳನ್ನು ತಾನೇ ರೂಪಿಸಿಕೊಳ್ಳಲಿಲ್ಲ."*[೧]

ಮೇಲಿನ ಮಾತುಗಳು ಮಹಿಳೆಗೆ ಎಂದೂ ಅವಕಾಶಗಳೂ ಇರಲಿಲ್ಲ ಆಯ್ಕೆಗಳೂ ಇರಲಿಲ್ಲ ಎಂದು ಸ್ಪಷ್ಟಪಡಿಸುತ್ತವೆ. ಒಂದು ವೇಳೆ ಮಹಿಳೆಗೆ ಉತ್ಪಾದಕ ಶ್ರಮವು ದೊರೆತಿದ್ದೇ ಆಗಿದ್ದರೆ ನಿಸರ್ಗದ ಮೇಲಿನ ವಿಜಯದಲ್ಲಿ ಅವಳ ಪಾಲೂ ಇರುತಿತ್ತು. ಪುರುಷನ ದುಡಿಯುವ ಸಾಮರ್ಥ್ಯಕ್ಕೆ ಸರಿಯಾದವರಲ್ಲ ಎನ್ನುವ ಒಂದೇ ಕಾರಣ ಆಕೆಯನ್ನು ಕೆಳದರ್ಜೆಗೆ ದೂಡಿರಲಾರರು. ಅವಳು ಪುರುಷನ ದುಡಿಮೆ ಮತ್ತು ಚಿಂತನಾಕ್ರಮಕ್ಕಿಂತ ಭಿನ್ನಳಾಗಿದ್ದಳು ಎನ್ನುವುದೂ ಕಾರಣವಾಗಿರಬಹುದೆಂದು ಊಹಿಸಬಹುದು. ಆಕೆ ಜೀವನರಹಸ್ಯ ಪ್ರಕ್ರಿಯೆಯ ಚೌಕಟ್ಟಿನೊಳಗೆ ಬಂದಿಯಾಗಿದ್ದಳು. ಗಂಡಸಿನ ಸಾಮರ್ಥ್ಯದ ವಿಸ್ತಾರದೊಂದಿಗೆ ಆಕೆಯ ಅಸಾಮರ್ಥ್ಯ ಬಿಂಬಿತವಾಗಿ ಕೆಳದರ್ಜೆಗೆ ತಳ್ಳಲ್ಪಟ್ಟಿರಬಹುದು.

ಪುರುಷ, ಹೊಸ ತಂತ್ರಜ್ಞಾನದಿಂದ ಹೊಸ ಸಾಧ್ಯತೆಗೆ ಪುರುಷರನ್ನು ಬಳಸಿಕೊಂಡ. ದುಡಿಮೆಯ ಪಡೆಯ ಗಂಡಸರನ್ನು ತನ್ನ ಗುಲಾಮರನ್ನಾಗಿ ಮಾಡಿಕೊಂಡು ಅವರಿಂದ ಹೆಚ್ಚು ಆದಾಯ ಹೊಂದಲು ಸಾಧ್ಯವಾಯಿತು. ಗುಲಾಮರ ಮೇಲೆ ಹೊಂದಿದ್ದ ಅಧಿಕಾರವೂ ಹೆಂಗಸಿನದಕ್ಕಿಂತ ಮಿಗಿಲಾದದ್ದು ಎಂದು ಭಾವಿಸುತ್ತಾ ಬಂದಿರುವುದು ಗಮನಾರ್ಹ. ಅದರಲ್ಲೂ ಭೂಮಿಯ

೧. ದ ಸೆಕೆಂಡ್ ಸೆಕ್ಸ್ –ಸಿಮೋನ್‌ದ ಬೋವಾ– (ಅನು) ಶ್ರೀಮತಿ ಹೆಚ್.ಎಸ್. ಅಧ್ಯಯನ ಮಂಡಲ–ಬೆಂಗಳೂರು– ೨೦೦೭ ಪು–೮೮

ಒಡೆಯನಾಗುತ್ತಿದ್ದಂತೆ ಹೆಂಡತಿಯ ಮೇಲೆ ತನ್ನ ಒಡೆತನ ಸ್ಥಾಪಿಸಿ ಕುಲದ ಪ್ರಭಾವಳಿಯಲ್ಲಿ ಸಿಲುಕಿದ್ದಾನೆ. ಹೆಂಡತಿ ಮಕ್ಕಳನ್ನು ದುಡಿಮೆಗೆ ತೊಡಗಿಸಿ ಅವರನ್ನು ಅಧೀನದಲ್ಲಿಟ್ಟೂಕೊಳ್ಳಲು ಪ್ರಾರಂಭಿಸಿದ. ಅವನ ನಂತರ ಅವರಿಗೆ ಆಸ್ತಿಯನ್ನು ಹಸ್ತಾಂತರಿಸಿ ಆ ಮೂಲಕ ತನ್ನ ಲೌಕಿಕ ಬದುಕಿನ ನಿರಂತರತೆ ದೊರಕುವುದೆಂದುಕೊಂಡ. ತನ್ನ ಸೃಷ್ಠಿ ಸಾಮರ್ಥ್ಯಕ್ಕಾಗಿ ಹೆಮ್ಮೆಪಟ್ಟುಕೊಂಡು ಮಹಿಳೆಯನ್ನು ಕೀಳರಿಮೆಯಿಂದ ನೋಡುವುದು ರೂಢಿಯಾಗಿದೆ. ಮಾತೃಮೂಲದ ಕುಟುಂಬಗಳು ಪಿತೃಮೂಲದವಾಗಿ ಬದಲಾದುದು ಪ್ರಮುಖವಾದ ತಾತ್ವಿಕ ಕ್ರಾಂತಿ ಎಂದೇ ಭಾವಿಸಬಹುದು. 'ತಾಯಿ'ಯ ಜಾಗದಲ್ಲಿ 'ಪಾಲಕಳು' ' ಸೇವಕಳು' ಆಗಿ ನೆಲೆಯಾಗಿದ್ದಾಳೆ.

ಆಸ್ತಿ ತಂದೆಯ ಹಕ್ಕಿನದು. ಗಂಡುಮಕ್ಕಳಿಗೆ ಹಸ್ತಾಂತರವಾಗಿ ಗಂಡಸಿನ ವಂಶೋತ್ಪಾದನೆಯ ಪಾತ್ರವೇನು ಎಂದು ಅರಿತುಕೊಳ್ಳಲಾಯಿತು. ಇನ್ನೂ ಮುಂದೆ ಹೋಗಿ ತಂದೆಯೇ ಮಕ್ಕಳ ಹುಟ್ಟಿಗೆ ಪೂರ್ಣ ಜವಾಬ್ದಾರನಾದ. ತಾಯಿ ತಾನು ಪಡೆದ ಬೀಜವನ್ನು ಪೋಷಿಸುವಾಕೆ ಮಾತ್ರವಾದಳು. ತನ್ನ ಮಕ್ಕಳ ಮೇಲೆ ಹಕ್ಕು ಪಡೆದ ಪುರುಷ ಜಗತ್ತಿನ ಮೇಲೆ ಅಧಿಪತ್ಯ ಸ್ಥಾಪಿಸಲು ಸಾಧ್ಯವಾಯಿತು. ಪುರುಷನ ಅಧಿಪತ್ಯ ಸ್ಥಾಪನೆಗೆ ಪುರಾಣಗಳು ತೀವ್ರ ಹೋರಾಟ ನಡೆಯಿತೆಂದರೂ, ವಾಸ್ತವವಾಗಿ ಹೆಣ್ಣಿನ ಮೇಲಿನ ಅಧಿಕಾರ ಎನ್ನುವುದು ನಿಧಾನಗತಿಯಲ್ಲಿ ನಡೆದ ಒಂದು ಪರಿವರ್ತನೆ ಎಂದೇ ಭಾವಿಸಬಹುದು.

ಏನೇ ಆದರೂ ಪುರುಷನಿರುವಂತೆ ಮಹಿಳೆ ಇರುವುದೂ ಸತ್ಯ. ಮಹಿಳೆಯನ್ನು ವಿರೋಧಿಸಿ ಬದುಕು ಕಟ್ಟಿಕೊಳ್ಳಲು ಅಸಾಧ್ಯ ಎಂಬ ಅರಿವು ಇದ್ದೇ ಇದೆ. ಪುರುಷನ ಬಯಕೆಗಳ ಪೂರೈಕೆಗೆ ತನ್ನ ವಂಶದ ಬೆಳವಣಿಗೆಗೆ ಹೆಂಗಸು ಅನಿವಾರ್ಯ. ಆದರೂ ಅವನು ಹಾಕಿದ ಚೌಕಟ್ಟನ್ನು ಅವಳು ಒಪ್ಪಿ ಬದುಕುವುದೂ ಅನಿವಾರ್ಯ ಎಂದು ಬಿಂಬಿಸಲಾಗಿದೆ. ಅಂತಿಮವಾಗಿ ಪವಿತ್ರವಾದ ಹೆಣ್ಣು ಎಂದು ಗೌರವಿಸುವಾಗಲೂ 'ವಿವಾಹ'ದೊಂದಿಗೆ ಗೌರವಿಸುವುದು ರೂಢಿಗೆ ಬಂದಿದೆ. ಈ ಜೋಡಿಯಲ್ಲೂ ಪುರುಷನಿಗೇ ಪ್ರಾಧಾನ್ಯ. ಈ ಧೋರಣೆ ಈ ಕಾಲಕ್ಕೂ ಮುಂದುವರಿದು ಬರುತ್ತಿದೆ.

### ೪. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ.

ಪಿತೃಪ್ರಧಾನ ಅಧಿಕಾರ ನೆಲೆಯಾಗುವ ಹೊತ್ತಿಗೆ ಪುರುಷ ಆಸ್ತಿಯನ್ನು ಹೊಂದುವ ಮತ್ತು ಅನ್ಯರಿಗೆ ನೀಡುವ ಹಕ್ಕನ್ನು ಮಹಿಳೆಯಿಂದ ಕಿತ್ತುಕೊಂಡ. ಇಂತಹ ಖಾಸಗಿ ಆಸ್ತಿಯ ಉಗಮದೊಡನೆ ಮಹಿಳೆಯ ಸ್ಥಾನ ಪಲ್ಲಟವಾಯಿತು. ಮಹಿಳೆಯರೂ ಖಾಸಗಿ ಆಸ್ತಿಯ ಭಾಗವಾಗಿದ್ದಾರೆ. ಈ ಆಸ್ತಿಯ ಹಸ್ತಾಂತರ ತನ್ನ

ಕುಲದವರನ್ನು ಹಾಗೂ ಪೂರ್ವಜರನ್ನು ಆರಾಧಿಸುವುದು ಮತ್ತು ಆಸ್ತಿಯನ್ನು ಪೋಷಿಸುವುದು. ಇಲ್ಲೂ ಪರಲೋಕದ ಪುರುಷನಿಗೇ ಪ್ರಾಧಾನ್ಯತೆ. ಪುರುಷ ಅನ್ಯಲೋಕದ ಪೂರ್ವಿಕರನ್ನು ತನ್ನ ಮಕ್ಕಳನ್ನು ಹೆಂಗಸರೊಡನೆ ಹಂಚಿಕೊಳ್ಳಲು ಇಷ್ಟಪಡುವುದಿಲ್ಲ. 'ವಿವಾಹ'ದಲ್ಲಿ ಹೆಣ್ಣಿನ ತೌರಿನ ಸಂಬಂಧವನ್ನೂ ಕಿತ್ತು ಗಂಡಿನ ಗುಂಪಿನಲ್ಲಿ ನೆಲೆಗೊಳಿಸಲಾಗುತ್ತದೆ. ಎಂದರೆ, ಪ್ರಾಣಿಗಳನ್ನೊ ಅಥವಾ ಗುಲಾಮರನ್ನೋಕೊಳ್ಳುವಂತೆ ಆತ ಹೆಣ್ಣನ್ನು ಕೊಂಡುಕೊಳ್ಳುತ್ತಾನೆ. ಅವನ ಕುಟುಂಬದ ಪ್ರಭಾವಲಯದಲ್ಲಿ ಆಕೆ ಬದುಕಬೇಕು. ಅವಳಿಂದ ಹುಟ್ಟಿದ ಮಕ್ಕಳೂ ಗಂಡನ ಕುಟುಂಬಕ್ಕೆ ಸೇರುತ್ತಾರೆ. ತಂದೆಯ ಮನೆಯಲ್ಲಾಗಲಿ ಗಂಡನ ಮನೆಯಲ್ಲಾಗಲಿ ಅವಳಿಗೆ ಆಸ್ತಿಯೂ ಇಲ್ಲ. ವ್ಯಕ್ತಿಯ ಘನತೆಯೂ ಇಲ್ಲ. ಅವಳು ಮೊದಲು ತಂದೆಗೆ ಸೇರಿದವಳು ವಿವಾಹದ ನಂತರ ಗಂಡನ ಆಸ್ತಿಯ ಭಾಗ ಮಾತ್ರ. ಪಿತೃಪ್ರಧಾನ ವ್ಯವಸ್ಥೆ ಮಕ್ಕಳು ತಂದೆಯ ಹಕ್ಕಿನವರು ಎನ್ನುತ್ತದೆ. ತಂದೆಗೆ ಆ ಮಕ್ಕಳನ್ನು ಸಾಯಿಸುವ ಹಕ್ಕು ಇದ್ದೂ ಗಂಡುಮಕ್ಕಳನ್ನು ಸಾಯಿಸದಂತೆ ಸಮಾಜ ಹಕ್ಕನ್ನು ಮೊಟಕುಗೊಳಿಸಿದೆ. ಹುಟ್ಟಿದ ಎಲ್ಲಾ ಮಕ್ಕಳು ಬೇಡವೆನಿಸಿದರೆ ಹೆಣ್ಣು ಮಕ್ಕಳನ್ನು ಸಾವಿಗೀಡುಮಾಡುವ ಪದ್ಧತಿ ವ್ಯಾಪಕವಾಗಿ ಪ್ರಪಂಚದ ಬಹುತೇಕ ಕಡೆಗಳಲ್ಲಿ ಬೆಳೆದು ಬಂದಿರುವುದನ್ನು ಗಮನಿಸಬಹುದು. ಹೆಣ್ಣು ಮಕ್ಕಳು ಬದುಕಿ ಬಾಳುವುದು ಹಕ್ಕಿನಿಂದ ಅಲ್ಲ ಕರುಣೆಯಿಂದ ಎಂದು ಅರಿಯಬಹುದಾಗಿದೆ. ಹಾಗಾಗಿ ಅನೇಕ ರಾಷ್ಟ್ರಗಳಲ್ಲಿ ಇಂದಿಗೂ ಆಕೆಯ ಬೆಲೆ ಗುಲಾಮರಿಗಿಂತ ಕಡಿಮೆ.

ಪಿತೃಪ್ರಧಾನ ಕುಟುಂಬಗಳು ಹೆಣ್ಣಿಗೆ 'ಶೀಲ''ಪಾತಿವ್ರತ್ಯ' 'ಕನ್ಯತ್ವ'ದ ಕಟ್ಟು ಪಾಡುಗಳನ್ನು ಹೇರಿದ್ದವು. ಆದರೆ ಪುರುಷ ಸೇವಕಿಯಾಗಿ ಗುಲಾಮಳಾಗಿ ಎಷ್ಟಾದರು ಹೆಂಗಸರನ್ನು ಹೊಂದುವ ದ್ವಿಸ್ತರ ನೀತಿ ಚಾಲನೆಯಲ್ಲಿತ್ತು. ಮಾತೃಪ್ರಧಾನ ಕುಟುಂಬದಲ್ಲಿ 'ಶೀಲ' ಎಂಬುದು ಅಷ್ಟು ಮಹತ್ತರವಾದ ವಿಷಯವಾಗಿರಲಿಲ್ಲ ಹೆಣ್ಣು ಯಾವಾಗ ಗಂಡಿನ ಆಸ್ತಿಯಾದಳೊ ಅಂದಿನಿಂದ ನಿಷ್ಠೆ ಪಾಲಿಸುವುದು ಅನಿವಾರ್ಯವಾಗಿದೆ. 'ಕುಟುಂಬ' ಮತ್ತು 'ಆಸ್ತಿ' ಎರಡೂ ಸಮಾಜದ ತಳಹದಿಗಳಾದ ಮೇಲೆ ಹೆಂಗಸಿಗೆ ಅವಕಾಶಗಳು ಸೀಮಿತವಾದವು. ಹೆಣ್ಣಿಗೆ ಭದ್ರತೆಯನ್ನು ಒದಗಿಸುವ ನೆಪದಲ್ಲಿ ಪಿತೃಪ್ರಾಧಾನ್ಯತೆ ಪ್ರಾರಂಭವಾಗಿದೆ.

**೫. ಆದಿಮ ಕುಟುಂಬದಲ್ಲಿ ಮಹಿಳೆ**

ಸಾಮಾಜಿಕ ವ್ಯವಸ್ಥೆಯ ಮೂಲಭೂತ ಕರ್ತವ್ಯಗಳು ಆರ್ಥಿಕ ಮತ್ತು ಜೀವಶಾಸ್ತ್ರೀಯ ಕ್ಷೇತ್ರಕ್ಕೆ ಸಂಬಂಧಿಸಿದುವು. ಕುಟುಂಬಕ್ಕೆ ಆಹಾರದಷ್ಟೆ ಮಕ್ಕಳೂ ಅವಶ್ಯವಾಗಿದ್ದರು. ಎಲ್ಲ ಐತಿಹಾಸಿಕ ಸಂಸ್ಥೆಗಳ ಮೂಲವಾದ ಕುಟುಂಬದಲ್ಲಿ ಮಾನವ ಸಮುದಾಯದ ಸರ್ಕಾರ ಬುಡಕಟ್ಟು ಜನಾಂಗಗಳ, ಹೆಣ್ಣುಗಂಡುಗಳ ಮತ್ತು

ತಲೆಮಾರುಗಳ ಸಂಬಂಧವನ್ನು ನಿಯಂತ್ರಿಸುವ ಸೂಕ್ಷ್ಮ ಕರ್ತವ್ಯವನ್ನು ವಹಿಸಿದೆ. ಆದಿಮಾನವ ಬೇಟೆಯಾಡುತ್ತ ಬದುಕಿದ್ದ ಕಾಲದಲ್ಲೂ ತನ್ನ ರಕ್ಷಣೆಗಾಗಿ ಕುಟುಂಬದಲ್ಲಿರುತ್ತಿದ್ದ. ಪ್ರಕೃತಿಯಲ್ಲಿ ಪ್ರಾಣಿಗಳು ಬಲಿಷ್ಟ ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಗುಂಪಿನಲ್ಲಿರುವಂತೆ ಆದಿಮಾನವನೂ ಗುಂಪಿನಲ್ಲಿರುತ್ತಿದ್ದ. ಸ್ನೇಹಮಯ ಬಾಂಧವ್ಯದಿಂದಲೂ ಇದ್ದಿರಬಹುದು. ಆದರೆ ಸಾಮಾಜಿಕ ವ್ಯವಸ್ಥೆಯ ತತ್ವವಾಗಿದ್ದ ಬಾಂಧವ್ಯ ಎನ್ನುವುದರ ಸ್ಥಾನವನ್ನು ಆರ್ಥಿಕ ಸಂಬಂಧಗಳೂ ರಾಜಕೀಯ ಪ್ರಭುತ್ವವೂ ಆಕ್ರಮಿಸಿದುವು. ಇದರಿಂದ ಕೆಳಸ್ತರದಲ್ಲಿ ಕುಟುಂಬವೂ ಮೇಲ್‌ಸ್ತರದಲ್ಲಿ ಸರ್ಕಾರವೂ ಆಕ್ರಮಿಸಿಕೊಂಡವು. ದೈಹಿಕ ಶ್ರಮದ ವ್ಯವಸ್ಥೆಯನ್ನು ಕುಟುಂಬವೂ, ಕಾನೂನಿನ ವ್ಯವಸ್ಥೆಯ ಭಾಗವನ್ನು ಸರ್ಕಾರವೂ ನಿರ್ವಹಿಸಿದುವು.

ಕುಟುಂಬದಲ್ಲಿ ಪೋಷಕರ ಜವಾಬ್ದಾರಿಯಲ್ಲಿ ಹೆಚ್ಚಿನ ಪಾತ್ರ ವಹಿಸುತ್ತಿದ್ದವಳು ತಾಯಿ. ಕೃಷಿ ಪ್ರಾಮುಖ್ಯತೆಯನ್ನು ಪಡೆದುಕೊಂಡ ಕಾಲಕ್ಕೆ ಹೆಂಡತಿ ಮಕ್ಕಳು ಗುಲಾಮರಾಗಿರುವುದು ಗಮನಾರ್ಹವಾದುದು.

> *"ಕೃಷಿಯು ನಾಗರಿಕತೆಯನ್ನು ಬೆಳೆಸಿತು ನಿಜ. ಆದರೆ ಅದು ಖಾಸಗಿ ಆಸ್ತಿಯ ಜೊತೆಗೆ ಗುಲಾಮಗಿರಿಯನ್ನೂ ಬೆಳೆಸಿತು. ಶುದ್ಧಾಂಗವಾಗಿ ಬೇಟೆಯೇ ಪ್ರಧಾನವಾಗಿದ್ದ ಜನಾಂಗಗಳಲ್ಲಿ ಗುಲಾಮಗಿರಿಯ ಹೆಸರೇ ಇರಲಿಲ್ಲ. ಬೇಟೆಗಾರರ ಹೆಂಡತಿ ಮಕ್ಕಳು ದೈಹಿಕ ಶ್ರಮವನ್ನು ವಹಿಸಲೇಬೇಕಾಗಿತ್ತು."*[೧]

ಈ ಉದ್ಧರಣೆ ಮಹಿಳೆಯ ಗುಲಾಮಗಿರಿ ಕುಟುಂಬದೊಳಗೆ ನಿರಂತರವಾಗಿತ್ತು ಎಂದು ಸ್ಪಷ್ಟಪಡಿಸುತ್ತದೆ. ಕುಟುಂಬದ ಸ್ವರೂಪ ಎಂದರೆ ಒಂದು ಬುಡಕಟ್ಟು ಜನಾಂಗದಲ್ಲಿ ತನ್ನ ತಾಯಿಯೊಂದಿಗೋ ಸೋದರನೊಂದಿಗೊ ಬಾಳುತ್ತಿದ್ದ ಮಹಿಳೆ ಮತ್ತು ಅವಳ ಮಕ್ಕಳು. ಕುಟುಂಬದ ಪ್ರಾರಂಭದ ಸ್ವರೂಪವೆಂದರೆ ಗಂಡನು ತನ್ನ ಹೆಂಡತಿಯ ಕುಟುಂಬ ಮತ್ತು ಬಣದವರೊಂದಿಗೆ ವಾಸಿಸಲು ಹೋಗುತ್ತಿದ್ದುದು. ತನ್ನ ಹೆಂಡತಿಯ ಕುಟುಂಬವನ್ನು ಸಾಕಬೇಕಾಗಿತ್ತು. ಹಾಗಾಗಿ 'ಕುಲ'ವನ್ನು ಸ್ತ್ರೀಮೂಲದಿಂದ ಗುರುತಿಸುತ್ತಿದ್ದರು. ಆಸ್ತಿಯು ಮಹಿಳೆಯ ಮೂಲಕ ಮುಂದಿನ ತಲೆಮಾರಿಗೆ ಹೋಗುತ್ತಿದ್ದರೂ ಆಕೆಗೆ ಆಸ್ತಿಯ ಮೇಲೆ ಯಾವ ಅಧಿಕಾರವೂ ಇರಲಿಲ್ಲ. ಆಕೆಯ ಬಳಕೆಯಾಗುತ್ತಿದ್ದುದು ಸಂಬಂಧವನ್ನು ಗುರುತಿಸುವುದಕ್ಕಾಗಿ ಮಾತ್ರ. ಆದಿಮ ಸಮಾಜದ ಮಹಿಳೆಯರನ್ನು ಶಕ್ತಿಯಲ್ಲಿ ಪುರುಷರಿಂದ ಬೇರ್ಪಡಿಸಲು ಸಾಧ್ಯವಿರಲಿಲ್ಲ.

> *"ಈಗ ಇರುವ ವ್ಯತ್ಯಾಸವೂ ಪರಿಸರದಿಂದ ಬಂದದ್ದೇ ಹೊರತು ಸಹಜವಾದದ್ದಲ್ಲ. ದೇಹಕ್ಕೆ ಸಂಬಂಧಪಟ್ಟ ಅಸಹಾಯಕತೆಗಳನ್ನು ಬಿಟ್ಟರೆ*

---

೧. ನಾಗರಿಕತೆಯ ಕಥೆ ಸಂಪುಟ–೧ –ವಿಲ್‌ಡ್ಯೂರಾಂಟ್ (ಪ್ರಸಂ.) ಪ್ರಧಾನ ಗುರುದತ್ – ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ – ಬೆಂಗಳೂರು – ೨೦೦೭ – ಪುಟ ೨೦

*ಮಹಿಳೆಯು ಪುರುಷನಿಗೆ ಎತ್ತರ, ಕಷ್ಟಸಹಿಷ್ಣುತೆ, ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಹಿಡಿಯುವ ಸಾಮರ್ಥ್ಯ-ಧೈರ್ಯ ಈ ಎಲ್ಲದರಲ್ಲೂ ಹೆಚ್ಚು ಕಡಿಮೆ ಸರಿಸಮನಾಗಿದ್ದಳು. ಅವಳಿನ್ನೂ ಒಂದು ಒಡವೆ, ಅಥವಾ ಸುಂದರವಾದ ವಸ್ತು ಅಥವಾ ಲೈಂಗಿಕ ಬೊಂಬೆಯಾಗಿರಲಿಲ್ಲ. ಆಕೆ ದಷ್ಟಪುಷ್ಟವಾದ ಪ್ರಾಣಿಯಾಗಿದ್ದಳು. ದೀರ್ಘಕಾಲ ಅಂದರೆ ಅನೇಕ ಘಂಟೆಗಳ ಕಷ್ಟಕರವಾದ ಕೆಲಸಗಳನ್ನು ಮಾಡಬಲ್ಲವಳಾಗಿದ್ದಳು ಮತ್ತು ಅಗತ್ಯಬಿದ್ದರೆ ತನ್ನ ಮಕ್ಕಳಿಗಾಗಿ ಅಥವಾ ಜನಾಂಗಕ್ಕಾಗಿ ಸಾಯುವವರೆಗೂ ಹೋರಾಡಲು ಸಿದ್ಧಳಿದ್ದಳು."*[೧]

ಆದಿಮ ಸಮಾಜದ ಆರ್ಥಿಕ ಪ್ರಗತಿ ಬಹುಪಾಲು ನಡೆದದ್ದು ಗಂಡಸರಿಗಿಂತ ಹೆಚ್ಚಾಗಿ ಹೆಂಗಸರಿಂದ. ಗಂಡು ಬೇಟೆ ಪಶುಪಾಲನೆಯಲ್ಲಿ ತೊಡಗಿದ್ದರೆ ಹೆಂಗಸು ತನ್ನ ಬಿಡಾರದ ಬಳಿಯೇ ವ್ಯವಸಾಯವನ್ನು ಅಭಿವೃದ್ಧಿ ಪಡಿಸಿ ತನ್ನ ಕುಟುಂಬದ ಆಹಾರದ ಸಮಸ್ಯೆಯನ್ನೂ ನಿವಾರಿಸಿದಳು. ಅಲ್ಲದೆ ಮುಂದಿನ ದಿನಗಳಲ್ಲಿ ಗೃಹಕೈಗಾರಿಕೆಗಳನ್ನು ಅಭಿವೃದ್ಧಿ ಪಡಿಸಿದಳು. ಕ್ರಮೇಣ ಕೃಷಿಗೆ ಲೋಹದ ಸಲಕರಣೆಗಳನ್ನು ಬಳಸುವುದು ಪ್ರಾರಂಭವಾಗಿ ಪುರುಷ ಅದರ ನಿರ್ವಹಣೆಯ ಜವಾಬ್ದಾರಿ ಹೊತ್ತುಕೊಂಡ. ಹೆಚ್ಚಿನ ದೈಹಿಕ ಶ್ರಮ ಬಳಕೆಯಿಂದ ಕೃಷಿಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳುತ್ತಾನೆ. ದನಕರುಗಳೂ ವ್ಯವಸಾಯೋತ್ಪನ್ನಗಳು ವರ್ಗಾವಣೆಗೊಳ್ಳುವ ಆಸ್ತಿಯಾದಾಗ ಮಹಿಳೆ ಲೈಂಗಿಕವಾಗಿ ಅಧೀನತೆಗೆ ಒಳಪಟ್ಟಳು. ನಂತರ ಪುರುಷ ಮಹಿಳೆ ತನಗೆ ನಿಷ್ಠಳಾಗಿರಬೇಕೆಂದು ಅಪೇಕ್ಷಿಸಿದನು. ತನ್ನ ಮಕ್ಕಳೆಂದು ಭಾವಿಸಲಾದವರಿಗೆ ಆಸ್ತಿ ವರ್ಗಾಯಿಸುವ ಮತ್ತು ತಂದೆತನವನ್ನು ಗೌರವಿಸುವಂತೆ ಮಾಡಲು ಸಾಧ್ಯವಾಯಿತು. ಹೀಗಾಗಿ ಗಂಡುಮಗನ ಮೂಲಕ ಆಸ್ತಿ ತಲೆಯಿಂದ ತಲೆಗೆ ವರ್ಗಾವಣೆಗೊಳ್ಳುವಂತಾಯಿತು. ತಾಯಿಯ ಹಕ್ಕು ತಂದೆಯದಾಯಿತು. ಒಂದು ಕುಟುಂಬದ ಹಿರಿಯ ಪುರುಷನು ಒಡೆಯನಾಗಿರುವ ಪಿತೃಪ್ರಧಾನ ಪದ್ಧತಿ ಅಸ್ತಿತ್ವಕ್ಕೆ ಬಂದಿರುವುದು ಇತಿಹಾಸದಿಂದ ತಿಳಿಯುತ್ತದೆ.

ಪಿತೃಪ್ರಧಾನ ಕುಟುಂಬ ಮಹಿಳೆಯ ಸ್ಥಾನಕ್ಕೆ ಮಾರಕವಾಯಿತು. ಎಲ್ಲ ಮುಖ್ಯವಿಷಯಗಳು ಕುಟುಂಬದಲ್ಲಿ ತಂದೆ ಅಥವಾ ಗಂಡ ಮತ್ತು ಹಿರಿಮಗನ ಮೂಲಕ ನಡೆಯಬೇಕಾಯಿತು. ಮಹಿಳೆ ಪುರುಷನ ಸ್ವತ್ತಾದಳು.

*"ಮದುವೆಯಲ್ಲಿ ಅವಳನ್ನು ಮಾರುಕಟ್ಟೆಯಲ್ಲಿ ಗುಲಾಮಳನ್ನು ಕೊಂಡುತರವಂತೆಯೇ, ಕೊಂಡುಕೊಂಡು ಬರಲಾಯಿತು. ಗಂಡ ಸತ್ತಾಗ ಅವಳನ್ನೂ ಇತರ ಆಸ್ತಿಯಂತೆ ಮುಂದಿನ ವಾರಸುದಾರರಿಗೆ ವರ್ಗಾಯಿಸಲಾಗುತ್ತಿತ್ತು. ಕೆಲವು ಸ್ಥಳಗಳಲ್ಲಿ (ನ್ಯಾಗಿನಿ, ನ್ಯೂ ಹೈಬ್ರ್ಯಾಪ್ಸ್*

---

೧. **ನಾಗರಿಕತೆಯ ಕಥೆ ಸಂಪುಟ-೧ -ವಿಲ್‌ಡ್ಯೂರಾಂಟ್ (ಪ್ರಸಂ.) ಪ್ರಧಾನ ಗುರುದತ್ - ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ - ಬೆಂಗಳೂರು - ೨೦೦೭ - ಪುಟ ೩೪**

*ಸಾಲೊಮನ್ ದ್ವೀಪಗಳು ಫೀಜಿ, ಇಂಡಿಯಾ ಮುಂತಾದ ಕಡೆಗಳಲ್ಲಿ) ಹೆಂಡತಿಯ ಕತ್ತುಹಿಸುಕಿ ಸಾಯಿಸಿ ಗಂಡನ ಶವದೊಡನೆ ಹೂಳಲಾಗುತ್ತಿತ್ತು. ಇಲ್ಲವೆ ಆಕೆ ಪರಲೋಕದಲ್ಲಿ ಗಂಡನಿಗೆ ಸೇವೆ ಸಲ್ಲಿಸಲೆಂದು ಇಹಲೋಕದಲ್ಲಿ ಆತ್ಮಹತ್ಯೆ ಮಾಡಿಕೊಳ್ಳಬೇಕಿತ್ತು."*[೧]

ಹೆಂಡತಿಯರನ್ನು ತನ್ನಿಷ್ಟದಂತೆ ನೋಡಿಕೊಳ್ಳುವ ಅಧಿಕಾರ ಗಂಡನಿಗೆ ಪ್ರಾಪ್ತವಾಯಿತು. ಗಂಡನು ತನ್ನ ಲೈಂಗಿಕ ಹಕ್ಕುಗಳನ್ನು ತನ್ನ ಕುಟುಂಬದಾಚೆಗೂ ವಿಸ್ತರಿಸಬಹುದಿತ್ತು. ಆದರೆ ಹೆಂಡತಿಯು ಮದುವೆಗಿಂತ ಮುಂಚೆ ಕನ್ಯೆಯಾಗಿರಬೇಕಿತ್ತು. ವಿವಾಹದ ನಂತರ ಗಂಡನಿಗೆ ನಿಷ್ಠಳಾಗಿರಬೇಕಿತ್ತು. ದ್ವಿಸ್ತರ ನೀತಿಯನ್ನು ಪಿತೃಪ್ರಧಾನ ಕುಟುಂಬಗಳು ಜೋಪಾನವಾಗಿ ನಿರ್ವಹಿಸಿಕೊಂಡು ಬಂದವು.

### ೬. <u>ಪಿತೃ ಪ್ರಧಾನ ವ್ಯವಸ್ಥೆಯಲ್ಲಿ ವಿವಾಹ</u>

'ವಿವಾಹ' ಎಂದರೆ ಮಹಿಳೆಗೆ ಸಮಾಜವು ನೀಡಿರುವ ಜವಾಬ್ದಾರಿ. ಮಹಿಳೆ ಎಲ್ಲ ಕಾಲದಲ್ಲೂ ವಿವಾಹವಾಗುತ್ತಾಳೆ. ಮದುವೆಯಾಗದ ಹೆಂಗಸು ವಿವರಣೆ ನೀಡಬೇಕಾಗುತ್ತದೆ. ವಿವಾಹವಾಗದ ಮಹಿಳೆ ತಪ್ಪಳೋ, ಬಂಡಾಯಗಾರ್ತಿಯೋ, ಅಥವಾ ವಿವಾಹ ಸಂಸ್ಥೆಯ ಬಗ್ಗೆ ನಿರಾಸಕ್ತಳೋ ಎಂಬೆಲ್ಲ ಪ್ರಶ್ನೆಗಳು ಏಳುತ್ತವೆ. ಹಾಗಾಗಿ ವಿವಾಹ ಸಂಸ್ಥೆಯ ಬಗ್ಗೆ ಚರ್ಚೆ ಮುಖ್ಯವಾಗುತ್ತದೆ.

ವಿಲ್‌ಡ್ಯೂರಾಂಟ್‌ರ ಪ್ರಕಾರ ವಿವಾಹವೆಂದರೆ

*"ಒಂದು ಗುಂಪಿನ ನೈತಿಕ ಸಂಹಿತೆಯ ಘಟಕಳಾಗಿರುವ ಈ ವಾಡಿಕೆಗಳ ಮೊದಲನೆಯ ಹೊಣೆಗಾರಿಕೆಯೆಂದರೆ ಲೈಂಗಿಕ ಸಂಬಂಧಗಳನ್ನು ನಿಯಂತ್ರಿಸುವುದು. ಏಕೆಂದರೆ ಭಿನ್ನಮತ, ಹಿಂಸೆ ಮತ್ತು ಸಂಭವನೀಯ ಅಧಃಪತನಕ್ಕೆ ಇವೇ ನಿರಂತರ ಮೂಲ. ಲೈಂಗಿಕ ನಿಯಂತ್ರಣದ ಮೂಲಭೂತ ರೂಪವೆಂದರೆ ವಿವಾಹ. ಇದನ್ನು ಸಂತಾನದ ಪೋಷಣೆಗಾಗಿ ಗಂಡುಹೆಣ್ಣಿನ ಜೊತೆಗೂಡುವಿಕೆ ಎನ್ನಬಹುದು. ಇದೊಂದು ಮಾರ್ಪಡಬಲ್ಲ ಹಾಗೂ ಹೆಚ್ಚು ಕಡಿಮೆಯಾಗುತ್ತಿರುವ ಸಂಸ್ಥೆಯನ್ನಬಹುದು. ಇದು ಇತಿಹಾಸದಲ್ಲಿ ನಾವು ಕಲ್ಪಿಸಿಕೊಳ್ಳಬಹುದಾದ ಎಲ್ಲಾ ರೀತಿಯ ರೂಹುಗಳನ್ನು ಹಾಗೂ ಪ್ರಯೋಗಗಳನ್ನು ಹಾದುಬಂದಿದೆ. ಜೊತೆಗಾರರ ಸಂಪರ್ಕವಿಲ್ಲದೆಯೇ ಮಕ್ಕಳ ಪೋಷಣೆಯ ಆದಿಮಾನವನ ರೀತಿಯಿಂದ ಶಿಶುಗಳ ಯೋಚನೆಯೇ ಇಲ್ಲದಿರುವ ಆಧುನಿಕ ಸಂಗಾತಿಗಳ ಸಹಚರ್ಯದವರೆಗೆ."*[೨]

---

೧. ನಾಗರಿಕತೆಯ ಕಥೆ ಸಂಪುಟ-೧ -ವಿಲ್‌ಡ್ಯೂರಾಂಟ್ (ಪ್ರಸಂ.) ಪ್ರಧಾನ ಗುರುದತ್ - ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ - ಬೆಂಗಳೂರು - ೨೦೦೬ - ಪುಟ ೩೫-೩೫

೨. ಅದೇ - ಪು - ಪು-೩೬-೩೮

ವಿವಾಹವೆಂಬ ಸಂಸ್ಥೆಯ ಉಗಮಕ್ಕೆ ದೈಹಿಕಾಕಾಂಕ್ಷೆಯೇ ಕಾರಣವಾಗಿರಲಾರದೆಂಬುದನ್ನು ಊಹಿಸಬಹುದು. ಕೆಲವು ಪ್ರಭಾವಶಾಲಿ ಆರ್ಥಿಕ ಉದ್ದೇಶಗಳು 'ವಿವಾಹ'ವೆಂಬ ಸಂಸ್ಥೆಯ ವಿಕಾಸಕ್ಕೆ ಕಾರಣವಾಗಿರಬಹುದು – ಪಿತೃಪ್ರಧಾನ ಕುಟುಂಬಗಳು ವಿವಾಹ ಸಂಸ್ಥೆಯನ್ನು ಹುಟ್ಟುಹಾಕಿ ವೈಯಕ್ತಿಕ ವಿವಾಹಗಳನ್ನು ಚಾಲ್ತಿಗೆ ತಂದಿರುವ ಸಾಧ್ಯತೆಗಳು ಕಂಡುಬರುತ್ತವೆ. ಗುಲಾಮರನ್ನು ಅಗ್ಗದ ಬೆಲೆಗೆ ಹೊಂದುವ ಇಚ್ಚೆಗನುಗುಣವಾಗಿ ಹಾಗೂ ತನ್ನ ಆಸ್ತಿಯನ್ನು ಇತರ ಪುರುಷರ ಮಕ್ಕಳಿಗೆ ಕೊಡುವುದಕ್ಕೆ ವಿರುದ್ಧವಾಗಿ ವೈಯಕ್ತಿಕ ವಿವಾಹಗಳು ಜಾರಿಯಲ್ಲಿದ್ದವು. ಬಹುಪತ್ನಿತ್ವ ಹೆಚ್ಚಾಗಿ ರೂಢಿಯಲ್ಲಿತ್ತು. ಇದಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಪುರುಷರ ಸಾವು ಕಾರಣವಾಗಿತ್ತು. 'ಇಟ್ಟುಕೊಳ್ಳುವ' ಪದ್ಧತಿಯೂ ರೂಢಿಯಲ್ಲಿತ್ತು ಆದರೆ 'ಏಕಪತ್ನಿತ್ವ'ವು ನ್ಯಾಯಬದ್ಧ ವ್ಯವಸ್ಥೆಯಾಗಿ ಜಾರಿಗೆ ಬಂದಿರುವುದನ್ನು ಇತಿಹಾಸದಿಂದ ಅರಿಯಬಹುದು.

> *"ಸ್ತ್ರೀ ಪುರುಷರ ಸಮಾಗಮವು ಯಾವುದೇ ರೂಪದಲ್ಲಿರಲಿ ಹೆಚ್ಚು ಕಡಿಮೆ ಎಲ್ಲ ಆದಿಮಾನವರಲ್ಲಿಯೂ ವಿವಾಹವು ಕಡ್ಡಾಯವೇ ಆಗಿತ್ತು. ಅವಿವಾಹಿತನಿಗೆ ಸಮಾಜದಲ್ಲಿ ಸ್ಥಾನಮಾನವಿರಲಿಲ್ಲ ಅಥವಾ ಆತನನ್ನು ಅರೆಪುರುಷ ಮಾತ್ರ ಎನ್ನಲಾಗುತ್ತಿತ್ತು, ಹಾಗೆಯೇ ತನ್ನದಲ್ಲದ ಪಂಗಡದವರನ್ನು ವಿವಾಹವಾಗುವುದು ಸಹ ಕಡ್ಡಾಯವಾಗಿರುತ್ತಿತ್ತು."*[1]

ಒಟ್ಟಾರೆ ಆದಿಮಾನವ ಲೈಂಗಿಕತೆಯನ್ನು ಆಹಾರದಂತೆ ಅವಶ್ಯಕತೆ ಮಾತ್ರ ಎಂದು ಭಾವಿಸಿದ್ದ. 'ವಿವಾಹ' ಎಂಬುದು ಆತನಿಗೆ ಪವಿತ್ರ ಬಂಧನವಾಗಿರಲಿಲ್ಲ. ಹೆಂಗಸಿನ ವಿಷಯದಲ್ಲಿ ಆರ್ಥಿಕ ವಿಕಾಸವು ವಿವಾಹ ಸಂಸ್ಥೆಗೆ ದಕ್ಕೆ ತರುತ್ತಿದೆ. ಇತ್ತೀಚೆಗೆ 'ವಿವಾಹ' ಎಂಬುದು ಇಬ್ಬರು ಸ್ವತಂತ್ರ ವ್ಯಕ್ತಿಗಳು ಒಬ್ಬರಿಗೊಬ್ಬರು ಒಪ್ಪಿಗೆ ನೀಡಿ ಒಟ್ಟಾಗಿ ಬದುಕಲು ಮಾಡಿಕೊಂಡ ಒಪ್ಪಂದವಾಗುತ್ತಿದೆ. ವಿವಾಹದ ಮುಖೇನ ಗಂಡು–ಹೆಣ್ಣು ಪರಸ್ಪರ ಜವಾಬ್ದಾರರು ಈ ಒಪ್ಪಂದ ಸ್ವಂತ ನೆಲೆಯದ್ದು. ಒಪ್ಪಂದ ಮುರಿದರೆ ಹಾದರ ಮಾಡಿದಂತೆ. ಇಬ್ಬರೂ ಬೇಕೆಂದಾಗ ವಿಚ್ಚೇದನವನ್ನು ಪಡೆಯಬಹುದು. ಹೆಣ್ಣಿಗೆ ಗಂಡು ಆಸರೆ ಎನ್ನುವ ಸನ್ನಿವೇಶ ಮಾಯವಾಗುತ್ತಿದೆ. ಇಂದಿಗೂ ವಿವಾಹ ಪಾರಂಪರಿಕ ಲಕ್ಷಣಗಳನ್ನು ಉಳಿಸಿಕೊಂಡಿದೆ. ಪುರುಷರಿಗಿಂತ ಮಹಿಳೆಯರ ಮೇಲೆ ಅದನ್ನು ಹಿಂಸೆಯಿಂದ ಹೇರಲಾಗುತ್ತದೆ. ಆಕೆಗೆ 'ವಿವಾಹ' ಬಿಟ್ಟರೆ ಸಾಮಾಜಿಕ ಬದುಕಿಗೆ ತೆರೆದುಕೊಳ್ಳಲು ಬೇರೆ ದಾರಿಗಳೇ ಇಲ್ಲ. ವಿವಾಹವಾಗದ ಹೆಣ್ಣು ಕುಟುಂಬದ ಹೊರೆ ಎಂದು ಭಾವಿಸಲಾಗುತ್ತದೆ. ಅವಿವಾಹಿತ ಮಹಿಳೆ ಲೈಂಗಿಕ ಸ್ವಾತಂತ್ರ್ಯ ಪಡೆಯದಂತೆ ಕಟ್ಟುಕಟ್ಟಳೆಗಳನ್ನು ರೂಪಿಸಲಾಗಿದೆ.

---

೧. ನಾಗರಿಕತೆಯ ಕಥೆ ಸಂಪುಟ–೧ –ವಿಲ್‌ಡ್ಯೂರಾಂಟ್ (ಪ್ರಸಂ.) ಪ್ರಧಾನ ಗುರುದತ್ – ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ – ಬೆಂಗಳೂರು – ೨೦೦೭ – ಪುಟ ೪೧

ಎಲ್ಲಾ ಯುವತಿಯರಿಗೆ 'ವಿವಾಹ'ವೇ ಮೊದಲ ಗುರಿ. ಆದರೆ ಯುವಕನಿಗೆ 'ವಿವಾಹ' ಮೊದಲ ಗುರಿಯಲ್ಲ. ಹುಡುಗಿಯರಿಗೆ ವಿವಾಹವಾಗುವಂತೆ ಒತ್ತಾಯಿಸಲಾಗುತ್ತದೆ. ಹೀಗಾಗಿ ಮದುವೆಗಳಿಗೆ ಸಾಮಾನ್ಯವಾಗಿ ಪ್ರೇಮದ ಬುನಾದಿ ಇರಲಿಲ್ಲ ಎನ್ನುವುದು ಗಮನಾರ್ಹವಾದುದು.

> *"ಸಮಾಜದ ಹಿತ ಕಾಯಲು ಗಂಡುಹೆಣ್ಣುಗಳು ಆರ್ಥಿಕವಾಗಿ ಮತ್ತು ಲೈಂಗಿಕವಾಗಿ ಒಂದಾಗಬೇಕೆಂಬುದು ಮೂಲ ಉದ್ದೇಶವೇ ಹೊರತು ಅವರಿಬ್ಬರ ಸುಖ ಸಂತೋಷಗಳಲ್ಲ."*[೧]

ಮಹಿಳೆಯ ಸೌಂದರ್ಯ, ಆಕರ್ಷಣೆಗಳಿಗಿಂತ ಸಾಮಾಜಿಕ ಸಂಬಂಧಗಳು ಮುಖ್ಯವಾಗುತ್ತವೆ. ಕುಟುಂಬ ನಿರ್ವಹಣೆ, ಮಕ್ಕಳ ಪಾಲನೆಗಳಿಗಾಗಿ ವಿವಾಹವಾಗುವುದು ತಮಗಾಗಿ ಅಲ್ಲ ಎಂದು ಸ್ಪಷ್ಟವಾಗುತ್ತದೆ. ಪುರುಷ ವಿವಾಹದಾಚೆಗಿನ ಸಂಬಂಧದಿಂದ ಸುಖ ಪಡೆಯಬಲ್ಲ ಮಹಿಳೆ ಮದುವೆಯಿಂದಾಗಿ ತನ್ನೆಲ್ಲ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಾಳೆ. ಸ್ವಾತಂತ್ರ್ಯವಿಲ್ಲದೆ ಪ್ರೀತಿಯೂ ಇಲ್ಲ ಸ್ವಂತಿಕೆಯೂ ಇಲ್ಲ. ಆದ್ದರಿಂದ ಅವಳು ಒಬ್ಬ ನಿರ್ದಿಷ್ಟ ವ್ಯಕ್ತಿಯನ್ನು ಪ್ರೀತಿಸುವುದನ್ನು ಬಿಟ್ಟುಕೊಟ್ಟು, ಪುರುಷನ ರಕ್ಷಣೆಯಲ್ಲಿರುವುದನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ. ಹಾಗಾಗಿ ತಾಯಿಯಾಗಿ ಹೆಂಡತಿಯಾಗಿ ರೂಪಿಸಿಕೊಳ್ಳುವ ಸಂಬಂಧಗಳು ವ್ಯಕ್ತಿಗತ ನೆಲೆಯಲ್ಲಿರುವುದಿಲ್ಲ. ವಿವಾಹದ ಆಚೆಗೆ ಅವಳಿಗೆ ಲೈಂಗಿಕ ಚಟುವಟಿಕೆಗಳಿಲ್ಲ. ಒಟ್ಟಾರೆ ಸಮಾಜದ ಹಿತಕ್ಕಾಗಿ ತಮ್ಮ ಹಿತಾಸಕ್ತಿಗಳನ್ನು ಹತ್ತಿಕ್ಕಿಕೊಳ್ಳಬೇಕೆಂಬ ನಿಯಮವೇ ಇದೆ. ಆದರೂ ಗಂಡಸು ಕೆಲವು ಸವಲತ್ತುಗಳನ್ನು ಪಡೆಯುತ್ತಾನೆ. ವಿವಾಹವಲ್ಲದ ಅದರಾಚೆಗಿನ ಸಂಬಂಧಗಳಿಂದ ಕೂಡ ಪುರುಷ ಸುಖ ಹೊಂದಬಲ್ಲ ಇದರಿಂದ 'ವಿವಾಹ' ಎನ್ನುವುದು ಸ್ತ್ರೀಪುರುಷರಿಬ್ಬರಿಗೂ ಬಂಧನವಾಗಬಾರದೆಂದು ಸಿಮನ್‌ದ ಬೋವಾ ಹೀಗೆ ಅಭಿಪ್ರಾಯ ಪಡುತ್ತಾರೆ.

> *"ದಾಂಪತ್ಯದ ಗುಲಾಮಗಿರಿ ಗಂಡನಿಗೆ ದಿನದಿನದ ತಲೆನೋವು, ಹೆಂಡತಿ ಗಂಡನಿಗೆ ಹೊರೆಯೇ ಎನಿಸಿದರೂ ಆಕೆ ಇಲ್ಲದೆ ಇರುವಷ್ಟು ಸುಲಭವಾಗಿ ಆತನಿಲ್ಲದೆ ಆಕೆ ಇರಲಾರಳು. ಆತ ತೊರೆದರೆ ಅವಳ ಬದುಕೆ ನಿರ್ನಾಮವಾಗುತ್ತದೆ. ಹೆಂಗಸಿನ ಪರಾವಲಂಬಿ ಲಕ್ಷಣ ಅವಳಲ್ಲಿ ಅಂತಸ್ಥವಾಗಿ ಬಿಟ್ಟಿರುತ್ತವೆ. ಅವಳು ತೋರಿಕೆಯ ನಿರ್ಭಿಡೆಯನ್ನು ಪ್ರದರ್ಶಿಸುವಾಗಲೂ ಗುಲಾಮಳಾಗಿಯೇ ಇರುತ್ತಾಳೆ. ಗಂಡ ಮಾತ್ರ ಮೂಲತಃ ಸ್ವತಂತ್ರ. ಅವನ ಬಂಧನ ಯಾರೂ ಹೇರಿದ್ದಲ್ಲ."*[೨]

---

೧. ದ ಸೆಕೆಂಡ್ ಸೆಕ್ಸ್– ಸಿಮೊನ್ ದ ಬೋವಾ – (ಅನು) ಶ್ರೀಮತಿ ಹೆಚ್.ಎಸ್. – ಅಧ್ಯಯನ ಮಂಡಲ – ಬೆಂಗಳೂರು – ೨೦೦೭– ಪು – ೪೪೭

೨. ಅದೇ ಪು– ಪು – ೫೦೪

ಮದುವೆ ಹೆಣ್ಣಿನ ಲೈಂಗಿಕ ಜೀವನಕ್ಕೆ ನೈತಿಕ ಬೆಂಬಲವನ್ನು ನೀಡುವುದೆಂದು ತಿಳಿಯಲಾಗಿದೆಯಾದರೂ ಇದರಿಂದಲೇ ಅವಳನ್ನು ಗುಲಾಮಗಿರಿಗೆ ತಳ್ಳಲಾಗಿದೆ. ವಿವಾಹದ ಸಂಬಂಧದಲ್ಲಿ ಗಂಡಿನಲ್ಲಿರಬಹುದಾದ ಬಯಕೆಗಳು ಹೆಂಗಸಿನಲ್ಲಿದ್ದರೆ ಅವು ಅವಳ 'ಅನೀತಿಯುತ' ಎನಿಸುತ್ತದೆ. ಹಾಗಾಗಿ 'ವಿವಾಹ' ಎಂಬ ಗೌರವಾನ್ವಿತ ವ್ಯವಸ್ಥೆ ಹೆಣ್ಣನ್ನು ಒಂದು ವಸ್ತುವೆಂದು ಪರಿಗಣಿಸುವ ವ್ಯಾವಹಾರಿಕ ನೆಲೆಗೆ ತರುವುದಾಗಿತ್ತು ಎಂದು ಭಾವಿಸಬಹುದು. ಹೆಣ್ಣು ವಿವಾಹದಲ್ಲಿ ಮತ್ತೊಮ್ಮೆ ತನ್ನ ಜೀವನದಲ್ಲಿ ಉತ್ಸಾಹವನ್ನು ಕಂಡುಕೊಳ್ಳ ತೊಡಗುತ್ತಾಳೆ. ಆದರೆ ಆ ಸುಖದ ಕಲ್ಪನೆಯ ಮನೆ ಲೋಕದಿಂದ ಬೇರೆಯಾಗಿ ಬೇರೊಂದು ಲೋಕ ಕಟ್ಟಲು ಸಿಕ್ಕ ಜಾಗ. ಅದರ ಗೋಡೆಗಳೊಳಗೆ ಕುಟುಂಬ ಬೇರೂರಿಕೊಳ್ಳುತ್ತವೆ. ಹಿಂದಿನ ದಿನಗಳು ಜಡವಾಗಿ ನೆಲೆಗೊಂಡು ನಾಳೆಯ ದಿನಗಳು ಸುರಕ್ಷಿತವೆಂಬ ಭಾವನೆ ಮೂಡಿಸುತ್ತವೆ. ಪ್ರತಿದಿನವೂ ತಂತಮ್ಮ ನಿಗಧಿತ ಪರಿಧಿಯೊಳಗೆ ಸುತ್ತುತ್ತವೆ. ಆದಿಮ ಕುಟುಂಬಗಳಲ್ಲಿ 'ಮನೆಯೊಡತಿ' ಯಾದವಳು ಅದೇ ಪಾತ್ರವನ್ನು ಈಗಲೂ ನಿರ್ವಹಿಸುತ್ತಿದ್ದಾಳೆ. 'ಮನೆ' ಎನ್ನುವುದು ಇಡೀ ಲೋಕದ ಪ್ರತೀಕವಾಗಿ ರೂಪುಗೊಂಡು ಅವಳಿಗೆ ಅದೊಂದೇ ಶಾಶ್ವತವಾಗುತ್ತದೆ. ಆ ಮನೆಯ ಅಲಂಕಾರವನ್ನು ನೋಡುವವರು ಅವಳ ಬದುಕಿನ ಜೀವನ ಮಟ್ಟವನ್ನು ಗ್ರಹಿಸುತ್ತಾರೆ. ಹೀಗಾಗಿ ಮನೆಯೇ ಅವಳಿಗೆ ಸರ್ವಸ್ವ. ಅವಳ ಸಾಮಾಜಿಕ ಮೌಲ್ಯಗಳ ಅಭಿವ್ಯಕ್ತಿ. ಆಕೆ ಇರುವುದರಲ್ಲೆ ತನ್ನನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾಳೆ.

ಮನೆಯ ಒಳಗಿದ್ದೇ ಗಂಡನನ್ನು ಸಂತೋಷಪಡಿಸಿ, ತಾನು ಹಾಕಿದ ಚೌಕಟ್ಟಿನೊಳಗೆ ಆತ ಸಂತೋಷಪಡಬೇಕೆಂದು ಬಯಸುತ್ತಾ ಬಂದಿದ್ದಾಳೆ. ಆದರೆ ಇದರಿಂದಲೇ ಸಂತೃಪ್ತಿಪಡುವ ಕಾಲವೊಂದಿತ್ತು. ಗಂಡಸರು ಆದರ್ಶ ಗಂಡಂದಿರಾಗಿದ್ದು, ಮನೆ ಮತ್ತು ಕುಟುಂಬದ ಬಗ್ಗೆ ಅವರಿಗೆ ಸೆಳೆತವಿತ್ತು. ಮಕ್ಕಳೂ ಅವರ ಪರಂಪರೆ ಆಚರಣೆಯನ್ನು ಅನುಸರಿಸುತ್ತಿದ್ದರು. ಇಂದಿಗೂ ಶ್ರೀಮಂತ ರೈತಕುಟುಂಬಗಳಲ್ಲಿ ಮಹಿಳೆ ಉನ್ನತ ಸ್ಥಾನವನ್ನು ಹೊಂದಿದ್ದಾಳೆ.

ವಿವಾಹದ ಬಂಧನದಲ್ಲಿ ಸಿಲುಕಿದ ಮಹಿಳೆಗೆ ತನ್ನ ಬಂಧನವನ್ನೇ ತನ್ನ ಸಾಮ್ರಾಜ್ಯವನ್ನಾಗಿ ಪರಿವರ್ತಿಸಿಕೊಳ್ಳುವ ಹೊಣೆ ಬೀಳುತ್ತದೆ. ಕೊನೆಗೆ ತನ್ನ ಹೋರಾಟವನ್ನು ಬಿಟ್ಟುಕೊಟ್ಟು ಕುಟುಂಬದೊಳಗೆ ಸ್ವಾತಂತ್ರ್ಯವನ್ನು ಪಡೆದುಕೊಳ್ಳುತ್ತಾಳೆ. ವಿವಾಹಿತಳಾದ ಮೇಲೆ ಮನೆಯೊಳಗೆ ಬಂಧಿಯಾಗುವುದು ಅವಳಿಗೆ ಖಿನ್ನತೆಯನ್ನು ತರುತ್ತದೆ. ಆದರೆ ಬಾಲಕಿಯಾಗಿದ್ದಾಗ ಪೂರ್ಣ ನಿಸರ್ಗವೇ ಅವಳದಾಗಿತ್ತು. ಈಗ ಮನೆ ಒಂದು ಬಗೆಯ ಪ್ರತಿವಿಶ್ವ, ಮನೆಕೆಲಸ ಅವಳ ನಿತ್ಯಾವರ್ತದ ವರ್ತುಲವಾಗಿ ಇದರಿಂದ ಅವಳಿಗೆ ಬಿಡುಗಡೆಯೇ ಇಲ್ಲ. ಇದರೊಳಗೆ

ಅವಳ ವ್ಯಕ್ತಿತ್ವ ಬೇರುಬಿಡುವುದೇ ಇಲ್ಲ. ಇದೇ ಮನೆಗೆಲಸದ ಯಾತನೆಯಲ್ಲಿ ಬದುಕು ಕೊನೆಯಾಗುತ್ತದೆ. 'ಮನೆಗೆಲಸ ಮಾಡಲಾರೆ' ಎಂದು ಶಪಥಮಾಡುವ ಹುಡುಗಿಯೂ ತನ್ನ ತಾಯಿಯ ಹಾಗೆ ಮನೆಕೆಲಸ ಮಾಡುತ್ತಾಳೆ. ಕೊಳೆ ಕಸಗಳ ವಿರುದ್ಧ ಹೋರಾಡುತ್ತ ಕೊನೆಗೆ ಎಲ್ಲಾ ಬಗೆಯ ಜೀವಂತ ಚಟುವಟಿಕೆಗಳಿಗೆ ಕಾರಣವಾದ ಬದುಕನ್ನೇ ನಾಶಮಾಡಿಕೊಳ್ಳುತ್ತಾಳೆ. ತಾನು ಅಲಂಕರಿಸಿದ ಮನೆ, ತಾನು ಮಾಡಿದ ಅಡಿಗೆ ಗಂಡನಿಗಾಗಿ ಎನಿಸಿ ತಾನು ಕಟ್ಟಿಕೊಂಡ ಚೌಕಟ್ಟಿನೊಳಗೆ ಆತ ಸಂತೋಷ ಪಡಬೇಕೆಂದು ಬಯಸುತ್ತಾಳೆ. ಆದರೆ ಮನೆಯೊಳಗಿನ ಕೆಲಸ ಅವಳಿಗೆ ಸ್ವಾಯತ್ತತೆ ತರುವುದಿಲ್ಲ. ಮನೆಯೊಡತಿ ಎಂದೆಂದೂ ಗಂಡ, ಮಕ್ಕಳ ಅವಲಂಬಿ. ಅಧೀನತೆಯ ಬದುಕು ಸಾಗಿಸುವ ಮಹಿಳೆ ಇದರಲ್ಲೆ ತನ್ನ ಘನತೆಯನ್ನು ಕಂಡುಕೊಳ್ಳಬೇಕು.

ವಿವಾಹಿತ ಮಹಿಳೆ ಹೊಸ ಜವಾಬ್ದಾರಿಗಳಿಗೆ ಭಯಪಡುತ್ತಾಳೆ. ಗಂಡನನ್ನು ತನ್ನ ತಂದೆ ತಾಯಿಯ ಸ್ಥಾನದಲ್ಲಿ ನೋಡಲಾರಳು. ಹೊಸ ಮನೆಯ ಏಕಾಂತದಲ್ಲಿ ಅಪರಿಚಿತ ವ್ಯಕ್ತಿಯೊಡನೆ ಬದುಕು ಆರಂಭಿಸುವ ಆಕೆ ತನ್ನ ತಾಯ್ತನದ ಸರದಿಗಾಗಿ ಕಾಯುವವಳು. ಎಲ್ಲ ದಿನಗಳನ್ನು ಏಕಾಂಗಿತನದಿಂದ ನಿಭಾಯಿಸುತ್ತಾಳೆ. 'ವಿವಾಹ' ಪುರುಷನಿಗೂ ಸಂಕಷ್ಟವಾಗಿದ್ದು, ಬಾಲ್ಯದ ದಿನಗಳಿಂದ ಅವನು ಒಂಟಿಯಾಗಿರುವುದಿಲ್ಲ. ಸಹೋದರಿಯರಂತೆ ಮನೆಗೆ ಅಂಟಿಕೊಂಡಿರುವುದಿಲ್ಲ. ಶಾಲಾಕಾಲೇಜುಗಳ ಸ್ನೇಹಿತರು ಅವನೊಂದಿಗಿರುತ್ತಾರೆ. ವಯಸ್ಕ ಜೀವನ ಆರಂಭವಾಗುತ್ತಿದ್ದಂತೆ ಸ್ನೇಹಿತರ ಗುಂಪನ್ನು ತೊರೆಯುತ್ತಾನೆ. ತಾನು ಒಂಟಿಯಾಗುವ ಸಂದರ್ಭದಲ್ಲಿ ವಿವಾಹವಾಗುವ ನಿರ್ಧಾರ ಮಾಡುತ್ತಾನೆ. ಅದರೆ ಮಹಿಳೆಗೆ ಅಂತಹ ಸ್ವಾತಂತ್ರ್ಯ, ಆಯ್ಕೆಗಳಿರುವುದಿಲ್ಲ. ವಿವಾಹದ ನಂತರ ಅವರಿಬ್ಬರ ನಡುವೆ ಇರುವ ಪರಸ್ಪರ ಸಂಬಂಧದ ಸಮಸ್ಯೆ ಮಹಿಳೆಯನ್ನು ಹೆಚ್ಚಾಗಿ ಕಾಡುತ್ತದೆ. 'ವಿವಾಹ' ಲೈಂಗಿಕ ನೆಲೆಯಲ್ಲಿರುವಂತೆ ಸಾಮಾಜಿಕ ನೆಲೆಯನ್ನೂ ಹೊಂದಿರುವುದೇ ಒಂದು ವಿರೋಧಭಾಸ. ಗಂಡನನ್ನು ರಕ್ಷಕ, ಪಾಲಕ, ಶಿಕ್ಷಕ ಎಂದೆಲ್ಲ ಭಾವಿಸುವುದು ಅವನ ಅನುಭವದಲ್ಲಿ ಪಾಲ್ಗೊಳ್ಳುವುದು ಅವಳಿಗೆ ಇಷ್ಟವಾದುದಲ್ಲ. ಅವಳಲ್ಲಿರುವ ಧಾರ್ಮಿಕ ನಂಬಿಕೆಗಳನ್ನು ಮತ್ತು ಮೂಢನಂಬಿಕೆಗಳನ್ನು ಪುರುಷ ಬದಲಾಯಿಸುವ ತಂಟೆಗೆ ಹೋಗುವುದಿಲ್ಲ. 'ದಂಪತಿ'ಗಳೆಂದರೆ ಏಕಾಂಗಿತನವನ್ನು ಕಾಯ್ದುಕೊಂಡು ಸ್ವಾತಂತ್ರ್ಯವನ್ನು ಕಳೆದುಕೊಂಡವರಾಗಿ ಬದುಕುತ್ತಾ ಬಂದವರೆಂದು ಭಾವಿಸಬಹುದು.

## ೭. ಆಧುನಿಕ ಸಮಾಜದಲ್ಲಿ ವಿವಾಹ ಪದ್ಧತಿ

ಸಾಂಪ್ರದಾಯಿಕ ವಿವಾಹಗಳಲ್ಲಿ ಈಗ ಬದಲಾವಣೆಯಾಗುತ್ತಿದೆ. ಆದರೆ ಶೋಷಣೆಯಲ್ಲಿ ಬದಲಾವಣೆಯಾಗಿಲ್ಲ. ಇದನ್ನು ಹೆಣ್ಣುಗಂಡು ಇಬ್ಬರೂ ತಮ್ಮದೇ ಬಗೆಯಲ್ಲಿ ಅನುಭವಿಸುತ್ತಾರೆ. ಈಗ ಆಯ್ಕೆಗೆ ಅವಕಾಶಗಳಿವೆ. ಬೇರೆಯಾಗುವ

ಅವಕಾಶಗಳೂ ಹೆಚ್ಚಿವೆ. ಹೆಣ್ಣು ಗಂಡಿನ ನಡುವೆ ವಯಸ್ಸು, ಸಂಸ್ಕೃತಿಯ ಅಂತರಗಳೂ ಈಗ ಕಡಿಮೆಯಾಗಿವೆ. ಹೆಣ್ಣು ಬಯಸುವ ಮುಕ್ತತೆ ಗಂಡಿಗೆ ಒಪ್ಪಿಗೆಯಾಗುತ್ತಿದೆ. ಮನೆಕೆಲಸಗಳನ್ನು ಸಮಾನ ಹಂಚಿಕೊಳ್ಳುತ್ತಾನೆ. ಕ್ರೀಡೆ, ಸಂಗೀತ, ಸಂಘ ಸಂಸ್ಥೆಗಳಲ್ಲಿ ಪಾಲ್ಗೊಳ್ಳುತ್ತಾಳೆ. ಗಂಡನ ಬರವಿಗಾಗಿ ಹಾತೊರೆಯುವುದಿಲ್ಲ. ಒಂದಿಷ್ಟು ಆದಾಯ ತರುವ ವೃತ್ತಿಯಲ್ಲೂ ತೊಡಗುತ್ತಿದ್ದಾಳೆ. ಇದರಿಂದ ಪರಿಪೂರ್ಣತೆ ದೊರಕಿದೆ ಎಂದು ಭಾವಿಸಲಾಗುವುದಿಲ್ಲ. ಸಮಾಜದಲ್ಲಿ ಬೆರೆತ ಪುರುಷ ಹಣಕಾಸಿನ ಹಿಡಿತವನ್ನು ಹೊಂದಿರುವವರೆಗೂ ಅವಳ ನಿರ್ಧಾರಗಳಿಗೆ ಅವಕಾಶವಿಲ್ಲ.

> *"ತಾವು ರೂಪಿಸಿದ ವಿವಾಹ ಸಂಸ್ಥೆಯ ಶೋಷಣೆಗೆ ಇಬ್ಬರೂ ತುತ್ತಾಗುತ್ತಾರೆ. ಗಂಡ ಹೆಂಡತಿಯನ್ನು ಶೋಷಿಸುತ್ತಾನೆ. ಎಂದರೆ ಅದು ಗಂಡನಿಗೆ ಅಪಥ್ಯ. ತಾನೇ ಶೋಷಿತನೆಂದು ತಿಳಿಯುತ್ತಾನೆ. ಅದೂ ನಿಜ. ಆದರೆ ಇದು ಪುರುಷ ನಿರ್ಮಿತ ಕಟ್ಟುಪಾಡು, ಪುರುಷರು ಕಟ್ಟಿದ ಸಮಾಜ. ಅವರ ಆಸಕ್ತಿಗಳಿಗೆ ಇಲ್ಲಿ ಬೆಲೆ. ಇದು ಹೆಂಗಸಿನ ಸನ್ನಿವೇಶವನ್ನು ಹೇಗೆ ರೂಪಿಸಿದೆಯೆಂದರೆ, ಅದು ಈಗಿರುವಂತೆ ಗಂಡು-ಹೆಣ್ಣುಗಳಿಬ್ಬರಿಗೂ ಯಾತನೆಯನ್ನು ನೀಡುವಂತಿದೆ."*[೧]

ಇಂದಿಗೂ ವಿವಾಹ ಪಾರಂಪರಿಕ ಲಕ್ಷಣನ್ನುಳಿಸಿಕೊಂಡಿದೆ. ವಿವಾಹ ಬಿಟ್ಟರೆ ಸಾಮಾಜಿಕವಾಗಿ ತೆರೆದುಕೊಳ್ಳಲು ಮಹಿಳೆಗೆ ಬೇರೆ ದಾರಿಯೇ ಇಲ್ಲ. ಅವಿವಾಹಿತ ಮಹಿಳೆ ಯಾರಿಗೂ ಬೇಡದ ವಸ್ತು. ತಂದೆ, ತಾಯಿ, ಸೋದರರಿಗೆ ಹೊರೆಯಾಗಿ ಆಳಾಗಿ ದುಡಿಯುವವಳು. ಮನೆಯಿಂದ ಹೊರಬರಲಾಗದೆ ತನ್ನ ಬದುಕನ್ನು ತಾನೇ ನಿರ್ವಹಿಸಲಾರದ ಸ್ಥಿತಿಯಲ್ಲಿ ಅವಳು ಬಿಡುಗಡೆ ಪಡೆದರೂ ವೃತ್ತಿಗಿಂತ ವಿವಾಹವೇ ಮುಖ್ಯವಾಗುತ್ತದೆ. ಹೆಚ್ಚು ಹಣ ತರುವ ಉದ್ಯೋಗಕ್ಕಿಂತ 'ವಿವಾಹ' ಹೆಚ್ಚಿನ 'ಸೌಲಭ್ಯ' ನೀಡುತ್ತದೆ. ಏನೇ ಆದರು 'ವಿವಾಹ' ನಾಳಿನ ಲೋಕದಲ್ಲಿ ಉಳಿದುಕೊಳ್ಳುವುದು ಸಮಾಜ ರಚನೆಯನ್ನು ಅವಲಂಬಿಸುತ್ತದೆ. ಹಾಗೂ ಹೆಣ್ಣು ಗಂಡಿನ 'ಆಸರೆ' ಎನ್ನುವ ಸನ್ನಿವೇಶ ಮಾಯವಾಗುತ್ತಿದೆ. ಉದ್ಯೋಗ ಬಯಸಿ ಹೊರಟ ಮಹಿಳೆ ಹಳೆಯ ವೈವಾಹಿಕ ಸ್ವರೂಪವನ್ನು ಸಾಮಾಜಿಕ ಮೌಲ್ಯಗಳನ್ನು ಉಳಿಸಿಕೊಂಡ ಸಮಾಜದಲ್ಲಿ ಬದುಕುತ್ತಿದ್ದಾಳೆ. ಆಧುನಿಕ ವಿವಾಹಗಳು ಸಮಾನತೆಯನ್ನು ರೂಪಿಸುವುದರ ಕಡೆ ಹೆಚ್ಚು ಗಮನಹರಿಸುವುದು ವ್ಯವಸ್ಥೆಯ ಮುಂದಿರುವ ಸವಾಲು.

## ೮. ನಾಗರಿಕ ಸಮಾಜದಲ್ಲಿ ವೈಧವ್ಯಾಚರಣೆ

ಹೆಣ್ಣಿನ ಸ್ಥಾನಮಾನದಲ್ಲಾದ ವಿಕಾಸವು ಒಂದು ನಿರಂತರ ಪ್ರಕ್ರಿಯೆಯಾಗಿರಲಿಲ್ಲ. ಮಾಹಾನ್ ದಾಳಿಗಳು ನಡೆದಾಗ ನಾಗರಿಕತೆಯ ಬುಡವೇ

---

೧. ದ ಸೆಕೆಂಡ್ ಸೆಕ್ಸ್- ಸಿಮೋನ್ ದ ಬೋವಾ - (ಅನು) ಶ್ರೀಮತಿ ಹೆಚ್.ಎಸ್.-ಅಧ್ಯಯನ ಮಂಡಲ-ಬೆಂಗಳೂರು - ೨೦೦೭- ಪು - ೫೦೪

ಅಲ್ಲಾಡತೊಡಗಿತು. ರಾಜರ ಆಡಳಿತದ ನ್ಯಾಯಪದ್ಧತಿಗಳು ಅನೇಕ ವಿರೋದಾಭಾಸಗಳನ್ನು ಹೊಂದಿ ಜನರ ಮೇಲೆ ಹೇರುವಲ್ಲಿ ಯಶಸ್ವಿ ಯಾಯಿತು. ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸನ್ನಿವೇಶಗಳು ತಲೆಕೆಳಗಾದವು. ಮಾತೃಪ್ರಧಾನ ಕುಟುಂಬವು ಪಿತೃಪ್ರಧಾನವಾಗಿ ಮಹಿಳೆಯ ಸ್ಥಾನಕ್ಕೆ ಮಾರಕವಾಯಿತು. ಎಲ್ಲ ಮುಖ್ಯವಾದ ವಿಷಯಗಳಲ್ಲೂ ಮಹಿಳೆ, ಮೊದಲು ತಂದೆಯ ನಂತರ ಹಿರಿಯ ಮಗನ ನಂತರ ಗಂಡನ ಸ್ವತ್ತಾದರು. ಮದುವೆಯಲ್ಲಿ ಅವಳನ್ನು ಮಾರುಕಟ್ಟೆಯಿಂದ ಗುಲಾಮಳನ್ನು ಕೊಂಡು ತರುವಂತೆ ಕೊಂಡು ತರಲಾಯಿತು. ಧರ್ಮ ಮತ್ತು ಸಮಾಜದ ನಡುವಣ ಸ್ವಲ್ಪಮಟ್ಟಿನ ಸಂಘರ್ಷವು ಪ್ರತಿ ನಾಗರಿಕತೆಯ ಉನ್ನತ ಹಂತದ ಲಕ್ಷಣಗಳಾಗಿ ಕಂಡು ಬರುತ್ತವೆ. ಪುರುಷ ಮತ್ತು ಮಹಿಳೆಯರ ಅಸಮಾನತೆ ಆದಿಸಮಾಜದ್ದಲ್ಲ ನಾಗರಿಕತೆ ಬೆಳೆದಂತೆ ಮಹಿಳೆ ಪುರುಷನ ಅಧೀನಳಾಗುತ್ತಾ ಬಂದಿದ್ದಾಳೆ.

ಕ್ರಿ.ಶ. ಸುಮಾರು ೬ನೇ ಶತಮಾನದಿಂದ ೧೭ನೇ ಶತಮಾನದವರೆಗೆ ವಿಸ್ತರಿಸಿಕೊಂಡ ಮಧ್ಯಕಾಲೀನಯುಗದಲ್ಲಿ ಮೊದಲ ಹಂತದ ಊಳಿಗ ಮಾನ್ಯ ಪದ್ಧತಿ ಹುಟ್ಟಿಕೊಂಡಿತು. ರಾಜರ ಆಳ್ವಿಕೆಯಲ್ಲಿ ಪ್ರಭುಸಂಹಿತೆಯನ್ನು ಒಪ್ಪಿ ನಡೆಯುತ್ತಿದ್ದರು. ಆ ವೇಳೆಗೆ ಸ್ಮೃತಿಕಾರರ ಸಾಮಾಜಿಕ ಕಾನೂನುಗಳು ರಚನೆಯಾಗಿ ಪ್ರಚಲಿತದಲ್ಲಿದ್ದವು. ಅವು ಧಾರ್ಮಿಕ ಶಾಸನಗಳಾಗಿ ಎಲ್ಲರೂ ಕ್ರಮವಾಗಿ ಅನುಸರಿಸುತ್ತಿದ್ದರು. ಆಗ ಹೆಣ್ಣಿನ ಸ್ಥಿತಿ ಮತ್ತಷ್ಟು ಹೀನಾಯವಾಯಿತು. ಅದರಲ್ಲೂ ಹನ್ನೊಂದನೇ ಶತಮಾನದವರೆಗಿನ ಸಾಮಾಜಿಕ ವ್ಯವಸ್ಥೆಯು ಬಲಶಾಲಿಗಳ ಕೈವಶವಾಯಿತು. ಆಸ್ತಿಯ ಹಕ್ಕನ್ನು ಹೊಂದಲು ಸೈನ್ಯದ ಬಲವನ್ನು ಬಳಸುತ್ತಿದ್ದರು. ಆದರೆ ಮಹಿಳೆಯರಿಗೆ ಅವಕಾಶಗಳಿರಲಿಲ್ಲ. ಗಂಡು ಉತ್ತರಾಧಿಕಾರಿಗಳಿಲ್ಲದಿದ್ದಾಗ ಆಸ್ತಿಯ ಹಕ್ಕನ್ನು ಪಡೆಯುತ್ತಿದ್ದಳು. ಅವಳು ಸ್ವತ್ತಿನ, ವ್ಯವಸ್ಥೆಯ ಭಾಗವಾಗಿದ್ದರೂ ಕಟ್ಟುಪಾಡುಗಳಿಂದ ಹೊರಬಂದಿರಲಿಲ್ಲ.

> *"ಸುಮಾರು ಹನ್ನೆರಡನೇ ವಯಸ್ಸಿಗೆ ಒಬ್ಬ ಜಮೀನುದಾರನಿಗೆ ಮದುವೆ ಮಾಡಿಕೊಡುತ್ತಿದ್ದರು. ಹೆಚ್ಚು ಮದುವೆಯಾದಷ್ಟು ಅವಳಿಗೆ ಹೆಚ್ಚು ಆಸ್ತಿ ಪಡೆಯುವುದು ಸಾಧ್ಯವಿತ್ತು. ಹಾಗಾಗಿ ಮದುವೆ ಮುರಿದು ಬೀಳುವ ಪ್ರಸಂಗಗಳು ಹೆಚ್ಚಿದವು. ಚರ್ಚ್‌ಕೂಡ ಈ ವಂಚನೆಗೆ ಒತ್ತಾಸೆ ನೀಡುತ್ತಿತ್ತು. ರಕ್ತ ಸಂಬಂಧಿಗಳಲ್ಲದೆ ಬಹುದೂರದ ಸಂಬಂಧಿಗಳ ನಡುವೆ ನಡೆದ ಮದುವೆಗಳನ್ನು ಮುರಿದು ಹಾಕಲು ಕುಂಟು ನೆಪಗಳನ್ನು ಸುಲಭವಾಗಿ ಹುಡುಕುತ್ತಿದ್ದರು. ಹೀಗಾಗಿ ಹನ್ನೊಂದನೆಯ ಶತಮಾನದಲ್ಲಿ ಹಲವು ಹೆಂಗಸರು ನಾಲ್ಕೈದು ಬಾರಿ ಮದುವೆಯಾಗಿದ್ದುಂಟು. ವಿಧವೆಯಾದ ಕೂಡಲೇ ಅವಳು ಹೊಸ ಒಡೆಯನನ್ನು ಒಪ್ಪಿಕೊಳ್ಳಬೇಕಿತ್ತು."*[೧]

---

೧. ದ ಸೆಕೆಂಡ್ ಸೆಕ್ಸ್– ಸಿಮೋನ್ ದ ಬೋವಾ – (ಅನು) ಶ್ರೀಮತಿ ಹೆಚ್.ಎಸ್. – ಅಧ್ಯಯನ ಮಂಡಲ – ಬೆಂಗಳೂರು – ೨೦೦೭– ಪು–೧೪೪

ಹೀಗೆ ವಿಧವೆಯಾದವರನ್ನು ರಾಜರು ಜಮೀನ್ದಾರರು ಕ್ರೂರವಾಗಿ ಕೊಲ್ಲುತ್ತಿದ್ದರೆಂದು ನಂಬಲಾಗಿದೆ. ಮಧ್ಯಕಾಲೀನ ಯುಗದವರೆಗೆ ಸ್ವಲ್ಪಮಟ್ಟಿನ ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದ ಮಹಿಳೆಯರು ಹೀನಾಯ ಸ್ಥಿತಿ ತಲುಪಿದರು. ಬಲವಂತವಾಗಿ ಬಾಲ್ಯವಿವಾಹವನ್ನು ಏರ್ಪಡಿಸುತ್ತ ವಿಧವಾ ವಿವಾಹವನ್ನು ನಿಷೇಧಿಸಲಾಯಿತು. ವಿಧವೆಯರನ್ನು ಅಮಾನುಷವಾಗಿ ಹಿಂಸಿಸುವುದೂ ರೂಢಿಯಲ್ಲಿ ನೆಲೆಯಾಯಿತು. ವಿಧವೆಯ ಈ ಸ್ಥಿತಿಯನ್ನು ವಿಲ್‌ಡ್ಯೂರಾಂಟ್ ಹೀಗೆ ಹೇಳುತ್ತಾರೆ.

> *"ಗಂಡ ಸತ್ತಾಗ ಅವಳನ್ನು ಇತರ ಆಸ್ತಿಯಂತೆಯೇ ಮುಂದಿನವಾರಸುದಾರರಿಗೆ ವರ್ಗಾಯಿಸಲಾಗುತ್ತಿತ್ತು. ಕೆಲವು ಸ್ಥಳಗಳಲ್ಲಿ ಹೆಂಡತಿಯ ಕತ್ತು ಹಿಸುಕಿ ಸಾಯಿಸಿ ಗಂಡನ ಶವದೊಡನೆ ಹೂಳಲಾಗುತ್ತಿತ್ತು. ಇಲ್ಲವೇ ಆಕೆ ಪರಲೋಕದಲ್ಲಿ ಗಂಡನಿಗೆ ಸೇವೆ ಸಲ್ಲಿಸಲೆಂದು ಇಹಲೋಕದಲ್ಲಿ ಆತ್ಮಹತ್ಯೆ ಮಾಡಿಕೊಳ್ಳಬೇಕಾಗಿತ್ತು."*[೧]
>
> *"ರಾಜರುಗಳು ಜಮೀನ್ದಾರರು ಹುಡುಗಿಯರನ್ನು ವಿಧವೆಯರನ್ನು ಕ್ರೂರವಾಗಿ ಕೊಲ್ಲುತ್ತಿದ್ದರೆಂದು ಹಲವು ಕಥನ ಕಾವ್ಯಗಳು ನಿರೂಪಿಸಿದೆ. ಹೆಂಗಸರನ್ನು ಹೊಡೆದು ಬಡಿದು ಶಿಕ್ಷಿಸಿ ಕೂದಲು ಹಿಡಿದು ಎಳೆದಾಡುತ್ತಿದ್ದರು."*[೨]

ಅವಿವಾಹಿತ ಹಾಗೂ ವಿಧವಾ ಮಹಿಳೆಯರು ನಾಗರಿಕತೆಯ ಸ್ಥಿತ್ಯಂತರಯುಗದಲ್ಲಿ ವಿವಿಧ ಬಗೆಯ ತಲ್ಲಣಗಳಿಗೆ ಕ್ರೌರ್ಯಗಳಿಗೆ ಅಲಿಖಿತ ಶಾಸನಗಳಿಗೆ ಒಳಗಾಗುತ್ತಿದ್ದರೆಂದು ಮೇಲಿನ ಉದ್ಧರಣೆಗಳಿಂದ ಭಾವಿಸಬಹುದು. ಬಾಲ್ಯವಿವಾಹಕ್ಕೊಳಗಾಗಿ ವಿಧವೆಯಾದ ಮಹಿಳೆಯನ್ನು ಜೀವಂತವಾಗಿ ಪತಿಯ ಶವದೊಂದಿಗೆ ಸುಡುವ ಅಥವಾ ಹೂಳುವ ಪದ್ಧತಿ ಜಾರಿಯಲ್ಲಿತ್ತು. ಮಧ್ಯಕಾಲೀನ ಯುಗದಲ್ಲಿ ಪ್ರಚಲಿತವಿದ್ದ ಸ್ಮೃತಿಕಾರರ ಸಾಮಾಜಿಕ ಕಾನೂನುಗಳು ಧಾರ್ಮಿಕ ಶಾಸನಗಳಾಗಿದ್ದುವು. ಬಲವಂತವಾಗಿ 'ಬಾಲ್ಯವಿವಾಹ'ವನ್ನು ಏರ್ಪಡಿಸುತ್ತ ವಿಧವಾ ವಿವಾಹವನ್ನು ನಿಷೇಧಿಸಲಾಯಿತು. ಸತಿಪದ್ಧತಿಯನ್ನು ಅಮಾನುಷವಾಗಿ ಜಾರಿಯಲ್ಲಿಡಲಾಯಿತು. ಸತಿಪದ್ಧತಿಯನ್ನು ವಿರೋಧಿಸುವವರಿದ್ದಾಗಲೂ ಗುಪ್ತಶಾಸನಗಳು ಇವನ್ನೆಲ್ಲ ನಿಯಂತ್ರಿಸುತ್ತಿದ್ದವು. ವಿಧವೆ ದ್ವಿತೀಯ ವರನಾದ ದೇವರನ್ನು ಸ್ವೀಕರಿಸುವಂತೆ ಋಷಿ ಮುನಿಗಳೂ ಬೋಧಿಸುತ್ತಿದ್ದರು.

> "ಗಂಡ ಸತ್ತ ತರುಣಿಯರನ್ನು ವಿಧವೆಯರಾಗಿ ಇರಿಸುವುದೆಂದರೆ ರಹಸ್ಯ ಗರ್ಭಪಾತಕ್ಕೆ ಅವಕಾಶಮಾಡಿದಂತೆ ಅವರು ಮಕ್ಕಳನ್ನು ಹೆತ್ತು ಬಾಳುವುದೆಂದರೆ ವಿಧವಾ ವಿವಾಹವನ್ನು ಒಪ್ಪಿಕೊಂಡಂತೆಯೇ ಆಯಿತು. ಅದಕ್ಕಾಗಿ ರಹಸ್ಯ

---

೧. ನಾಗರಿಕತೆಯ ಕಥೆ – ೧ – ವಿಲ್‌ಡ್ಯೂರಾಂಟ್ – (ಪ.ಸಂ) ಪ್ರಧಾನ ಗುರುದತ್– ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ – ಬೆಂಗಳೂರು –೨೦೦೭ – ಪು. ೩೫–೩೬

೨. ದ ಸೆಕೆಂಡ್ ಸೆಕ್ಸ್– ಸಿಮೊನ್ ದ ಬೋವಾ–(ಅನು) ಶ್ರೀಮತಿ ಹೆಚ್.ಎಸ್. – ಅಧ್ಯಯನ ಮಂಡಲ – ಬೆಂಗಳೂರು – ೨೦೦೭– ಪು–೧೧೪–೧೧೫

> ಗರ್ಭಪಾತವನ್ನು ತಪ್ಪಿಸುವುದಕ್ಕಾಗಿ ಪುರೋಹಿತರು ಮತ್ತು ಸಾಮಂತರು ಒಂದು ಹೊಸ ಪದ್ಧತಿಯನ್ನು ಕಂಡುಕೊಂಡರು. ಅದೆಂದರೆ ವಿಧವೆಯರನ್ನು ಜೀವಂತವಾಗಿ ಸುಡುವುದು"[೧]

ವಿಧವೆಯರ ಆತ್ಮಹತ್ಯೆ, ಹತ್ಯೆಗಳೇ ಧರ್ಮಶಾಸ್ತ್ರವಾಗಿತ್ತು. ವಿವಾಹ ಮೂಲದಿಂದ ಹುಟ್ಟಿದ ಬಾಲ್ಯವಿವಾಹ, ವೈಧವ್ಯ – ಸತಿಪದ್ಧತಿಯಂತ ಅನಿಷ್ಟಪದ್ಧತಿಗಳು ಮೈವೆತ್ತುವುದು ಸಾಧ್ಯವಾಗಿದೆ. ಅನಿಷ್ಟ ಪದ್ಧತಿಗಳು ಸಾಮಾಜಿಕ ಮೌಲ್ಯಗಳಾಗಿ ರೂಪುಗೊಳ್ಳಲು ಪಿತೃಪ್ರಧಾನ ಸಮಾಜ ಹಿನ್ನೆಲೆಯಾಗಿದೆ. ಮಧ್ಯಯುಗದಲ್ಲಿ ಮಹಿಳೆಗೆ ಕೆಲವು ಸವಲತ್ತುಗಳು ಉಳಿದಿದ್ದರೂ ಹದಿನಾರನೇ ಶತಮಾನದಲ್ಲಿ ಜಾರಿಯಲ್ಲಿದ್ದ ಕೆಲವು ಕಾನೂನುಗಳು ಮುಂದುವರಿದವು. ಆಗ ಕ್ರೂರ ಪದ್ಧತಿಗಳು ಮಹಿಳೆಯನ್ನು ಅಧೀನದಲ್ಲಿಟ್ಟುಕೊಳ್ಳುವಲ್ಲಿ ಯಶಸ್ವಿಯಾದವು. ಅದರಲ್ಲೂ ಮಧ್ಯಮವರ್ಗದಲ್ಲಿ ಪುರುಷ ಅಧಿಪತಿಯಾಗಿದ್ದು ಮಹಿಳೆಯ ರಕ್ಷಕನಾಗಿದ್ದ. ಹೆಚ್ಚು ಹೆಚ್ಚು ಸಂಪತ್ತನ್ನು ಹೊಂದಿದ್ದ ಪುರುಷನನ್ನು ಮಹಿಳೆ ಆಶ್ರಯಿಸುವುದು ಹೆಚ್ಚಾಯಿತು. ಆದರೆ ಸಂಪತ್ತಿಲ್ಲದ ಗಂಡನೊಂದಿಗೆ ಹೆಂಡತಿ ಸ್ವತಂತ್ರಳಾದಳು. ಹೆಂಡತಿ ಸಹಚರಿಯಾದಳು. ಕೂಲಿಕಾರ್ಮಿಕರಾಗಿ ಬದುಕುತ್ತಿದ್ದ ದಂಪತಿಗಳು ಹೆಚ್ಚು ಸಮಾನರಾದರು. ಆದರೆ ಸಂಪತ್ತನ್ನು ಹೊಂದಿದ್ದ ಪತಿಯನ್ನು ಕಳೆದುಕೊಂಡ ಪತ್ನಿಗೆ ಬದುಕು ಸವಾಲಾಗಿತ್ತು. ವಿಧವೆಯ ಜೀವನಕ್ಕಿಂತ ಚಿತೆ ಏರಿ ಸಾಯುವುದನ್ನು ಆಯ್ಕೆ ಮಾಡಿಕೊಂಡಳು. ವಿಧವೆಗೆ ಹೇರಿದ್ದ ಕಟ್ಟು ಪಾಡುಗಳು ಕಠಿಣವಾಗಿದ್ದು ಪಾಲಿಸುವುದು ತಪ್ಪಿದರೆ ಕ್ರೂರ ಶಿಕ್ಷೆ ಅನುಭವಿಸುವುದು ತಪ್ಪಲಿಲ್ಲ. ಆದಿಮ ಸಮಾಜದಿಂದ ಪ್ರಾರಂಭವಾದ 'ವಿವಾಹ' ಸಂಸ್ಥೆ ಹೆಣ್ಣಿಗೆ ವಿವಾಹ ಅನಿವಾರ್ಯ ಎಂದು ಹೇರುತ್ತಾ ಬಂದು ಮುಂದೆ 'ಬಾಲ್ಯವಿವಾಹ' 'ವೈಧವ್ಯ' ದಂತಹ ಸಾಮಾಜಿಕ ಪಿಡುಗು ನೆಲೆಯಾಗಲು ರಹದಾರಿಯಾಗಿದೆ. ಆದರೂ ಭಾರತೀಯ ಹಿಂದೂ ಸಮಾಜದಲ್ಲಿ 'ವಿವಾಹ ಪದ್ಧತಿ' ಯನ್ನು ಉಳಿದು ಬದುಕಿದ್ದ ಮಹಿಳೆಯರು ಬೌದ್ಧಧರ್ಮದ ಉನ್ನತಿಯ ಕಾಲದಲ್ಲಿ ಕಂಡುಬರುತ್ತಾರೆ. ಹಿಂದೂ ಮಹಿಳೆಯರು ಸನ್ಯಾಸವನ್ನು ಸ್ವೀಕರಿಸಿರುವ ಉದಾಹರಣೆಗಳಿವೆ. ಭಕ್ತಿ ಚಳುವಳಿಯ ಕಾಲದಲ್ಲಿ ಸ್ತ್ರೀಯರು ವಿವಾಹ ಬಂಧನದಿಂದ ಹೊರಗುಳಿಯುವ ಪ್ರಯತ್ನವನ್ನು ಮಾಡಿದ್ದಾರೆ.

### ೯. ನಾಗರಿಕ ಸಮಾಜದಲ್ಲಿ ಸತಿಪದ್ಧತಿ

ಬಾಲ್ಯವಿವಾಹಗಳು ಧರ್ಮಸೂತ್ರಗಳ ಕಾಲಾವಧಿಯಲ್ಲಿಯೇ ಜಾರಿಯಲ್ಲಿತ್ತು. ಮನು ಚೌಡಾಯನ, ವಿಷ್ಣು, ವಸಿಷ್ಠಾ ಮುಂತಾದವರು (ಕ್ರಿ.ಪೂ ೪೦೦ರಿಂದ ಕ್ರಿ.ಶ. ೧೦೦) ೯–೧೦ ವರ್ಷದ ಹೆಣ್ಣು ಮಕ್ಕಳಿಗೆ ವಿವಾಹ ಮಾಡುವುದು ಕಡ್ಡಾಯವೆಂದು

---

೧. ಮಹಿಳಾ ಚಳವಳಿ – ಹಾಲತಿ ಸೋಮಶೇಖರ್–ವಿಸ್ಮಯ ಪ್ರಕಾಶನ–ಮೈಸೂರು – ೨೦೦೩– ಪು. ೧೪೦

ಶಾಸನ ರೂಪಿಸಿದರು. ಬಾಲ್ಯವಿವಾಹವನ್ನು ಉಪನಯನದಷ್ಟೇ ಶುದ್ಧ ಸಂಸ್ಕಾರ ಎಂದು ಪರಿಗಣಿಸಿ ಋತುಮತಿಯರಾಗುವ ಮೊದಲೇ ವಿವಾಹ ಮಾಡುವುದನ್ನು ರೂಢಿಯಲ್ಲಿ ತಂದರು. ಇದು ಪವಿತ್ರ ಕಾರ್ಯ ಎಂದು ಜನಪ್ರಿಯಗೊಳಿಸಿರುವ ಸಾಧ್ಯತೆಗಳಿವೆ. ಮುಸ್ಲಿಂ ದಾಳಿಯ ಪ್ರಭಾವ ಮತ್ತು ಜಾತಿ ಮತ್ತು ಕುಟುಂಬದ ಪ್ರೋತ್ಸಾಹದಿಂದ ಬಾಲ್ಯವಿವಾಹ ಪದ್ಧತಿ ಜಾರಿಯಲ್ಲಿತೆಂದು ಊಹಿಸಬಹುದು. ಬಾಲ್ಯವಿವಾಹವೇ ಒಂದು ಅವಘಡ. ಬಾಲ್ಯವಿವಾಹ ಮಹಿಳೆಯ ಬದುಕನ್ನು ಬಾಲ ವೈಧವ್ಯದ ದುರಂತಕ್ಕೆ ತಳ್ಳುತ್ತವೆ. ಬಾಲವಿಧವೆಯರ ನರಕ ಸದೃಷ ಬದುಕನ್ನು ಇತಿಹಾಸ, ಪುರಾಣಗಳು ದಾಖಲಿಸಿವೆ. ಪ್ರಾಚೀನ ಇತಿಹಾಸ ವಿಧವೆಯರು ಸತಿಪದ್ಧತಿಯ ಹಿನ್ನೆಲೆಯಲ್ಲಿ ಸತಿ ಹೋಗುತ್ತಿದ್ದುದನ್ನು ಪ್ರಸ್ತುತ ಪಡಿಸುತ್ತವೆ. ೧೯ನೇ ಶತಮಾನದಲ್ಲಿ ವಿರಾಜ ಮಾನವಾಗಿದ್ದ ಬಾಲ್ಯವಿವಾಹದಂತಹ ಅನಿಷ್ಟ ಪದ್ಧತಿಯ ಬಗ್ಗೆ ಗಾಂಧೀಜಿ ತಮ್ಮ ಆತ್ಮಕಥನದಲ್ಲಿ ಸ್ವಾನುಭವದಿಂದ ಬರೆಯುತ್ತಾರೆ.

> *"ನನ್ನ ಮದುವೆ ಹದಿಮೂರನೆ ವಯಸ್ಸಿನಲ್ಲಿ ನಡೆಯಿತೆಂಬುದನ್ನು ನಾನು ವ್ಯಥೆಯಿಂದ ಇಲ್ಲಿ ಬರೆಯಬೇಕಾಗಿದೆ. ಅದೇ ವಯಸ್ಸಿನ ಹುಡುಗರನ್ನು ನೋಡಿ ನನ್ನ ಮದುವೆಯನ್ನು ಜ್ಞಾಪಿಸಿಕೊಂಡರೆ ನನ್ನಲ್ಲಿ ಕನಿಕರ ಉಂಟಾಗುತ್ತದೆ. ನನ್ನ ಅವಸ್ಥೆ ಅವರಿಗೆ ತಪ್ಪಿತಲ್ಲ ಎಂದು ಅವರನ್ನು ಅಭಿನಂದಿಸುವಂತೆ ಆಗುತ್ತದೆ. ಅಷ್ಟು ತೀರ ಚಿಕ್ಕವಯಸ್ಸಿನ ವಿವಾಹವನ್ನು ಸಮರ್ಥಿಸಲು ಯಾವ ನೈತಿಕ ಆಧಾರವೂ ನನ್ನ ಮುಂದೆ ಇಲ್ಲ."*[1]

ಹಿಂದೂ ವಿವಾಹದ ಮುಖ್ಯ ಸಂಸ್ಕಾರ ವಿಧಿಗಳ ನಂತರ ಸ್ತ್ರೀಕಳಚಲಾಗದ ವೈವಾಹಿಕ ಬಂಧನಕ್ಕೊಳಪಡುತ್ತಾಳೆ. ಪತಿ ಪತ್ನಿಯರ ಈ ಬಂಧನ ಸಾವಿನ ನಂತರವೂ ಮುಂದುವರಿಯಲಾಗುತ್ತದೆ ಎಂದು ನಂಬಲಾಗಿದೆ. 'ಪಾತಿವ್ರತ್ಯ'ಕ್ಕೆ ಹೆಚ್ಚಿನ ಆದ್ಯತೆ ನೀಡಲಾಯಿತು. ಪತಿಯ ಸಂತೋಷಕ್ಕಾಗಿ ಪತ್ನಿ ಎಂತಹ ತ್ಯಾಗಕ್ಕೂ ಸಿದ್ಧಳಾಗಬೇಕು ಎಂದು ಪ್ರತಿಬಿಂಬಿಸಲಾಯಿತು. ಎರಡನೇ ಗಂಡನನ್ನು ಕನಸಿನಲ್ಲಿಯೂ ಯೋಚಿಸದಂತೆ ಸೂಚಿಸಲಾಯಿತು. ಪತಿಯ ಸಾವಿನ ನಂತರ ಪತ್ನಿ ಚಿತೆ ಏರುವುದು ಆಕೆಯ ಪಾಲಿನ ಪವಿತ್ರ ಕರ್ತವ್ಯವೆನಿಸಿತು. ಆದ್ದರಿಂದ 'ಸತಿಪದ್ಧತಿ' ಜಾರಿಗೆ ಬಂದು ವೈಭವೀಕರಿಸಲಾಯಿತು. ಕ್ರಿ.ಶ.೨ ಅಥವಾ ೩ನೇ ಶತಮಾನದಿಂದಲೆ ಸತಿಪದ್ಧತಿ ಜಾರಿಯಲ್ಲಿದ್ದಿರಬಹುದೆಂದು ವಿಷ್ಣುಧರ್ಮ ಸಂಹಿತದಿಂದ ಅರಿಯಬಹುದು. ಕ್ರಿ.ಶ. ೧೬ನೇ ಶತಮಾನದ ನಂತರದಿಂದ ಮಾತ್ರ ಅದನ್ನು ನಿಲ್ಲಿಸುವ ಯತ್ನಗಳು ನಡೆದು ೧೮೨೯ರಲ್ಲಿ 'ಸತಿನಿಷೇಧ' ಶಾಸನದಿಂದ ಮಾತ್ರ ಸಾಧ್ಯವಾಯಿತು. ಆದರೆ

---

೧. ನನ್ನ ಸತ್ಯಾನ್ವೇಷಣೆ – ಗಾಂಧಿ. ಮೋ.ಕ. – (ಭಾಷಾಂತರ)– ಗೊರೂರು ರಾಮಸ್ವಾಮಿ ಐಯ್ಯಂಗಾರ್ – ನವಜೀವನ ಪ್ರಕಾಶನ ಮಂದಿರ – ಅಹಮದಾಬಾದ್ – ೧೯೫೫–ಪು. ೭–೮

ವಿಧವೆಯಾಗುಳಿದ ಮಹಿಳೆ ಸಾಮಾಜಿಕವಾದ ಅನಾದರ ಅಸಡ್ಡೆ, ಅವಮಾನಗಳಿಗೆ ಗುರಿಯಾಗಬೇಕಾಯಿತು.

ಸತಿಹೋಗುವ ಅಮಾನುಷ ಪದ್ಧತಿಗೆ ಕಡಿವಾಣ ಹಾಕುವ ಸಲುವಾಗಿ ಶ್ರಮಿಸಿದ ಸುಧಾರಕರ ಮುಂದೆ ಭೀಕರ ಸಾಮಾಜಿಕ ವ್ಯವಸ್ಥೆ ಇತ್ತು. ಸತಿಪದ್ಧತಿ ಬಾಲವಿಧವೆಯರ ಬದುಕಿನಲ್ಲಿ ಕರಾಳ ರೂಪವನ್ನು ಪಡೆದುಕೊಂಡಿದ್ದು ಆರ್ಥಿಕವಾಗಿ ದುರ್ಬಲವಾದ ಸಮಾಜ ಇಂತಹ ಪದ್ಧತಿಯನ್ನು ಜಾರಿಯಲ್ಲಿಡಲು ತೊಡಗಿದ್ದರು ಎಂದು ಆಶಿಶ್‌ನಂದಿಯವರು ತಮ್ಮ ವಿಚಾರ ಸಾಹಿತ್ಯದಲ್ಲಿ ವಿವರಿಸುತ್ತಾರೆ.

> *"ಸತಿ ಹೋಗದ ವಿಧವೆಯರನ್ನು ಬಲತ್ಕಾರವಾಗಿ ಕುಟುಂಬವೇ ಸತಿಗೆ ತಳ್ಳುತ್ತಿತ್ತು. ಸಮಾಜವು ಅದಕ್ಕೆ ಬೆಂಬಲಿಸುತ್ತಿತ್ತು. ಸತಿಹೋಗದ ವಿಧವೆ ಆರ್ಥಿಕವಾಗಿ ಸಬಲಳಾಗಲು ಸೂಳೆಗಾರಿಕೆಯಂತಹ ಸಮಾಜಬಾಹಿರ ಮಾರ್ಗಗಳೇ ಪ್ರಧಾನವಾಗಿದ್ದವು. ಒಂದು ಕಡೆಯಿಂದ ವಿಧವೆ ತನದ ದುಃಸ್ಥಿತಿಯೂ ಅವರು ಸಾವಿನ ಭಯವನ್ನು ಲಂಘಿಸಲಿಕ್ಕೆ ಸಹಾಯ ಮಾಡಿದರೆ, ಇನ್ನೊಂದು ಕಡೆಯಿಂದ ಬಾಲ್ಯದಿಂದಲೂ ಮನಸ್ಸಿನಲ್ಲಿ ಬೆಳೆದ ಭಯ ಪೂರ್ವಾಗ್ರಹಗಳು ವಿಧವೆಯರು ಅಪಶಕುನ ಎಂಬ ನಂಬಿಕೆಗಳು ಅವರನ್ನು ಆತ್ಮಹತ್ಯೆಗೆ ಸಿದ್ಧಗೊಳಿಸುತ್ತಿದ್ದವು."*[೧]

ಸಮಾಜ ಮಹಿಳೆಯ ಮೇಲೆ ಹೇರಿದ ಮೌಲ್ಯಗಳ ಹೆಸರಿನ ಮೌಢ್ಯಗಳು ಅವಳ ಭಾವಕೋಶದಲ್ಲಿ ಒಪ್ಪಿತವಾಗಿದ್ದುವು. ಅವುಗಳಾಚೆ ಬರದಂತೆ ಧರ್ಮಶಾಸ್ತ್ರಗಳು ಹೆಣ್ಣಿಗೊಂದು ಗಂಡಿಗೊಂದು ಬಗೆಯಲ್ಲಿ ರೂಪುಗೊಂಡವು. ತಮ್ಮ ಅನುಕೂಲಕ್ಕೆ ತಕ್ಕಂತೆ ಧರ್ಮನೀತಿ ರೂಪಿಸಿ ಹೆಣ್ಣನ್ನು ಭೋಗಿಸಿ ಜಗತ್ತಿನ ಪುಣ್ಯ ಪುರುಷರಾಗಿರುವುದೂ ಇದೆ. ಹೆಣ್ಣಿನ ಶೀಲವನ್ನು ಶಂಕಿಸಿ ಅನುಮಾನಿಸಿ ದೈಹಿಕವಾಗಿ ಮಾನಸಿಕವಾಗಿ ಕ್ಷೋಭೆಗೊಳಿಸಿ ನಲಿದಿದ್ದಾರೆ. ಮಹಾಭಾರತದ ಪಾಂಡುವಿನ ಪತ್ನಿ ಮಾದ್ರಿ ಸಹಗಮನದಿಂದ ಅಂತ್ಯವಾಗಲು ಪಾಂಡು, ಸಂಯಮ ಕಳೆದುಕೊಂಡಿದ್ದರಿಂದ ಯಾವ ತಪ್ಪೂ ಮಾಡದ ಮಾದ್ರಿಗೆ ಸಹಗಮನದ ಶಿಕ್ಷೆ ಅಮಾನವೀಯವಾದುದೆಂದು ಮೇಲ್ನೋಟಕ್ಕೆ ಕಾಣಿಸುತ್ತದೆ. ಪರಂಪರಾಗತ ಸಂಪ್ರದಾಯಗಳನ್ನು ಪ್ರಶ್ನೆಮಾಡಲಾಗದೆ ಮಹಿಳೆ ಅನಿಷ್ಟ ಪದ್ಧತಿಗೆ ಬಲಿಯಾಗುವ ದುರಂತಗಳನ್ನು ಪ್ರಾಚೀನ ಮಹಾಕಾವ್ಯಗಳು ವಿವರಿಸುತ್ತವೆ.

ಜೈನಧರ್ಮ ಉನ್ನತಿಯನ್ನು ಪಡೆದುಕೊಂಡ ಕಾಲಮಾನ ಮಹಿಳೆಯರು ಕುಟುಂಬದಲ್ಲಿ ಪುರುಷರಿಗೆ ಸಮಾನರು ಎಂದು ಬಿಂಬಿಸಿತ್ತು. ವಿಧವೆಯರು ಗಂಡನ ಸಮಸ್ತ ಆಸ್ತಿಯನ್ನು ಪಡೆಯುವ ಅಧಿಕಾರ ಹೊಂದಿದ್ದರು. ಆ ಕಾಲದಲ್ಲಿ ಸಹಗಮನ ಪದ್ಧತಿಯನ್ನು ವಿರೋಧಿಸಿ ಅಹಿಂಸೆಯನ್ನು ಪೋಷಿಸಿರುವುದು ಗಮನಾರ್ಹವಾದುದು.

---

೧. **ಆಶಿಶ್‌ನಂದಿ ವಿಚಾರ ಸಾಹಿತ್ಯ – ಆಶಿಶ್‌ನಂದಿ – (ಅನು) ಕೆ.ವಿ. ಸುಬ್ಬಣ್ಣ – ಅಕ್ಷರ ಪ್ರಕಾಶನ – ಹೆಗ್ಗೋಡು – ೧೯೯೫. ಪು. ೪೬**

ಕ್ರಿ.ಪೂ. ೪ನೇ ಶತಮಾನದಲ್ಲಿ ಚಾಣಕ್ಯನು ವಿಧವೆಯಾದವಳು ಪುನರ್ವಿವಾಹ ಮಾಡಿಕೊಳ್ಳುವ ಅಧಿಕಾರವಿದ್ದು ಆಸ್ತಿಯನ್ನು ಹೊಂದಬಹುದು ಎನ್ನುತ್ತಾನೆ. ಆದರೆ ಕ್ರಿ.ಶ.೬ನೇ ಶತಮಾನದ ಧರ್ಮಸೂತ್ರಗಳು ಬಾಲ್ಯವಿವಾಹ ಮತ್ತು ವಿಧವೆಗೆ 'ಸಹಗಮನ'ದ ಕಟ್ಟುಪಾಡುಗಳನ್ನು ವಿಧಿಸಿದವು.

> *"ವಿಧವೆಗೆ ಸತಿ ಹೋಗುವುದೇ ಪರಮ ಧರ್ಮವೆಂದು ಸಾರಿದ ಅಂಗಿರಸನ ಸಮರ್ಥನೆ ಎಂದರೆ ಗಂಡನ ಪಾಪ ಕಳೆಯಲು ಆತನ ಹೆಂಡತಿ ಸತ್ತುಹೋಗಬೇಕು. ಹಾವಾಡಿಗನು ತನ್ನ ಮಾಟದಿಂದ ಹಾವನ್ನು ಹುತ್ತದಿಂದ ಹೊರಗೆಳೆಯುವಂತೆ ಸತಿಹೋಗುವ ಹೆಂಡತಿ ತನ್ನ ಗಂಡನನ್ನು ನರಕದಿಂದ ಹೊರಗೆಳೆದು ಸ್ವರ್ಗಕ್ಕೆ ಕರೆತರುವಳು. ಅವಳು ಒಂದು ವೇಳೆ ದುರ್ಗುಣಿಯಾಗಿದ್ದರೂ ಪರವಾಗಿಲ್ಲ. ತನ್ನ ಆತ್ಮ ದಹನದ ಮೂಲಕ ಆಕೆ ತನ್ನೆಲ್ಲ ಪಾಪಗಳನ್ನು ತೊಳೆದು ಹಾಕುತ್ತಾಳೆ. ಬಲಾತ್ಕಾರದಿಂದ ಆಕೆ ಸತಿಹೋದರೂ ಸಹ ಸ್ವರ್ಗದಲ್ಲಿ ಅವಳಿಗೆ ಮತ್ತು ಅವಳ ಪತಿಗೆ ಉನ್ನತ ಸ್ಥಾನ ಸಿದ್ಧವಾಗಿರುತ್ತದೆ, ಎಂಬ ಆಸೆ ತೋರಿಸುತ್ತಾನೆ."*[೧]

ಹೀಗೆ ವೈಭವೀಕರಿಸಿದ ಸತಿಪದ್ಧತಿ ಸಮಾಜದಲ್ಲಿ ಗಟ್ಟಿಯಾಗಿ ಬೇರೂರಿದೆ. ಈ ಪದ್ಧತಿ ಜಾರಿಯಲ್ಲಿದ್ದ ಬಗ್ಗೆ ಆಶಿಶ್‌ನಂದಿಯವರು ತಮ್ಮ 'ವಿಚಾರ ಸಾಹಿತ್ಯ'ದಲ್ಲಿ ಹೀಗೆ ನಿರೂಪಿಸಿದ್ದಾರೆ.

> *"ಸತಿ ಪದದ ಶಬ್ದಾರ್ಥ ಪಾವಿತ್ರ್ಯವುಳ್ಳ ಪತ್ನಿ. ತಮ್ಮ ಗಂಡಂದಿರ ಚಿತೆಯ ಮೇಲೆ ವಿಧವೆಯರು ತಮ್ಮನ್ನು ಸುಟ್ಟುಕೊಳ್ಳುವ ಪದ್ಧತಿ ಇದು. (ಕೆಲವೊಂದು ಬಾರಿ ಹೆಂಡಂದಿರು ವಿಷ ಕುಡಿದು ಸಾಯುವ ಅಥವಾ ಜೀವಂತವಾಗಿ ಹೂಳಲ್ಪಡುವ ರೂಢಿಗಳೂ ಇದ್ದವು). ಸುಮಾರು ಎರಡು ಸಾವಿರ ವರ್ಷಗಳಿಂದ ಮೇಲ್ಜಾತಿಯ ಭಾರತೀಯರಲ್ಲಿ ಈ ವಿಧಿ ಪ್ರಚಲಿತವಾಗಿದ್ದರೂ ಇದು ಯಾವತ್ತು ಒಂದು ಅಧಿಕೃತ ಆಚರಣೆಯಾಗಿ ಪ್ರಮಾಣಿತಗೊಂಡಿರಲಿಲ್ಲ. ಭಾರತೀಯ ಸಂಸ್ಕೃತಿಯಲ್ಲಿ ಈ ವಿಧಿಯಾವಾಗ ಹೇಗೆ ನೆಲೆಯೂರಿಕೊಂಡಿತು ಎಂಬುದು ಸ್ಪಷ್ಟವಾಗಿಲ್ಲ. ಹಲವು ಅಧ್ಯಯನಗಳ ಪ್ರಕಾರ ಪ್ರಾಚೀನ ಹಿಂದೂ ಕಾಯಿದೆಗಳು ವಿಧವೆಯರ ಪುನರ್ ವಿವಾಹವನ್ನು ಮನ್ನಿಸಿದ್ದವು. ಹಾಗೂ ಪವಿತ್ರವೆಂದು ಪರಿಗಣಿಸಲ್ಪಡುವ ಧರ್ಮಗ್ರಂಥಗಳು ಸತಿಪದ್ಧತಿಯನ್ನು ವಿರೋಧಿಸಿದ್ದರೂ ಅದರ ಪರವಾಗಿಯಂತೂ ಇರಲಿಲ್ಲ. ಮನು ಮತ್ತು ಯಜ್ಞಾವಲ್ಕ್ಯನಂತಹ ಪ್ರಾಚೀನ ವಿಧಿನಿರ್ಮಾತೃಗಳು ವಿಧವೆಯರಿಗೆ ಪರಿಶುದ್ಧ ಜೀವನವನ್ನಷ್ಟೇ ಶಿಫಾರಸ್ಸು ಮಾಡಿದರೆ*

---

೧. ಮಹಿಳಾ ಚಳವಳಿ – ಹಾಲತಿ ಸೋಮಶೇಖರ್ – ವಿಸ್ಮಯ ಪ್ರಕಾಶನ – ಮೈಸೂರು – ೨೦೦೭ – ಪು. ೧೦೧

*ಕೌಟಿಲ್ಯನಂತಹವರು ಕೆಲವು ಸಂದರ್ಭಗಳಲ್ಲಿ ವಿಧವೆಯರು ಮರುಮದುವೆಯಾಗಲಿಕ್ಕೂ ಅವಕಾಶ ಇಟ್ಟಿದ್ದರು. ಸತಿಪದ್ಧತಿಯನ್ನು ಮೊದಲು ಶಿಫಾರಸ್ಸು ಮಾಡಿದ ಗ್ರಂಥ ಕ್ರಿ.ಶ. ೨-೩ನೆಯ ಶತಮಾನದ ವಿಷ್ಣುಧರ್ಮ ಸಂಹಿತೆ. ಆಮೇಲೆ ಈ ಪದ್ಧತಿ ಮತ್ತೊಮ್ಮೆ ಅಧಿಕೃತಗೊಂಡು ಚಾಲ್ತಿಗೆ ಬಂದಿದ್ದು ಮಧ್ಯಯುಗದಲ್ಲಿ. ಆಗ ಹಿಂದೂ ಪಾಳೆಗಾರರು ಆಳುತ್ತಿದ್ದ ಪುಟ್ಟಪುಟ್ಟ ಸಂಸ್ಥಾನಗಳಲ್ಲಿ ಭಾರತದ ಮುಸ್ಲಿಂದೊರೆಗಳ ಸೈನಿಕ-ರಾಜಕೀಯ-ಸಾಮಾಜಿಕ ಒತ್ತಡಗಳ ಕಾರಣದಿಂದಾಗಿ, ಈ ಪದ್ಧತಿಯು ಅಲ್ಲಲ್ಲಿ ಕಾಣಿಸಿಕೊಳ್ಳತೊಡಗಿತು. ಕೆಲವೊಮ್ಮೆ ಪಿಡುಗಾಗಿಯೂ ವ್ಯಾಪಿಸಿತು. ಮಧ್ಯಯುಗದ ಜನಪ್ರಿಯ ಕಥೆಗಳಲ್ಲಿ ಹೇಗೆ ವೀರ ಹಿಂದೂ ವನಿತೆಯರು ತಮ್ಮ ಗಂಡಂದಿರು ಕದನದಲ್ಲಿ ಮಡಿದಾಗ ಸಾಮೂಹಿಕ 'ಸತಿ'ಯನ್ನು ಅರ್ಥಾತ್ 'ಜೌಹರ್'ನ್ನು ಆಚರಿಸುತ್ತಿದ್ದರೆಂಬ ವರ್ಣನೆಗಳಿವೆ. ಆದರೆ ಈ ವರ್ಣನೆಗಿಂತ ಭಿನ್ನವಾಗಿ ಈ ಆಚರಣೆಯು ಬರಿ ಕ್ರೌರ್ಯದಿಂದಷ್ಟೇ ನಡೆಯುತ್ತಿರಲಿಲ್ಲ. ಇದರ ಹಿಂದೆ ಗಟ್ಟಿಯಾದ ಒತ್ತಾಯವೂ ಕೆಲಸಮಾಡುತ್ತಿತ್ತು ಎಂಬುದಕ್ಕೆ ಸಾಕ್ಷ್ಯಗಳಿವೆ.*[೧]

ಸತಿ ಪದ್ಧತಿ ಕ್ರಮೇಣ ಅಧಿಕೃತತೆಯನ್ನು ಪಡೆಯಲು ಹಲವಾರು ಕಾರಣಗಳನ್ನು ಸೂಚಿಸುತ್ತಾರೆ. ಬ್ರಾಹ್ಮಣರು ಉದ್ದೇಶಪೂರ್ವಕವಾಗಿ ಧರ್ಮಗ್ರಂಥಗಳನ್ನು ಅಪವ್ಯಾಖ್ಯಾನ ಮಾಡಿದ್ದು, ಯುದ್ಧದ ಕಾಲಗಳಲ್ಲಿ ಅದರಲ್ಲೂ ಮಧ್ಯಯುಗದಲ್ಲಿ ಹೆಂಗಸರನ್ನು ರಕ್ಷಿಸಲು ಕಷ್ಟವಾಗಿದ್ದು ಮತ್ತು ಒಬ್ಬ ಮನುಷ್ಯ ಸತ್ತಾಗ ಅವನ ಹೆಂಡಿರು-ಆಭರಣ-ಗುಲಾಮರು ಮುಂತಾದ ವಸ್ತುಗಳನ್ನು ಅವನೊಂದಿಗೆ ಹೂಳಿದರೆ ಮರಣ ಹೊಂದಿದವನ ಬದುಕು ಸುಖಮಯವಾಗುತ್ತದೆ ಎಂಬುದರ ನಂಬಿಕೆಗೆ ಬುಡಕಟ್ಟಿನವರ ನಂಬಿಕೆಗಳು ಪ್ರಭಾವ ಬೀರಿದ್ದವು. ಏನೇ ಕಾರಣವಿದ್ದರೂ ಮಧ್ಯಯುಗದ ನಂತರ ಸತಿಪದ್ಧತಿಯ ಜನಪ್ರಿಯತೆ ಕುಂದಿರುವುದು ಕಂಡುಬರುತ್ತದೆ. ೧೩ನೆಯ ಶತಮಾನದ ಹೊತ್ತಿಗೆ ಈ ಪದ್ಧತಿ ಐಚ್ಛಿಕವಾಗಿತ್ತು. ಯುದ್ಧಕಾಲದಲ್ಲಿ ಹೆಂಗಸರನ್ನು ರಕ್ಷಿಸಲಾಗದಂತ ಸಂದರ್ಭಗಳಿಗೆ ಸೀಮಿತವಾಗಿಬಿಟ್ಟಿತ್ತು. ೧೮ನೆಯ ಶತಮಾನದ ಆರಂಭಕ್ಕೆ ಈ ಪದ್ಧತಿ ತೀರಅಪರೂಪವಾಗಿತ್ತು. ಆದರೆ ಮತ್ತೆ ಅಧಿಕೃತ ಉನ್ಮತ್ತ ಕ್ರೀಡೆಯಂತೆ ಜನಪ್ರಿಯತೆಯನ್ನೇರಿಕೊಂಡಿದ್ದು ಹದಿನೆಂಟನೆಯ ಶತಮಾನದ ತುದಿಗೆ : ಅದೂ ಬಂಗಾಲದಲ್ಲಿ ಮಾತ್ರ.

ಆಗ ವಿಧವೆಯರಿಗೆ ಅಮಲು ಪದಾರ್ಥಗಳನ್ನು ತಿನ್ನಿಸುವ, ಅವರನ್ನು ಗಂಡಂದಿರ ಶವಗಳಿಗೆ ಬಿಗಿದುಕಟ್ಟಿ, ಚಿತೆಯಿಂದ ಏಳದಂತೆ ಬಿದಿರುಕೋಲಿನಿಂದ ಒತ್ತಿ ಹಿಡಿಯುವ ಆವೇಶಗಳೆಲ್ಲಾ ನಡೆಯುತ್ತಿದ್ದವು. ಜೊತೆಗೆ ಈ ಪದ್ಧತಿಗೆ ಸಮಾಜದ ಬೇರೆ

---

೧. ಆಶಿಶ್‌ನಂದಿ ವಿಚಾರ ಸಾಹಿತ್ಯ – ಆಶಿಶ್‌ನಂದಿ– (ಅನು) ಕೆ.ವಿ. ಸುಬ್ಬಣ್ಣ – ಅಕ್ಷರ ಪ್ರಕಾಶನ – ಹೆಗ್ಗೋಡು– ೧೯೯೩. ಪು. ೪೦

ಬೇರೆ ಮೂಲಗಳಿಂದ ಬೆಂಬಲ ದೊರಕಿತ್ತು. ಉದಾಹರಣೆಗೆ : ಸಾಂಸ್ಕೃತಿಕವಾಗಿ ಈ ವಿಧಿಗೆ ಮೊದಲು ಕಾಳಿಪೂಜೆ ನಡೆಸುವ ಹಾಗೂ ಈ ವಿಧಿಯಲ್ಲಿ ಶಾಕ್ತ ಆಚರಣೆಗಳನ್ನು ಸೇರಿಸಿಕೊಳ್ಳುವುದು ಸಾಧ್ಯವಾಯಿತು. ರಾಜಕೀಯ ಸ್ತರದಲ್ಲಿ ಬ್ರಿಟೀಶ್ ವಸಾಹತುಶಾಹಿ. ಆಡಳಿತ ಇದನ್ನು ವಿರೋಧಿಸುವಷ್ಟು ಆತ್ಮವಿಶ್ವಾಸವನ್ನು ಗಳಿಸಿರಲಿಲ್ಲ. ಹಾಗಾಗಿ ಆಡಳಿತದ ತಾಟಸ್ಥ್ಯವು ಈ ಆಚರಣೆಗೆ ಪರೋಕ್ಷವಾಗಿ ಬೆಂಬಲವಾಗಿ ಬಿಟ್ಟಿತ್ತು. ಸತಿಪದ್ಧತಿಯು ಜನಪ್ರಿಯವಾದುದನ್ನು ಸಾಂಸ್ಥಿಕ ಹಾಗೂ ಸಾಂಸ್ಕೃತಿಕ ಸಮೂಹದ ಹಿನ್ನೆಲೆಯಲ್ಲಿ ಅರ್ಥೈಸಿಕೊಳ್ಳುವುದು ಬಹಳ ಮುಖ್ಯವೆನಿಸಿತು.

> *"ಮೊದಲಿಗೆ ನಾನು ಆರ್ಥಿಕ ಇತಿಹಾಸಕಾರನವಾದವನ್ನು ಮುಂದಿಡುತ್ತೇನೆ. ಈ ಪದ್ಧತಿಯೂ ಕ್ಷಾಮಪೀಡಿತ ಬರಗಾಲದಲ್ಲಿ ಜನಸಂಖ್ಯೆಯನ್ನು ಹತೋಟಿಯಲ್ಲಿಟ್ಟುಕೊಳ್ಳುವ ಒಂದು ಅಸಂಸ್ಕೃತ ಮಾಲ್ಥೂಸಿಯನ್ ವಿಧಾನವಾಗಿತ್ತು ಎಂಬುದರಲ್ಲಿಯಂತೂ ಅನುಮಾನವಿಲ್ಲ. ಆ ಮೊದಲು ಸಾವಿನ ಪ್ರಮಾಣ ಅಧಿಕವಾಗಿದ್ದದ್ದು ಹಾಗೂ ವಿಧವಾವಿವಾಹ ನಿಷಿದ್ಧವಾಗಿದ್ದದ್ದು ಇವೆರಡೂ ಕಾರಣಗಳು ಸಮಾಜದಲ್ಲಿ ತಾಯಂದಿರ ಸಂಖ್ಯೆಯನ್ನು ಹೆರಬಲ್ಲ ಹೆಂಗಸರ ಸಂಖ್ಯೆಗಿಂತ ಕಡಿಮೆಯಾಗಿಟ್ಟುಕೊಳ್ಳಲು ಸಹಾಯ ಮಾಡಿದ್ದವು. ಆದರೆ ಅಭಾವದ ಕಾಲಗಳಲ್ಲಿ ಈ ಹತೋಟಿ ಸಾಗುತ್ತಿರಲಿಲ್ಲ. ಜತೆಗೆ, ಸಾಮಾಜಿಕ ಕಟ್ಟುಕಟ್ಟಲೆಗಳು ಸಡಿಲಗೊಳ್ಳುವ 'ಕ್ರಮಲೋಪ'ದ ಕಾಲದಲ್ಲಿ ವಿಧವೆಯರು ಲಭ್ಯ ಸಂಪನ್ಮೂಲಗಳಿಗೆ ಹೊರೆ ಎಂಬ ಅಭಿಪ್ರಾಯ ತೀವ್ರಗೊಳ್ಳುತ್ತಿತ್ತು. ಅದರಲ್ಲೂ ಇಂಥ ಅಭಿಪ್ರಾಯ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದ್ದುದು ಸ್ತ್ರೀಯರು ನೇರವಾಗಿ ಯಾವ ಆರ್ಥಿಕ ಪಾತ್ರವನ್ನು ವಹಿಸದ ಮಧ್ಯಮ ಮೇಲುವರ್ಗದ ಕುಟುಂಬಗಳಲ್ಲಿ."*[೧]

ಸಾಮಾನ್ಯವಾಗಿ ಸತಿಪದ್ಧತಿ ಮೇಲ್‌ಮಧ್ಯಮ ವರ್ಗದ ಸಮುದಾಯದಲ್ಲಿ ಆಚರಿಸುತ್ತಿದ್ದು ಪವಿತ್ರಕಾರ್ಯ ಎಂದು ನಂಬಿದ್ದರು. ಕೆಳವರ್ಗ ಜಾತಿ ಸಮುದಾಯಗಳು ಕಟ್ಟುನಿಟ್ಟಾಗಿ ಅಚರಿಸುತ್ತಿರಲಿಲ್ಲ. ಇದರಿಂದ ಮೌಲ್ಯಾಚರಣೆಗಳೂ ಜಾತಿ ಪದ್ಧತಿಯನ್ನು ಗಟ್ಟಿಯಾಗಿ ನೆಲೆಯಾಗಿಸಲು ಕಾರಣವಾಗುತ್ತವೆ. ಹೆಚ್.ಎಲ್.ನಾಗೇಗೌಡರು ಸತಿಪದ್ಧತಿಯನ್ನು ಕುರಿತು ಹೀಗೆ ಪ್ರತಿಕ್ರಿಯಿಸುತ್ತಾರೆ.

> *"ಮಧ್ಯಯುಗದಲ್ಲಿನ ವಿಧವೆಯರ ಬಾಳು ನರಕ ಸದೃಷವಾಗಿತ್ತು ಎಂದು ತಿಳಿಯುತ್ತದೆ. ಪತಿಯ ಮರಣಾ ನಂತರ ಪತಿಯ ಶವದೊಂದಿಗೆ ಚಿತೆ ಏರುವ ಸತಿ ಬೆಂಕಿಯಲ್ಲಿ ಉರಿದು ಸುಟ್ಟು ಬೂದಿಯಾದ ನಂತರ ಎಲ್ಲರೂ ಆಕೆಯ ಹಿರಿಮೆಯನ್ನು ಕೊಂಡಾಡುತ್ತಾರೆ. ಕೆಲವು ವಿಧವೆಯರು ಪತಿಯ ಮರಣಾ ನಂತರ ಕೆಟ್ಟುಪಟ್ಟಣ ಸೇರು ಎಂಬಂತೆ ಪಟ್ಟಣಗಳಲ್ಲಿ ಜೀವನ ಸಾಗಿಸಲು ವೇಶ್ಯಾವೃತ್ತಿ*

---

೧. ಆಶಿಶ್‌ನಂದಿ ವಿಚಾರ ಸಾಹಿತ್ಯ – ಆಶಿಶ್‌ನಂದಿ – (ಅನು) ಕೆ.ವಿ. ಸುಬ್ಬಣ್ಣ – ಅಕ್ಷರ ಪ್ರಕಾಶನ – ಹೆಗ್ಗೋಡು – ೧೯೯೫. ಪು. ೪೨

*ಮಾಡುತ್ತಿದ್ದರು. ಮತ್ತೆ ಕೆಲವರು ತೌರುಮನೆ ಸೇರಿ ಮನೆಕೆಲಸದವರಾಗಿ ಬಾಳುತ್ತಿದ್ದರು. ಇಂತಹ ಸ್ಥಿತಿಗೆ ನೊಂದು ಮುಕ್ತಿಕಾಣಿಸುವಂತೆ ಅನೇಕ ವಿಧವೆಯರು ಕೇಳಿಕೊಂಡರೂ ಸಂಪ್ರದಾಯವಾದಿಗಳು ಒಪ್ಪುತ್ತಿರಲಿಲ್ಲ. ಮನೆಮನೆಗೆ ಹೋಗಿ ಅಕ್ಕಿಮಾರಿ ಜೀವನ ಸಾಗಿಸುವುದು ವಿಧವೆಯರ ಪಾಡಾಗಿದ್ದು ಸಂಪ್ರದಾಯವಾಗಿ ಬೇರೂರಿತ್ತು."*[೧]

ರಾಜಮಹಾರಾಜರು ಮರಣಹೊಂದಿದಾಗ ರಾಣಿಯರು ಸೇವಕಿಯರು ಉಪಪತ್ನಿಯರು ರಾಜನೊಂದಿಗೆ ಚಿತೆಗೆ ಆಹುತಿಯಾಗುತ್ತಿದ್ದರು. ಅವರೇ ಬೀಳದಿದ್ದರೆ ಒತ್ತಾಯದಿಂದ ಉರಿಯುವ ಬೆಂಕಿಗೆ ನೂಕುತ್ತಿದ್ದರು. ಸೈನಿಕನ ಪತ್ನಿಯೂ ಹೋರಾಟದಲ್ಲಿ ಮಡಿದ ಪತಿಯ ನೆನಪಿಗಾಗಿ ಅಗ್ನಿ ಕುಂಡದಲ್ಲಿ ಆಹುತಿಯಾಗುತ್ತಿದ್ದಳು. ಹೀಗೆ ಅಗ್ನಿ ಕುಂಡಕ್ಕೆ ಬಿದ್ದ ಸ್ತ್ರೀಯರು ವೈಕುಂಠ ಸೇರಿ ದೇವತೆಗಳಾಗಿ ಪುನರ್ಜನ್ಮ ಪಡೆಯುತ್ತಾರೆ ಎಂದು ಹಿಂದುಗಳು ನಂಬಿ ಇಂದಿಗೂ ಚಾಲ್ತಿಯಲ್ಲಿಟ್ಟಿರುವುದು ಕಳೆದ ದಶಕದಲ್ಲಿ ರೂಪಕನ್ವರ್ ಸತಿಯಾದುದಕ್ಕೆ ಸಾಕ್ಷಿಯಾಗಿದೆ. ಇಂತಹ ಅನಿಷ್ಟ ಪದ್ಧತಿಗಳ ಆಚರಣೆ ಮಹಿಳೆಯರ ಬದುಕಿನ ವಿಕಾಸದ ಹಾದಿಯನ್ನು ಮುಚ್ಚಿದ್ದವು.

ಭಾರತೀಯ ಸಮಾಜದ ಮಹಿಳೆ ಪತಿಯ ಮರಣಾ ನಂತರ ಪತಿಯ ಶವದ ಜೊತೆಗೆ ಚಿತೆ ಏರುವುದನ್ನು ವೈಭವೀಕರಿಸಿ ಆಕೆ ಸ್ವರ್ಗ ಸೇರುತ್ತಾಳೆಂದು ದಂತಕತೆಗಳನ್ನು ಹೆಣೆದು ಹಿಂದೂ ಧರ್ಮದ ಭಾಗವೆಂದು ಭಾವಿಸಲಾಗಿತ್ತು. ಬಾಲ್ಯ ವಿವಾಹ, ಹೆಣ್ಣು ಮಕ್ಕಳ ಮಾರಾಟ, ಹೆಣ್ಣು ಮಕ್ಕಳ ಗುಲಾಮಗಿರಿ, ಹೆಣ್ಣು ಮಕ್ಕಳನ್ನು ಬಲಿಕೊಡುವುದು ಅವ್ಯಾಹತವಾಗಿ ನೆರವೇರುತ್ತಿತ್ತು.

*"ಕ್ರಿ.ಶ.೨-೩ನೇ ಶತಮಾನದಿಂದ ಹೆಚ್ಚು ಕಡಿಮೆ ಒಂದುವರೆ ಸಾವಿರ ವರ್ಷಗಳವರೆಗೆ ಆಚರಣೆಯಲ್ಲಿದ್ದ 'ಸತಿಪದ್ಧತಿ'ಯೂ ಇಂದು ಹೇಳ ಹೆಸರಿಲ್ಲವಾಗಿದೆ. ೧೯೫೧-೫೬ರಲ್ಲಿ ಹಾಗೂ ೧೯೭೩-೮೦ರಲ್ಲಿ ಆ ಪದ್ಧತಿಯ ಒಂದೆರಡು ಪ್ರಕರಣಗಳು ವರದಿಯಾಗಿದ್ದು ನಾಡಿನಾದ್ಯಂತ ಕೋಲಾಹಲಕ್ಕೆ ಕಾರಣವಾಗಿತ್ತು. ಸತಿಪದ್ಧತಿಯು ಒಂದು ಕಾಲಕ್ಕೆ ಅನಿವಾರ್ಯತೆಯಿಂದ ಬೆಳೆದುನಿಂತ ಪದ್ಧತಿಯಾಗಿದ್ದ ಮಾತ್ರಕ್ಕೆ ಬದಲಾದ ಇಂದಿನ ಪರಿಸ್ಥಿತಿಯಲ್ಲೂ ಪ್ರೋತ್ಸಾಹಿಸುವುದು ಅನಾಗರಿಕ ಹಾಗೂ ಬರ್ಬರ ಕೃತ್ಯವೆಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ೧೮೨೯ರಲ್ಲಿ ಅನುಷ್ಠಾನಕ್ಕೆ ಬಂದ 'ಸತಿನಿಷೇಧ' ಶಾಸನದ ಬಲದಿಂದ ಈ ಪದ್ಧತಿಯ ಆಚರಣೆ ನಿಂತಿತೆಂಬುದು ಪೂರ್ಣ ಸತ್ಯವಲ್ಲ.*

---

೧. ಉದ್ಧೃತ-ಮಹಿಳಾ ಚಳವಳಿ-ಹಾಲತಿ ಸೋಮಶೇಖರ್ – ವಿಸ್ಮಯ ಪ್ರಕಾಶನ- ಮೈಸೂರು- ೨೦೦೭ - ಪು. ೧೪೨

*ಈ ಪದ್ಧತಿಯೂ ಇಂದಿನ ಸಾಮಾಜಿಕ ಪರಿಸ್ಥಿತಿಗೆ ಅಸಹಜವಾದುದು ಹಾಗೂ ಅಮಾನುಷವಾದುದು ಎಂಬ ಅರಿವು ಜನರಲ್ಲಿ ಮೂಡತೊಡಗಿದ್ದರಿಂದ ಅಷ್ಟು ವ್ಯಾಪಕವಾಗಿ ಉತ್ತರಭಾರತದಾದ್ಯಂತ ಪಸರಿಸಿದ್ದ ಆಚರಣೆಯು ಕ್ರಮೇಣವಾಗಿ ಕಣ್ಮರೆಯಾಯಿತೆನ್ನುವುದು ಹೆಚ್ಚು ಸಮಂಜಸವಾದುದೆನಿಸುತ್ತದೆ."*[೧]

ಅನಿಷ್ಟ ಪದ್ಧತಿಗಳು ಸಾಮಾಜಿಕ ಸಮಸ್ಯೆಗಳಾಗಿ ಮಹಿಳೆಯ ಸಾಂಸ್ಕೃತಿಕ ಬದುಕನ್ನು ಛಿದ್ರಗೊಳಿಸಿತು. ಇಂತಹ ರೂಢಿಸಂಪ್ರದಾಯಗಳಿಂದ ಹೊರಬಂದು ಹೊಸದಾಗಿ ರೂಪುಗೊಳ್ಳಲು ಬಹಳ ಕಾಲ ಕ್ರಮಿಸಬೇಕಾಯಿತು. ಎಂ.ವಿ.ಇನಾಂದಾರ್‌ರವರು 'ಇಂದಿರಾ'. ಕಾದಂಬರಿಯ ಮುನ್ನುಡಿಯಲ್ಲಿ ಅನಿಷ್ಟ ಪದ್ಧತಿಗಳ ಸುಧಾರಣೆಯನ್ನು ಹೀಗೆ ವಿಶ್ಲೇಷಿಸುತ್ತಾರೆ.

*"ಪ್ರಚಾರದ ಮಾತುಗಳಿಂದ ಅಥವಾ ಒತ್ತಾಯಿಸುವ ಕಾನೂನಿನಿಂದ ಸಮಾಜ ಸುಧಾರಣೆ ಸಿದ್ಧಿಸುವುದಿಲ್ಲ ದೇಶ, ಕಾಲ ಪರಿಸ್ಥಿತಿಗಳಿಗೆ ಅನುಗುಣವಾದ ಶಿಕ್ಷಣದ ಮೂಲಕವಾಗಲಿ, ಯಾವುದಾದರೂ ಆಕಸ್ಮಿಕವಾದ ಕ್ರಾಂತಿಕಾರಿ ಘಟನೆಯಿಂದಾಗಲಿ ಅಧಿಕಾರದ ಬಲದಿಂದಾಗಲಿ ಅವುಗಳನ್ನು ಜಾರಿಯಲ್ಲಿ ತರುವುದು ಅನರ್ಥವಾದುದು"*[೨]

'ಸತಿಪದ್ಧತಿ'ಯಂತಹ ಘೋರ ಆಚರಣೆಯನ್ನು ತೊಡೆದುಹಾಕಿದ ಮಾತ್ರಕ್ಕೆ ವಿಧವಾ ಸಮಸ್ಯೆ ನಿವಾರಣೆಯಾಗಲಿಲ್ಲ. ವಿಧವೆ ಅಗೌರವ ಅಸಡ್ಡೆ ಅವಮಾನದಿಂದ ಕುಗ್ಗಿಹೋಗಿದ್ದಳು. ಹಾಗಾಗಿ ಸತಿನಿಷೇದ ಶಾಸನಕ್ಕೆ ಪೂರಕವಾದ ಶಾಸನದ ಅಗತ್ಯ ಉಂಟಾಯಿತು. ಪಂಡಿತ ಈಶ್ವರ ಚಂದ್ರ ವಿದ್ಯಾಸಾಗರವರ ಪ್ರಯತ್ನದಿಂದ ಬ್ರಿಟಿಷ್ ಸರ್ಕಾರ ೧೮೫೬ರಲ್ಲಿ "ಹಿಂದೂ ಪುನರ್ವಿವಾಹ" ಕಾಯ್ದೆಯನ್ನು ಅನುಷ್ಠಾನಕ್ಕೆ ತಂದಿತು. ಇದರಿಂದ ದಯನೀಯ ಸ್ಥಿತಿ ಅಂತ್ಯವಾಗಲಿಲ್ಲ.

"ಆದರೆ ದಶಕಗಳ ಬಳಿಕವಾದರೂ ಈ ಶಾಸನದ ಪ್ರಭಾವ ಕಾಣತೊಡಗಿತು. ಗಣನೀಯ ಸಂಖ್ಯೆಯಲ್ಲಿ ವಿಧವಾ ಸ್ತ್ರೀಯರ ಪುನರ್ವಿವಾಹ ನಡೆಯಲಿಲ್ಲ. ನಡೆಯುತ್ತಲೂ ಇಲ್ಲ ನಿಜ. ಆದಾಗ್ಯೂ ಈ ಶಾಸನ ಮತ್ತು ಅದು ಸೃಷ್ಟಿ ಮಾಡಿದ ಜನಜಾಗೃತಿಯಿಂದಾಗಿ ಹಿಂದೂ ವಿಧವೆಯರು ಇಂದು ಗೌರವದ ಜೀವನ ನಡೆಸಬಹುದಾಗಿದೆ. ಅವರು ತೀರಾ ಚಿಕ್ಕ ವಯಸ್ಸಿನವರಾಗಿದ್ದರೆ ಶಿಕ್ಷಣ ಮುಂದುವರಿಸಲು ಕೆಲಸಕ್ಕೆ ಸೇರಲು, ಇಚ್ಚೆಪಟ್ಟಲ್ಲಿ ಮರುವಿವಾಹವಾಗಲು ಇಂದು ಅವಕಾಶಗಳಿವೆ. ಈ ಅವಕಾಶಗಳ ಉಪಯೋಗ ಮಾಡಿಕೊಂಡವರನ್ನು ಅವಹೇಳನ ಮಾಡುವ ಪ್ರವೃತ್ತಿಯೂ ಈಗ ಮರೆಯಾಗಿವೆ."[೩]

---

೧. ಭಾರತೀಯ ಸಮಾಜ – ಚ.ನ. ಶಂಕರ್‌ರಾವ್ – ಜೈ ಭಾರತ್ ಪ್ರಕಾಶನ – ಮಂಗಳೂರು – ೨೦೦೨ – ಪು – ೮೪

೨. ಇಂದಿರಾ – ಕೆರೂರು ವಾಸುದೇವಾಚಾರ್ಯರು – ಉಷಾ ಸಾಹಿತ್ಯ ಮಾಲೆ – ಮೈಸೂರು – ೧೯೮೪ – ಪು. ೩೮

೩. ಭಾರತೀಯ ಸಮಾಜ–ಚ.ನ. ಶಂಕರ್‌ರಾವ್–ಜೈ ಭಾರತ್ ಪ್ರಕಾಶನ–ಮಂಗಳೂರು–೨೦೦೨–ಪು–೮೪–೮೫

ಬದಲಾಗುತ್ತಿರುವ ಸಾಮಾಜಿಕ ಸ್ಥಿತಿಯಲ್ಲಿ ವಿಧವಾ ವಿವಾಹವನ್ನು ಒಪ್ಪುವ ಮನೋಭಾವ ನಿದಾನವಾಗಿ ನೆಲೆಸುತ್ತಿದೆ. ಇಂತಹ ಅನಿಷ್ಟ ಪದ್ಧತಿಯಲ್ಲಿ ಸಿಲುಕಿದ ಸ್ತ್ರೀಯರನ್ನು ಸಂಕೋಲೆಯಿಂದ ಬಿಡಿಸುವುದರಲ್ಲಿ ಕ್ರಿಯಾಶೀಲರಾದವರು ರಾಜಾರಾಮ್ ಮೋಹನ್‌ರಾಯ್ ಮೊದಲಿಗರು. ಇವರು ತಮ್ಮ ಅಣ್ಣ ತೀರಿಕೊಂಡಾಗ ಅತ್ತಿಗೆಯನ್ನು ಶಾಸ್ತ್ರೋಕ್ತವಾಗಿ ಬೆಂಕಿಗೆ ಬೀಳುವಂತೆ ಮಾಡಿರುವುದನ್ನು ಕಣ್ಣಾರೆ ಕಾಣುತ್ತಾರೆ. ಹೆಣ್ಣಿನ ಇಂತಹ ಸಾವನ್ನು ನಿಗೂಢ ರೀತಿಯಲ್ಲಿ ಕೊಲೆ ಮಾಡುವುದು ಎಂದು ಭಾವಿಸುತ್ತಾರೆ. ಸತಿಹೋಗದ ವಿಧವೆಯರನ್ನು ವಿಚಿತ್ರವಾಗಿ ಹಿಂಸಿಸುವುದನ್ನು ಮೋಹನರಾಯರು ನಿತ್ಯವೂ ನೋಡಿ ಈ ಅನಿಷ್ಟಪದ್ಧತಿ ತೊಲಗಿಸುವ ದೃಢನಿರ್ಧಾರ ಕೈಗೊಂಡರು.

## ೧೦. <u>ಸಾಮಾಜಿಕ ಅನಿಷ್ಟ ಪದ್ಧತಿಗಳ ಸುಧಾರಣೆ</u>

ಸಾಮಾಜಿಕ ಸುಧಾರಣೆ ೧೯ನೇ ಶತಮಾನದ ಹಿಂದೂ ಧರ್ಮದಲ್ಲಿನ ವಿಚಾರಗಳನ್ನು ಆಶಯಗಳನ್ನು ಕೀಳಾಗಿ ಕಾಣುತ್ತಿದ್ದ ಕ್ರೈಸ್ತರ ಪ್ರಭಾವಕ್ಕೆ ಒಳಗಾದ ಭಾರತೀಯರು ಸ್ವಧರ್ಮ ನಿಂದನೆಗೂ ಮುಂದಾದರು. ಪಾಶ್ವಾತ್ಯ ಸಂಸ್ಕೃತಿ, ಸಂಪ್ರದಾಯಗಳ ಅನುಕರಣೆ ಮೌಲ್ಯಯುತವಾದುದೆಂದು ಭಾವಿಸಿದರು. ಆದರೆ ವಿಭಿನ್ನ ಪಾಶ್ಚಾತ್ಯ ಸಂಸ್ಕೃತಿಯ ಸಂಘರ್ಷಕ್ಕೊಳಗಾಗುತ್ತಲೇ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದು ಭಾರತೀಯ ಸಂಸ್ಕೃತಿಯ ಉತ್ತಮಾಂಶಗಳನ್ನು ರೂಢಿಸಿಕೊಳ್ಳತೊಡಗಿತು. ಇದಕ್ಕೆ ಮೊದಲು ಕಾರಣ ಪುರುಷರಾದವರು ರಾಜಾರಾಮ ಮೋಹನರಾಯರು.

> *"ಹಲವಾರು ಭಾಷೆಗಳನ್ನು ಬಲ್ಲ ಇವರು ಭಾರತದ ಸಾಮಾಜಿಕ ಹಾಗೂ ಧಾರ್ಮಿಕ ಪರಿಸರದಲ್ಲಿ ಹೊಸ ಕ್ರಾಂತಿಗೆ ಕಾರಣರಾದರು. ಪಾಶ್ಚಾತ್ಯ ಸಂಸ್ಕೃತಿಯ ಮೌಲ್ಯಗಳೇ ಶ್ರೇಷ್ಟವೆಂಬ ನಂಬಿಕೆ ಆರಂಭ ಹಂತದಲ್ಲಿ ಮೋಹನರಾಯರಲ್ಲಿದ್ದರೂ ಭಾರತೀಯ ಸಂಸ್ಕೃತಿಯ ಸುಧಾರಣೆಗೆ ತೊಡಗಿದ್ದು ಹಾಗೂ ಇಂಗ್ಲೀಶ್‌ರ ಸಹಾಯದಿಂದ ಸಹಗಮನದಂತಹ ಅನಾಗರಿಕ ಕ್ರೂರ ಪದ್ಧತಿಯ ನಿರ್ನಾಮಕ್ಕೆ ಮೂರ್ತಿ ಪೂಜೆಯ ಖಂಡನೆಗೆ ಕಾರಣರಾಗಿ ಬ್ರಿಟೀಷ್ ವಿರೋಧಿ ನೆಲೆಯನ್ನು ಸಮರ್ಥವಾಗಿ ರೂಪಿಸಿದರು. ಆರಂಭದಲ್ಲಿ ಹಿಂದೂ ಪುರಾಣಗಳ ಅಪ್ರಸ್ತುತೆಯನ್ನು ಅವತಾರಗಳನ್ನು ಟೀಕೆಗೆ ಗುರಿಪಡಿಸಿದಂತೆ. ಅನಂತರ ಕ್ರಿಸ್ತನ ಅವತಾರಗಳನ್ನು ಪ್ರಶ್ನಿಸಿದ್ದು ರಾಜಾರಾಮ ಮೋಹನ್‌ರಾಯರ ಬಹುದೊಡ್ಡ ಸಾಧನೆಯಾಗಿದೆ."*[೧]

೧೯ನೇ ಶತಮಾನದಲ್ಲಿ ರಾಜಾರಾಮಮೋಹನರಾಯರ ಹೋರಾಟಕ್ಕೆ ಅನೇಕ

---

೧. ಕನ್ನಡದ ಹಾಡುಪಾಡು – ಕೆ.ಸಿ. ಶಿವಾರೆಡ್ಡಿ – ಅಧ್ಯಯನ ಮಂಡಲ –ಬೆಂಗಳೂರು – ೨೦೦೨ – ಪು. ೨೧.

ಸವಾಲುಗಳು ಎದುರಾದವು. ಬ್ರಿಟೀಷರ ಮನವೊಲಿಸಿ ಪರಿಸ್ಥಿತಿಯನ್ನು ವಿವರಿಸಿ ಪಿಡುಗುಗಳನ್ನು ನಿವಾರಿಸುವುದು ತುರ್ತಾಗಿತ್ತು. ವ್ಯಾಪಾರೀಮನೋಭಾವದಿಂದ ಭಾರತಕ್ಕೆ ಬಂದ ಬ್ರಿಟೀಷರಿಗೆ ಸಂಪತ್ತಿನ ಬಗ್ಗೆ ಗಮನವಿತ್ತೇ ವಿನಃ ಭಾರತೀಯ ಮೂಢನಂಬಿಕೆ, ಅಜ್ಞಾನ ಮತಾಂಧತೆಯನ್ನು ತಡೆಗಟ್ಟುವ ಬದ್ಧತೆಗಳಿರಲಿಲ್ಲ. ಆದರೆ, ಪಂಡಿತರು, ಸನಾತನಿಗಳು, ಬ್ರಾಹ್ಮಣರು, ಸಂಪ್ರದಾಯವಾದಿಗಳನ್ನು ಒಪ್ಪಿಸುವುದು ಇದೊಂದು ಅಮಾನವೀಯ ಕೃತ್ಯ ಎಂದು ಅರಿವು ಮೂಡಿಸುವುದು ದೊಡ್ಡ ಕಷ್ಟವಾಗಿತ್ತು. ವಿಧವೆಯರನ್ನು ಕರ್ಮಸಿದ್ಧಾಂತದಿಂದ ಹೊರತರುವುದು ದೊಡ್ಡ ಸಾಹಸವೇ ಆಗಿತ್ತು. ಮತ್ತು ಇಡೀ ಸಮಾಜವೇ ಒಂದು ನೆಲೆಯಲ್ಲಿ ಚಿಂತಿಸುವಾಗ ಅದರ ವಿರುದ್ಧ ನೆಲೆಯಲ್ಲಿ ಪ್ರತಿಭಟನೆಗೆ ತಕ್ಕ ಮಾನಸಿಕ ಸ್ಥೈರ್ಯ ರಾಜಾರಾಮರಿಗೆ ಅಗತ್ಯವಿತ್ತು. ಈ ದಿಸೆಯಲ್ಲಿ ಹೋರಾಟಕ್ಕಿಳಿದ ರಾಜಾರಾಮರಿಗೆ ಅನಿಷ್ಟ ಪದ್ಧತಿಯ ಕರಾಳತೆಯೇ ಕಣ್ಮುಂದಿತ್ತು. ಹಿಂದೂ ಧರ್ಮಬಿಟ್ಟು ಬೇರೆ ಯಾವ ಮತ ಧರ್ಮದವರೂ ವಿಧವೆಯನ್ನು 'ಗುಲಾಮಳು' 'ನಾಶಮಾಡಬೇಕಾದ ವಸ್ತು' ಎಂದು ಭಾವಿಸಿರಲಿಲ್ಲ. ಮುಸ್ಲಿಂ ಆಡಳಿತಗಾರರೂ ಈ ಪದ್ಧತಿಯನ್ನು ವಿರೋಧಿಸುತ್ತಿದ್ದರು. ಅಕ್ಬರ್, ಔರಂಗಜೇಬ್, ಜಹಂಗೀರ್ ಬಲವಂತದ ಸತಿಪದ್ಧತಿಯನ್ನು ಖಂಡಿಸಿರುವುದು ಇತಿಹಾಸ ನಿರೂಪಿಸುತ್ತದೆ.

ಬ್ರಿಟಿಶರನ್ನು ಒಪ್ಪಿಸುವ ಸಲುವಾಗಿ ಹಿಂದೂಧರ್ಮಗ್ರಂಥಗಳ ಇಂಗ್ಲಿಷ್ ಅನುವಾದವನ್ನು ಕಲ್ಕತ್ತಾ ಜರ್ನಲ್ ಮತ್ತು ಗೆಜೆಟಿಯರ್‌ಗಳಲ್ಲಿ ಪ್ರಕಟಿಸಿ ಕಾನೂನಿನಿಂದ ಮಾತ್ರ ಅನಿಷ್ಟ ಪದ್ಧತಿಗಳನ್ನು ಬುಡಸಮೇತ ಕಿತ್ತು ಹಾಕಬಹುದೆಂದು ನ್ಯಾಯದೀಶರುಗಳಿಗೆ ಮನದಟ್ಟು ಮಾಡಿದರು. ೧೮೨೮ರಲ್ಲಿ 'ಬ್ರಹ್ಮಸಮಾಜ'ವನ್ನು ಸ್ಥಾಪಿಸಿ ಸ್ತ್ರೀ ಸಂಬಂಧಿ ಮಾನವೀಯ ದೃಷ್ಟಿ ಧೋರಣೆಗಳನ್ನು ಚರ್ಚಿಸತೊಡಗಿದರು. ಇದರಿಂದ ಕುಪಿತರಾದ ಸಂಪ್ರದಾಯ ವಾದಿಗಳು. ರಾಜಾರಾಮರನ್ನು ಕೊಲೆ ಮಾಡುವುದಕ್ಕೂ ಮುಂದಾಗಿರುವುದು ಆ ಸಮಾಜದ ಧರ್ಮಾಂಧತೆಯನ್ನು ವ್ಯಕ್ತಪಡಿಸುತ್ತದೆ. ಇದರಿಂದ ಅಂಜದ ರಾಜಾರಾಮ್ ಅದೇ ಕಾಲಕ್ಕೆ (೧೮೨೯) ಗವರ್ನರ್ ಆಗಿ ಬಂದ ಲಾರ್ಡ್‌ವಿಲಿಯಂ ಬೆಂಟಿಂಕ್‌ರವರಿಗೆ 'ಸತಿಪದ್ಧತಿ'ಯ ಕ್ರೌರ್ಯವನ್ನು ಅರ್ಥಮಾಡಿಸಿ ಡಿಸೆಂಬರ್ ೪. ೧೮೨೯ರಂದು 'ಸತಿಪದ್ಧತಿ ನಿಷೇಧ' ಆಜ್ಞೆಯನ್ನು ಹೊರಡುವಂತೆ ಮಾಡಿದರು. ಇವರ ಚಾರಿತ್ರಿಕ ಸಾಧನೆ ಮಹಿಳಾ ವಿಮೋಚನೆಗೆ ದಾರಿಯಾಯಿತು. ಬಾಲ್ಯವಿವಾಹಗಳು ಕಡಿಮೆಯಾಗಿ ವಿಧವಾ ವಿವಾಹ ಪದ್ಧತಿಗೆ ಪ್ರೋತ್ಸಾಹ ದೊರಕುವಂತಾಯಿತು.

ವಿಧವಾವಿವಾಹದ ಹರಿಕಾರರಾದ ಈಶ್ವರ ಚಂದ್ರ ವಿದ್ಯಾಸಾಗರವರು ೧೮೫೭-೫೮ರ ಅವಧಿಯಲ್ಲಿ ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ಶಾಲೆಗಳನ್ನು ಸ್ಥಾಪಿಸಿದರು.

ಬಾಲ್ಯವಿವಾಹ, ಸತಿಪದ್ಧತಿ ಸಂಪೂರ್ಣ ನಿಂತಿರಲಿಲ್ಲ ಇದು ಈಶ್ವರ ಚಂದ್ರರನ್ನು ಬಾಧಿಸುತ್ತಿತ್ತು. ಜೊತೆಗೆ ಒಬ್ಬ ಗಂಡಸು ಅನೇಕ ಹೆಣ್ಣುಗಳನ್ನು ವಿವಾಹವಾಗುವುದರಿಂದ ಆ ಗಂಡಸಿನ ಸಾವಿನಿಂದ ಅನೇಕ ಹೆಂಡತಿಯರು ವಿಧವೆಯರಾಗುತ್ತಿದ್ದರು. ಇವರಲ್ಲಿ ಬಾಲವಿಧವೆಯರೇ ಹೆಚ್ಚಾಗಿರುತ್ತಿದ್ದರು. ಹಾಗಾಗಿ ವಿಧವಾ ವಿವಾಹ, ಬಹುಪತ್ನಿತ್ವ ಎರಡರ ಪರವಾಗಿಯೊ ಹೋರಾಡಬೇಕಾಗಿತ್ತು. ಅವರ ಹೋರಾಟದ ಫಲವಾಗಿ ೧೮೫೬ರ ಜುಲೈ ೨೬ರಂದು ಗೌರ್ನರ್ ಜನರಲ್‌ರ ಅನುಮೋದನೆಯೊಂದಿಗೆ 'ವಿಧವಾ ವಿವಾಹ' ಕಾಯಿದೆ ಅಧಿನಿಯಮವಾಯಿತು. ಮತ್ತು ಇದೇ ವರ್ಷದ ಡಿಸೆಂಬರ್ ೭ ರಂದು ವಿಧವಾ ಪುನರ್‌ವಿವಾಹವನ್ನು ಕಲ್ಕತ್ತಾದಲ್ಲಿ ನೆರವೇರಿಸಿ ವಿಧವೆಯರ ಬದುಕಿನಲ್ಲಿ ಹೊಸ ಅಧ್ಯಾಯವನ್ನು ತೆರೆದರು. ಇದರಿಂದ ಸಂಪ್ರದಾಯವಾದಿಗಳಿಂದ ವಿರೋಧ ಎದುರಾಯಿತು. ಇದರಿಂದ ವಿಚಲಿತರಾಗದೆ ಧೈರ್ಯ, ಪಾಂಡಿತ್ಯ, ಕಾರ್ಯದಕ್ಷತೆಯಿಂದ ಸ್ತ್ರೀಸಮಾಜಕ್ಕಂಟಿದ್ದ ಅನಿಷ್ಟ ಪಿಡುಗುಗಳನ್ನು ತೊಡೆದು ಹಾಕಲು ಯಶಸ್ವಿಯಾದರು. 

ಇನ್ನೋರ್ವ ಸುಧಾರಕರಾದ ಜ್ಯೋತಿರಾವ್‌ಪುಲೆ ದೊಡ್ಡ ಹೋರಾಟಗಾರರಾಗಿ ಮೂಡಿ ಬಂದರು ಸ್ತ್ರೀ ಶಿಕ್ಷಣದ ಮಹತ್ವ ಅರಿತವರು. ವಿಧವೆಯರ ಮಕ್ಕಳನ್ನು ಪೋಷಿಸಲು ಅನಾಥಾಲಯ ಆರಂಭಿಸಿದರು. ವಿಧವಾವಿವಾಹಕ್ಕೆ ವೇದಿಕೆ ನಿರ್ಮಿಸಿದರು. ವಿಧವೆಯರು ಮರೆಮಾಚಿ ಗರ್ಭಿಣಿಯರಾದಾಗ ಅವರಿಗಾಗಿ ಪ್ರಸೂತಿ ಗೃಹವನ್ನು ತೆರೆದು ಮಾನವೀಯತೆಯನ್ನು ಮೆರೆದು ಅವಳ ಸಹಜಕ್ರಿಯೆಯನ್ನು ಸಹಜವಾಗಿ ಕಾಣುವಂತೆ ಮಾಡುತ್ತಾರೆ. ಬ್ರಾಹ್ಮಣ ವಿಧವೆಯರ ಕೇಶಮುಂಡನ ಕಾರ್ಯವನ್ನು ಅಮಾನವೀಯ ಎಂದು ತಡೆಯಲು ಹಜಾಮರನ್ನು ಸಂಘಟಿಸಿ ಕೇಶಮುಂಡನವನ್ನು ತಡೆದರು. ೧೮೭೩ರಲ್ಲಿ 'ಸತ್ಯಶೋಧಕ ಸಮಾಜ'ವನ್ನು ಸ್ಥಾಪಿಸಿ "ಸರ್ವರೂ ಸಮಾನರು ಸರ್ವರಿಗೂ ಸಮಬಾಳು" ಎಂಬ ನೀತಿಯನ್ನು ಪ್ರತಿಪಾದಿಸಿದರು. ಪ್ರೌಢಾವಸ್ಥೆಯಲ್ಲಿ ಹೆಣ್ಣಿಗೂ ಆಯ್ಕೆಗಳಿರಬೇಕೆಂದು ಒತ್ತಡ ತಂದರು. ವಿದ್ಯೆಯಿಂದ ವಂಚಿತರಾದ ಮಹಿಳೆಯರಿಗೆ ಶಿಕ್ಷಣ ನೀಡುವುದರಿಂದ ಮಾತ್ರ ಸಾಮಾಜಿಕ ಸಮಸ್ಯೆಗಳ ನಿವಾರಣೆ ಸಾಧ್ಯ ಎಂದು ದೃಢವಾಗಿ ನಂಬಿದ್ದರು. ಇದರಿಂದ ಹೆಣ್ಣು ಮಕ್ಕಳಿಗೆಂದೇ ಶಾಲೆಯನ್ನು ತೆರೆದರು. ಶೂದ್ರನೊಬ್ಬ ತೆರೆದ ಶಾಲೆ ಎಂದು ಶಿಕ್ಷಕರಾಗಲು ತಡೆದಾಗ ಪತ್ನಿಯನ್ನೇ ಶಿಕ್ಷಕಿಯಾಗಿ ನೇಮಿಸುತ್ತಾರೆ. ವಿವಾಹಿತ ಹೆಣ್ಣುಮಕ್ಕಳು ಶಾಲೆಗೆ ಸೇರುವುದನ್ನು ಅತ್ತೆ ಮಾವ ತಡೆಯುತ್ತಿದ್ದರು. ಹಾಗಾಗಿ 'ಬಾಲ್ಯವಿವಾಹ'ವನ್ನೇ ಸಮಾಜದಿಂದ ಕಿತ್ತು ಹಾಕಲು ಹೋರಾಡಿ ಸಫಲರಾದರು. ಕೇಶಮುಂಡನ ಬಾಲ್ಯವಿವಾಹ ಸ್ತ್ರೀ ಶಿಕ್ಷಣದ ವಿರೋಧಿಗಳಾದ ಸಂಪ್ರದಾಯಸ್ಥರಿಗೆ ವಿಧವೆಯರನ್ನು ನ್ಯಾಯಾಲಯಕ್ಕೆ ಕಳುಹಿಸುವುದರ ಮೂಲಕ ಉತ್ತರ ನೀಡುತ್ತಾರೆ.

ಸಂಪ್ರದಾಯವಾದಿಗಳ ಕಪಿಮುಷ್ಟಿಯಿಂದ ತಪ್ಪಿಸಿಕೊಂಡು ಪ್ರಾಣದ ಹಂಗು ತೊರೆದು ಶ್ರಮಿಸಿದ ಪುಲೆಯವರು ದೇವದೂತರಾಗಿ ಕಾಣುತ್ತಾರೆ.

ಮಹರ್ಷಿಕರ್ವೆಯವರು ಶಿಕ್ಷಕರಾಗಿ, ಪ್ರೌಢಶಾಲಾ ಶಿಕ್ಷಕರಾಗಿ, ಕಾಲೇಜು ಉಪನ್ಯಾಸಕರಾಗಿ ಮಹಿಳಾ ವಿಶ್ವವಿದ್ಯಾಲಯದ ಸ್ಥಾಪಕರಾಗಿ ಸೇವೆಸಲ್ಲಿಸಿದರು. ಸಂಪ್ರದಾಯಸ್ಥ ಕುಟುಂಬದಲ್ಲಿ ಹುಟ್ಟಿದ ಕರ್ವೆಯವರು ವಿಧವೆಯನ್ನು ಮದುವೆಯಾಗುವ ಮೂಲಕ ಹಳೆ ಸಂಪ್ರದಾಯಕ್ಕೆ ತಿಲಾಂಜಲಿ ಇಟ್ಟ ಮಹಾನುಭಾವರು. ವಿಧವಾ ಮರುವಿವಾಹ ಜಾರಿಯಲ್ಲಿದ್ದ ಕಾಲದಲ್ಲಿ ವಿಧವೆಯರನ್ನು ಮದುವೆಯಾಗಲು ಹಿಂಜರಿಯುತ್ತಿದ್ದಾಗ ತಾವೇ ಸ್ವತಃ ವಿಧವಾ ವಿವಾಹವಾಗಿ ಸಮಾಜಕ್ಕೆ ಆದರ್ಶವಾದರು. ಆಶ್ರಮಗಳಲ್ಲಿ ವಿಧವೆಯರಿಗೆ ಊಟ ವಸತಿ ಶಿಕ್ಷಣ ನೀಡಿ ಕುಹಕಿಗಳಿಂದ ಟೀಕೆಗೊಳಗಾದರೂ ಮಹಿಳೆಯರ ಬದುಕಿಗೆ ಪುನಶ್ಚೇತನರಾಗಿ ಹೋರಾಡಿದರು.

ಸಾಂಸ್ಕೃತಿಕ ತಲ್ಲಣಗಳಿಗೊಳಗಾದ ಮಹಿಳಾ ಸಮಾಜವನ್ನು ಆರ್ಥಿಕವಾಗಿ ಸಾಮಾಜಿಕ ರಾಜಕೀಯವಾಗಿ ತೆರೆದುಕೊಳ್ಳಲು ಶ್ರಮಿಸಿದವರಲ್ಲಿ ಗಾಂಧಿ, ಅಂಬೇಡ್ಕರ್, ಲೋಹಿಯಾರವರು ಮುಖ್ಯರಾಗುತ್ತಾರೆ. ಮಾನವ ವಿಕಾಸದ ಆದಿಯಿಂದಲೂ ಒಂದಿಲ್ಲೊಂದು ಕಾರಣಕ್ಕಾಗಿ ತುಳಿತಕ್ಕೊಳಗಾಗಿ ಉಸಿರುಕಟ್ಟುವ ವಾತಾವರಣದಲ್ಲೆ ಬದುಕಿ ಬಂದ ಮಹಿಳೆ ತನ್ನ ಅಸ್ಮಿತೆಗಾಗಿ ಹೋರಾಡಿದ್ದಾಳೆ. ಆಕೆಗೆ ಸಮಾನತೆ ದೊರೆಯಬೇಕು. ಆಕೆಗೆ ನ್ಯಾಯ ಸಿಗಬೇಕಾದರೆ ಶಾಸ್ತ್ರ ಗ್ರಂಥಗಳನ್ನು ಪುನರ್‌ಪರಿಷ್ಕರಿಸಬೇಕು. ಮಹಿಳೆಯ ಘನತೆಗೆ ಧಕ್ಕೆ ತರುವ ಧರ್ಮಗ್ರಂಥಗಳನ್ನು ನಿಷೇಧಿಸಬೇಕೆಂದು, ಗಾಂಧೀಜಿ ಕರೆನೀಡುತ್ತಾರೆ. ನೂಲುವುದು, ನೇಯುವುದರ ಮೂಲಕ ಆರ್ಥಿಕ ಸ್ವಾವಲಂಬನೆ ಹೊಂದಬಹುದು. 'ವಿಧವೆಗೆ ಚರಕ ಪ್ರೀತಿ ಪೂರ್ವ ಸಂಗಾತಿ' ಎಂದು ಅಭಿಪ್ರಾಯ ಪಡುತ್ತಾರೆ. ಭಾರತದಲ್ಲಿ ಹೆಚ್ಚು ಶೋಷಣೆಗೊಳಗಾದವರು 'ಮಹಿಳೆಯರು' ಮತ್ತು 'ದಲಿತರು' ಎಂದು ಗಾಂಧೀಜಿ ಗುರುತಿಸಿದ್ದರು. ಸ್ವಾತಂತ್ರ್ಯ ಚಳುವಳಿಯ ಮುಂಚೂಣಿಯಲ್ಲಿ ಸರೋಜಿನಿ ನಾಯ್ಡು, ಕಮಲಾದೇವಿ, ಮೀರಾಬೆನ್, ವಿಜಯಲಕ್ಷ್ಮಿ ಪಂಡಿತ್ ಮುಂತಾದವರು ಇದ್ದರು ಎನ್ನುವುದು ಗಮನಾರ್ಹವಾದುದು.

ಡಾ. ಅಂಬೇಡ್ಕರ್ ಜಾತಿ ಆಧಾರಿತ ಸಮಾಜದಲ್ಲಿ ಸ್ತ್ರೀವಿಮೋಚನಾ ಮಹಿಳಾ ಹಕ್ಕನ್ನು ಸ್ಥಾಪಿಸಲು ಲಿಂಗಭೇದ ರಹಿತ ಸಮಾಜದ ಕನಸನ್ನು ಕಂಡರು. ಸಾವಿರಾರು ವರ್ಷಗಳಿಂದ ಮಹಿಳೆಗೆ ಹೇರಿದ್ದ ಮೌಢ್ಯವನ್ನು ಶಾಸನಬದ್ಧ ಕಾನೂನಿನ ಮೂಲಕ ತೊಡೆದು ಹಾಕಲು ಕಂಕಣಬದ್ಧರಾದರು. ಲಿಂಗ ಮತ್ತು ಹುಟ್ಟಿನ ಆಧಾರದಿಂದುಂಟಾದ ತಾರತಮ್ಯ, ಉದ್ಯೋಗದಲ್ಲಿ ಸಮಾನತೆ ಮತ್ತು ಸಮಾನ

ವೇತನವನ್ನು ಕಲ್ಪಿಸುವುದರ ಬಗ್ಗೆ ಕಾರ್ಯಪ್ರವೃತ್ತರಾದರು. ಉದ್ಯೋಗಸ್ಥ ಮಹಿಳೆಗೆ ಹೆರಿಗೆ ಭತ್ಯೆ ಒದಗಿಸುವ ಮತ್ತು ಧಾರ್ಮಿಕ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಹಕ್ಕುಗಳಲ್ಲಿ ಸ್ತ್ರೀ ಪುರುಷನಿಗೆ ಸಮಾನವಾಗಿರುವುದಕ್ಕೆ ಕಾನೂನಿನ ತಿದ್ದುಪಡಿ ತಂದರು.

ಭಾರತೀಯ ಸಮಾಜದ ಅನಿಷ್ಟ ಪದ್ಧತಿಗಳನ್ನು ಅಂಬೇಡ್ಕರ್‌ರವರು ಹೀಗೆ ವಿಶ್ಲೇಷಿಸುತ್ತಾರೆ.

"ಸ್ವಜಾತಿಯ ಸಗೋತ್ರ ವಿವಾಹ ಪದ್ಧತಿಯನ್ನು ಕಾಪಾಡುವ ಸಲುವಾಗಿ ಮೃತಗಂಡನ ಜೊತೆಯಲ್ಲಿ ಹೆಂಡತಿಯನ್ನು ಸುಟ್ಟು ಅವಳ ಬದುಕನ್ನು ಮುಗಿಸುತ್ತಾರೆ. ಒಂದುವೇಳೆ ವಿಧವೆ ಉಳಿದರೆ ಬೇರೆಜಾತಿಯವರೊಂದಿಗೆ ವಿವಾಹವಾಗಬಹುದು ಅಥವಾ ಸ್ವಜಾತಿಯಲ್ಲಿ ಮದುವೆಯಾಗಿ ಜಾತಿಯನ್ನು ಅಪವಿತ್ರಗೊಳಿಸಬಹುದು ಎಂದು ಆಕೆಯನ್ನು ಸತ್ತಗಂಡನ ಚಿತೆಯೊಂದಿಗೆ ಸುಡದಿದ್ದರೆ ಆಕೆಯೊಂದು ಪಿಡುಗು ಎಂದು ಭಾವಿಸಿದರು. ವಿಧವೆಯಾಗಿ ಉಳಿದರೆ ವಿಕಾರಗೊಳಿಸಿ ಕೆಳದರ್ಜೆಗೆ ತಳ್ಳಿದರು" ಜಾತಿ ವ್ಯವಸ್ಥೆಯ ಸಂರಕ್ಷಣೆಗೆ 'ಸತಿಪದ್ಧತಿ'ಯನ್ನು ಬಳಸಿಕೊಳ್ಳುತ್ತ, ಸಹಗಮನದಲ್ಲಿ ಸುಡಲಾದ ಮಹಿಳೆಯನ್ನು 'ದೇವತೆ' ಎಂದು ಕತೆಕಟ್ಟಿ ಹೊಗಳುವುದು ಜಾತಿವ್ಯವಸ್ಥೆಯನ್ನು ಗಟ್ಟಿಗೊಳಿಸಿ ಮುಂದುವರಿಸುವ ಪ್ರಕ್ರಿಯೆ ಎಂದು ಅಭಿಪ್ರಾಯ ಪಡುತ್ತಾರೆ. ಮನುವಿನ ರಾಕ್ಷಸಿ ಚಿಂತನೆಯನ್ನು ಅರ್ಥಮಾಡಿಕೊಂಡಿದ್ದ ಅಂಬೇಡ್ಕರ್ ಮಹಿಳೆಯರ ಸ್ವಾತಂತ್ರ್ಯ ಹರಣದಂತಹ ಸಂಸ್ಕೃತಿಯ ಬೇರು ಕಿತ್ತು ಸಮಾನತೆ ಮತ್ತು ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಲು ಬಲಿಷ್ಟವಾದ ಕಾನೂನುಗಳನ್ನು ರಚಿಸಿ ಶಾಸನಾತ್ಮಕ ನ್ಯಾಯ ನೀಡಿದರು. ಅಂಬೇಡ್ಕರ್‌ರವರ ಸ್ತ್ರೀವಾದಿ ಚಿಂತನೆಗಳು ಭಾರತೀಯ ಸ್ತ್ರೀವಾದಕ್ಕೊಂದು ಕೊಡುಗೆ ಎಂದು ಭಾವಿಸಬಹುದು. ಸಮಾಜ ಸುಧಾರಣಾ ಚಳುವಳಿಗಳು ಸ್ತ್ರೀ ಪ್ರಶ್ನೆಗಳೊಂದಿಗೆ ಅವಿನಾಭಾವ ಸಂಬಂಧ ಹೊಂದಿವೆ ಎಂದು ತೋರಿಸುತ್ತವೆ.

ಸಾಮಾಜಿಕ ಅನಿಷ್ಟಗಳನ್ನೇ ಮೌಲ್ಯಗಳೆಂದು ಜಾರಿಯಲ್ಲಿಡಲು ಶ್ರಮಿಸುವ ಸನಾತನಿಗಳು ಸಂಪ್ರದಾಯವಾದಿಗಳಿಗೆ ೧೯ನೇ ಶತಮಾನದ ಸಮಾಜ ಸುಧಾರಕರು ಮುಖಾಮುಖಿಯಾಗುತ್ತಾರೆ. ದಿನನಿತ್ಯದ ಧಾರ್ಮಿಕ ಆಚರಣೆ ಮತ್ತು ಪದ್ಧತಿಗಳನ್ನು ಕಟ್ಟುನಿಟ್ಟಾಗಿ ಅನುಸರಿಸುವ ಕಟ್ಟಳೆಗಳಿಗೆ ಇದರಿಂದಾಗಿ ಸಂಪ್ರದಾಯವಾದಿಗಳ ಹಾಗೂ ಸುಧಾರಕರ ನಡುವೆ ತಾತ್ವಿಕ ಹಾಗೂ ಧಾರ್ಮಿಕ ಘರ್ಷಣೆಗಳುಂಟಾದವು. ಇದರಿಂದ ಬಾಲ್ಯವಿವಾಹ, ವಿಧವಾ ವಿವಾಹ, ಸ್ತ್ರೀ ಶಿಕ್ಷಣ, ಕೇಶಮುಂಡನ ದಂತಹ ವಿಷಯಗಳ ಬಗೆಗೆ ತೀವ್ರ ಚರ್ಚೆಗಳಾದುವು.

ಇಂಗ್ಲಿಷ್ ಶಿಕ್ಷಣದಿಂದ ವ್ಯವಹಾರ ಚತುರತೆ, ಹೊಂದಾಣಿಕೆ, ಭವಿಷ್ಯದೆಡೆಗಿನ ಚಿಂತನೆಗಳು ಸಮಾಜ ಸುಧಾರಕರಲ್ಲಿ ಹೊಸ ಆಲೋಚನೆ ಮೂಡಿಸಿದವು.

ಲಿಂಗಾಧಾರಿತ ಅಸಮಾನತೆಗೆ ಜಾತಿ ವ್ಯವಸ್ಥೆಯು ಪ್ರಮುಖ ಪ್ರಭಾವವಾಗಿ ಹರಡಿಕೊಂಡಿದೆ. ಸಮಾಜ ಸುಧಾರಣೆಗೆ ಸಂಪ್ರದಾಯ ಸಮಾಜ ತನ್ನ ಪ್ರತಿರೋಧವನ್ನೊಡ್ಡುತ್ತಾ ಬಂದಿದೆ. ಶೈಕ್ಷಣಿಕ ಪ್ರಗತಿ ಮಹಿಳಾ ವಲಯದಲ್ಲಿ ಸಾಂಸ್ಕೃತಿಕ ಜೀವಂತಿಕೆಯನ್ನು ತುಂಬುತ್ತಾ ಬಂದಿದೆ. ಮಹಿಳೆ ಶಿಕ್ಷಣದ ಮಹತ್ವವನ್ನು ತನ್ನದಾಗಿಸಿಕೊಳ್ಳುತ್ತ ಸಾಮಾಜಿಕವಾಗಿ ಜೀವಂತಿಕೆಯನ್ನು ಪ್ರಕಟಿಸುತ್ತ ಸಂಘರ್ಷಿಸುತ್ತಲೇ ಸಾಗಿದ್ದಾಳೆ. ಪ್ರಧಾನ ಸಂಸ್ಕೃತಿಯ ಆಳುವ ಶಕ್ತಿ ಬಹುಮುಖಿಯಾದದ್ದು. ಇದು ಧಾರ್ಮಿಕ, ಆರ್ಥಿಕ, ನೈತಿಕ, ಭಾಷಿಕ ಪ್ರಭಾವಗಳ ಮೂಲಕ ಮಹಿಳೆಯನ್ನು ನಿಯಂತ್ರಿಸುತ್ತಿದೆ ಎನ್ನುವುದು ಇಂದಿಗೂ ಸತ್ಯ. ಮಹಿಳೆಯ ಬದುಕಿಗೆ ಹೇರಿದ್ದ ಅನಿಷ್ಟ ಪದ್ಧತಿಗಳನ್ನು ಪ್ರತಿಭಟಿಸಿರುವುದು ಕನ್ನಡದ ಜನಪದ ಸಾಹಿತ್ಯದಿಂದಲೂ ದಾಖಲಾಗುತ್ತ ಬಂದಿದೆ. ಪುರುಷ ಪ್ರಾಬಲ್ಯವನ್ನು ವಿರೋಧಿಸುವುದು ಕನ್ನಡ ಕಥನ ಸಾಹಿತ್ಯದ ಆಶಯವೂ ಆಗಿತ್ತು. ವ್ಯಾಕಪ ಹಿಡಿತದಿಂದ ಮಹಿಳಾ ಶಕ್ತಿಯನ್ನು ದುರ್ಬಲಗೊಳಿಸಿ ತನ್ನ ವಿಚಾರ ಸಂಸ್ಕೃತಿಗಳನ್ನು ಹೇರಿದಾಗ ಅದಕ್ಕೆ ಆರಂಭದ ಕನ್ನಡ ಕಥನ ಸಾಹಿತ್ಯ ಪ್ರತಿಕ್ರಿಯಿಸಿದೆ.

ಸ್ತ್ರೀಯರ ಸಮಸ್ಯೆ ಜಾಗತಿಕವಾದುದು. ಹೆಣ್ಣೆಂಬ ಕಾರಣಕ್ಕೆ ಹುಟ್ಟಿಕೊಂಡ ಅನ್ಯಾಯ ಕೊನೆಗಾಣದ ಹೊರತು ಸಮಾನತೆ ಕಾಣಲಾಗುವುದಿಲ್ಲ. ಮಹಿಳೆಯ ಬದುಕಿನ ಮಟ್ಟವನ್ನು ನಿರ್ಧರಿಸುವಲ್ಲಿ ಅವಳ ವೈವಾಹಿಕ ಸ್ಥಿತಿಯು ಮುಖ್ಯವಾಗುತ್ತದೆ. ಕಳೆದ ಐವತ್ತು ವರ್ಷಗಳಲ್ಲಿ ಮಹಿಳೆಯರ ವೈವಾಹಿಕ ಜೀವನದಲ್ಲಿ ಕೆಲಮಟ್ಟಿನ ಬದಲಾವಣೆಗಳಾಗಿವೆ. ಸಾಂಪ್ರದಾಯಿಕ ಸಮಾಜವನ್ನು ಆಧುನಿಕರಿಸುವ ಸಮಾಜವಾಗಿ ರೂಪಾಂತರಿಸುವ ಪ್ರಕ್ರಿಯೆ ಕುಟುಂಬ ಮತ್ತು ಸಮಾಜದಲ್ಲಿನ ಮಹಿಳೆಯ ಸ್ಥಾನದ ಬಗೆಗೆ ಮರು ವ್ಯಾಖ್ಯಾನಿಸುತ್ತವೆ. ಆದರೆ, 'ಕ್ರಮಿಸಿದ ದಾರಿಗಿಂತ ತಲುಪಬೇಕಾದ ಗುರಿ ಬಹಳ ದೂರವಿದೆ' ಎನ್ನುವುದೂ ವಿಧಿತ ಸಂಗತಿ.

## ಅಧ್ಯಾಯ – ೩

# ಸ್ವಾತಂತ್ರ್ಯಪೂರ್ವದ ಕಾಲಘಟ್ಟದಲ್ಲಿ ವೈಧವ್ಯದ ಪರಿಕಲ್ಪನೆ

೧. ಮೌಖಿಕ ಪರಂಪರೆಯಲ್ಲಿ ಸತಿಪದ್ಧತಿ

೨. ಆರಂಭಿಕ ಕಥನ ಸಾಹಿತ್ಯದಲ್ಲಿ ವೈಧವ್ಯದ ತಾತ್ವಿಕ ಚರ್ಚೆ

೩. 'ವಿಧವಾ ವಿವಾಹ'ದ ದ್ವಂದ್ವ ನೀತಿಗೆ ತಾತ್ವಿಕ ಪ್ರಶ್ನೆಗಳು

೪. ವೈಧವ್ಯ–ಸಾಮಾಜಿಕ ಸ್ಥಿತ್ಯಂತರ–ವಿಧವಾ ವಿವಾಹ.

೫. ಸ್ತ್ರೀಶಿಕ್ಷಣದ ಮಹತ್ವಪೂರ್ಣ ಚಿಂತನೆಗಳು

೬. ಸಂಪ್ರದಾಯ ಸಮಾಜಕ್ಕೆದುರಾದ ಆಧುನಿಕತೆ

೭. ಆರ್ಥಿಕ ಸಂಕಷ್ಟದಲ್ಲಿ ವಿವಾಹ – ವೈಧವ್ಯ

ಅಧ್ಯಾಯ ೩

## ಸ್ವಾತಂತ್ರ್ಯ ಪೂರ್ವದ ಕಾಲಘಟ್ಟದಲ್ಲಿ 'ವಿಧವಾ ಮರುವಿವಾಹ'ದ ಪರಿಕಲ್ಪನೆ

### ೧. ಮೌಖಿಕ ಪರಂಪರೆಯಲ್ಲಿ ಸತಿಪದ್ಧತಿ

ಮನುಷ್ಯ ಅಲೆಮಾರಿ ಬದುಕಿನಿಂದ ಒಂದೆಡೆ ನೆಲೆನಿಂತಾಗ 'ಕುಟುಂಬ' ವ್ಯವಸ್ಥೆ ಪ್ರಾರಂಭವಾಗಿರಬಹುದು. ಒಂದು ಗಂಡು ಒಂದು ಹೆಣ್ಣು ಕುಟುಂಬದಲ್ಲಿ ವೈವಾಹಿಕ ಸಂಸ್ಥೆಯ ಮೂಲಕ ಒಟ್ಟಾಗಿ ಬದುಕುವಾಗ ಕುಟುಂಬ ಇಬ್ಬರಿಗೂ ಸಮಾನವಾದ ನೆಲೆಯನ್ನು ಒದಗಿಸಬೇಕು. ಆದರೆ ಮಾತೃಪ್ರಧಾನ ವ್ಯವಸ್ಥೆ ಪಿತೃಪ್ರಧಾನವಾಗಿ ಮಾರ್ಪಟ್ಟಾಗ ಕುಟುಂಬ ಹೆಣ್ಣಿಗೆ ಭದ್ರತೆ ಒದಗಿಸುತ್ತದೆ ಎಂದು ಭಾವಿಸುತ್ತ ಬರಲಾಗಿದೆ. ಹೆಣ್ಣು ಗಂಡು ಇಬ್ಬರಿಗೂ ಕುಟುಂಬದಲ್ಲಿ ಸಮಾನ ಅವಕಾಶಗಳಿದ್ದಾಗ್ಯೂ ಹೆಣ್ಣನ್ನು ಅಧೀನದಲ್ಲಿಟ್ಟುಕೊಳ್ಳುವುದು ನಡೆದಿದೆ. ಹಾಗಾಗಿ ಮಹಿಳೆಗೆ ಕುಟುಂಬದಲ್ಲಿ ಅಭದ್ರತೆಯಿಂದ ಬಾಳಬೇಕಾದ ಸ್ಥಿತಿ ನಿರ್ಮಾಣವಾಗಿದೆ. ಕುಟುಂಬ ಪುರುಷ ಕೇಂದ್ರಿತವಾದಾಗ ಮಹಿಳೆ ಎಷ್ಟೆಲ್ಲ ನೊಂದಿದ್ದಾಳೆ. ಕುಟುಂಬ ಅವಳಿಂದ ಏನನ್ನು ನಿರೀಕ್ಷೆ ಮಾಡುತ್ತದೆ? ಮುಂತಾದ ಪ್ರಶ್ನೆಗಳಿಗೆ ಪ್ರತಿಕ್ರಿಯೆಯಾಗಿ ಜನಪದ ಕಥನಗಳ ಮೂಲಕ ಅಭಿವ್ಯಕ್ತಿಸುತ್ತಾ ಬಂದಿದ್ದಾಳೆ.

ಗಂಡನ ಮನೆಯಲ್ಲಿ ಜೀವನ ಪರ್ಯಂತ ಬದುಕಬೇಕೆಂಬ ನಿಯಮದಡಿಯಲ್ಲಿ ಬದುಕುತ್ತಾಳೆ. ಪತಿಯ ಮನೆಗೆ ಹೊಂದಿಕೊಳ್ಳುವುದು ಆ ಮನೆಯವರೆಲ್ಲರ ಹೃದಯವಂತಿಕೆಗೆ ಸಂಬಂಧಪಟ್ಟಿರುತ್ತದೆ. ಸೊಸೆಯಿಂದ ಹೊಂದಿಕೆ ಮಾತ್ರ ಕುಟುಂಬದ ನಿರೀಕ್ಷೆ ಇವುಗಳ ನಡುವೆ ಬದುಕುವ ಸೊಸೆ ತಾನು ಅತ್ತೆಯಾದಾಗ ಅವಳ ಸೊಸೆಗೆ ವರ್ಗಾಯಿಸುತ್ತಾಳೆ. ಇದು ಕುಟುಂಬ ವ್ಯವಸ್ಥೆಯಲ್ಲಿ ನಿರಂತರವಾಗಿ ನಡೆದು ಬಂದಿರುವುದನ್ನು ಗಮನಿಸಬಹುದು. ಕುಟುಂಬದ ಎಲ್ಲಾ ಹೊಣೆಹೊರೆಗಳೊಂದಿಗೆ ಅನುಮಾನ, ಅವಮಾನಗಳಿಗೂ ಉತ್ತರಿಸುತ್ತಾ ಬದುಕುವುದು ಇಂದಿಗೂ ನಡೆದೇ ಇದೆ. ಜನಪದದ ಮಹಿಳೆ ಮನೆಯ ಒಳಗೆ, ಹೊಲ-ಗದ್ದೆಗಳಲ್ಲಿ ಕೆಲಸ ಮಾಡುವಾಗ ತಮಗೆ ಆಯಾಸವಾದುದು ತಿಳಿಯದಿರಲು ತಮ್ಮಷ್ಟಕ್ಕೆ ತಾವು ಹಾಡಿಕೊಂಡರು ಹಾಗಾಗಿ ಅವರ ಭಾವನೆಗಳು ತ್ರಿಪದಿಗಳ ಮೂಲಕ ತೆರೆದುಕೊಂಡಿವೆ. ಜನಪದರ ನಂಬಿಕೆಗಳು ಆಚರಣೆಗಳಾಗಿ ಬೆಳೆಯುತ್ತ ಕಾಲಾಂತರದಲ್ಲಿ ಬದುಕಿನ ಮೌಲ್ಯಗಳಾಗಿ ಸ್ಥಾಯಿಯಾಗಿವೆ. ಆಯಾಕಾಲಕ್ಕನುಗುಣವಾಗಿ ರೂಪುಕೊಂಡ ಮೌಲ್ಯಗಳು ಬದಲಾದ ಕಾಲದಲ್ಲಿ ಅಪಮೌಲ್ಯಗೊಂಡ ವ್ಯಕ್ತಿಯ ಬದುಕನ್ನು ದುರ್ಬರಗೊಳಿಸಿದಾಗ ಪ್ರತಿಭಟಿಸಿರುವುದು ಇದೆ. ಜನಪದರ ಬದುಕಿನಲ್ಲಿ ವ್ಯಕ್ತಿಗಿಂತ ಸಮುದಾಯವೇ ಮುಖ್ಯವಾಗುತ್ತದೆ. ಸಮುದಾಯದ ಹಿತ ಮುಖ್ಯವಾದಾಗ 'ವ್ಯಕ್ತಿ' ಗೌಣವಾಗಿ ಅನೇಕ ಸಂಘರ್ಷಗಳನ್ನು

ಎದುರಿಸುತ್ತ ಬದುಕುವುದು ಅನಿವಾರ್ಯವಾಗಿತ್ತು. ಪ್ರಕೃತಿ ವಿಕೋಪ ಎದುರಿಸುವಾಗ ಬಲಿಕೊಡುತ್ತ ಸಮುದಾಯದ ಹಿತಕಾಯುವುದನ್ನು ಗುರುತಿಸಬಹುದು. ಕೆರೆ, ಕೋಟೆಗಳಿಗೆ ಬಲಿಯಾದ ಸತಿಹೋದವಳ ನೆನಪಿಗಾಗಿ ಮಾಸ್ತಿಕಲ್ಲುಗಳು, ವೀರಗಲ್ಲುಗಳು ತ್ಯಾಗ ಬಲಿದಾನದ ಸಂಕೇತಗಳಾಗಿ ಇಂದಿಗೂ ಪುಂಜೆಗೊಳ್ಳುತ್ತಿವೆ. ಇದನ್ನು ಕುರಿತ ಜನಪದ ಸಾಹಿತ್ಯ ತುಂಬಾ ವಿಸ್ತಾರವಾದುದು. ಇಲ್ಲಿ ಕೊಂಡಹೋಗುವ ಮಹಿಳೆ. 'ಮಹಾಸತಿ'ಯಾಗಿ ಮಾಸ್ತಿಕಲ್ಲುಗಳು ಇಂದಿಗೂ ಪೂಜೆಗೊಂಡು ಕಥೆಕಾವ್ಯ ಕಟ್ಟಿ ಹಾಡಲು ಪ್ರೇರಣೆಯಾಗಿವೆ.

ಆದರೆ, ವೀರಸತಿಯರಾದ ಮಹಿಳೆಯರನ್ನು ಆ ಕಾಲದ ಹಿನ್ನಲೆಯಲ್ಲಿ ಅವಲೋಕಿಸುವಾಗ ಅವರ ಬದುಕಿನ ದುರ್ಬರತೆಯ ಅರಿವಾಗುತ್ತದೆ. ಹೆಣ್ಣು ಗಂಡಿನ ಆಶ್ರಯದಲ್ಲಿ ಬದುಕಬೇಕೆನ್ನುವುದು ಅಲಿಖಿತ ಶಾಸನ, ಗಂಡಿನ ಆಶ್ರಯ ತಪ್ಪಿತೆಂದರೆ ಅವಳು ಮರ್ಯಾದೆಯಿಂದ ಬದುಕುವುದು ಕಷ್ಟವಾಗಿ ತೌರಿನವರು 'ಕೊಟ್ಟ ಹೆಣ್ಣು ಕುಲದ ಹೊರಗೆ' ಎಂದು ಹೊರಗಿಡುತ್ತಿದ್ದರು. ಗಂಡನ ಮನೆಯನ್ನು ತ್ಯಜಿಸಬೇಕಾಗಿತ್ತು. ಗಂಡನ ಮರಣಾನಂತರದ ಬದುಕು ಕೇವಲ ಹಿಟ್ಟುಬಟ್ಟೆಗೆ. ಇಂತಹ ಬದುಕಿಗೆ ಬೇಸತ್ತು 'ಸತಿ'ಹೋಗುವುದನ್ನು ಆಯ್ಕೆ ಮಾಡಿಕೊಂಡ ವಿಧವೆಯರು ಗಂಡನ ಶವದೊಂದಿಗೆ ಚಿತೆ ಏರುತ್ತಿದ್ದರು.

ವ್ಯಕ್ತಿಯ ಮರಣಾನಂತರದಲ್ಲಿ ಆತನಿಗೆ ಸೇರಿದ ವಸ್ತುಗಳೆಲ್ಲವನ್ನೂ ಶವದೊಂದಿಗೆ ಹೂಳುವ ಅಥವಾ ಸುಡುವ ಪರಿಪಾಠ ಅನೇಕ ಕಡೆ ಚಾಲ್ತಿಯಲ್ಲಿತ್ತು. 'ಯಜಮಾನ' ಸಂಸ್ಕೃತಿಯಲ್ಲಿ ಹೆಂಡತಿಯನ್ನು ಗಂಡನ ಸ್ವತ್ತೆಂದು ತಿಳಿಯುವುದರಿಂದ ಆತನ ಸಾವಿನ ನಂತರ ಇತರ ಪರಿಕರಗಳಂತೆಯೇ ಆಕೆಯನ್ನೂ ಹೂಳುವ ಅಥವಾ ಸುಡುವ ಪದ್ಧತಿ ಬೆಳೆದುಬಂದಿರಬೇಕು. ಇಂತಹ ನಂಬಿಕೆಯ ಅಡಿಯಲ್ಲಿ ಬದುಕುವ ಸಮುದಾಯವು ಕಾಲಾಂತರದಲ್ಲಿ ಹೀಗೆ 'ಸತಿ' ಹೋಗುವ ರೂಢಿಯನ್ನು ಒಂದು ಮೌಲ್ಯವಾಗಿ ಸ್ವೀಕರಿಸಿರಬೇಕು. ಎಂ.ಎಂ.ಕಲಬುರ್ಗಿಯವರು ಇದಕ್ಕೆ ಮೂರು ವ್ಯಾವಹಾರಿಕ ಕಾರಣಗಳನ್ನು ಊಹಿಸುತ್ತಾರೆ.

**ಒಂದು** : ಮರಣದ ತರುವಾಯ ತನ್ನ ಸತಿ ಮನಸಾ ಇಲ್ಲವೆ ಮನಸಿಲ್ಲದೆ ಅನ್ಯರಿಗೆ ವಶವಾಗಬಹುದೆಂದು 'ಪುರುಷನಪ್ರತಿಷ್ಠೆ' ಈ ಸಂಪ್ರದಾಯವನ್ನು ಸ್ತ್ರೀಯರಿಗೆ ರೂಪಿಸಿಕೊಟ್ಟಿರಬಹುದು.

**ಎರಡು** : ಪತಿಯ ಮರಣದ ತರುವಾಯ ತನ್ನ ಬದುಕುವಿಕೆ ಮತ್ತು ಪಾವಿತ್ರ್ಯಗಳ ಅನಿಶ್ಚಿತತೆ ಕಾರಣವಾಗಿ ಸ್ತ್ರೀವರ್ಗವೇ ಇದನ್ನು ರೂಪಿಸಿಕೊಂಡಿರಬಹುದು.

**ಮೂರು** : ಪತಿಯ ಮರಣದ ತರುವಾಯ ಸತಿಯನ್ನು ಮರಣ ಕೂಪಕ್ಕೆ ತಳ್ಳಿ ಅವಳ ಆಸ್ತಿಯನ್ನು ಸೆಳೆಯಲು 'ಪ್ರಭುವರ್ಗ' ಇಲ್ಲವೆ 'ಪುರೋಹಿತ ವರ್ಗ' ಈ ಯೋಜನೆಯನ್ನು ರೂಪಿಸಿರಬಹುದು.

ಈ ಮೂರರಲ್ಲಿ ಯಾವುದು 'ಸತಿ'ಗೆ ಕಾರಣವಾಗಿದ್ದರೂ ಅವಳ ಬದುಕುವ ಹಕ್ಕನ್ನು ಮೊಟಕು ಮಾಡಿರುವ ಪುರುಷ ಪ್ರಾಬಲ್ಯವೇ ಪ್ರಧಾನ ಪಾತ್ರ ವಹಿಸುತ್ತದೆ. ಎರಡನೆಯ ಕಾರಣದಂತೆ ಮಹಿಳೆಯೇ ಸತಿಗೆ ಮುಂದಾದರೂ ಮಹಿಳೆಯ ಬಗೆಗಿನ ಸಮಾಜದ ಧೋರಣೆ ಅವಳ ಇಂಥ ತೀರ್ಮಾನಕ್ಕೆ ಕಾರಣವಾಗುತ್ತದೆ. ಎಂ.ಎಂ.ಕಲಬುರ್ಗಿಯವರು ಅಭಿಪ್ರಾಯಪಡುವಂತೆ

> *"ಈ ವ್ಯಾವಹಾರಿಕ ಶೋಷಣೆಯೇ ಧಾರ್ಮಿಕ ಮುಖವಾಡ ಧರಿಸಿ ಪತಿಯೊಂದಿಗೆ ಸ್ವರ್ಗಸೇರುವುದು, ಅವನನ್ನು ನರಕದಿಂದ ಎತ್ತಿ ಸ್ವರ್ಗಕ್ಕೆ ತರುವುದು, ಮರುಜನ್ಮದಲ್ಲಿ ಅವನ ಜೊತೆಗೂಡುವುದು – ಇತ್ಯಾದಿ ಭಾವನೆಗಳಿಗೆ ಎಡೆಮಾಡಿ ಕೊಟ್ಟಿದ್ದರ ಪರಿಣಾಮವಾಗಿ ಪ್ರಾಚೀನ ಕಾಲದಲ್ಲಿ ಈ ಸಂಪ್ರದಾಯ ತುಂಬ ಪ್ರಚಾರ ಪಡೆಯಿತು."*[1]

ಸತಿಹೋಗುವ ಪದ್ಧತಿ ಪ್ರಾಚೀನಕಾಲದಲ್ಲಿ ಸ್ಥಾಯಿಯಾಗಿರುವುದನ್ನು ಕಂಡಿರಿಸಿದ ಜನಪದ ಸಾಹಿತ್ಯವನ್ನು ವಿಶ್ಲೇಷಿಸಬಹುದು. ಗಂಡನ ಸಾವಿನ ನಂತರ ಅವನ ಚಿತೆ ಏರುವಾಗ "ಗಂಡ ಸತ್ತ ಹೆಣ್ಣುಗಳು ಬದುಕಬೇಕಾದ ರೀತಿಗಿಂತ 'ಸತಿ'ಯಾಗಿರುವುದೇ ಒಳ್ಳೆಯದೆಂದು ಆಕೆ ಯೋಚಿಸುತ್ತಾಳೆ. ತಾಯಿ ಗಂಡನ ಜೊತೆ ಹೋಗಬೇಡವೆಂದು ಹೇಳಿದಾಗ ಅವಳು ಕೊಡುವ ಉತ್ತರ ಮಾರ್ಮಿಕವಾದುದು.

ಒಪ್ಪತ್ತು ಉಣಲಾರೆ ನೆತ್ತಿ ಬೋಳಿಸಲಾರೆ
ನಿತ್ಯ ನೀರೊಳಗೆ ಮುಳುಗಲಾರೆ ಹುಲಿಮರುದ
ಶೆಟ್ಟಿಕೂಡ ಹೋಗುವೆ ಒಡಗಿಚ್ಚ.

ಎನ್ನುವ ಅವಳ ಮಾತಿನಲ್ಲಿ ಗಂಡನ ಕೂಡ ಸಾಯುವುದರಿಂದ ಸ್ವರ್ಗ ಸಿಗುತ್ತದೆ ಎನ್ನುವ ಯಾವ ಆಮಿಷದ ಸಲುವಾಗಿಯೂ ಅವಳು ಬಲಿಯಾಗುತ್ತಿಲ್ಲ ಎನ್ನುವುದು ಸ್ಪಷ್ಟವಿದೆ. ವೈಧವ್ಯದ ಬದುಕಿನ ದುರ್ಭರತೆಗೆ ಹೇಸಿ ಆಕೆ ಇಂತಹ ತೀರ್ಮಾನ ಕೈಗೊಳ್ಳುತ್ತಾಳೆ. ಅವಳು ಬದುಕಿಗೆ ವಿಮುಖಳಾಗಿ ಸಾಯಲು ಮುಂದಾಗಿಲ್ಲ ಎನ್ನುವುದನ್ನು ಈ ಕೆಳಗಿನ ಸಾಲುಗಳು ಸ್ಪಷ್ಟಪಡಿಸುತ್ತವೆ.

ಹರನ ಮನೆ ಹಾಳಾಗ ಶಿವನ ಮನೆ ಕದಕಟ್ಟಿ
ಶೀಮೆಲ್ಲ ವಾಲಿ ಕಳೆಯಾಲಿ ಗಂಗೇ ಗವರಿ
ನನ್ನಂತೆ ನೀರ ಎರಕೊಳ್ಳ

ಎಂದು ಕಿಚ್ಚಿಗೆ ಹೋಗುವಾಗ ಅವಳು ದೈವವನ್ನು ಶಪಿಸುತ್ತಾಳೆ.

> *"ಅವಳಿಗೆ ಬದುಕಿನ ಬಗೆಗೆ ಅತೀವ ಆಸಕ್ತಿ ಇದೆ. ಅಂದರೆ ಹಿರಿಯರು ಮಾಡಿದ ತಪ್ಪಿಗಾಗಿ ಅವರ ಮೇಲಿನ ಸಿಟ್ಟಿನಿಂದ ಪ್ರತಿಭಟಿಸುವ ದೃಷ್ಟಿಯಿಂದಲೇ ಅವಳು*

---

೧. ಹೆಣ್ಣಲ್ಲ ನಮಗೆ ರವಿಚಿನ್ನ – ಚಂದ್ರಮತಿ ಸೋಂದಾ, ಸಾಗರ್ ಪ್ರಕಾಶನ – ೨೦೦೫–ಪು.೯೫–೯೬

*ಇಂತಹ ತೀರ್ಮಾನಕ್ಕೆ ಬಂದಿರುವಂತೆ ತೋರುತ್ತದೆ.*[೧]

ಅಂದರೆ ಸಹಜವಾಗಿಯೋ, ಆಕಸ್ಮಿಕವಾಗಿಯೋ ಪತಿಗೆ ಬಂದ ಸಾವು ಪತ್ನಿಯನ್ನೂ ಸಾವಿಗೆ ನೂಕುವ ಪ್ರಕ್ರಿಯೆ ಮಾನವ ಕುಲಕ್ಕೆ ಆಘಾತಕಾರಿಯಾದುದು ಎಂದು ಭಾವಿಸಬಹುದು.

ದಂಡಿನಲ್ಲಿ ಹೋರಾಡುವ ಅಥವಾ ಬೇರೆಯಾವುದೋ ಕಾರಣಕ್ಕೆ ಗಂಡ ಮಡಿದಾಗ ಹೆಂಡತಿ ಚಿತೆ ಏರಿ ಸಾಯುವುದನ್ನು ಭಾರತೀಯ ಸಮಾಜ 'ಸತಿ' ಎಂದು ಕರೆಯಿತು. ಇಲ್ಲಿ ಎರಡು ರೀತಿಯ 'ಸತಿ'ಯ ಉಲ್ಲೇಖವನ್ನು ಕಾಣಬಹುದು.

> *"ಸತ್ತ ಗಂಡನ ಶವದೊಂದಿಗೆ ಚಿತೆ ಏರುವುದು ಸಹಗಮನವಾದರೆ, ದೂರದಲ್ಲಿ ಮಡಿದ ಗಂಡನ ಪ್ರಿಯವಸ್ತುಗಳನ್ನು ಹಿಡಿದು ಚಿತೆಏರುವುದು 'ಅನುಗಮನ' ಎನಿಸಿಕೊಳ್ಳುತ್ತದೆ. ಸತಿಯ ಆಚರಣೆ ಭಾರತಕ್ಕಷ್ಟೇ ಸೀಮಿತವಲ್ಲ ಎನ್ನುವುದನ್ನು ಈ ಕುರಿತ ಅಧ್ಯಯನಗಳು ಈಗಾಗಲೇ ತೋರಿಸಿಕೊಟ್ಟಿವೆ*[೨].

ಸತಿಹೋದ ಮಹಿಳೆಯರನ್ನು 'ಮಹಾಸತಿ' ಎಂದು ಕರೆದು ಆಕೆ ಆಹುತಿಯಾದ ಸ್ಥಳದಲ್ಲಿ ಸ್ಮಾರಕಗಳನ್ನು ನಿರ್ಮಿಸಿ ಅದಕ್ಕೆ 'ಮಾಸ್ತಿಕಲ್ಲು' ಎಂದು ಹೆಸರಿಸಿ ಪೂಜೆ ಸಲ್ಲಿಸುತ್ತಾ ಬಂದಿದೆ. ಇಂತಹ ಮಹಿಳೆಯರನ್ನು ಕುರಿತು ಅನೇಕ ಜನಪದ ಕಾವ್ಯಗಳು ಸಮ್ಮಾನದಿಂದ ಕಂಡಿರುವುದನ್ನು ವಿವರಿಸಿದೆ. 'ಮಹಾಸತಿ' ಕುರಿತ ಇಂತಹ ರಚನೆಗಳು ಸ್ವ ಇಚ್ಚೆಯಿಂದ ಕೊಂಡವೇರುತ್ತಿದ್ದರು ಎಂದು ಚಿತ್ರಿಸುತ್ತವೆ. ಆದರೆ ಗಂಡನ ಮರಣದ ನಂತರ ಹೆಂಡತಿಯು ಬದುಕುವ ಎಲ್ಲಾ ಅವಕಾಶಗಳನ್ನು ಕಳೆದುಕೊಳ್ಳುತ್ತಿದ್ದಳು ಎನ್ನುವುದನ್ನು 'ವಡಲಾಗಿಚ್ಚುಗೀ ಕಿಚ್ಚು ಕಿರಿದಂದು ತಿಮ್ಮವ್ವ ಗಂಡಾಲದ ಮರವ ಕಡಿಸ್ಯಾಳೆ' ಮಾತುಗಳಿಂದ ಸ್ಪಷ್ಟಪಡಿಸುತ್ತವೆ. ಹೀಗೆ ಕೊಂಡವೇರುವುದನ್ನು ಗಂಡನ ಮನೆಯವರಾಗಲಿ, ತೌರಿನವರಾಗಲಿ ತಡೆದಾಗ ಇದು ತಾತ್ಕಾಲಿಕ ಅನುಕಂಪ ಎಂಬ ಸತ್ಯದ ಅರಿವೂ ಅವರಿಗಿತ್ತು ಎಂದು ಜನಪದ ಸಾಹಿತ್ಯದಿಂದ ತಿಳಿಯುತ್ತದೆ. ಕೊಂಡವೇರಲು ಹೊರಟವಳ ಅಪ್ಪ ನೋಡಲು ಬಂದಿದ್ದಾನೆ ಎಂದಾಗ,

> ಅಪ್ಪ ಬಂದರೇನು ಕಪ್ಪ ತಂದರೇನು
> ಕಟ್ಟೀದ ತೆರವು ಅವರೀಗೆ । ವಡ್ಡಗೇರಿ
> ಕಿಚ್ಚೀನ ಕೊಂಡ ನಮಗವೆ.

ಎಂದು ತಂದೆಯ ಆಗಮನವನ್ನು ಅಸಡ್ಡೆಯಿಂದಲೇ ಕಾಣುತ್ತಾಳೆ. ಬಹುಶಃ ಮಗಳನ್ನು ದಾರೆ ಎರೆಯುವಾಗ 'ತೆರ' ಪಡೆಯುವ ತಂದೆ ಅಣ್ಣನ ಬಗ್ಗೆ ತನ್ನ ಹಕ್ಕನ್ನು ಕಿತ್ತು

---

೧. ಹೆಣ್ಣಲ್ಲ ನಮಗೆ ರವಿಚಿನ್ನ – ಚಂದ್ರಮತಿ ಸೋಂದಾ, ಸಾಗರ್ ಪ್ರಕಾಶನ – ೨೦೦೫–ಪು. ೮೪
೨. ಅದೇ ಪು. ಪು – ೯೬

ಕೊಂಡವರು ಎಂಬ ಅರಿವಿನಿಂದ ಈ ಮಾತುಗಳನ್ನಾಡಿರಬಹುದು. ವಿಧವಾ ವಿವಾಹ ನಿರಾಕರಿಸಿದ್ದು, ವಿಧುರರ ಮದುವೆ ನಡೆಯುತ್ತಿದ್ದ ಆ ಕಾಲದಲ್ಲಿ ಸತಿಹೋಗುವಾಗ ಸಣ್ಣ ಆಮಿಷಗಳಿಗೆ ಒಳಗಾಗುತ್ತಿರಲಿಲ್ಲ. ತೌರಿನವರಿಗೆ ಮಗಳು 'ಸತಿ' ಹೋಗುವುದನ್ನು ನೋಡಲಾಗದೆ ಸಂಕಟದಿಂದ ತಡೆಯುತ್ತಿದ್ದರೇ ವಿನಾಃ ಸತಿ ಹೋಗುವುದನ್ನು ತಡೆಯಲಾಗುತ್ತಿರಲಿಲ್ಲ ಎಂದು ಭಾವಿಸಬಹುದು.

ಕೊಂಡವೇರುವ ಮಹಿಳೆ ತನ್ನ ವಾರಗಿತ್ತಿಯರಿಗೆ ತನ್ನ ಮಗನನ್ನು ಚೆನ್ನಾಗಿ ನೋಡಿಕೊಳ್ಳಿ ಎಂದು ಹೇಳುವಾಗ "ರಂಡೆಮಗನೆಂದು ಬೈದೀರ, ತೊತ್ತಿನ ಮಗನೆಂದು ಬೈದೀರ" ಎನ್ನುವ ಬೈಗುಳಗಳು ತಾನು ಬದುಕಿದ್ದಾಗ ಕೇಳಬೇಕಾಗಿತ್ತು ಎನ್ನುವ ಸೂಚನೆಯನ್ನು ನೀಡುತ್ತವೆ. ಇಂತಹ ಪರಿಸ್ಥಿತಿಯಲ್ಲಿ ಬದುಕುವುದಕ್ಕಿಂತ ಸಾಯುವುದೇ ಲೇಸೆಂದು ಸಾವನ್ನು ಆಯ್ಕೆಮಾಡಿಕೊಳ್ಳುತ್ತಿದ್ದ ದಾರುಣ ಪರಿಸ್ಥಿತಿ ಇತ್ತು.

ಗಂಡ ಸಾಯೋಕ್ಕಿಂತ ಮುಂಡ್ಯಾಗೋಕ್ಕಿಂತ
ಕಂಡೋರ ಮನೆಯ ಕಸನ್ಹಾಕೆ – ಸಾಯೋಕ್ಕಿಂತ
ಕೊಂಡವನ್ನೋದೆ ಕಡುಲೇಸು

ಎಂದು ವಿಧವೆಗೆ ಎನಿಸಿದೆ. ಹೀಗೆ ಎಲ್ಲರಿಂದಲೂ ನಿರಾಕರಿಸಲ್ಪಡುವ ವಿಧವೆ ತನ್ನ ಸ್ವಇಚ್ಛೆಯಿಂದಲೇ ಕೊಂಡವೇರುತ್ತಾಳೆ ಎನ್ನುವುದು ಮೇಲ್ನೋಟಕ್ಕೆ ಮಾತ್ರ ಸತ್ಯ. ಆದರೆ ಕೊಂಡದ ಕಿಚ್ಚಿಗೆ ಅವಳು ಪ್ರತಿಕ್ರಿಯಿಸುವ ರೀತಿಯಿಂದ ಅವಳ ಅಂತರಾಳ ತಿಳಿಯುತ್ತದೆ.

ಆಕಾಸದುದ್ದಾಕ ಉರಿಯದ್ದೇಳು ತಾವೆ
ನಾನೆಂಗೋಗಲೋ ಸಿವಸಿವನೆ
ನಾನೆಂಗೋಗಾಲೋ ಸಿವಸಿವನೆ ಏಸಿವನೆ
ಗಂಡನ ಪ್ರಾಣ ತಿರುವಯ್ಯ

'ಸತಿ' ಎನ್ನುವುದೇ ಒಂದು ಸಾಮಾಜಿಕ ಮೌಲ್ಯವಾಗಿದ್ದ ಆ ಕಾಲ ಅವಳನ್ನು ಕೊಂಡವೇರಲು ಉತ್ತೇಜಿಸುತ್ತದೆ. ಮೌಲ್ಯಮೀರಿದ ಸಾಮಾಜಿಕ ಬದುಕು ಆಕೆಗೆ ನಿಷಿದ್ದವಾಗಿತ್ತು ಎಂದು ತಿಳಿಯುತ್ತದೆ.

ಚಿಕ್ಕ ವಯಸ್ಸಿನ ಮಹಿಳೆಯರು ಕೊಂಡವೇರುವಾಗ ಕೆಲವರು ನಿರಾಕರಿಸಿರುವ ಉದಾಹರಣೆಗಳೂ ಸಿಗುತ್ತವೆ. ಆದರೆ ಕೊಂಡವೇರಿ ಸಾಯಲೇಬೇಕು ಎನ್ನುವ ಮೌಲ್ಯ ಆಗಲೇ ಬೇರುಬಿಟ್ಟಿತ್ತು. ಈಗಾಗಲೇ 'ಸತಿ' ಯಾದವರನ್ನು ಪೂಜಿಸಿ ದೈವತ್ವಕ್ಕೇರಿಸಿದ್ದರಿಂದ ಅದರ ಪ್ರಭಾವ ಮುಂದಿನವರ ಮೇಲೆ ದಟ್ಟವಾಗಿಯೇ ಇತ್ತು. ತಾವಾಗಿಯೇ ಕೊಂಡವೇರದೆ ತಪ್ಪಿಸಿಕೊಂಡವರ ಬಗ್ಗೆಯೂ ಜಾನಪದ ಕಾವ್ಯ ಕಥನಗಳಲ್ಲಿ ದಾಖಲಾಗಿವೆ. 'ಸತಿ' ಹೋದವರನ್ನು ವೈಭವೀಕರಿಸುವುದರ ಹಿಂದೆ ಕುಟುಂಬ ರಾಜಕಾರಣವೂ ಇತ್ತು ಎಂದೂ ನಂಬಬಹುದು.

ಕದ್ದು ವೋದಾಳೆಂದು ದಿಡ್ಡಿಗಳ ಆಕುಸ್ತ
ಕದ್ದು ವೋಗೋರ ಮಗಳಲ್ಲ.

ಈ ಮಾತುಗಳು ಅನೇಕರು ಕೊಂಡವೇರಲು ತಪ್ಪಿಸಿಕೊಳ್ಳುತ್ತಿದ್ದರು ಎಂದು ಸ್ಪಷ್ಟಪಡಿಸುತ್ತವೆ. ಸ್ವಇಚ್ಛೆಯಿಂದ ಕೊಂಡವೇರುವವಳು ಅಸಾಮಾನ್ಯ ಪತಿವ್ರತೆ ಎಂದು ವೈಭವೀಕರಿಸಿರುವುದರ ಹಿಂದಿದ್ದ ಹುನ್ನಾರಗಳು ತಿಳಿಯುತ್ತವೆ.

ಪಟ್ಟೇದ ಸೀರುಟ್ಟು ಮುತ್ತಿನ ಬಟ್ಟಿಟ್ಟು ಅಕ್ಕ
ಈರಗೊಂಡಾಕ ಕೊಲೆಯಾದಳು

ಎನ್ನುವಲ್ಲಿ 'ಕೊಲೆ' ಎನ್ನುವ ಪದ 'ಸತಿಪದ್ಧತಿ'ಯ ಭಯಾನಕತೆಯನ್ನು ಬಿಂಬಿಸುತ್ತದೆ.

ಚಾಚೀದ ಮಂಡೆ ಮ್ಯಾಲೆ ಬರಿಮಲ್ಲಿಗೆ ಮಾವು
ನೂಕದಿರೋ ಮಾವಯ್ಯ
ನೂಕದಿರೋ ಮಾವಯ್ಯ ಎರಗೊರಡು
ನಿನಮಗ ಸೂಸುಕ ಮಾಸಿದರೆ ಬೈಯ್ಯೋನು.

ಈ ಮಾತುಗಳು ಅವಳನ್ನು ಒತ್ತಾಯದಿಂದ ಬೆಂಕಿಗೆ ನೂಕುತ್ತಿದ್ದಾರೆ ಎಂದು ತಿಳಿಸುತ್ತವೆ. ಹೀಗೆ ಜನಪದ ಕಾವ್ಯಗಳು 'ಸತಿಪದ್ಧತಿ'ಯನ್ನು 'ಸಂಭ್ರಮ' ಎನ್ನುವಂತೆ ಚಿತ್ರಿಸುತ್ತವೆ. ಅಲ್ಲಿನ ಭಾಷೆಕೂಡ ಸಂಭ್ರಮಿಸುತ್ತವೆ. 'ಕಿಚ್ಚಿಗೆ ಧಾರೆ ಎರೆದಾರು' ಎಂದು ವಿವರಿಸುತ್ತವೆ. ಈ ಕಥಾನಕಗಳಲ್ಲಿ ಕೊಂಡವೇರುವ ಮಹಿಳೆಯರೆಲ್ಲ ಸಾಮಾಜಿಕವಾಗಿ ಕೆಳಸ್ತರದವರು. ಅವರಲ್ಲಿ ಗಂಡ ಸತ್ತ ಮೇಲೆ 'ಕೂಡಾವಳಿ' ಮಾಡಿಕೊಂಡು ಬದುಕುವ ಹಕ್ಕು ಮಹಿಳೆಗಿದೆ. ಈ ರಿವಾಜನ್ನು ಆ ಸಮುದಾಯವು ಬಹಳ ಹಿಂದಿನಿಂದಲೂ ಒಪ್ಪಿಕೊಳ್ಳುತ್ತಾ ಬಂದಿದೆ ಆದಾಗ್ಯೂ ಒಂದು ಪಠ್ಯದಲ್ಲಿ ಕೊಂಡವೇರಲು ಸಿದ್ದಳಾದ ಅವಳಿಗೆ ಹೊಸಬದುಕನ್ನು ಕೊಡಲು ಸಿದ್ಧನಿರುವುದಾಗಿ ನಿಂಗನಗೌಡ ಮಾಡುವ ಪ್ರಸ್ತಾಪವನ್ನು ಅವಳು ತನಗೆ ಮಾಡಿದ ಅಪಮಾನವೆಂದೇ ಭಾವಿಸಿ

*"ಹಟ್ಟಿ ಕಲ್ಲಡಗಲಿ ಕೊಟ್ಟಿಗೆ ಬರಿದಾಗಲಿ*
*ಹಿಂಡೆಮ್ಮೆ ಸಾಲು ಅಡಗಲಿ-ನಿಂಗನಗೌಡ*
*ನನಗೋಳು ನಿಮ್ಮೆಣ್ಣಿಗೆ ಮಡಗಿರಲಿ ಎಂದು ಶಪಿಸುತ್ತಾಳೆ".*[೧]

ಗೌಡನ ಶ್ರೀಮಂತಿಕೆಯನ್ನು ನಿರಾಕರಿಸುವ ಆಕೆ ಅವನ ಲೋಲುಪತೆಯನ್ನು ಬಯಲು ಮಾಡುತ್ತಾಳೆ. ಮಹಾಸತಿಯರನ್ನು ಕುರಿತ ಜನಪದ ಸಾಹಿತ್ಯ 'ವೈದಿಕ ಸಂಸ್ಕೃತಿ', 'ಶೂದ್ರ ಸಂಸ್ಕೃತಿ'ಯ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ. ಮೇಲ್ಜಾತಿ ವರ್ಗದವರ ಆಚರಣೆಯನ್ನು ಕೆಳಜಾತಿವರ್ಗದವರು ಭಕ್ತಿಯಿಂದ ಅನುಕರಿಸಿರ ಬಹುದು. ಕೊನೆಗೆ ಈ ಪದ್ಧತಿ ನಿಶ್ಚಿಂತವಾಗಿದ್ದ ಹೆಣ್ಣು ಕೊಂಡವೇರುವ ಪರಿಸ್ಥಿತಿಯನ್ನು ತಲುಪಿರುವುದರ ಉಲ್ಲೇಖಗಳೂ ಇವೆ. ಒಂದು ಸಮುದಾಯ

೧. ಹೆಣ್ಣಲ್ಲ ನಮಗೆ ರವಿಚನ್ನ – ಚಂದ್ರಮತಿ ಸೋಂದಾ, ಸಾಗರ್ ಪ್ರಕಾಶನ – ೨೦೦೫–ಪು. ೯೯

ನಂಬಿದ ಮೌಲ್ಯಗಳನ್ನು ಮುಗ್ಧ ಮಹಿಳೆಯರು ಅಸಹಾಯಕತೆಯಿಂದ ಒಪ್ಪಿ ಅನುಸರಿಸಿರುವುದೂ ಇದೆ. "'ವಡ್ಡಗೆರೆ ನಾಗಮ್ಮ' ಕಾವ್ಯದಲ್ಲಿ ನಿಶ್ಚಿತವಾಗಿದ್ದ ಗಂಡು ವೀರ ಮರಣವನ್ನಪ್ಪಿದಾಗ ಅವಳನ್ನು ಕಿಚ್ಚಿಗೆ ದಾರೆ ಎರೆಯಲು ನಿಶ್ಚಯವಾಗುತ್ತದೆ. ಈ ತೀರ್ಮಾನದಿಂದ ಹಿರಿಯರ ಮೇಲೆ ಕೋಪಗೊಳ್ಳುವ ನಾಗವ್ವ

ತಿಂದುಂಡು ಜೋಗಿಗೆ ನನ್ನ ಕೊಟ್ಟಿದ್ದರೆ
ತಿರಿದುಂಡು ನಾನು ಇರುತ್ತಿದ್ದೆ.

ಎಂದು ತವರನ್ನು ದೂಷಿಸುತ್ತಾಳೆ. ದೊಡ್ಡವರ ಮನೆಯೆಂದು ತನ್ನನ್ನು ಕೊಡಲಕ್ಕು ಮುಂದಾಗಿ ತವರಿನವರು ನನಗೆ ಅನ್ಯಾಯಮಾಡಿದ್ದಾರೆನ್ನುವ ಸಿಟ್ಟು ಅವಳದು". ಈ ಎಲ್ಲಾ ಕಥಾನಕಗಳು ಕೌಟುಂಬಿಕ ನೆಲೆಯಲ್ಲಿ 'ಹೆಣ್ಣು' ಭದ್ರಳು ಎಂದು ಭಾವಿಸಿದ್ದ ಭಾವನೆಗಳನ್ನು ಛಿದ್ರಮಾಡುತ್ತವೆ. ಅಭದ್ರತೆಯಲ್ಲಿ ನರಳುವ ಮಹಿಳೆಗೆ 'ಬಾಲ್ಯವಿವಾಹ', 'ಸತಿಪದ್ಧತಿ', 'ಕೆರೆಹಾರ'ದಂತಹ ಆಚರಣೆಗಳು ಅವಿರೋಧ ಆಯ್ಕೆಯಾಗಿದ್ದವು. ಅವಳ ಸಾಮಾಜಿಕ ಬದುಕು ನಿಯಂತ್ರಿಸುವ ಕೆಲಸವನ್ನು ಪುರುಷ ಪ್ರಧಾನ ವ್ಯವಸ್ಥೆಯೇ ಮಾಡುತ್ತಾ ಬಂದಿದೆ. ಹೀಗೆ ನಿಯಂತ್ರಿಸುತ್ತಾ ತನಗೆ ಬೇಕಾದ 'ಮಾದರಿ'ಯನ್ನು ರೂಪಿಸುತ್ತಾ ಬಂದಿದೆ. 'ಮಾಹಾಸತಿ' ಯಂತಹ 'ಮಾದರಿ'ಗಳು ಚರಿತ್ರೆಯುದ್ದಕ್ಕೂ ಮಹಿಳೆಗೆ ನಿರ್ದೇಶನವಾಗಿ ಬಂದಿದೆ ಎಂದು ಭಾವಿಸಬಹುದು. ಸ್ವಂತಿಕೆ ಇಲ್ಲದ ಮಹಿಳೆ ಪರಾವಲಂಬಿಯಾಗಿ ದೀನಸ್ಥಿತಿಯಲ್ಲಿ ಬದುಕುವುದು ಅನಿವಾರ್ಯವಾಯಿತು. ಜನಪದ ಸಾಹಿತ್ಯದ ಅಧ್ಯಯನದಲ್ಲಿ ಕಂಡುಕೊಳ್ಳುವ ಬಹುಮುಖ್ಯ ಅಂಶವೆಂದರೆ ಶಿಷ್ಟಸಾಹಿತ್ಯದಲ್ಲಿ ಮಹಿಳೆಗೆ ಇಲ್ಲದ ನೋವು ನಲಿವಿನ ಅಭಿವ್ಯಕ್ತಿ ಜನಪದದಲ್ಲಿತ್ತು ಎನ್ನುವುದಾಗಿದೆ. ಜನಪದದ ಮಹಿಳೆ ಅಂತರಾಳದ ಅಭಿವ್ಯಕ್ತಿಯಲ್ಲಿ ತೊಡಗುವಾಗ ಸಮುದಾಯವನ್ನು ಎದುರುಹಾಕಿಕೊಂಡಿದ್ದಾಳೆ. ಕೆಟ್ಟ ಆಚರಣೆಗಳನ್ನು ವಿರೋಧಿಸಿದ್ದಾಳೆ. ಇಡೀ ಸಮುದಾಯವನ್ನೇ ನಿಂದಿಸಿರುವುದರ ಧ್ವನಿ ಜಾನಪದ ಸಾಹಿತ್ಯದಲ್ಲಿ ವ್ಯಕ್ತವಾಗಿವೆ.

ಇತಿಹಾಸ ಸೇರಿಹೋಗಬೇಕಾಗಿದ್ದ ಸತಿ ಪದ್ದತಿ ಮತ್ತೆ ಇತ್ತೀಚೆಗೆ ಪುನರುಜ್ಜೀವ ಪಡೆದಿರುವುದು ಈ ಕಾಲದ ದೊಡ್ಡ ಆಘಾತ. ಅದರಲ್ಲೂ ಕರ್ನಾಟಕದಲ್ಲಿ ಸತಿ ಕಲ್ಲುಗಳನ್ನು ಗ್ರಾಮದೇವತೆಗಳನ್ನು ಪೂಜೆ ಮಾಡುವ ಪದ್ದತಿ ನಡೆದು ಬಂದಿರುವುದು ಗಮನಾರ್ಹವಾದುದು. ಸತಿಗೀತೆಗಳು ಇದನ್ನು ಪ್ರಸ್ತುತ ಪಡಿಸುತ್ತವೆ. ಸತಿ ಹೋಗುವವಳನ್ನು ಅವಳ ತವರ ಸಂಬಂಧಿಗಳು ತಡೆಯುವುದನ್ನು, ಅವಳಿಗೆ ಹಲವಾರು ಆಮಿಷ ಒಡ್ಡುವುದನ್ನು ಈರೋಬಿ ಗೀತೆಯಲ್ಲಿ ಗಮನಿಸಬಹುದು.

ಸೀರೆಯನುಡುವಮ್ಮ ಕುಪ್ಪಸ ತೊಡುವಮ್ಮ
ಮಲ್ಲಿಗೆ ಹೂವ ಮುಡಿಯಮ್ಮ ಈರೋಬಿ

ತೆಪ್ಪನಿರಮ್ಮ ಅರಮಲ್ಲಿ.

ಎಂದು ಬಂಧುಗಳು ಕೇಳಿಕೊಳ್ಳುತ್ತಾರೆ. ಮುಂಡ್ಯಾಗೋಕ್ಕಿಂತ । ಕಂಡೋರ ಮನೆಯ ಕಸನ್ಹಾಕಿ ಸಾಯೋಕಿಂತ । ಕೊಂಡವನ್ನೋದೆ ಕಡುಲೇಸು ಎಂದು ಖಂಡಿತವಾಗಿ ನುಡಿಯುತ್ತಾಳೆ. ಅವಳು ಚಿತೆ ಏರುವ ಕೊನೆಯ ಕ್ಷಣದಲ್ಲಿ ಬಂಧುಗಳು ತಡೆಯಲು ಪ್ರಯತ್ನಿಸುತ್ತಾರೆ.

ಅತ್ತಿತ್ತ ನೋಡ್ಯಾಳೆ ಹತ್ತ್ಯಾಳೆ ಸತಿಕಲ್ಲ
ಹತ್ತಿರ ಬರುತಾರೆ ಅವರಪ್ಪ ! ತಾಯಮ್ಮ

ನೂರು ಕೊಟ್ಟೇನು ಇರುಮಗಳೆ ಎನ್ನುತ್ತಾರೆ. ತಂದೆ ಮಾತಿಗೂ ಹಿಂದೆ ಸರಿಯದ ಈರೋಬಿ, ಏಳು ಜನ ಅಣ್ಣಂದೀರು । ನಾವು ಏಳು ತುತ್ತು ಅಂದರು ನಿನ್ನ ಕತೆ ಆಯಿತವ್ವ ಎಂದು ತಂಗಿ ಹಿರಿದಿಮ್ಮವ್ವ ಸತಿಹೋಗುವುದನ್ನು ತಡೆಯಲಾಗುವುದಿಲ್ಲ. ಒಟ್ಟಿನಲ್ಲಿ ಸತಿಯಾಗುವುದನ್ನು ತಡೆಯಲು ತವರಿನವರು ಏನೆಲ್ಲ ಪ್ರಯತ್ನಗಳನ್ನು ನಡೆಸಿದರೂ ಸಾಧ್ಯವಾಗುವುದಿಲ್ಲ. ಸತಿಯಾಗದಿರುವಂತೆ ಒತ್ತಾಯ ಹೆಚ್ಚಿದಷ್ಟು ಸತಿಹೋಗುವ ನಿರ್ಧಾರ ಬಲವಾಗಿರುವುದನ್ನು ಗಮನಿಸಬಹುದು. ಸತಿ ಹೋಗುವುದು ಎಷ್ಟೇ ಪವಿತ್ರವಾದುದೆಂದು ನಂಬಿಸಿದ್ದರೂ ಬದುಕುವ ಆಸೆಯನ್ನು ಅಷ್ಟು ಬೇಗ ಕಳೆದುಕೊಳ್ಳಲಾರರು. ಇದರಿಂದ ಸತಿಹೋಗದೆ ತಪ್ಪಿಸಿಕೊಳ್ಳುವ ಸಂದರ್ಭಗಳು ಇದ್ದುವು ಎನ್ನುವುದಕ್ಕೆ ದಿಡ್ಡಿಯ ಬಾಗಿಲುಗಳನ್ನು ಮುಚ್ಚಿಸಿರುವ ನಿದರ್ಶನಗಳೂ ಇದ್ದುವು.

ಕದ್ದುವೋದಾಳೆಂದು ದಿಡ್ಡಿಗಳ ಆಕುಸ್ತ
ಕದ್ದುವೋಗೋರ ಮಗಳಲ್ಲ
ಕದ್ದುವೋಗೋರ ಮಗಳಲ್ಲ । ಕಾಟೇಗೌಡ
ದಿಡ್ಡಿ ಬಾಗಿಲು ತೆಗಿಸಯ್ಯ

ಎಂದು ಹೇಳುವ 'ಮಹಾಸತಿವೀರ ತಿಮ್ಮವ್ವ' ಕಥನಗೀತೆ ಪ್ರಸ್ತುತ ಪಡಿಸುತ್ತದೆ. ಮತ್ತು ಬೆಂಕಿಯನ್ನು ನೋಡಿ ಹೆದರಿ ಓಡಿಹೋಗದಂತೆ ಸುತ್ತ ತೆರೆಹಾಕಿಸುವ ಕ್ರಮವೂ ಇತ್ತೆಂದು ತಿಳಿಯಬಹುದು

ಕೆಂಡಕಂಡ್ಯಾಳೆಂದು ಕಂಬಳಿಯ ತೆರಗಟ್ಟಿ
ಕೆಂಡಕೆದರೋರ ಮಗಳಲ್ಲ
ಕೆಂಡಕೆದರೋರ ಮಗಳಲ್ಲ ಕಾಟೇಗೌಡ
ಕಂಬಳಿ ತೆರೆಯ ತೆಗುಸಯ್ಯ

ಈ ಗೀತೆಗಳು ಸತಿಹೋಗುವವರ ದೃಢ ನಿರ್ಧಾರವನ್ನು ಸೂಚಿಸುತ್ತವೆ. ಈ ನಿರ್ಧಾರದಿಂದ ಹಿಂದೆ ಸರಿಯುವಂತೆ ಹುರಿದುಂಬಿಸುವ ಹೆತ್ತವರ ಸಂಕಟವೂ ಇಲ್ಲಿದೆ.

ಹೆತ್ತವರ ದುಃಖವೂ ನಿಜವಾದುದು. ಹಾಗೆಯೇ ಸತಿಹೋಗುವುದು ಅಷ್ಟೇ ಬಲವಾದ ನಂಬಿಕೆ. ಇಬ್ಬರೂ ಇವುಗಳಿಂದ ಪಾರಾಗಲು ಸಾಧ್ಯವಾಗದೆ ಸಾಮಾಜಿಕ ಮೌಲ್ಯಕ್ಕಾಗಿ ನಿಷ್ಠೆ ತೋರಿಸುವುದು ಅನಿವಾರ್ಯವಾಗಿ ಕಾಣುತ್ತದೆ. ಈ ನಿಷ್ಠೆಯನ್ನು ವ್ಯಕ್ತಪಡಿಸುವ ಸತಿಯಾಗುವ ಮಹಿಳೆಯರನ್ನು ಕುರಿತು ವಿಜಯಾದಬ್ಬೆಯವರು ಹೀಗೆ ಪ್ರತಿಕ್ರಿಯಿಸುತ್ತಾರೆ.

> *"ಕಿಚ್ಚುಕೊಡದಿದ್ದರೆ ಕಿತ್ತುಕೊಂಬೆ ನಾಲಿಗೆ' ಎಂದು ಹೆದರಿಸಿ ಎಷ್ಟೋ ಜನ ತಮ್ಮ ನಂಬಿಕೆಯನ್ನು ತೋರಿದ್ದಾರೆ. ಈ ಬಗೆಯ ನಿಷ್ಠೆ ಯಾವಾಗಲೂ ಕೃತಕವೆನ್ನಲಾಗದು. ಬದುಕಿ ಉಳಿದು ಅನುಭವಿಸುವ ಹಿಂಸೆಗಿಂತ ಸತ್ತು ಪೂಜೆಗೊಳ್ಳುವುದು ಹೆಚ್ಚು ಅಪ್ಯಾಯಮಾನವೂ ಅಪೇಕ್ಷಣೀಯವೂ ಆಗುತ್ತದೆ. ಇಲ್ಲಿ ಕೂಡ ಇದು ವೈಯಕ್ತಿಕ ನೆಲೆಯಲ್ಲಿ ಬಿಡಿಯಾಗಿ ಮಾಡುವ ನಿರ್ಧಾರ, ಆಯ್ಕೆ ಇದೆ. ಎಂದು ಹೇಳುವುದು ಕಷ್ಟ. ಸಂಸ್ಕೃತೀಕರಣದ ಪ್ರಕ್ರಿಯೆಯಲ್ಲಿ ಆ ಹುಡುಗಿಯರು ಪಡೆದುಕೊಂಡ ಮೌಲ್ಯಗಳು ಹಾಗಿವೆ. ಸತಿಹೋಗುವವರ ಮುಂದೆ ತಾವು ಕಂಡ ಎಷ್ಟೋ ಪೂಜೆಗೊಂಡ ಸತಿಯರ ಕೊಂಡಗಳು ಭಕ್ತಿ ಗೌರವದಿಂದ ಹಾಡಲ್ಪಟ್ಟ ಸತಿಗೀತಗಳು ಸುಳಿದು ಹೋಗಿರಬೇಕು. ಯುದ್ಧದಲ್ಲಿ ಗಂಡ ಮಡಿದು ವೀರರ ಪಂಕ್ತಿ ಸೇರಿದರೆ ಅವನಿಗಾಗಿ ಸತ್ತ ಸತಿ ಸತಿಯರ ಪಂಕ್ತಿ ಸೇರ ಬಯಸುತ್ತಾಳೆ."*[೧]

ಸತಿಹೋಗದಂತೆ ತೆರೆಯೊಡ್ಡುವ, ದಿಡ್ಡಿಬಾಗಿಲು ಹಾಕಿಸುವ ಊರಿನವರೂ ಮರುಗುತ್ತಾರೆ. ಸತಿಹೋಗುವುದನ್ನು ತಡೆಯುವ ಹಟ ಅವರಿಗಿಲ್ಲ. ಆದರೆ ಅವರ ಪಾಲಿನ ಕರ್ತವ್ಯದ ಭಾಗವಾಗಿ ಮಾಡುತ್ತಾರೆ. ಇಂತಹ ತಡೆಹಾಕುವುದರ ಹಿಂದೆ ಸಾಂಪ್ರದಾಯಿಕವಾದ 'ಪುಣ್ಯಕಾರ್ಯ' ಎನ್ನುವ ಪ್ರಜ್ಞೆ ಕೆಲಸ ಮಾಡಿರಬಹುದು. ಸತಿಯಾಗುವವಳು ಬದುಕುಳಿಯುವ ಧೈರ್ಯ ಮಾಡಲಾಗದವಳಾಗಿದ್ದಾಳೆ. ಕೌಟುಂಬಿಕ ನೆಲೆಯ ಸಂಬಂಧಿಗಳು ಸಾಮಾಜಿಕ ಮೌಲ್ಯಗಳಿಗೆ ಅಂಟಿಕೊಂಡಿದ್ದಾರೆ. ಊರಿನ ಹಿರಿಯರು ಓಡಿಹೋಗದಂತೆ ತಡೆಯುವ ಕೆಲಸ ಮಾಡುವ ಅನಿವಾರ್ಯತೆ ಇದೆ. ಇವರೆಲ್ಲರ ಹಿಂದೆ ಕೆಲಸ ಮಾಡುವುದು ಅಂತಿಮವಾಗಿ ಸಾಂಸ್ಕೃತಿಕ, ಸಾಮಾಜಿಕ ರಾಜಕೀಯ ಒತ್ತಡಗಳು ಎಂದು ಭಾವಿಸಬಹುದು.

ಇಂದಿಗೂ 'ಸತಿಪದ್ಧತಿ' ವಿರುದ್ಧ ಹೋರಾಡುವ ಅನಿವಾರ್ಯತೆ ಇರುವುದರಿಂದ ಸತಿಪದ್ಧತಿ ವಿರುದ್ಧ ಹೋರಾಟ ಎಂದರೆ ಯಾರ ವಿರುದ್ಧವೆನ್ನುವುದೇ ಮುಖ್ಯ ಪ್ರಶ್ನೆ. ಸತಿ ಹೋಗುವವಳು, ಬಂಧುಗಳು, ಊರಿನ ಮುಖಂಡ ಈ ಮೂವರೂ ಸತಿಪದ್ಧತಿಯ ವಿರೋಧವಿದ್ದಾರೆ ಎಂದು ಸತಿಗೀತೆಗಳ ಮೂಲಕ ತಿಳಿಯಬಹುದು. ಯಾವ ವ್ಯವಸ್ಥೆ ಅವರನ್ನು ಅಸಹಾಯಕರನ್ನಾಗಿ ಮಾಡಿದೆಯೋ ಅದರ ವಿರುದ್ಧ

೧. ನಾರಿ–ದಾರಿ–ದಿಗಂತ–ವಿಜಯಾ ದಬ್ಬೆ – ರಚನಾ ಪ್ರಕಾಶನ – ಮೈಸೂರು – ೧೯೯೭ ಪು. ೧೬೨ – ೧೬೩

ಹೋರಾಡುವ ಸಂದರ್ಭಗಳು ಎದುರಾಗುತ್ತವೆ. ಸತಿಪದ್ಧತಿಯ ನಿರ್ಮೂಲನೆಗೆ ಸಾಗುವ ಹಾದಿ ಹೇಗಿರಬೇಕೆಂದು ವಿಜಯಾದಬ್ಬೆಯವರ ಮಾತುಗಳಿಂದ ತಿಳಿಯಬಹುದು.

> *"ಯಾರೋಬ್ಬರೂ ವೈಯಕ್ತಿಕವಾಗಿ ಬದಲಾದರೆ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಲಾಗುವುದಿಲ್ಲ. ಇವರೆಲ್ಲರ ಹಿಂದಿನ ಒತ್ತಡಗಳನ್ನು ಬದಲು ಮಾಡುತ್ತಾ ಇವರೆಲ್ಲರೂ ಒಟ್ಟಾಗಿ ಆ ಮೌಲ್ಯಗಳಿಂದ ಬಿಡುಗಡೆ ಹೊಂದುವಂತೆ ಮಾಡುವುದೇ ಉಪಾಯ : ಇದಕ್ಕೆ ಉತ್ತರವಾಗಿದೆ. ಈ ಮಾತು ಅಂದಿನ ಸತಿಗೆ ಎಷ್ಟು ಅನ್ವಯಿಸುತ್ತದೋ ಇಂದಿನ ಸತಿಗೂ ಅಷ್ಟೇ ಅನ್ವಯಿಸುತ್ತದೆ. ಸತಿವಿರುದ್ಧವಾದವರ ಹೋರಾಟ ಬ್ರಿಟಿಷರ ಕಾಲದಲ್ಲೇ ಪ್ರಾರಂಭವಾದರೂ ಇಂದಿಗೂ ನಮ್ಮ ಜನಪ್ರತಿನಿಧಿಗಳು ಕೂಡ ಸತಿಕಟ್ಟೆಗೆ ಸುತ್ತು ಹಾಕುತ್ತಿರುವುದಕ್ಕೆ ಒಟ್ಟು ವ್ಯವಸ್ಥೆಯ ದೃಷ್ಟಿ ಕೋನದಲ್ಲಿ ಆಮೂಲಾಗ್ರ ಬದಲಾವಣೆಗಳು ಆಗದಿರುವುದಕ್ಕೆ ಸಾಕ್ಷಿಯಾಗಿದೆ"*[೧]

ವ್ಯವಸ್ಥೆಯಲ್ಲಿ ಹೆಣ್ಣು ಗಂಡಿನ ಸಂಬಂಧದಲ್ಲಿ ನೆಲೆಯಾದ ಅಸಮಾನತೆ ಇಂತಹ ಸಾಮಾಜಿಕ ಅನಿಷ್ಟಗಳನ್ನು ಹುಟ್ಟುಹಾಕುತ್ತಿವೆ. ಪರಸ್ಪರ ಪ್ರೀತಿ ಗೌರವಗಳು ಎಷ್ಟೋ ದುಗುಡಗಳನ್ನು ದುರಂತಗಳನ್ನು ಕಡಿಮೆಮಾಡಬಲ್ಲವು. ಪರಸ್ಪರ ಪ್ರೀತಿ, ಸಂಬಂಧಗಳನ್ನು ಹಂಚಿಕೊಂಡು ನೆಮ್ಮದಿಯಿಂದ ಬದುಕುವ ನಿದರ್ಶನಗಳನ್ನು ಜನಪದ ಸಾಹಿತ್ಯಗಳು ನೀಡುತ್ತವೆ. ಜನಸಂಸ್ಕೃತಿಯ ಪ್ರಧಾನ ವಾಹಕವಾದ ಜನಪದ ಸಾಹಿತ್ಯ ಮಹತ್ವದ ಮಾಹಿತಿಗಳನ್ನು ಒದಗಿಸುತ್ತವೆ. ಮಹಿಳೆಯ ದುರಂತ ಬದುಕಿಗೆ ಬೆಳಕು ಚಲ್ಲುವ ಜನಪದ ಸಾಹಿತ್ಯ ಬದಲಾವಣೆಯ ಅಗತ್ಯವನ್ನು ಎತ್ತಿ ತೋರುತ್ತದೆ. ಇಂದಿಗೂ ತೀವ್ರವಾಗಿ ಕಾಡುವ ಮಹಿಳೆಯ ಸಮಸ್ಯೆಗಳಿಗೆ ಜನಪದ ಸಾಹಿತ್ಯ ಧ್ವನಿ ನೀಡಿದೆ. ಆರ್ಥಿಕ ಬಲವಿಲ್ಲದೆ, ಕೌಟುಂಬಿಕ ಸಂಬಂಧಗಳ ಒಳಗೇ ಬದುಕುವ ಮಹಿಳೆಯ ಅತಂತ್ರ ಸ್ಥಿತಿಗೆ ಸಾಮಾಜಿಕ ನ್ಯಾಯ ಸಿಗಬೇಕಾಗಿದೆ. ನಮ್ಮ ಸಮಾಜದ 'ಶೀಲ'ದ ಒಮ್ಮುಖ ಹೇರಿಕೆ ದ್ವಿಸ್ತರ ನೀತಿಯಾಗಿದ್ದ ಅಪಾಯಕಾರಿ ಅಸ್ತ್ರದಿಂದ ಮಹಿಳೆ ಕುಟುಂಬದೊಳಗೇ ದಾಸ್ಯದಿಂದ ಬದುಕುವ ಅನಿವಾರ್ಯತೆ ಸೃಷ್ಟಿಯಾಗಿದೆ. ಶೀಲದ ಅಸ್ತ್ರದೊಂದಿಗೆ ಸತಿಪದ್ಧತಿ ತಳುಕು ಹಾಕಿಕೊಂಡಿದ್ದು ಇದರಿಂದ ಹೊರಬರಲಾರದೆ ದುರಂತಕ್ಕೊಳಗಾಗಿರುವುದು ಇತಿಹಾಸವಾಗಿದೆ.

**೨. <u>ಆರಂಭಿಕ ಕಥನ ಸಾಹಿತ್ಯದಲ್ಲಿ ವೈಧವ್ಯದ ತಾತ್ವಿಕ ಚರ್ಚೆ</u>**

ಮಹಿಳೆಯರು ಅದರಲ್ಲೂ ವಿಧವೆಯರ ಜೀವನ ತುಂಬಾ ಶೋಚನೀಯವಾದುದು ಎಂದು ನಂಬಲಾಗಿದೆ. ಆದರೆ ಆದಿಮ ಕಾಲದಿಂದ

---
೧. ನಾರಿ–ದಾರಿ–ದಿಗಂತ–ವಿಜಯಾ ದಬ್ಬೆ – ರಚನಾ ಪ್ರಕಾಶನ – ಮೈಸೂರು – ೧೯೯೭ ಪು. ೧೬೨ – ೧೬೩

ಇಂದಿನವರೆಗೆ ಈ ಸ್ಥಿತಿ ಹಾಗೇ ಉಳಿದಿಲ್ಲ ಎನ್ನುವುದು ಸತ್ಯ. ಚಾರಿತ್ರಿಕವಾಗಿ ಸಮಾಜದಲ್ಲಿ ಅವಳ ಸ್ಥಿತಿಯಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ದೇಶದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಪರಿಸ್ಥಿತಿಯಲ್ಲಾದ ಬದಲಾವಣೆಗಳು ವಿಧವೆಯರನ್ನು ನೋಡುವ ದೃಷ್ಟಿಯಲ್ಲಿ ಬದಲಾವಣೆಗಳನ್ನು ತಂದಿವೆ. ಆದರೂ ಬಾಲ್ಯ ವಿವಾಹದಂತಹ ಕ್ರೂರಪದ್ಧತಿಗೊಳಗಾದ ಹೆಣ್ಣುಮಕ್ಕಳು ವಿಧಿವಂಚಿತರಾಗಿ ವಿಧವೆಯರಾದಾಗ ಸಾಂಪ್ರದಾಯಿಕ ಸಮಾಜವನ್ನೆದುರಿಸುವುದು ಕಠಿಣವಾಗಿತ್ತು. ಇಂತಹ ಪರಿಸ್ಥಿತಿಯಿಂದ ಹೊರಬರಲು ಅನೇಕ ವಿಧವೆಯರು ಪ್ರಯತ್ನ ಪಟ್ಟಿದ್ದು ಇದೆ. ಆದರೆ ಸ್ವಾತಂತ್ರ್ಯಪೂರ್ವ ಕಾಲಘಟ್ಟದಲ್ಲಿ ಇವರ ಮುಂದಿದ್ದ ಆಯ್ಕೆಗಳೆಂದರೆ ವಿಧವಾಮರುವಿವಾಹ, ಬ್ರಹ್ಮಚರ್ಯ, ಆತ್ಮಹತ್ಯೆ, ಧರ್ಮವನ್ನು ತ್ಯಜಿಸುವುದು ಅಥವಾ ಸೇರುವುದು, ವೇಶ್ಯೆಯರಾಗುವುದು ಮುಂತಾದುವು. ಆ ಕಾಲಘಟ್ಟದಲ್ಲಿ ಸಾಹಿತ್ಯ ಕೃತಿಗಳಲ್ಲಿ ವಿಧವಾ ಬದುಕು ಅನಾವರಣಗೊಂಡಿರುವುದೂ ಗಮನಾರ್ಹವಾದುದು.

'ವಿವಾಹ' ತಳಹದಿಯ ಮೇಲೆ ನಿರ್ಮಾಣಗೊಂಡ ಕುಟುಂಬ ವ್ಯವಸ್ಥೆಯಲ್ಲಿ ಸಾಮಾಜಿಕವಾಗಿ ವಿಧವೆಯರ ಬದುಕು ತೆರೆದುಕೊಳ್ಳುವುದನ್ನು ಕಥನ ಸಾಹಿತ್ಯದ ಹಿನ್ನೆಲೆಯಲ್ಲಿ ಗಮನಿಸಬಹುದು. ಗಂಡು–ಹೆಣ್ಣಿನ ಸಂಬಂಧ ವ್ಯವಸ್ಥಿತವಾದ ಕುಟುಂಬಗಳಾಗಬೇಕಾದಲ್ಲಿ ಹೆಣ್ಣಿನ ಶೋಷಣೆಯ ಸ್ಥಾನವಾಗಿರುವುದು ವ್ಯವಸ್ಥೆಯ ದೌರ್ಬಲ್ಯವಾಗಿದೆ. ಪತಿಯ ಮರಣ ಪತ್ನಿಯನ್ನು ವಿಧವಾ ಪಟ್ಟಕ್ಕೇರಿಸಿ ದಾಸ್ಯದಿಂದ ನೋಡುವ ಅಮಾನವೀಯತೆಯ ಮುಖಗಳನ್ನು ಕನ್ನಡ ಕಥನ ಸಾಹಿತ್ಯ ತೆರೆದಿಟ್ಟಿದೆ. ಸಾಮಾಜಿಕ ಸಮಸ್ಯೆಯಾದ 'ವೈಧವ್ಯ' ಅಮಾಯಕ ಹೆಣ್ಣಿನ ಬದುಕನ್ನು ನುಂಗಿಹಾಕುವುದನ್ನು ಕುರಿತು ಸಹಜ ಕಾಳಜಿ ವ್ಯಕ್ತಪಡಿಸಿ ಸಮಸ್ಯೆಗೆ ಸೂಕ್ತ ಪರಿಹಾರಗಳನ್ನು ಸೂಚಿಸಿರುವುದೂ ಮುಖ್ಯವಾಗುತ್ತದೆ. ಮೊದಲ ಘಟ್ಟದ ಕಾದಂಬರಿಗಳಿಗೆ ಮೇಲ್ಜಾತಿ ವರ್ಗದವರ ವಿಧವಾಚರಣೆ ಅತ್ಯಂತ ಕ್ರೂರವಾಗಿ ಕಂಡು ಸಾಹಿತ್ಯಾಭಿವ್ಯಕ್ತಿಯಲ್ಲಿ ಒಡಮೂಡಿರುವುದೂ ಸಮಸ್ಯೆಗೆ ಕಂಡುಕೊಂಡ ಪರಿಹಾರವೆಂದೇ ಹೇಳಬಹುದು.

ಪತಿಯ ಮರಣ ತಂದ 'ವಿಧವೆ'ಯ ಪಟ್ಟ ಸಮಾಜದಲ್ಲಿ ದೊರೆಯುವ ಎಲ್ಲಾ ಅವಕಾಶಗಳಿಂದ ದೂರಮಾಡುತ್ತದೆ. ವಿಧುರನಾದವನಿಗೆ ದೊರೆಯುವ ಎಲ್ಲಾ ಅವಕಾಶಗಳಿಂದ ವಿಧವೆ ವಂಚಿತಳಾಗುತ್ತಾಳೆ. ಇಂತಹ ದ್ವಂದ್ವದ ಸ್ಥಿತಿಯನ್ನು ಸಾಹಿತ್ಯ ಕೃತಿಗಳು ಪ್ರಶ್ನೆಮಾಡುತ್ತವೆ. ವಿಧವೆ ಮರುವಿವಾಹದೊಂದಿಗೆ ಬದುಕು ಕಟ್ಟಿಕೊಳ್ಳುವುದು ಸಾಧ್ಯವಾಗದೆ ನಾಲ್ಕು ಗೋಡೆಯ ಮಧ್ಯೆ ದಾಸ್ಯದಿಂದ ಬದುಕುವುದನ್ನು ಚರ್ಚಿಸುತ್ತವೆ. ವಿಧವೆ ತನ್ನೊಳಗಿನ ಜೀವಕಾಮವನ್ನು ಹತ್ತಿಕ್ಕಲಾರದೆ ಹೋದರೆ ಜಾತಿ ಭ್ರಷ್ಟಳಾಗಿ ಆತ್ಮಹತ್ಯೆಗೊಳಗಾಗುವುದು, ವೇಶ್ಯೆಯರಾಗುವುದು ಜೀವ ವಿರೋಧಿ ನೀತಿ

ಎನ್ನುವುದೂ ಸಾಹಿತ್ಯ ಕೃತಿಗಳಲ್ಲಿ ಚರ್ಚೆಗೊಳಪಟ್ಟಿವೆ. ನವೋದಯ ಪೂರ್ವದ ಕಥನ ಸಾಹಿತ್ಯ ಪರಂಪರಾಗತಮೌಲ್ಯಗಳನ್ನು ವಿರೋಧಿಸುವ, ವೈಧವ್ಯದ ವಿಧಿ ನಿಷೇಧಗಳನ್ನು ಪಾಲಿಸುತ್ತಲೇ ತಾತ್ವಿಕ ಪ್ರಶ್ನೆಗಳನ್ನೆತ್ತುತ್ತವೆ. ಆಂತರ್ಯದಲ್ಲಿ ವೈಚಾರಿಕತೆಯನ್ನು ತುಂಬಿಕೊಂಡು ಬಾಹ್ಯದಲ್ಲಿ ಸಾಂಪ್ರದಾಯಿಕ ನೆಲೆಯಲ್ಲಿ ಬದುಕುವುದರ ಮೌಲಿಕ ಚರ್ಚೆಗಳು ಅನೇಕ ಕೃತಿಗಳಲ್ಲಿ ನಡೆದಿದೆ.

ಕೆರೂರು ವಾಸುದೇವಾಚಾರ್ಯರ 'ಇಂದಿರಾ' ಕಾದಂಬರಿ 'ಸ್ತ್ರೀಶಿಕ್ಷಣ' ಮತ್ತು 'ವಿಧವಾ ವಿವಾಹವನ್ನು' ಮುಖ್ಯವಾಗಿ ಚರ್ಚಿಸುತ್ತದೆ. ಕಾಲೇಜು ದಿನಗಳಲ್ಲಿ ಸ್ನೇಹಿತರಾಗಿದ್ದ ಜಯರಾಯ ಮತ್ತು ಕಮಲಾಕಾಂತ ಇಬ್ಬರೂ ಶ್ರೀಮಂತ ಸುಸಂಸ್ಕೃತ ವಿಧವೆಯಾದ ದೇವಯಾನಿಯನ್ನು ಪ್ರೀತಿಸುತ್ತಾರೆ. ದೇವಯಾನಿಯನ್ನು ತಾನೇ ಪಡೆಯಬೇಕೆಂದು ಜಯರಾಯ ಮಾಡಿದ ಸಂಚು ವಿಫಲವಾಗುತ್ತದೆ. ಕಮಲಾಕಾಂತನ ವಿವಾಹ ಬೇರೊಬ್ಬಳೊಂದಿಗೆ ನೆರವೇರುತ್ತದೆ. ವಿದ್ಯಾಸಂಪನ್ನೆಯಾದ ದೇವಯಾನಿ ಅವಿವಾಹಿತಳಾಗಿಯೇ ಉಳಿಯುತ್ತಾಳೆ. ಕೆಲವು ವರ್ಷಗಳ ನಂತರ ಕಮಲಾಕಾಂತನ ಮಗ ರಮಾಕಾಂತ ಜಯರಾಯನ ಮಗಳು ಇಂದಿರೆಯನ್ನು ಪ್ರೀತಿಸುತ್ತಾನೆ. ಜಯರಾಯನಿಗೆ ಇವರ ಪ್ರೀತಿ ಒಪ್ಪಿಗೆಯಾಗದೆ ತಿರಸ್ಕರಿಸುತ್ತಾನೆ. ಶ್ರೀಮಂತ ಯುವಕ ಶ್ರೀಕಂಠನೊಂದಿಗೆ 'ಇಂದಿರೆ'ಯ ವಿವಾಹ ಮಾಡಿಸುವ ಅಪೇಕ್ಷೆಯಲ್ಲಿರುತ್ತಾನೆ. ರಮಾಕಾಂತನಿಗೆ ಭಾಷ್ಕಳಪಂತನೆಂಬ ಡಾಕ್ಟರನ ಸಹೋದರಿ ರಾಧಾಬಾಯಿ ಪಂಡಿತೆ ಮೂರುಬಾರಿ ವಿಧವೆಯಾಗಿ ಸಮಾಜಕಾರ್ಯದಲ್ಲಿ ತೊಡಗಿದ್ದವಳು ತನ್ನ ಶಿಷ್ಯೆ ಕಮಲಳನ್ನು ವಿವಾಹಮಾಡಿಸುವ ಸಂಚು ಹೂಡುತ್ತಾಳೆ. ಆದರೆ ದೇವಯಾನಿಯ ಸಹಾಯದಿಂದ ಜಯರಾಯನ ಮಗಳು ಇಂದಿರೆ ರಮಾಕಾಂತನನ್ನು ಮದುವೆಯಾಗುತ್ತಾಳೆ.

ಬಾಲವಿಧವೆಯಾಗಿ ಕಾಲೇಜು ಕಲಿಯುತ್ತಿದ್ದ ದೇವಯಾನಿ ಕಮಲಾಕಾಂತನನ್ನು ಪ್ರೀತಿಸುತ್ತಾಳೆ. ಇವರ ವಿವಾಹವನ್ನು ತಪ್ಪಿಸಿದ ಜಯರಾಯ ಕಮಲಾಕಾಂತನು ಬೇರೊಂದು ಮದುವೆಯಾಗುವಂತೆ ಮಾಡುತ್ತಾನೆ. ಆದರೆ ದೇವಯಾನಿ ಜಯರಾಯನನ್ನು ತಿರಸ್ಕರಿಸಿ ವಿಧವೆಯಾಗಿಯೇ ಉಳಿದು ವಿದ್ಯಾವಂತ ಸುಸಂಸ್ಕೃತ ವಿಧವೆ ಎನ್ನುವುದನ್ನು ದೃಢಪಡಿಸುತ್ತಾಳೆ. ಬಾಲ್ಯವಿವಾಹ ವಿರುದ್ಧ ಧ್ವನಿ ಎತ್ತುವ, ವಿಧವಾ ವಿವಾಹವನ್ನು ಪ್ರೋತ್ಸಾಹಿಸುವ ಕಾದಂಬರಿಕಾರರು ಸಂಸ್ಕೃತಿಯ ನೆಲೆಯಲ್ಲೇ ಹೊಸಬಾಳನ್ನು ರೂಪಿಸಿಕೊಳ್ಳುವುದನ್ನು ಬೆಂಬಲಿಸುತ್ತಾರೆ. 'ವಿಧವೆ' ಆ ಕಾಲದಲ್ಲಿ ಸುಂದರವಾದ ಬಾಳನ್ನು ಕಟ್ಟಿಕೊಳ್ಳಲು ಅಗತ್ಯವಾಗಿದ್ದ ಶಿಕ್ಷಣದ ಬಗ್ಗೆ ಹೇಳುತ್ತಾರೆ. ಸಂಸ್ಕೃತಿಯ ನೆಲೆಗಟ್ಟಿಗೆ ಶೈಕ್ಷಣಿಕ ಪ್ರಗತಿ ಪೂರಕವಾದುದು ಎಂದು ವಿವರಿಸುತ್ತಾ ಎಂ.ವಿ. ಇನಾಂದಾರ್‌ರವರು 'ಇಂದಿರಾ' ಕಾದಂಬರಿಯ ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ.

*"ಪ್ರಚಾರದ ಮಾತುಗಳಿಂದ ಅಥವಾ ಒತ್ತಾಯಿಸುವ ಕಾನೂನುಗಳಿಂದ ಸಮಾಜ ಸುಧಾರಣೆ ಸಿದ್ಧಿಸುವುದಿಲ್ಲ. ದೇಶ ಕಾಲ ಪರಿಸ್ಥಿತಿಗೆ ಅನುಗುಣವಾಗಿ ಶಿಕ್ಷಣದ ಮೂಲಕವಾಗಲಿ ಯಾವುದಾದರೂ ಆಕಸ್ಮಿಕ ಕ್ರಾಂತಿಕಾರಿ ಘಟನೆಯಿಂದಾಗಲಿ, ಸಮಾಜ ಸುಧಾರಣೆಗಳು ತಾವಾಗಿಯೇ ವ್ಯವಹಾರದಲ್ಲಿ ಬರುವುವು. ಕಾಯಿದೆಗಳ ಬಲದಿಂದಾಗಲಿ. ಅಧಿಕಾರದ ಬಲದಿಂದಾಗಲಿ, ಅವುಗಳನ್ನು ಜಾರಿಯಲ್ಲಿ ತರಲು ಯತ್ನಿಸುವುದು ಅನರ್ಥಕರವಾದುದು"[1].*

ಕಾದಂಬರಿ ಇಂದಿರೆ ಮತ್ತು ರಮಾಕಾಂತರ ಪ್ರಣಯಕಥೆಯಾಗಿದ್ದರೂ ಅಂದಿನ ಸಾಮಾಜಿಕ ಜೀವನದ ತಾಕಲಾಟದ ಚಿತ್ರಣವೂ ಆಗಿದೆ. ಜಯರಾಯನು ಸಮಾಜದಲ್ಲಿ ತನ್ನ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವ ಅಪೇಕ್ಷೆಯಲ್ಲಿ ಒದ್ದಾಡುತ್ತಾನೆ. ಇಂದಿರೆಗೆ ರಮಾಕಾಂತನನ್ನು ಮದುವೆಯಾಗುವಲ್ಲಿ ಸೋಲುಂಟಾಗುವ ಭೀತಿಯಾದರೆ ರಮಾಕಾಂತನಿಗೆ ಇಂದಿರೆಯ ಮದುವೆ ಶ್ರೀಕಂಠನೊಂದಿಗೆ ಗೊತ್ತಾಗಿದೆ ಎಂಬ ವರ್ತಮಾನ ನಿರಾಶೆಯತ್ತ ತಳುತ್ತದೆ. ಜೊತೆಗೆ ಇಂದಿರೆಗೆ ರಮಾಕಾಂತನು ವಿಧವೆ ಕಮಲೆಯನ್ನೇ ವಿವಾಹವಾಗುತ್ತಾನೆ ಎನ್ನುವ ಸುಳ್ಳು, ಕಳವಳವನ್ನುಂಟು ಮಾಡುತ್ತದೆ. ಜಯರಾಯನನ್ನು ತಿರಸ್ಕರಿಸಿ ವಿಧವೆಯಾಗಿಯೇ ಉಳಿಯುವ ದೇವಯಾನಿ ವಿದ್ಯಾವಂತೆ. ಇಂತಹ ವ್ರತಸ್ಥ ವಿಧವೆಯನ್ನು ಕಂಡ ರಮಾಕಾಂತ ದೇವಯಾನಿಯನ್ನು ಗೌರವದಿಂದ ಕಾಣುತ್ತಾನೆ.

*"ಬಾಲ್ಯದಲ್ಲಿಯೇ ಅವಳ ಸೌಖ್ಯ ಲತೆಗೆ ಬೆಂಕಿಹತ್ತಿ ಸುಟ್ಟುಹೋಗಿದ್ದರೂ, ತನ್ನ ಮನೋನಿಗ್ರಹದಿಂದ ಆಸೆಯಲ್ಲಿ ಕೊಳೆಯದೆ ಧೈರ್ಯತೊಟ್ಟು ಇದ್ದುದರಲ್ಲಿ ಸುಖ ಹಚ್ಚಿಕೊಂಡಿದ್ದಳು. ಇವಳನ್ನು ನೋಡದಿದ್ದರೆ ರಮಾಕಾಂತನಿಗೆ ವ್ರತಸ್ಥರಾದ ಬಾಲವಿಧವೆಯರು ಹೇಗಿರುವರೆಂಬುದು ತಿಳಿಯುವುದೇ ಕಷ್ಟವಾಗುತ್ತಿತ್ತು."[2]*

ತನ್ನ ಸುಖವನ್ನು ತ್ಯಾಗಮಾಡಿ ಮಕ್ಕಳ ಸುಖದಲ್ಲಿ ಸಂತೋಷ ಹೊಂದುವ ದೇವಯಾನಿ ಸುಸಂಸ್ಕೃತ ಅಂತರಂಗದವಳಾಗಿ ಕಾಣುತ್ತಾಳೆ. ದೇವಯಾನಿಯ ವಿಧವಾ ಜೀವನದಲ್ಲಿ ಯಾವ ತಾಕಲಾಟಗಳನ್ನು ಲೇಖಕರು ಗುರುತಿಸುವುದಿಲ್ಲ. ಆ ಕಾಲಕ್ಕೆ ತೀರ ಅಗತ್ಯವಾಗಿದ್ದ ಸ್ತ್ರೀ ಶಿಕ್ಷಣ, ವಿಧವಾ ವಿವಾಹಗಳಂತಹ ಸಮಸ್ಯೆಗಳನ್ನು ಕುರಿತು ಹೇಳುತ್ತಾರೆ. ಒಂದು ಕಡೆ ನಮ್ಮ ಸಾಂಸ್ಕೃತಿಕ ಪರಂಪರೆಯ ಮೌಲ್ಯಗಳನ್ನು ಎತ್ತಿ ಹಿಡಿಯುವ ಲೇಖಕರು ಇನ್ನೊಂದೆಡೆ ಸಮಕಾಲೀನ ಜೀವನದಲ್ಲಿನ ಕೊರತೆಗಳನ್ನು ಬಯಲಿಗೆಳೆಯುತ್ತಾರೆ. ಇದರಿಂದ ಮುಂದಿನ ಕೃತಿಕಾರರಿಗೆ ಭದ್ರ ಬುನಾದಿಯನ್ನು ಹಾಕಿಕೊಟ್ಟವರಾಗುತ್ತಾರೆ. ವಾಸುದೇವಾಚಾರ್ಯರು 'ಇಂದಿರಾ' ಕಾದಂಬರಿಗೆ ಬರೆದ ಮುನ್ನುಡಿಯಲ್ಲಿ ಹೀಗೆ ಅಭಿಪ್ರಾಯಪಡುತ್ತಾರೆ.

---

೧. ಇಂದಿರಾ – ಕೆರೂರು ವಾಸುದೇವಾಚಾರ್ಯ – ಉಷಾ ಸಾಹಿತ್ಯ ಮಾಲೆ– ಮೈಸೂರು –೧೯೮೪– ಪುಟ –೩೮

೨. ಅದೇ ಪು – ಪು – ೨೬

*“ಸಾಮಾಜಿಕ ಜೀವನದಲ್ಲಿಯ ಕುರುಡು ಕಟ್ಟಳೆಗಳು ಇಲ್ಲವಾಗಬೇಕು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಅನ್ಯಾಯ ಅನಾಚಾರಗಳು ಇಲ್ಲವಾಗಬೇಕೆಂಬ ನಿಷೇದಾತ್ಮಕ ದೃಷ್ಟಿಯ ಜೊತೆಗೆ ಯಾವುದಿರಬೇಕು, ಯಾವುದರಿಂದ ಸಮಾಜಸ್ವಾಸ್ತ್ಯ ಸಾಧ್ಯ, ಎಂಬುದರ ವಿಷಯದಲ್ಲಿ ಈ ಎಲ್ಲ ಸ್ವತಂತ್ರ ಲೇಖಕರು ನಮ್ಮ ಸಾಂಸ್ಕೃತಿಕ ಪರಂಪರೆಯನ್ನೇ ಆಶ್ರಯಿಸಿದ್ದು ಕಂಡುಬರುತ್ತದೆ.”*[೧]

ಮೊದಲು ಕಾದಂಬರಿಗಳನ್ನು ಬರೆದ ಲೇಖಕರಿಗೆ ಪಾಶ್ಚಾತ್ಯ ವಿದ್ಯಾಭ್ಯಾಸದ ಅರಿವಿನಿಂದ ಸಾಮಾಜಿಕ ಜೀವನದ ಸಮಸ್ಯೆಗಳನ್ನು ತೋರಿಸುವುದು ಸಾಧ್ಯವಾಯಿತು ಮತ್ತು ಅವರ ಉದ್ದೇಶವೂ ಇದೇ ಆಗಿತ್ತು.

ಈ ಕಾದಂಬರಿಯಲ್ಲಿ ಬರುವ ಇನ್ನೋರ್ವ ವಿಧವೆ ರಾಧಾಬಾಯಿ ಪಂಡಿತೆ ಮೂರು ಸಾರಿ ವಿಧವೆಯಾಗಿ ಮಕ್ಕಳಿಲ್ಲದ ತನ್ನ ಸಮಯವನ್ನು ಸಮಾಜಸೇವೆಗೆ ತೊಡಗಿಸಿಕೊಳ್ಳುತ್ತಾಳೆ. ಜೊತೆಗೆ ವಿಧವೆಯಾದ ಕಮಲಳನ್ನು ಸುಧಾರಣ ಪ್ರಚಾರಕ್ಕಾಗಿ ಸೇರಿಸಿಕೊಳ್ಳುತ್ತಾಳೆ. ರಮಾಕಾಂತನನ್ನು ಕಮಲೆಯೊಂದಿಗೆ ಮದುವೆ ಮಾಡಿಸಿ ಪ್ರಚಾರಗಿಟ್ಟಿಸಿಕೊಳ್ಳುವ ತಂತ್ರ ಪಂಡಿತೆಯದಾದರೆ, ಇಂದಿರೆಯ ತಂದೆ ಜಯರಾಯ ರಮಾಕಾಂತನಿಗೆ ಕಮಲಳನ್ನು ಮದುವೆ ಮಾಡಿಸಿ ಸಮಾಜ ಸುಧಾರಕನಾಗಿ ರಮಾಕಾಂತನನ್ನು ಇಂದಿರೆಯ ಒಲವಿನಿಂದ ದೂರ ಮಾಡಿಸುವ ಸಂಚುಹೂಡುತ್ತಾನೆ. ಈ ಎಲ್ಲಾ ಸಂದರ್ಭಗಳೂ ತಲ್ಲಣಗಳನ್ನುಂಟು ಮಾಡುತ್ತವೆ. ರಮಾಕಾಂತನೇ ಕಮಲಳನ್ನು ವಿವಾಹವಾಗದೆ ತಿರಸ್ಕರಿಸಿದಾಗ ಪಂಡಿತೆ ತನ್ನ ತಮ್ಮ ಭಾಷ್ಕಳಪಂತನಿಗೆ ಮದುವೆ ಮಾಡಿಸಿ 'ವಿಧವಾ ವಿವಾಹ' ನಡೆಸಿ ದಿಗ್ವಿಜಯ ಹೊಂದುತ್ತಾಳೆ. ಕಮಲೆಗೆ ವಿವಾಹ ಮಾಡಿಸಲೇ ಬೇಕಾದ ಅನಿವಾರ್ಯತೆಗೆ ಕಟ್ಟು ಬಿದ್ದು ಮಾಡಿಸಿದ ಮದುವೆ. ಇಲ್ಲಿ ಪ್ರಚಾರ ಪ್ರಿಯತೆಯೆ ಮೆಲುಗ್ಯೆ ಸಾಧಿಸಿದೆ.

*“ಮಾರನೆ ದಿವಸ 'ಸುಧಾರಕಾ ಪತ್ರ' ಸಂಚಿಕೆಯಲ್ಲೂ ಆನಂದದಾಯಕವಾದ ವಾರ್ತೆಯಿಂದ ತುಂಬಿ ಹೋಗಿತ್ತು. “ಉಚ್ಚಕುಲದ ಬ್ರಾಹ್ಮಣರಲ್ಲಿ ಮತ್ತೊದು ಮಹತ್ವದ ಪುನರ್ವಿವಾಹ” ಎಂಬ ಶಿರೋಲೇಖದ ಕೆಳಗೆ ಭಾಷ್ಕಳ ಪಂಥ ಕಮಲೆಯರ ಪುನರ್ವಿವಾಹದ ಸಂಗತಿಯನ್ನು ಸಾಧ್ಯಂತವಾಗಿ ವಿವರಿಸಿದ್ದರು”*[೨]

ಆದರೆ ಒಬ್ಬ ವಿಧವೆ ಇನ್ನೊಬ್ಬಳು ವಿಧವೆಗೆ ಮಾಡಿಸಿದ ವಿವಾಹ ನಗೆ ಪಾಟಲಿಗೆ ಗುರಿಯಾಗುತ್ತದೆ. ಆ ಕಾಲ ವಿಧವಾ ವಿವಾಹವನ್ನು ಒಪ್ಪಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಹಾಗಾಗಿ ರಾಧಾಬಾಯಿ ಮಾಡಿಸಿದ 'ವಿಧವಾ ವಿವಾಹ' ಮನ್ನಣೆಯನ್ನು ಪಡೆಯದೆ ಸಾಮಾಜಿಕ ಅವಹೇಳನಕ್ಕೆ ಗುರಿಯಾಗುತ್ತದೆ. 'ವಿಧವಾ ವಿವಾಹ'ದ ಅಗತ್ಯವನ್ನು

---

೧. ಇಂದಿರಾ – ಕೆರೂರು ವಾಸುದೇವಾಚಾರ್ಯ – ಉಷಾ ಸಾಹಿತ್ಯ ಮಾಲೆ– ಮೈಸೂರು –೧೯೮೮– ಪುಟ –೨೩

೨. ಅದೇ ಪು.ಪು–೩೮೮

ವಿವರಿಸುವ ಕಾದಂಬರಿ ಸಾಮಾಜಿಕ ತಿರಸ್ಕಾರವನ್ನು ಬಯಲು ಮಾಡುವುದರಲ್ಲಿ ಯಶಸ್ವಿಯಾಗಿದೆ. ವಿಧವೆಯ ಮುಂದಿದ್ದ 'ಜೀವವಿರೋಧಿ' ಆಯ್ಕೆಗಳನ್ನು ಪ್ರಶ್ನೆಮಾಡದ ಸಾಮಾಜಿಕ ಧೋರಣೆ 'ವಿಧವಾ ವಿವಾಹ'ವನ್ನು ಲೇವಡಿಮಾಡುವ, ತಿರಸ್ಕೃತ ಮೌಲ್ಯ ಎಂದು ಭಾವಿಸುವ ದ್ವಂದ್ವ ನೀತಿಯನ್ನು ಕಾದಂಬರಿ ತೆರೆದಿಡುತ್ತದೆ.

೩. ವಿಧವಾ ವಿವಾಹದ ದ್ವಂದ್ವ ನೀತಿಗೆ ತಾತ್ವಿಕ ಪ್ರಶ್ನೆಗಳು :

ಆಧುನಿಕ ಶಿಕ್ಷಣದಿಂದ ಪ್ರಭಾವಿತರಾದ ರಾಧಾಬಾಯಿ, ಭಾಷ್ಕಳ ಪಂಥ ಮತ್ತು ಕಮಲೆ ಸಮಸ್ಯೆಯನ್ನು ಆಳವಾಗಿ ಅರಿಯುವಲ್ಲಿ ಸೋಲುತ್ತಾರೆ. ಅವರು ಮಾಡಿದ ಎಲ್ಲಾ ಸುಧಾರಣೆಯ ಕಾರ್ಯಗಳು ಆ ಸಮಾಜದ ನಗೆಪಾಟಲಿಗೆ ಗುರಿಯಾಗುವುದು ಆ ವ್ಯವಸ್ಥೆಯ ಪಾರಂಪರಿಕ ಮೌಲ್ಯಾಚರಣೆಯ ಹಿನ್ನೆಲೆಯಲ್ಲಿ ಎಂದು ಭಾವಿಸಬಹುದು. ನಿರಾಶೆಯನ್ನು ಗೆದ್ದುನಿಂತ ದೇವಯಾನಿ ಆಸೆಯನ್ನು ಗೆಲ್ಲಲಾಗದೆ ಮೂರು ಬಾರಿ ಮದುವೆಯಾಗಿ ಸೋಲುವ ಪಂಡಿತೆಯನ್ನು ಮುಖಾಮುಖಿಯಾಗಿಸುತ್ತಾರೆ. ಪಂಡಿತೆ ಕಮಲಾಳಿಗೆ ಮಾಡಿಸುವ 'ವಿಧವಾವಿವಾಹ' ಆ ಕಾಲದಲ್ಲಿ ತಿರಸ್ಕಾರಕ್ಕೆ ಒಳಗಾಗುತ್ತದೆ. ಆಧುನಿಕ ಶಿಕ್ಷಣದಿಂದ ಪ್ರಭಾವಿತರಾದ ಪಂಡಿತೆ, ಕಮಲಾ, ಭಾಷ್ಕಳ ಪಂಥರು ಸಮಸ್ಯೆಯ ಆಳವನ್ನರಿಯದೆ ಮಾಡುವ ಸಾಮಾಜಿಕ ಸುಧಾರಣೆಯೊಳಗಿನ ದ್ವಂದ್ವದ ಬಗ್ಗೆ ಕಾದಂಬರಿ ಚರ್ಚಿಸುತ್ತದೆ. ಪಂಡಿತೆ, ಭಾಷ್ಕಳ ಪಂಥ, ಕಮಲಾ, ಈ ಮೂವರನ್ನು ಕುರಿತು ಕಾದಂಬರಿಯ ಮುನ್ನುಡಿಯಲ್ಲಿ ಪ್ರೊ.ಎಂ.ವಿ.ಇನಾಂದಾರ್‌ರವರು ಹೀಗೆ ಹೇಳುತ್ತಾರೆ.

> *"ತನ್ನ ನಿರಾಶೆಯನ್ನು ಗೆದ್ದು ನಿಂತ ದೇವಯಾನಿಗೆ ಇದಿರಾಗಿ ನಿರಾಶೆಯನ್ನು ಗೆಲ್ಲಲಾಗದೆ ಒಂದಲ್ಲ ಮೂರು ಮದುವೆಗಳನ್ನು ಮಾಡಿಕೊಂಡು ಅತೃಪ್ತಳಾಗಿಯೇ ಉಳಿದಿದ್ದ ರಾಧಾಬಾಯಿಯ ಸಮಾಜಸೇವಾಕಾರ್ಯದ ಆಟೋಪಗಳು ತನ್ನ ಅಸಂತೃಪ್ತಿಯ ಮತ್ತೊಂದು ಮುಖ ಮಾತ್ರ. ಭಾಷ್ಕಳ ಪಂಥನ ಮರಾಠಿಯ ಅಭಿಮಾನ ಆತನ ಮನಸ್ಸಿನ ಬಾಗಿಲುಗಳನ್ನೇ ಮುಚ್ಚಿಬಿಟ್ಟಿವೆ. ಸ್ತ್ರೀ ಸ್ವಾತಂತ್ರ್ಯವನ್ನು ಕುರಿತು ಉದ್ದಾಮವಾಗಿ ಬಹಿರಂಗ ಭಾಷಣ ಮಾಡಬಲ್ಲ ಕಮಲೆ ರಮಾಕಂತನ ಮೋಹಕ್ಕಾಗಿ ತನ್ನ ಅಂತರಂಗವನ್ನು ಸೆರೆಯಾಗಿಸಿದ್ದಾಳೆ. ಪಂಡಿತೆಯ ಆತ್ಮಸಂಭಾವಿತ ಮನೋವೃತ್ತಿ ತನ್ನಿಂದ ಸಮಾಜೋದ್ಧಾರ ಸಾಧ್ಯ ಎಂಬ ಆತ್ಮವಂಚನೆಗೆ ಆಕೆಯನ್ನು ಈಡು ಮಾಡುತ್ತದೆ. ಕಮಲೆಯ ಯೌವನ ಮತ್ತು ವೈಯಕ್ತಿಕ ಬಯಕೆಗಳು ಆಕೆಯ ಮನಸ್ಸಿನ ಒಳಹೊರಗುಗಳ ನಡುವೆ ವಿರೋಧವನ್ನುಂಟು ಮಾಡುತ್ತವೆ. ಈ ಮೂವರೂ ಕಲಿತವರು ಸುಧಾರಕ ವಿಚಾರಗಳ ಪ್ರಚಾರಕರು ಇವರ ಕಲಿಕೆ ಪ್ರಚಾರದ ಮಾತುಗಳಿಗೊಂದು ಸಾಧನವಾಯಿತೇ ಹೊರತು ತಮ್ಮ ಬದುಕಿನ ಸಮಸ್ಯೆಗಳನ್ನು ತಿಳಿವಳಿಕೆಗಳಿಂದ*

*ಸರಿಪಡಿಸಿಕೊಳ್ಳಲು ಸಹಾಯಕವಾಗಲಿಲ್ಲ. ತಮ್ಮ ತಿಳಿವಳಿಕೆಗಳನ್ನು ತಿದ್ದಿಕೊಳ್ಳದವರು ತಮ್ಮ ಸ್ವಂತದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲಾಗದವರು ಸಮಾಜದ ಸಮಸ್ಯೆಗಳನ್ನು ಪರಿಹರಿಸುತ್ತೇವೆಂದು ಮುಂದಾಗಿ ಡಂಗುರ ಹೊಡೆದುಕೊಂಡು ಮೆರೆಯುವುದು ಅಪಹಾಸ್ಯಕ್ಕೊಂದು ವಿಷಯ ಮಾತ್ರ ಎಂಬ ವಿನೋದ ವ್ಯಂಗ್ಯ ದೃಷ್ಟಿಯಿಂದ ಕಾದಂಬರಿಕಾರರು ಈ ಪಾತ್ರವರ್ಗವನ್ನು ಸೃಷ್ಟಿಸಿದ್ದಾರೆಂದು ಕಾಣುತ್ತದೆ. ಅವರ ದೃಷ್ಟಿಯಲ್ಲಿ ವಿದ್ಯಾಭ್ಯಾಸದ ವಿಫಲತೆ ಅಥವಾ ವಿಪರೀತಕ್ಕೆ ಇರುವ ನಿದರ್ಶನಗಳಾಗಿ ನಿಲ್ಲುತ್ತಾರೆ."*[೧]

ಎಂದು ಆಧುನಿಕ ಶಿಕ್ಷಣದಿಂದ ಉದ್ಭವಿಸಿದ ದ್ವಂದ್ವ ನೀತಿಯನ್ನು ವಿಶ್ಲೇಷಿಸುತ್ತಾರೆ. ಪಂಡಿತೆ, ಭಾಷ್ಕಳ ಪಂಥ, ಕಮಲಾ ಮೂವರೂ ಸಮಸ್ಯೆಯ ಆಳವನ್ನು ಅರಿಯಲಾರದೆ ತೊಳಲಾಡುವುದನ್ನು ಕಾದಂಬರಿ ಬಿಂಬಿಸುತ್ತದೆ. ಇವರು ಮೇಲ್ನೋಟದ ಸಮಾಜ ಸುಧಾರಕರಾಗುತ್ತಾರೆ. ಕಮಲಾಬಾಯಿಯ ಮದುವೆಗೆ ರಮಾಕಾಂತನನ್ನು ಒಪ್ಪಿಸುವಲ್ಲಿ ವಿಫಲವಾಗಿ ತನ್ನ ತಮ್ಮನಿಗೆ 'ವಿಧವಾ ವಿವಾಹ' ಮಾಡಿಸುವ ಪಂಡಿತೆ 'ವಿವಾಹ'ವನ್ನು ವಿಶ್ಲೇಷಿಸುವುದು ಹೀಗೆ.

*"ಹಿಂದೂಗಳ ಶಾಸ್ತ್ರಕ್ಕೆ ಪುನರ್ವಿವಾಹವು ಸಮ್ಮತವಾಗದಿದ್ದರೂ, ರೂಢಿ ವಿಚಾರಗಳಿಗೆ ಅದು ಸಮ್ಮತವೇ, ಲಿಂಗಾಯತರು, ಮರಾಠರು, ಬೇಡರು, ಕುರುಬರು, ಛತ್ರೇರು ಇವರೆಲ್ಲರೂ ಹಿಂದೂಗಳಲ್ಲೇನು? ಹಿಂದೂ ಧರ್ಮವು ಬ್ರಾಹ್ಮಣ ಮಾತ್ರಕ್ಕೆ ವ್ಯಾಪ್ತಿಯುಳ್ಳದ್ದಾಗಿರುವುದೇನು? ನನ್ನ ತಮ್ಮನಾದ ಭಾಷ್ಕಳಪಂತನೂ ಕೂಡ ಪುನರ್ವಿವಾಹಕ್ಕೆ ಸಿದ್ಧನಾಗಿರುವನು"*[೨].

ಪುನರ್ವಿವಾಹವನ್ನು ಮಾಡಿಸುವ ಉತ್ಕಟ ಅಭಿಲಾಷೆಯಿಂದ ಸಮರ್ಥನೆಯನ್ನು ನೀಡುತ್ತಾಳೆ. ಆ ಕಾಲದಲ್ಲಿ ಮೇಲ್ಜಾತಿವರ್ಗದವರಲ್ಲಿ ವಿಧವಾವಿವಾಹಕ್ಕೆ ವಿರೋಧವಿದ್ದು ಕೀಳುಜಾತಿವರ್ಗದವರಲ್ಲಿ 'ಕೂಡಿಕೆ' ಯಂತಹ ಸಂಪ್ರದಾಯದಡಿಯಲ್ಲಿ ಪುನರ್ವಿವಾಹಗಳು ನೆರವೇರುತ್ತಿದ್ದವು ಎನ್ನುವುದನ್ನು ಕಾದಂಬರಿ ವಿವರಿಸುತ್ತದೆ. 'ವಿಧವಾ ವಿವಾಹ' ಜಾತಿ ಧರ್ಮವನ್ನು ಮೀರಿದ್ದು, ಇದು ವ್ಯಕ್ತಿಯ ಮನಸ್ಸಿಗೆ ಸಂಬಂಧಿಸಿದ್ದು ಎನ್ನುವ ಸಮರ್ಥನೆಯೂ ಕಾದಂಬರಿಯಲ್ಲಿದೆ.

ರಮಾಕಾಂತನನ್ನು ಕಮಲೆಯು ವರಿಸಿದ್ದಾಳೆಂದು ಜಯರಾಯನು ಅವಳನ್ನು ಜರಿದು ನುಡಿಯುವಾಗ

*"ಕಮಲೆಯು ಅತ್ಯಾಚಾರದ ನಡತೆಯುಳ್ಳ ವಿಧವೆಯು ಇಂಥವಳ ಕೂಡ ಸಂಬಂಧ ಮಾಡಿದರೆ ಸತ್ಕುಲಜರು ನಿನ್ನನ್ನೆತ್ತಿಡುವರು"*[೩]

---

೧. ಇಂದಿರಾ–ಕೆರೂರು ವಾಸುದೇವಾಚಾರ್ಯ–ಉಷಾ ಸಾಹಿತ್ಯ ಮಾಲೆ– ಮೈಸೂರು –೧೯೮೪–ಪುಟ –೪೬–೪೭

೨. ಅದೇ ಪು – ಪು – ೨೪೨

೩. ಅದೇ ಪು – ಪು – ೨೦೬

'ಹೀನಕುಲದ' ಆರೋಪ ಕಮಲಳಿಗೆ ಕಟ್ಟುವುದು ವ್ಯವಸ್ಥೆಯ ವಿಪರ್ಯಾಸ ಕಮಲೆಯ ನಿಷ್ಕಲ್ಮಷ ಪ್ರೀತಿಯನ್ನು ಟೀಕಿಸುವ ಸಂಪ್ರದಾಯಸ್ಥ ಶ್ರೀಮಂತ ವರ್ಗದವರು ರೂಢಿ ಸಂಪ್ರದಾಯಗಳನ್ನು ಆಧರಿಸುತ್ತಾರೆ. ಕಮಲೆಯ ಆಂತರ್ಯದ ಭಾವನೆಗಳು ಗೌಣವಾಗಿ ಎಲ್ಲರಿಂದಲೂ ನಿರ್ಲಕ್ಷ್ಯಕ್ಕೊಳಗಾಗುತ್ತಾಳೆ. ವಿಧವೆಯಾದ ಕಮಲೆಯ ಪ್ರೀತಿಯನ್ನು ಶ್ರೀಮಂತ ಕುಟುಂಬದ ಸುಂದರ ತರುಣಿ ಇಂದಿರೆಯ ಪ್ರೀತಿಯನ್ನು ಮುಖಾಮುಖಿಯಾಗಿಸುತ್ತಾರೆ. ಇಂದಿರೆ ಮತ್ತು ರಮಾಕಾಂತರ ಪ್ರಣಯ 'ಸಾತ್ವಿಕ'ವಾದುದು ಎಂದು ಹೇಳುವುದರೊಂದಿಗೆ ಕಮಲಾಳ ಮರುವಿವಾಹವನ್ನು ಒಪ್ಪಿತ ಮೌಲ್ಯದ ವಿರುದ್ಧವಾದುದೆಂದು ಕಾದಂಬರಿ ವಿಶ್ಲೇಷಿಸುತ್ತದೆ. 'ವಿಧವಾವಿವಾಹ' ಆ ಕಾಲಘಟ್ಟಕ್ಕೆ ದ್ವಂದ್ವದ ನೆಲೆಯಲ್ಲಿಯೇ ಚರ್ಚೆಯಾಗಿದೆ.

ಕಾದಂಬರಿಯಲ್ಲಿ ನಟೇಶನ ತಾಯಿ ಸಾವಿತ್ರಮ್ಮ ವಿಧವೆಯಾಗಿ ಶ್ರಮಜೀವಿಯಾಗಿ ಬದುಕುವುದನ್ನು ವಿವರಿಸುತ್ತಾರೆ. ತನ್ನ ಶ್ರಮದ ಹಣವನ್ನು ಮಗ ನಟೇಶನ ವಿದ್ಯಾಭ್ಯಾಸಕ್ಕಾಗಿ ಮುಡಿಪಾಗಿಡುವ ಸಾವಿತ್ರಮ್ಮ ಯಾವ ನಿರೀಕ್ಷಿತ ಫಲವನ್ನು ಅನುಭವಿಸಲಾಗುವುದಿಲ್ಲ. ಬಡತನದ ಬದುಕಿಗೆ ಮಗನ ಬೇಜವಾಬ್ದಾರಿ ಜೀವನ ನಿರಾಸೆಯುಂಟುಮಾಡುತ್ತವೆ. ಇದರಿಂದ ನೊಂದು ಜೀವನ ಮುಗಿಸುವ ಸಾವಿತ್ರಮ್ಮನ ವಿಧವಾ ಜೀವನ ಅನೇಕ ಏರಿಳಿತಗಳೊಂದಿಗೆ ಅಂತ್ಯಕಾಣುವುದನ್ನು ಕಾದಂಬರಿ ತೆರೆದಿಡುತ್ತದೆ. ವಿಧವೆ ತಾಯಿಗೆ ಆಶ್ರಯವಾಗಿ ನಿಲ್ಲಬೇಕಾದ ನಟೇಶ ತನ್ನ ಜವಾಬ್ದಾರಿಯನ್ನು ಮರೆಯುತ್ತಾನೆ. ತಾಯಿ ಮಗ ಇಬ್ಬರಿಗೂ ಬದುಕು ಕಟ್ಟಿಕೊಳ್ಳಲಾಗದಿರುವುದು ಆ ಕಾಲದ ಸಾಮಾಜಿಕ ಸ್ಥಿತಿಯಾಗಿತ್ತು ಎಂದು ಊಹಿಸಬಹುದು.

ಪ್ರೀತಿಸಿದವನನ್ನು ವಿವಾಹವಾಗಲು ಸಾಧ್ಯವಾಗದ ಬಾಲವಿಧವೆ ದೇವಯಾನಿ, ತನ್ನೊಳಗಿನ ಜೀವಕಾಮವನ್ನು ಹತ್ತಿಕ್ಕಲಾರದೆ ಭಾಷ್ಕಳ ಪಂಡಿತನನ್ನು ಮದುವೆಯಾಗುವ ವಿಧವೆ ಕಮಲಾಬಾಯಿ ಮತ್ತು ಚಿಕ್ಕವಯಸ್ಸಿನಲ್ಲಿ ಮಗನನ್ನು ಪಡೆದು ವಿಧವೆಯಾದ ಸಾವಿತ್ರಮ್ಮ ಪಾತ್ರಗಳ ವೈವಿಧ್ಯಮಯ ವಿಧವಾ ಜೀವನವನ್ನು ಕಾದಂಬರಿ ತೆರೆದಿಡುತ್ತದೆ. ಮೂರುಸಾರಿ ವಿವಾಹವಾಗಿ ಮಕ್ಕಳಿಲ್ಲದೆ, ಸಮಾಜಕಾರ್ಯಕರ್ತೆಯಾಗಿ ಬದುಕುವ ರಾಧಾಬಾಯಿ ಪಂಡಿತೆಯ ತಾಕಲಾಟಗಳನ್ನು ಕಾದಂಬರಿ ವಿಶ್ಲೇಷಿಸುತ್ತದೆ.

**೪. <u>ವೈಧವ್ಯ – ಸಾಮಾಜಿಕ ಸ್ಥಿತ್ಯಂತರ – ವಿಧವಾ ವಿವಾಹ</u>**

'ಇಂದಿರಾಬಾಯಿ' ಹೆಸರಿನ ಬಾಲವಿಧವೆ ತಂದೆ ತಾಯಿಗಳಿಂದ ಓಡಿಹೋಗಿ ಸುಧಾರಕರಲ್ಲಿ ಆಶ್ರಯ ಪಡೆಯುತ್ತಾಳೆ. 'ಬಾಲ್ಯವಿವಾಹ'ಕ್ಕೊಳಗಾದ ಇಂದಿರಾಬಾಯಿಯ ಪತಿ ವೇಶ್ಯಾಸಂಗಕ್ಕೊಳಗಾಗಿ ಮಾರಕ ರೋಗಕ್ಕೆ

ಬಲಿಯಾಗುತ್ತಾನೆ. ಇದರಿಂದ ವಿಧವೆಯಾದ ಇಂದಿರಾಬಾಯಿಯ ಮನಸ್ಸನ್ನು ಆಧ್ಯಾತ್ಮಿಕ ವಿಚಾರಗಳತ್ತ ತಿರುಗಿಸಬೇಕೆಂಬ ತಂದೆ ತಾಯಿಗಳ ಯತ್ನದ ಅಂಗವಾಗಿ ಮನೆಗೆ ಬಂದು ತಂಗಿದ್ದ ಒಬ್ಬ ಸೋಗಿನ ಸಂತನಿಂದ ತಪ್ಪಿಸಿಕೊಳ್ಳುವ ಸಂದರ್ಭ ಇಂದಿರೆಯದಾಗುತ್ತದೆ. ತನ್ನ ಮನೆಯನ್ನು ತೊರೆದು ಸುಂದರರಾಯರ ಮನೆಯಲ್ಲಿ ಆಶ್ರಯ ಪಡೆದ ಇಂದಿರಾಬಾಯಿ ವಿದ್ಯಾವಂತೆಯಾಗಿ ಹೊರಹೊಮ್ಮುತ್ತಾಳೆ. ಸುಂದರರಾಯರ ಸಹಾಯದಿಂದ ಕಲೆಕ್ಟರಾಗಿ ವೃತ್ತಿ ನಿರ್ವಹಿಸುವ ಭಾಸ್ಕರರಾಯನೊಂದಿಗೆ ಇಂದಿರೆಯ ಮರುವಿವಾಹವಾಗುವುದು ಕಾದಂಬರಿಯ ಮಹತ್ವ. ಮಠಾಧಿಪತಿಗಳು 'ವಿಧವಾ ವಿವಾಹ'ವನ್ನು ಬಹಿಷ್ಕರಿಸುತ್ತಾರೆ. ಆದರೆ ಬಾಲವಿಧವೆಯೊಬ್ಬಳು ವಿದ್ಯಾವಂತೆಯಾಗಿ ವಿದ್ಯಾವಂತ ಉದ್ಯೋಗಿ ಯುವಕನನ್ನು ವಿವಾಹವಾಗುವುದನ್ನು ಆ ಕಾಲದ ರೂಢಿ ಸಂಪ್ರದಾಯಗಳು ವಿರೋಧಿಸುತ್ತವೆ.

ಕಾದಂಬರಿಯು ಧಾರ್ಮಿಕವಿಧಿ, ಸಂಪ್ರದಾಯ, ಕಂದಾಚಾರಗಳನ್ನು ಕಡೆಗಾಣಿಸಿ ಸುಧಾರಣೆಯತ್ತ ಸಾಗುವ ಸಮಾಜದ ಸಂಕ್ರಮಣಾವಸ್ಥೆಯನ್ನು ಚಿತ್ರಿಸುತ್ತದೆ. ಹನ್ನೆರಡು ವರ್ಷ ತುಂಬುವುದರೊಳಗೆ ಇಂದಿರಾಬಾಯಿಯ ವಿವಾಹವು ವಿಠಲರಾವ್ ಜೊತೆ ಏರ್ಪಟ್ಟಾಗ ಹುಡುಗ, ಹುಡುಗಿಯ ಜಾತಕ ನೋಡುವ ಸಂದರ್ಭದಲ್ಲಿ

> *"ಈ ಹುಡುಗಿಯ ಆಯುರ್ಬಲವು ಚನ್ನಾಗಿದೆ, ಸೌಮಾಂಗಲ್ಯ, ಗಜಕೇಸರಿ ಯೋಗಗಳು ಸಹಾ ಇವೆ. ಇವುಗಳ ಮಿಕ್ಕಿ ಬೇಕಾದ್ದೇನು? ವರನ ಜಾತಕವನ್ನು ನೋಡಿ ಹುಡುಗನಿಗೆ ದೀರ್ಘಾಯುಷ್ಯ ಸುಪತ್ನಿಯೋಗ ಸಹ ಇದೆ"*[೧]

ಎಂದು ಹೇಳುವ ಜೋಯಿಸರು ಸಮಸ್ಯೆಯನ್ನು, ಸಮಸ್ಯೆಗೆ ಪರಿಹಾರವನ್ನು ಸೂಚಿಸುವುದು ಸಂಪ್ರದಾಯವಾದಿಗಳಿಗೆ ಸಮಂಜಸವೆನಿಸುತ್ತಿತ್ತು. ಇಂತಹ ಪೊಳ್ಳು ಹೇಳಿಕೆಗಳು, ಭರವಸೆಗಳು ಅಮಾಯಕರನ್ನು ಬಲಿತೆಗೆದುಕೊಳ್ಳುತ್ತಿದ್ದವು. ಪತಿಯ ಸಾವಿನ ಹಿನ್ನೆಲೆಯನ್ನು ಅರಿತ ಇಂದಿರಾಬಾಯಿಯ ಮನಸ್ಸು ಛಿದ್ರವಾಗುತ್ತದೆ. ತಾಯಿಯ ಸಂಪ್ರದಾಯದ ಸೆರೆಯಿಂದ ಹೊರಬರುವ ಪ್ರಯತ್ನ ಸದಾ ನಡೆಸುತ್ತಾಳೆ. ಪತಿಯ ಶವಸಂಸ್ಕಾರಕ್ಕೆ ಕರೆದೊಯ್ಯುವಾಗಲೇ ಅವಳ ಹಣೆಯ ಮೇಲಿನ ಕುಂಕುಮವನ್ನು ಕಣ್ಣೀರೊರೆಸುವ ನೆವದಿಂದ ತೊಡೆದು ಹಾಕುವುದು ತಾಯಿಯ ಸಂಪ್ರದಾಯಸ್ಥ ಮನೋಸ್ಥಿತಿಯನ್ನು ವಿವರಿಸುತ್ತದೆ. "ನೀನಿನ್ನೊಂದು ವರ್ಷ ಪರ್ಯಂತ ಮನೆಯವರಿಗಲ್ಲದೆ ಅನ್ಯರ‍್ಯಾರಿಗೂ ಮುಖ ತೋರಿಸಬಾರದೆಂದು ಹಿರಿಯರ ಕಟ್ಟಳೆ ಇದೆ" ಎನ್ನುವ ತಾಯಿಯ ಧೋರಣೆಯನ್ನು ವಿರೋಧಿಸುವ ಕಿಡಿ ಹೊತ್ತಿಕೊಳ್ಳುತ್ತದೆ. ಮುಂದೊಂದು ದಿನ ಸಂಪ್ರದಾಯದ ಸಂಕೋಲೆ ಕಳಚಿಕೊಂಡು ಹೊರಹೋಗುವ ಸೂಚನೆ ಕಾದಂಬರಿಯ ಪ್ರಾರಂಭದಲ್ಲಿ ಕಾಣುತ್ತದೆ.

---

೧. ಇಂದಿರಾಬಾಯಿ –ಗುಲ್ವಾಡಿ ವೆಂಕಟರಾವ್–ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ–ಬೆಂಗಳೂರು–೧೯೮೫ – ಪುಟ –೮೧

ಪತಿಯ ಶವಸಂಸ್ಕಾರ ಮಾಡುವ ಕ್ರಿಯೆಯೊಂದಿಗೇ ಕೇಶವಪನದ ಕಾರ್ಯ ನಡೆದುಹೋಗಬೇಕೆನ್ನುವ ಭಟ್ಟರ ಮಾತಿಗೆ ಭೀಮರಾಯನ ಮನಸ್ಸು ನೊಂದುಕೊಳ್ಳುತ್ತದೆ. ಪತಿಯ ಮರಣದ ಕೆಲವು ದಿನಗಳ ನಂತರ ನಡೆದರಾಗದೆ ಎಂದು ಪ್ರಶ್ನಿಸುವ ಬೀಮರಾಯನಿಗೆ ಭಟ್ಟರು ಕೊಡುವ ಉತ್ತರ ಸಾಂಪ್ರದಾಯಿಕ ಕಟ್ಟುಪಾಡುಗಳನ್ನು ಬಿಚ್ಚಿಡುತ್ತವೆ.

> *"ಪತಿಯ ಮರಣಾ ನಂತರ ಪತ್ನಿಯು ಕೇಶಭೇಧನವಾಗದೆ ಸ್ನಾನಮಾಡಿದರೆ, ಒಂದೊಂದು ಸಾರಿ ಸ್ನಾನ ಮಾಡುವಾಗ ಆಕೆಯ ಒಂದೊಂದು ಕೂದಲಿನಿಂದ ಎಷ್ಟು ಹನಿ ನೀರನ್ನು ಭೂಮಿಯ ಮೇಲೆ ಬೀಳಿಸುವಳೋ. ಅಷ್ಟು ವರುಷಗಳ ಪರ್ಯಂತರ ಪತಿಯು ಅಘೋರವಾದ ನರಕದಲ್ಲಿ ಯಾತನೆಯನ್ನನುಭವಿಸುವನೆಂದು ಶಾಸ್ತ್ರವಿಧಿ ಇದೆ. ಆದರೂ ದೇಶಾಚಾರ ಕಟ್ಟಳೆಯನ್ನು ಅನುಸರಿಸುವುದರಲ್ಲಿ ವಿರೋಧವಿಲ್ಲ"[೧].*

ಇಂತಹ ಧಾರ್ಮಿಕ ನೆಲೆಯಿಂದ ಬಂದ ಮೌಲ್ಯಗಳು ಮಹಿಳೆಯನ್ನು ಬದುಕಿನ ಎಲ್ಲಾ ಹಂತಗಳಲ್ಲೂ ಅಧೀನವಾಗಿಸುತ್ತಾ ಬಂದಿವೆ. ಅವಳ ಸ್ವಾತಂತ್ರ್ಯವನ್ನು ಸ್ವಾತಂತ್ರ್ಯ ಜೀವನವನ್ನು ನಿರಾಕರಿಸುತ್ತಾ ಬಂದಿವೆ. ಪುರುಷನ ಅಲೌಕಿಕ ಬದುಕನ್ನು ಬೆಳಗುವುದಕ್ಕಾಗಿ ಮಹಿಳೆಯ ಲೌಕಿಕ ಬದುಕನ್ನು ತ್ಯಾಗ, ವಿಧೇಯತೆ, ಸೇವೆ, ಸಹಿಷ್ಣುತೆಗಳಿಗೆ ಮೀಸಲಿಡುವಂತೆ ಮಾಡಿವೆ. ಇಂದಿರಾಳ ಪತಿಯ ಶವಸಂಸ್ಕಾರ ಕಾರ್ಯ ವಿಧಿಗಳನ್ನು ನೆರವೇರಿಸಲು ಬಂದ ಪುರೋಹಿತನು ಪತಿಯ ಚಿತೆಗೆ ಅಗ್ನಿ ಕೊಡುವುದಕ್ಕೆ ಸ್ಮಶಾನಕ್ಕೂ ಬರಬೇಕಾಗುತ್ತದೆ ಎಂದು ಸೂಚಿಸುವ ಕಾಶಿನಾಥ ಭಟ್ಟನು ಹೀಗೆ ನುಡಿಯುತ್ತಾನೆ.

> *"ರಾಯರೇ, ಪ್ರಾಚೀನ ಕಾಲದಲ್ಲಿ ಪತಿಯು ಮರಣಪಟ್ಟರೆ ಪತ್ನಿಯು ಸಹಗಮನವಾಗಿ ಚಿತೆಯಲ್ಲಿ ಹಾರಿ, ಪತಿಯ ಸಂಗಡಲೇ ದಹನವಾಗಬೇಕೆಂಬ ಶ್ರುತಿವಾಕ್ಯವನ್ನನುಸರಿಸಿ ಎಷ್ಟೋ ಪತಿವ್ರತಾ ಸ್ತ್ರೀಯರು ಸಹಗಮನವಾಗಿದ್ದರು. ಈಗ ಮ್ಲೇಂಚರಿಗೆ ರಾಜ್ಯವಾದ ಮೇಲೆ ಆ ಪದ್ಧತಿಯು ನಿಂತಿದೆ. ಆದರೂ ಅನೇಕ ಸ್ತ್ರೀಯರು ಸ್ಮಶಾನದವರೆಗೆ ಹೋಗಿ ಚಿತೆಗೆ ಅಗ್ನಿ ಕೊಡುವಷ್ಟರ ಮಟ್ಟಿನ ಕಟ್ಟಳೆಯಾದರೂ ಇತ್ತಲಾಗಿ ಕೆಲವು ದಿವಸಗಳವರೆಗೆ ನಡೆದು ಬಂದಿದೆ. ತಮ್ಮ ಮನಸ್ಸು ಹೇಗೆ ? ಹುಡುಗಿಯನ್ನು ಕಳುಸುತ್ತೀರಾ ?"[೨]*

'ಸತಿಪದ್ಧತಿ'ಯಂತಹ ಹಳೆಜಗತ್ತಿನ ನಂಬಿಕೆಗಳನ್ನು ಸಾರ್ವತ್ರಿಕ ಮತ್ತು ಸಾರ್ವಕಾಲಿಕ ಎಂದು ನಂಬಿ ಮುಂದುವರಿಸುವ ಸಂಪ್ರದಾಯ ನಿಷ್ಠರು ಅನೇಕ ಸಂದರ್ಭಗಳಲ್ಲಿ

---

೧. ಇಂದಿರಾಬಾಯಿ –ಗುಲ್ವಾಡಿ ವೆಂಕಟರಾವ್–ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ–ಬೆಂಗಳೂರು–೧೯೮೫ – ಪುಟ –೧೫೦

೨. ಅದೇ ಪು. ಪು–೧೫೦

ಅನಿಷ್ಟ ಆಚರಣೆಗಳಿಗೆ ಒತ್ತಾಯಿಸಿರುವುದೂ ಕಂಡು ಬರುತ್ತದೆ. ಆದರೆ ಮಹಿಳೆಗೆ ಸಂಬಂಧಿಸಿದ ಎಷ್ಟೋ ಜೀವ ವಿರೋಧಿ ನೀತಿಯನ್ನು ಕುರಿತ ಪ್ರತಿಭಟನೆಗಳು ಸಾಮಾಜಿಕ ಮತ್ತು ಕೌಟುಂಬಿಕ ವಲಯಗಳಲ್ಲಿ ನಡೆದಿದೆ. ಸ್ಮಶಾನಕ್ಕೆ ಕರೆದೊಯ್ಯುವ ಕಾಶಿನಾಥಭಟ್ಟನ ನಿಲುವನ್ನು ಭೀಮರಾಯನು ತಿರಸ್ಕರಿಸುತ್ತಾನೆ. ಆದರೂ ವಿಧವೆಯಾದ 'ಇಂದಿರೆ' ತಲೆಬಾಚುವಂತಿಲ್ಲ. ಮನೆಯವರನ್ನುಳಿದು ಬೇರೆಯಾರನ್ನೂ ನೋಡುವಂತಿಲ್ಲ ಎನ್ನುವ ನಿರ್ಬಂಧಗಳಿಗೊಳಗಾಗುತ್ತಾಳೆ. ಮೌಢ್ಯದ ಆಚರಣೆಯನ್ನು ಒತ್ತಾಯಪೂರ್ವಕವಾಗಿ ಹೇರುತ್ತಾರೆ.

**೫. ಸ್ತ್ರೀ ಶಿಕ್ಷಣದ ಮಹತ್ವಪೂರ್ಣ ಚಿಂತನೆಗಳು**

ಶಿಕ್ಷಣದಿಂದ ಮಾತ್ರ ಮೌಢ್ಯದ ಜಗತ್ತಿನಿಂದ ಹೊರಬರಬಹುದಾದ ಆಧುನಿಕತೆಯೊಳಗೆ ಸ್ತ್ರೀಶಿಕ್ಷಣದ ಮಹತ್ವವನ್ನು ಕಾದಂಬರಿ ವಿಶ್ಲೇಷಿಸುತ್ತದೆ. ಇಂದಿರಾಬಾಯಿ ಶೈಕ್ಷಣಿಕ ಪ್ರಗತಿಯಿಂದಾಗಿ ಭಾಸ್ಕರ ನಂತಹ ಕಲೆಕ್ಟರನನ್ನು ಪುನರ್ವಿವಾಹವಾಗಲು ಸಾಧ್ಯವಾಗುವುದನ್ನು ವಿವರಿಸುವ ಕಾದಂಬರಿ ಸ್ತ್ರೀ ಶಿಕ್ಷಣದ ಅರಿವಿನೊಂದಿಗೆ ಮಹಿಳಾ ಬದುಕಿನಲ್ಲಾದ ಬದಲಾವಣೆಗಳು ಹೊಸ ಎಚ್ಚರವನ್ನು ಮೂಡಿಸುತ್ತವೆ. ಶಿಕ್ಷಣದ ಅರಿವಿನಿಂದ ಸಾಂಪ್ರದಾಯಿಕ ಮೌಲ್ಯಗಳಿಂದ ಹೊರಬಂದು 'ಮರುವಿವಾಹ'ದೊಂದಿಗೆ ಬದುಕುಕಟ್ಟಿಕೊಳ್ಳುವ ರೀತಿಯನ್ನು 'ಇಂದಿರಾಬಾಯಿ' ಕಾದಂಬರಿ ತೆರೆದಿಡುತ್ತದೆ. ಕ್ರೈಸ್ತರ ಪ್ರಭಾವದಿಂದ ಮಗಳು ಓದುವುದನ್ನು ರೂಢಿಸಿಕೊಂಡರೆ ಕೆಟ್ಟುಹೋಗಬಹುದೆಂಬ ಭಯದಿಂದ ಮಗಳ ಮನಸ್ಸನ್ನು ಆಧ್ಯಾತ್ಮದ ಕಡೆ ತಿರುಗಿಸುವ ಪ್ರಯತ್ನ ಮಾಡುತ್ತಾರೆ. ಇದಕ್ಕಾಗಿ ಸಂತರನ್ನು ಕರೆಸಿ ಪ್ರವಚನ ಕೊಡಿಸುವ ಸಂದರ್ಭದಲ್ಲಿ ಇದರಿಂದ ಪಾರಾಗುತ್ತಾಳೆ. ಹೀಗೆ ಕತ್ತಲೆಕೋಣೆಯಿಂದ ಬೆಳಕನ್ನರಸಿ ಹೊರಟ ಇಂದಿರೆ ಅನಿರೀಕ್ಷಿತವಾಗಿ, ಅವಿಧೇಯತೆಯಿಂದ ತಾಯಿತಂದೆಯರ ಭಾವನೆಗಳನ್ನು ಮೀರಿ ನಡೆದಿದ್ದೇ ದೊಡ್ಡ ಬಂಡಾಯವಾಗುತ್ತದೆ. ಅವಳ ಬದುಕಿನ ಗತಿಯೇ ಬದಲಾಗುತ್ತದೆ.

ಇದೇ ಸಂದರ್ಭದಲ್ಲಿ ಲೇಖಕರು ಆ ಕಾಲದ ಬಡವರ್ಗದ 'ಬಾಲವಿಧವೆ'ಯನ್ನು ಅಪಹರಿಸಿ ಮದುವೆಯಾಗುವ ಅಪಕೃತ್ಯವನ್ನು ವಿವರಿಸುತ್ತಾರೆ. ಇಂದಿರಾಬಾಯಿಯ ಮನೆಗೆ ಧರ್ಮೋಪದೇಶಕ್ಕೆಂದು ಬಂದ ಬಾಳಪ್ಪಯ್ಯ ಹದಿನೈದು ವರ್ಷದ ಕಲ್ಯಾಣಿ ಎನ್ನುವ ಬಾಲವಿಧವೆಗೆ ಕಾಮಪ್ರಚೋದನೆ ನೀಡಿ ಬೇರೆ ಊರಿನಲ್ಲಿ ಗಂಡಹೆಂಡತಿಯರಂತೆ ಇರುತ್ತಾರೆ. ಇದನ್ನು ಪತ್ತೆಹಚ್ಚಿದ ಪೋಲೀಸರು ಬಾಳಪ್ಪಯ್ಯನನ್ನು ಬಂಧಿಸುತ್ತಾರೆ. ಜಾಮೀನಿನ ಮೇಲೆ ಬಿಡುಗಡೆ ಹೊಂದುವ ಬಾಳಪ್ಪಯ್ಯ ಇಂತಹ ಎಷ್ಟೋ ಮುಗ್ಧ ಅನಾಥ, ನಿರ್ಗತಿಕ ಹೆಣ್ಣುಮಕ್ಕಳ ಭವಿಷ್ಯಕ್ಕೆ ಮುಳುವಾಗುತ್ತಿದ್ದುದನ್ನು ಲೇಖಕರು ನಿರ್ಭಿಢೆಯಿಂದ ಬಯಲು ಮಾಡುತ್ತಾರೆ.

ಪ್ರವಚನಕ್ಕೆಂದು ಬಂದ ಸಂತನ ಮೋಹಕ್ಕೆ ಬಲಿಯಾಗುವುದನ್ನು ತಪ್ಪಿಸಿಕೊಂಡು ಅಮೃತ ರಾಯ ಮತ್ತು ಜಾನಕಮ್ಮ ದಂಪತಿಗಳನ್ನು ಆಶ್ರಯಿಸುವ ಇಂದಿರೆ ಸಜ್ಜನರ ಆಶ್ರಯಕ್ಕೆ ಬಂದುನಿಲ್ಲುತ್ತಾಳೆ. ವಿಧ್ಯಾಭ್ಯಾಸದ ಉತ್ಕಟ ಆಕಾಂಕ್ಷೆಯನ್ನು ಈಡೇರಿಸಿಕೊಳ್ಳುವ ಸಂದರ್ಭವೂ ಒದಗಿಬರುತ್ತದೆ. 'ವಿದ್ಯೆ'ಯ ಬಗ್ಗೆ ಅವಳಿಗಿದ್ದ ಅರಿವನ್ನು ಅವಳ ಮಾತುಗಳಲ್ಲಿ ಗಮನಿಸಬಹುದು. *"ನನ್ನ ಬುದ್ಧಿಗೆ ತೋರುವುದೇನೆಂದರೆ ವಿದ್ಯೆ ಕಲಿಯುವುದರಿಂದ ಯಾವೊಂದು ಕೇಡಿಲ್ಲ, ಮಾತ್ರವಲ್ಲ ಎಲ್ಲಾ ಕೇಡುಗಳಿಂದಲೂ ತಪ್ಪಿಸಿಕೊಳ್ಳಬಹುದು."*

ಈ ಮಾತುಗಳು ಮಹಿಳೆಗೆ ವಿದ್ಯಾಭ್ಯಾಸ ಅಗತ್ಯ ಎಂದು ತಿಳಿಸುತ್ತವೆ. ಆ ಕಾಲದ ಮಹಿಳೆಯರು ಕಲಿಯುವ ವಿದ್ಯೆ ಉದ್ಯೋಗಕ್ಕಾಗಿ ಅಲ್ಲವಾದರೂ ಸಾಂಸಾರಿಕ ವ್ಯವಹಾರಕ್ಕಾಗಿ ಎನ್ನುವ ವಿಚಾರವನ್ನು ಲೇಖಕರು ಎತ್ತಿಹಿಡಿದಿದ್ದಾರೆ. ಇಂದಿರಾಬಾಯಿಯೂ ಆ ಕಾಲದಲ್ಲಿ ಬಾಲವಿಧವೆಯರಿಗಾಗಿ ನಡೆಸುತ್ತಿದ್ದ 'ಸರಸ್ವತಿ ಮಂದಿರ'ದಲ್ಲಿ ಮೆಟ್ರಿಕ್ಯುಲೇಷನ್ ಪಾಸು ಮಾಡುವುದು ತೀರಾ ಸಾಮಾನ್ಯವಾದ ವಿಷಯವಾಗಿರಲಿಲ್ಲ. ಜಾತಿ ರಾಜಕೀಯ, ಮತಾಂತರಗಳಂತಹ ಗೊಂದಲಗಳನ್ನು ಜಯಿಸಿ ವಿದ್ಯಾವಂತೆಯಾದಾಗ ಇಂದಿರೆಯಲ್ಲಿ ಆತ್ಮವಿಶ್ವಾಸ ತುಂಬಿ ತುಳುಕುತ್ತದೆ. ಬಾಲವಿಧವೆಯಾದವಳು ಅನುಭವಿಸುತ್ತಿದ್ದ ಕತ್ತಲೆಕೋಣೆ, ಕೇಶಮುಂಡನ, ಮುಂತಾದ ಕಾಳಿಕೆಗಳನ್ನು ಕಳೆದುಕೊಂಡು ಪುಟವಿಟ್ಟ ಬಂಗಾರವಾಗುತ್ತಾಳೆ. ಇವಳ ಚುರುಕುತನವನ್ನು ಗಮನಿಸುವ ಅಮೃತರಾಯ ದಾಂಪತಿಗಳು 'ಮರುವಿವಾಹ'ದ ವಿಚಾರವನ್ನು ಪ್ರಸ್ತಾಪಮಾಡುತ್ತಾರೆ. ಅವಳ ಉತ್ತರವೂ ಅಷ್ಟೇ ಸಹಜವಾಗಿ ಬರುತ್ತದೆ.

> *"ಸೃಷ್ಟಿಯಲ್ಲಿ ಸಕಲ ಪ್ರಾಣಿಗಳಿಗೂ ಸ್ಥಿತ್ಯಂತರಗಳಿವೆ ಯಾವುದೊಂದು ಪ್ರಾಣಿಯೂ ಇದ್ದಂತೆಯೇ ಇರುವುದಿಲ್ಲವಷ್ಟೆ? ನಾವು ನಮಗಿರುವ ಬುದ್ಧಿಯನ್ನು ಸ್ಥಿರತೆಯಲ್ಲಿಟ್ಟುಕೊಂಡು ಸತ್ಕಾರ್ಯಗಳನ್ನು ಮಾಡುತ್ತಾ ಇದ್ದರೆ, ಯಾವ ಸ್ಥಿತಿಯಲ್ಲಿದ್ದರೂ ಬಾಧಕವಿರುವುದೆಂದು ನನ್ನ ಬುದ್ಧಿಗೆ ಕಾಣುವುದಿಲ್ಲ"*[೧]

ಎಂದು ಮರುವಿವಾಹಕ್ಕೂ ಮಾನಸಿಕವಾಗಿ ಸಜ್ಜಾಗುವುದನ್ನು ಅವಳ ಮಾತುಗಳಿಂದ ಗಮನಿಸಬಹುದು. ಇವಳ ಭಾವನೆಗಳಿಗೆ ಪೂರಕವಾಗಿ ವಿಲಾಯಿತಿಯಲ್ಲಿ ಓದಿ ಅಸಿಸ್ಟೆಂಟ್ ಕಲೆಕ್ಟರಾಗಿ ನೇಮಕವಾಗಿ ಭಾರತಕ್ಕೆ ವಾಪಾಸಾದ ಭಾಸ್ಕರರಾಯನನ್ನು ಅಮೃತರಾಯರು ಪ್ರೀತಿಯಿಂದ ಬರಮಾಡಿಕೊಳ್ಳುತ್ತಾರೆ. ಇಂದಿರೆಯ ಮರುವಿವಾಹ ಭಾಸ್ಕರರಾಯನೊಂದಿಗೆ ನೆರವೇರಿಸುವ ಯೋಚನೆಯಿಂದ 'ವಿಧವಾ ವಿವಾಹ'ದ ಕುರಿತು ಚರ್ಚೆಯನ್ನಿಡುತ್ತಾರೆ. ಭಾಸ್ಕರರಾಯನು

---

೧. ಇಂದಿರಾಬಾಯಿ –ಗುಲ್ವಾಡಿ ವೆಂಕಟರಾವ್–ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ–ಬೆಂಗಳೂರು–೧೯೮೫ ಪುಟ –೨೧೨

*"ಯಾವೊಂದರ ಗುಣದೋಷಗಳನ್ನರಿಯುವುದಕ್ಕೆ ಶಕ್ತಿಯೂ ಪ್ರಾಯವೂ ಸಾಕಷ್ಟಿಲ್ಲದ ಚಿಕ್ಕ ಕನ್ನಿಕೆಯರಿಗೆ ಪ್ರಥಮ ವಿವಾಹವೇ ಯೋಗ್ಯವಲ್ಲ. ಅಂತವರಿಗೆ ವಿವಾಹವಾಗಿ ವೈಧವ್ಯ ಪ್ರಾಪ್ತವಾದರೆ ಈ ಕಾಲದಲ್ಲಿ ಪುನರ್ವಿವಾಹವೇ ಉತ್ತಮ "ಪುನರ್ವಿವಾಹವಿಲ್ಲದೆ ಬೇರೆ ನಿವೃತ್ತಿ ಇಲ್ಲವೇ? ಎಂದು ಪ್ರಶ್ನೆಮಾಡಿದ್ದಕ್ಕೆ – ಇದೆ, ಜನ್ಮಾಂತ ಪರ್ಯಂತ ಬ್ರಹ್ಮಚರ್ಯದಲ್ಲಿರುವುದೇ ಹೆಚ್ಚು ಸಾರ್ಥಕವಾದದ್ದು. ಆದರೆ ಈಗಿನ ಕಾಲಗತಿಗೂ ಮನುಷ್ಯ ಶರೀರ ಸ್ವಭಾವಗಳಿಗೂ ಅದು ಅಸಾಧ್ಯ" ಸಂಭವಿಸಿದ ಅವಸ್ಥೆಯನ್ನು ಸ್ಥಿರಬುದ್ಧಿಯಿಂದ ಸಹಿಸಬೇಕಂತೆ, ವಿಧವೆಯೂ ತನ್ನ ರೂಪವನ್ನು ಕ್ಷೌರ ಮುಂತಾದುದರಿಂದ ವಿರೂಪ ಪಡಿಸಬೇಕಂತೆ, ಸಕಲ ಅಲಂಕಾರಗಳನ್ನು ತ್ಯಜಿಸಬೇಕಂತೆ, ಗಂಡಸರ ದೃಷ್ಟಿಗೆ ಬೀಳದ ಹಾಗೆ ಸರ್ವಥಾ ಏಕಾಂತದಲ್ಲಿದ್ದು ದೇವರ ಧ್ಯಾನದಲ್ಲೇ ಇರಬೇಕಂತೆ ಅದ್ನೆಲ್ಲ ಪುಸ್ತಕದಲ್ಲಿ ಸೊಗಸಾಗಿ ಬರೆಯಬಹುದು ಬೇರೆಯವರಿಗೆ ಹೇಳಲುಬಹುದು, ಹಾಗೆ ಹೇಳುವವರೆ, ತುಸು ತಲೆ ಸಿಡಿತವಾದಾಗ ಅಥವಾ ಸಣ್ಣದೊಂದು ಚೇಳು ಕಚ್ಚಿದರೆ, ಇಪ್ಪತ್ತೈದು ಬಗೆಯ ಔಷಧಗಳನ್ನು ಮಾಡುತ್ತಾರೆ. ಅಂತದರಲ್ಲಿ ರಾಜ್ಯದ ಸ್ಥಿತಿಗತಿ ವೃತ್ತಾಂತಗಳನ್ನು ನೋಡಿದರೆ ಕಳೆದ ಐದುವರ್ಷಗಳಲ್ಲಿ ರೂಪವಿರೂಪ ಪಡಿಸಿದ ಎಷ್ಟು ಮಂದಿ ಪ್ರಾಯದ ವಿಧವೆಯರು ಗರ್ಭಸ್ರಾವ, ಬಾಲಹತ್ಯವೆ ಮುಂತಾದ ದುಷ್ಕರ್ಮಗಳನ್ನು ಮಾಡಿ ಕಾರಾಗೃಹವನ್ನು ಸೇರಿದರೆಂಬುದನ್ನು ತಿಳಿಯಬಹುದು. ಇದಲ್ಲವೆ ಬುದ್ಧಿ ಸ್ಥಿರತೆ ? ಗಂಡಸರು ದೃಷ್ಟಿಗೆ ಬೀಳಲೇಬಾರದೆಂಬುದರ ಅರ್ಥವೇನು ? ಬೇರೆಯವರ ಮಾತು ಹಾಗಿರಲಿ ಕ್ಷೌರಮಾಡುವವನಾರು ?".*[೧]

ಭಾಸ್ಕರರಾಯನು ಪ್ರಶ್ನೆಗೊಳಪಡಿಸುವ ಸಂಪ್ರದಾಯ ಸಮಾಜ ಬದಲಾಗಬೇಕಾದ ಅನಿವಾರ್ಯತೆಯನ್ನು ಕಾದಂಬರಿ ಬಿಂಬಿಸುತ್ತದೆ. ಹಾಗಾಗಿ ನಮ್ಮನ್ನು ಹೊಸ ಎಚ್ಚರದೊಂದಿಗೆ ಓದಿಸಿಕೊಳ್ಳತ್ತವೆ. ಸಾಂಪ್ರದಾಯಿಕ ಸಮಾಜ ಆಧುನಿಕರಿಸುವ ಸಮಾಜವಾಗಿ ಬದಲಾಗುವಾಗ ಮಹಿಳೆಯ ಸ್ಥಾನಮಾನಗಳನ್ನು ಪ್ರಶ್ನಿಸುತ್ತವೆ. ಹಾಗಾಗಿ ಈ ಕಾದಂಬರಿಯಲ್ಲಿ 'ಸಾಂಪ್ರದಾಯಿಕತೆ' ಮತ್ತು ಆಧುನಿಕತೆ ಮುಖಾಮುಖಿಯಾಗುವುದನ್ನು ಗಮನಿಸಬಹುದು. ವಿಧವಾ ವಿವಾಹದ ಚರ್ಚೆಯಲ್ಲಿ ಮಾತನಾಡುವ ಇಂದಿರಾಬಾಯಿಯ ಮಾತುಗಳು ಗಮನ ಸೆಳೆಯುತ್ತವೆ.

*"ಒಬ್ಬ ಪುರುಷನಿಗೆ ಎಷ್ಟು ಸಾರಿಯಾದರೂ ಮದುವೆಯಾಗಬಹುದಂತೆ ಸ್ತ್ರೀಗೇಕಾಗಕೂಡದು ? ಒಬ್ಬ ಸ್ತ್ರೀಯು ಪತಿಯ ಮರಣಾನಂತರ ತಲೆಬೋಳಿಸಿ ರೂಪ ವಿರೂಪ ಮಾಡಿ ಸಂನ್ಯಾಸದಲ್ಲಿರಬೇಕಂತೆ ಪುರುಷನು ಪತ್ನಿಯ ಮರಣಾನಂತರ ತಲೆ ಗಡ್ಡ ಮೀಸೆ ಬೋಳಿಸಿ ಏಕೆ ಸನ್ಯಾಸಿಯಾಗಬಾರದು"*[೨]

---

೧. ಇಂದಿರಾಬಾಯಿ–ಗುಲ್ವಾಡಿ ವೆಂಕಟರಾವ್–ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ–ಬೆಂಗಳೂರು–೧೯೮೫ ಪುಟ –೧೧೯

೨. ಅದೇ ಪು–ಪು – ೨೩೮

ಈ ಮಾತುಗಳು ಇಂದಿರಾಬಾಯಿ ಕಲಿತ ವಿದ್ಯೆಗೆ ನಿದರ್ಶನವಾಗುತ್ತವೆ. ವ್ಯವಸ್ಥೆಯನ್ನು ಪ್ರಶ್ನೆ ಮಾಡುವ ಧೈರ್ಯ ಆ ಕಾಲಕ್ಕೆ ಮಹತ್ವದ ಸಂಗತಿಯಾಗುತ್ತದೆ. ಆದರೆ ಹಿಂದೂಧರ್ಮದ ಚೌಕಟ್ಟಿನೊಳಗೇ ಸಮಾಜ ಸುಧಾರಣೆ ಸಾಧ್ಯವಾಗದೆ ಹೊರಗಿನಿಂದಲೇ ಬರಬೇಕಾಗುತ್ತದೆ. ಶಿಕ್ಷಣ ಮಾತ್ರ ಪ್ರತಿಭಟನೆಯ ಶಕ್ತಿ ನೀಡಬಲ್ಲದು ಎನ್ನುವ ಶಿವರಾಮ ಪಡಿಕ್ಕಲ್‌ರವರು.

> *"ವಸಾಹತುಶಾಹಿ ಸಾಮಜಿಕ ಸಂಸ್ಥೆಗಳು ಸಹ ಸಮಾಜವನ್ನು ರೂಪಾಂತರಗೊಳಿಸಲಾರವು ಏಕೆಂದರೆ ಅವೂ ಸಹ ಬ್ರಷ್ಟ ಆಚರಣೆಗಳ ಸೋಂಕಿಗೆ ಒಳಗಾಗಿವೆ. ಹಾಗಿರುವಾಗ ಒಬ್ಬ ಪ್ರಾಮಾಣಿಕ ಮತ್ತು ಸತ್ಯದ ಪ್ರತಿಪಾದಕ ವ್ಯಕ್ತಿ ಮಾತ್ರ ರೂಪಾಂತರದ ನಿಯೋಗಿಯಾಗಬಲ್ಲ. ಕಾದಂಬರಿಯಲ್ಲಿ ಭಾಸ್ಕರರಾವ್ ಮತ್ತು ಇಂದಿರಾ ಈ ನಿಯೋಗಿಗಳನ್ನು ಪ್ರತಿನಿಧಿಸಬಲ್ಲರು."*[೧]

ಈ ಇಬ್ಬರೂ ಅರ್ಥಪೂರ್ಣವಾದ ನಿಷ್ಠೆ ಮತ್ತು ಮೌಲ್ಯಗಳನ್ನು ಶಿಕ್ಷಣದಿಂದ ಪಡೆದಿದ್ದಾರೆ. ಇಂದಿರಾ ಓದುವ ಪುಸ್ತಕಗಳನ್ನು ಕುರಿತು ಅವಳ ತಾಯಿಯೊಂದಿಗೆ ಹೀಗೆ ಹೇಳುತ್ತಾಳೆ.

> *"ಈ ಪುಸ್ತಕಗಳು ವಿವಾಹ ಅಥವಾ ಕುಟುಂಬದಂತಹ ಸಾಂಸ್ಥಿಕ ಘಟಕಗಳನ್ನು ಪ್ರಶ್ನಿಸುವುದಿಲ್ಲ. ಬದಲಿಗೆ ಅವು ಒಬ್ಬ ಆಧುನಿಕ ಗೃಹಿಣಿ ತನ್ನ ಗಂಡ ಹಾಗೂ ಕುಟುಂಬದ ಬಗೆಗೆ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಭೋದಿಸುತ್ತವೆ."*[೨]

ಶೈಕ್ಷಣಿಕ ಪ್ರಗತಿ ಸಾಧಿಸಿದ ಇಂದಿರಾಬಾಯಿ 'ಮರುವಿವಾಹ'ವಾಗುವುದು. ಸಮಂಜಸವಾದುದೆಂದು ಕಾದಂಬರಿ ಸೂಚಿಸುತ್ತಿದೆ.

## ೬. <u>ಸಂಪ್ರದಾಯ ಸಮಾಜಕ್ಕೆದುರಾದ ಆಧುನಿಕತೆ</u>

ಇಲ್ಲಿ ಭಾಸ್ಕರರಾಯ ಮತ್ತು ಇಂದಿರಾ ಧಾರ್ಮಿಕ ಸಿದ್ದಾಂತಗಳನ್ನು ವಿರೋಧಿಸದೆ, ಅವುಗಳ ಆಚರಣೆಗಳನ್ನು ವಿರೋಧಿಸುತ್ತಾರೆ. ತಂದೆ ತಾಯಿ ಬಾಲವಿಧವೆ ಇಂದಿರೆಯ ಮನಸ್ಸನ್ನು ಆಧ್ಯಾತ್ಮದ ಕಡೆ ತಿರುಗಿಸುವ ಸಲುವಾಗಿ ಸೋಗಿನ ಸಂತನಿಂದ ಪ್ರವಚನಕ್ಕೆ ಏರ್ಪಾಡು ಮಾಡುತ್ತಾರೆ. ಆತನು ಮಾಡಿದ ಅಪಚಾರದಿಂದ ತಪ್ಪಿಸಿಕೊಂಡು ಬೇರೆಯವರ ಆಶ್ರಯದಲ್ಲಿ ವಿದ್ಯಾವಂತೆಯಾಗುವ ಇಂದಿರಾ ವೈಚಾರಿಕ ನೆಲೆಯಲ್ಲಿ ಚಿಂತಿಸುವುದರೊಂದಿಗೆ ವಿದ್ಯಾವಂತ ಭಾಷ್ಕರರಾಯನನ್ನು ಮರುವಿವಾಹವಾಗುವುದು ಆ ಕಾಲಕ್ಕೆ ಒಪ್ಪಿತ ಮೌಲ್ಯವಾಗಿರಲಿಲ್ಲ. 'ಮರುಮದುವೆ'ಯನ್ನು ಬಹಿಷ್ಕಾರ ಹಾಕುವುದರೊಂದಿಗೆ ಮಠಾಧಿಪತಿಗಳು ರೂಢಿ ಸಂಪ್ರದಾಯವನ್ನು ಹೇರಿರುತ್ತಾರೆ.

---

೧. ಭಾರತದ ಮೊದಲ ಕಾದಂಬರಿಗಳು –(ಸಂ) ಮೀನಾಕ್ಷಿ ಶೇಷಾದ್ರಿ (ಅನು) ಜಿ. ಬಾಲಕೃಷ್ಣ–ಸಾಹಿತ್ಯ ಅಕಾಡೆಮಿ – ಬೆಂಗಳೂರು – ೨೦೧೧ – ಪು – ೨೩೪

೨. ಇಂದಿರಾಬಾಯಿ – ಗುಲ್ವಾಡಿ ವೆಂಕಟರಾವ್– ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ–ಬೆಂಗಳೂರು–೧೯೮೫ ಪುಟ –೨೫೫

ಆದರೆ, ಧಾರ್ಮಿಕ ವಿಧಿ, ಸಂಪ್ರದಾಯ, ಕಂದಾಚಾರಗಳನ್ನು ಕಡೆಗಣಿಸಿ ಸುಧಾರಣೆಯತ್ತ ಸಾಗುವ ಸಮಾಜದ ಸಂಕ್ರಮಣಾವಸ್ಥೆಯನ್ನು ಕಾದಂಬರಿ ಬಿಂಬಿಸುತ್ತದೆ. ಈ ಸಂದರ್ಭವನ್ನು ಎಂ.ವಿ.ಇನಾಂದರ್‌ರವರು ಕೆರೂರು ವಾಸುದೇವಾಚಾರ್ಯರ 'ಇಂದಿರಾ' ಕಾದಂಬರಿಯ ಮುನ್ನುಡಿಯಲ್ಲಿ ಹೀಗೆ ವಿಶ್ಲೇಷಿಸುತ್ತಾರೆ.

*"ಸುಧಾರಣೆಗಾಗಿ ತವಕಿಸುವ ತರುಣಪೀಳಿಗೆ, ಕಟ್ಟುಪಾಡುಗಳನ್ನು ಕೊಡವಿ ನಿಂತವರನ್ನು ಭಹಿಷ್ಕರಿಸುವ, ಸ್ವಾರ್ಥಕ್ಕಾಗಿ ಪರಿಸ್ಥಿತಿಯ ಲಾಭ ಪಡೆಯಲೆತ್ನಿಸುವ ಕಪಟಮಧ್ಯವರ್ತಿಗಳು, ಇಂಥ ಅನೇಕ ಪಾತ್ರಗಳ ಮೂಲಕ ಮುಂದೆ ಸಾಗುವ ಕಥೆ ಧಾರ್ಮಿಕ ಹಾಗೂ ಸಾಮಾಜಿಕ ಮೌಲ್ಯಗಳನ್ನು ಒರೆಗೆ ಹಚ್ಚುತ್ತವೆ. ಮಠ, ಗುರುಪೀಠಗಳಂತ ಧರ್ಮ ಸಂಸ್ಥೆಗಳ ಸಾಧು ಸಂತರ ವಿವಿಧ ವಿಧಾನಗಳನ್ನು ಆಚಾರ ವಿಚಾರಗಳನ್ನು ವಿಮರ್ಶಿಸುತ್ತದೆ. ಶಿಷ್ಯಕೋಟಿಯ ಡಾಂಭಿಕತನವನ್ನು, ಅನ್ಯೋನ್ಯವಾದ ಸಮಯ ಸಾಧಕರ ಸ್ವಾರ್ಥವನ್ನು ಬಯಲಿಗೆಳೆಯುತ್ತದೆ. ಕಥೆ ಮುಖ್ಯವಾದರೂ ಸಮಕಾಲೀನ ಸಾರಸ್ವತ ಸಮಾಜದಲ್ಲಿಯ ಢಂಬಾಚಾರಗಳನ್ನು ಬಯಲಿಗೆಳೆಯುವುದಕ್ಕಾಗಿಯೇ ಅದನ್ನು ಕಟ್ಟಿಕೊಂಡ ಹಾಗೆ ಭಾಸವಾಗುತ್ತದೆ. ಧರ್ಮಾಧಿಕಾರಿಗಳ ಅನಾಚಾರಗಳನ್ನು ನೇರವಾಗಿ ಚಿತ್ರಿಸುವ ಧೈರ್ಯ ಇಂದಿಗೂ ಕಾಣದಿರುವಾಗ ಇನ್ನೂ ಹಳೆಯ ಕಾಲದಾಗಿದ್ದು ಅಂದಿನ ಪರಿಸರದಲ್ಲಿ ಲೇಖಕರು ಇಂಥ ಒಂದು ವಿಷಯವನ್ನೆತ್ತಿಕೊಂಡರು ಎನ್ನುವುದು ಅವರ ಸುಧಾರಣಾಪೇಕ್ಷೆಗೆ ಸಾಕ್ಷಿಯಾಗಿದ್ದಂತೆ ನಡೆದದ್ದನ್ನು ಯಥಾವತ್ತಾಗಿ ಚಿತ್ರಿಸುವುದರ ಸಾರ್ಥಕತೆಯ ವಿಷಯದಲ್ಲಿ ಅವರಿಗಿದ್ದ ನಂಬಿಕೆಗೂ ಸಾಕ್ಷಿಯಾಗುತ್ತದೆ. ಇಂತಹ ವಾಸ್ತವಚಿತ್ರಣದ ಮೂಲಕ ವ್ಯಕ್ತಪಡಿಸಬೇಕೆಂದು ಕೊಂಡ ಜೀವನ ದೃಷ್ಟಿ "ಸತ್ಯತೆ, ಹೃದಯ ನಿರ್ಮಲತೆ ಇವೆರಡು ಸಾಧನಗಳೇ ನಮಗೆ ಇಹಪರಗಳಲ್ಲಿಯೂ ಸಾರ್ಥಕಗಳಾಗಿವೆ"*[೧]

ಕೆರೂರು ವಾಸುದೇವಾಚಾರ್ಯರ 'ಇಂದಿರಾ' ಸಂಪ್ರದಾಯದ ಚೌಕಟ್ಟಿನಲ್ಲಿಯೇ ಉತ್ತಮ ಸಮಾಜಕ್ಕಾಗಿ ಬದಲಿ ದಾರಿಗಳ ಅನ್ವೇಷಣೆಯ ಪ್ರಯತ್ನ ನಡೆಸುತ್ತದೆ. ಸಮಾಜ ಸುಧಾರಣೆ ವಸಾಹತು ಸರ್ಕಾರದಿಂದಾಗಲಿ ಅಥವಾ ಪರಕೀಯ ಧರ್ಮದಿಂದಾಗಲಿ ಆಗಬೇಕಾಗಿಲ್ಲ, ಸಮುದಾಯದ ಒಳಗಿನಿಂದಲೇ ಪ್ರಾರಂಭವಾಗಬಹುದು ಎಂದು ಲೇಖಕರು ಚಿಂತಿಸುತ್ತಾರೆ. ನಾವು ಮರುಸಜ್ಜುಗೊಳ್ಳಲು ನಮ್ಮ ಸಂಪ್ರದಾಯದ ಪರಿಶುದ್ಧತೆಯನ್ನು ಪುನರುಜ್ಜೀವನ ಗೊಳಿಸಬೇಕು ಎಂದು ಲೇಖಕರು ಅಭಿಪ್ರಾಯಪಡುತ್ತಾರೆ. ಎನ್ನುವ ಶಿವರಾಮ

---

೧. ಇಂದಿರೆ – ಕೆರೂರು ವಾಸುದೇಚಾರ್ಯ – ಉಷಾ ಸಾಹಿತ್ಯ ಮಾಲೆ– ಮೈಸೂರು ೧೯೮೫– ಪುಟ –೨೭–೨೮

ಪಡಿಕ್ಕಲ್‌ರವರು ಕೆರೂರರು ಇಂಗ್ಲೀಷ್ ಸಂಸ್ಕೃತ ಎರಡೂ ಭಾಷೆಯನ್ನು ಕಲಿತ ಆದರ್ಶ ಆಧುನಿಕ ಪಾತ್ರಗಳನ್ನು ರಚಿಸಿದ್ದಾರೆ. ಮತ್ತು ಅವರು ಲೇವಡಿ ಮಾಡುವುದಕ್ಕಾಗಿಯೇ ಸಮಾಜಸುಧಾರಕ ಪಾತ್ರಗಳನ್ನು ರಚಿಸಿದ್ದಾರೆ ಎನ್ನುತ್ತಾರೆ. ಆದರೆ ನಿಖರವಾಗಿ ರೂಪಾಂತರ ಯಾವ ರೀತಿಯದು ಎಂದು ವಿವರಿಸುತ್ತಾ ಇಂದಿರಾಬಾಯಿ ಮೊದಲನೆ ಮದುವೆಯ ಆಡಂಬರ ಹಾಗೂ ಅನಗತ್ಯ ದುಂದುವೆಚ್ಚ ಮತ್ತು ಕಳಪೆ ವಿನೋದಗಳನ್ನು ಮತ್ತು ಎರಡನೆ ಮದುವೆಯ ಮಂತ್ರಪಠಣ, ವೇದಘೋಷ, ಮರುದಿನದ ಔತಣ ತಮ್ಮ ಸಮುದಾಯದವರಿಗೆ ಮತ್ತು ಇತರ ಸಮುದಾಯದವರಿಗೆ ಅವರವರ ಪೂಜಾಸ್ಥಾನಗಳಲ್ಲಿ ಏರ್ಪಡಿಸಿರುವುದರ ಕುರಿತು ವಿವರಿಸುತ್ತ ಆಧುನಿಕತೆಯ ವಿವರ ನೀಡುತ್ತಾರೆ. ಆದರೆ ಕರ್ನಾಟಕದಲ್ಲಿ 'ಆಧುನಿಕತೆ' ಜಾತಿ ವ್ಯವಸ್ಥೆಯಲ್ಲಾಗಲಿ, ಅಥವಾ ಮೂಲಭೂತ ಲಿಂಗಸಂಬಂಧಗಳಲ್ಲಾಗಲಿ ಪರಿಣಾಮಕಾರಿ ಬದಲಾಣೆ ತರಲು ಸಾಧ್ಯವಾಗಲಿಲ್ಲ ಎಂದು ಅಭಿಪ್ರಾಯ ಪಡುತ್ತಾರೆ.

ಕನ್ನಡದ ಮೊದಲ ಕಾದಂಬರಿಗಳಾದ 'ಇಂದಿರೆ', 'ಇಂದಿರಾಬಾಯಿ' ಕಾದಂಬರಿಗಳು ಆಧ್ಯಾತ್ಮಿಕ ಮತ್ತು ಧಾರ್ಮಿಕ ಎಂದು ಎರಡು ಗುಂಪುಗಳಾಗಿ ಕಂಡುಬರುತ್ತವೆ. ಅದರಲ್ಲಿ ಆಧ್ಯಾತ್ಮಿಕ ಗುಂಪು ಧರ್ಮದ ಪರಿಶುದ್ಧ ಅಂತಸ್ಸಾರ ಮತ್ತು ತರ್ಕಾತೀತ ಮೌಲ್ಯಗಳನ್ನು ಪ್ರತಿನಿಧಿಸುತ್ತದೆ. ಅದನ್ನು ಆಧುನಿಕ ಜಗತ್ತಿನಲ್ಲೂ ನವೀಕರಿಸಿ ಸಂರಕ್ಷಿಸಬಹುದು. ಆದರೆ ಧರ್ಮದ ಪರದೆಯ ಹಿಂದೆ ಕ್ರಮೇಣ ನುಸುಳಿಕೊಂಡಿರುವ ಬ್ರಷ್ಟ ಆಚರಣೆಗಳ ಗೋಜಲು ಜಗತ್ತಿದೆ. ಕ್ರೌರ್ಯದ ವಿಧಾನಗಳು ಮೂಢನಂಬಿಕೆ, ಬಲವಂತದ ಆಚರಣೆಗಳು, ನಿಜವಾದ ಧರ್ಮವನ್ನು ಕಲುಷಿತಗೊಳಿಸಿರುವುದು ಆ ಕಾಲದ ನಂಬಿಕೆಯಾಗಿತ್ತು. ಇದರಿಂದ 'ಆಧುನಿಕತೆ' ಅಂತಹ ವಿಚಾರಹೀನ ವಿಷಯಗಳನ್ನು ಅವಶ್ಯವಾಗಿ ನೀಗಬೇಕಾಗಿತ್ತು. ವಿಧವೆಯರ ಕೇಶಮುಂಡನ, ಬಲವಂತವಾಗಿ ಕಟ್ಟುಪಾಡುಗಳನ್ನು ವಿಧಿಸುವುದು, 'ಅನೈತಿಕ', 'ಅಧರ್ಮ', 'ಅನ್ಯಾಯ' ಎಂದು ಪರಿಗಣಿಸಿದ ಧಾರ್ಮಿಕ ಆಚರಣೆಗಳ ಬಗೆಗೆ ಅಂದಿನ ಯುವ ಪೀಳಿಗೆ ಅಸಹನೆಯನ್ನು ಸೂಚಿಸುತ್ತದೆ. ಅನಿಷ್ಟ ಆಚರಣೆಗಳ ಬಗೆಗೆ ವಿರೋಧ ಮಾಡುವ ಕೃತಿಗಳು ಮಹಿಳಾ ಪ್ರಶ್ನೆಯನ್ನು ಪಠ್ಯದ ಕೇಂದ್ರ ವಸ್ತುವನ್ನಾಗಿ ನಿರೂಪಿಸುತ್ತವೆ. ಹತ್ತೊಂಬತ್ತನೇ ಶತಮಾನದಲ್ಲಿ ಇಂಗ್ಲೀಷ್ ಬಲ್ಲ ಮಧ್ಯಮ ವರ್ಗದವರಿಂದ ಕಥನ ಸಾಹಿತ್ಯ ಸಾಮಾಜಿಕ ಗುರುತನ್ನು ಸಾಧಿಸಲು ಪ್ರಯತ್ನಿಸಿ ಮೇಲ್ವರ್ಗದವರ ಬದುಕು ಚಿತ್ರಿಸಲು ಯಶಸ್ವಿಯಾಗುತ್ತವೆ. ಸಾಂಪ್ರದಾಯಿಕ ಸಮಾಜವನ್ನು ಆಧುನೀಕರಿಸುವ, ಕುಟುಂಬ ಮತ್ತು ಸಮಾಜದಲ್ಲಿನ ಮಹಿಳೆಯ ಸ್ಥಾನದ ಬಗೆಗೆ ಮರುವ್ಯಾಖ್ಯಾನಿಸುತ್ತವೆ.

## ೨. <u>ಬಡತನ – ವಿವಾಹ – ವೈಧವ್ಯ</u>

ಕೆಳಮಧ್ಯಮವರ್ಗದ ಕುಟುಂಬ ಹಾರಾಣ ಚಂದ್ರ ಮತ್ತು ಶುಭದಾ ದಂಪತಿಗಳದ್ದು. ಜೊತೆಗೆ ಮೂರು ಮಕ್ಕಳು. ಹಿರಿಮಗಳು ಲಲನಾ ಬಾಲವಿಧವೆ, ಎರಡನೆಯವಳು ಚಲನಾ ವಯಸ್ಸಿಗೆ ಬಂದವಳು ರೋಗಿಷ್ಟ ಮಗ ಮಾಧವ ಹಾರಾಣಚಂದ್ರ ಕಳ್ಳತನದ ಆರೋಪದ ಮೇಲೆ ಕೆಲಸ ಕಳೆದುಕೊಂಡು ಸಂಸಾರ ಬಡತನಕ್ಕೆ ಸಿಲುಕುತ್ತದೆ. ತಂದೆ ದುಷ್ಚಟಗಳಿಗೆ ದಾಸನಾಗಿ ಊರೂರು ಸುತ್ತಿ ಸಂಸಾರವನ್ನು ನಿರ್ಲಕ್ಷಿಸುತ್ತಾನೆ. ವಿಧವೆ ಮಗಳು ಲಲನಾ ಕುಟುಂಬಕ್ಕಾಗಿ ಸಾಕಷ್ಟು ಹೋರಾಟ ಮಾಡುತ್ತಾಳೆ. ಅವರಿಗೆ ಆತ್ಮೀಯಳಾದ ಬಿಂದುವಾಸಿನಿಯೊಂದಿಗೆ ಸ್ನೇಹದಿಂದ ಊಟಕ್ಕೆ ಪಡೆಯುವ ಲಲನಾ ಸದಾನಂದನಿಂದಲೂ ಹಣಪಡೆಯುತ್ತಾಳೆ. ಆ ಊರಿನ ಶ್ರೀಮಂತ ಯುವಕ ಶಾರದಾಚರಣನ ಹತ್ತಿರ ಪೂರ್ವ ಪ್ರೇಮಿಯಾಗಿ ಮದುವೆಯಾಗುವಂತೆ ಕೇಳಿಕೊಳ್ಳುತ್ತಾಳೆ. ತನ್ನ ಕುಟುಂಬದ ದಟ್ಟದಾರಿದ್ರ್ಯಕ್ಕೆ ಇತಿಶ್ರೀ ಹಾಡುವುದೇ ಮೂಲಉದ್ದೇಶವಾಗಿದ್ದ ಲಲನಾ ನಾಲ್ಕುವರ್ಷಗಳ ಹಿಂದೆ ಶ್ರೀಮಂತ ವ್ಯಕ್ತಿಯ ಒಬ್ಬನೇ ಮಗ ಶಾರದಾ ಚರಣನೊಂದಿಗೆ ಮದುವೆ ಪ್ರಸ್ತಾಪವಾಗಿತ್ತು. ಆದರೆ ಹಾರಾಣಚಂದ್ರನ ಅವಸ್ಥೆ ವಿಪರೀತ ಕೆಟ್ಟುಹೋದಾಗ ಲಲನಾಳ ಮದುವೆ ಮುರಿದುಬಿದ್ದು ಲಲನಾಳಿಗೆ ಬೇರೆ ಸಂಬಂಧ ಗೊತ್ತಾಗಿ ಮದುವೆಯಾದ ಎರಡು ವರ್ಷದೊಳಗೇ ಗಂಡನನ್ನು ಕಳೆದುಕೊಂಡು ವಿಧವೆಯಾಗುತ್ತಾಳೆ. ಮತ್ತೆ ನಾಲ್ಕು ವರ್ಷಗಳ ನಂತರ ಶಾರದಾ ಚರಣನನ್ನು ಮದುವೆಯಾಗುವಂತೆ ಲಲನಾ ಯಾಚಿಸುತ್ತಿರುವುದಕ್ಕೆ ಬಲವಾದ ಕಾರಣ ತನ್ನ ಕುಟುಂಬದ ನಿರ್ವಹಣೆಯ ಏಕಮಾತ್ರ ಉದ್ದೇಶ. ಲಲನಾ ಮರುಮದುವೆ ಪ್ರಸ್ತಾಪಮಾಡಿದಾಗ ಒಂದೇ ಬಾರಿಗೆ ಮದುವೆಯನ್ನು ನಿರಾಕರಿಸುವ ಶಾರದಾ ಚರಣ. "ನಿನ್ನನ್ನು ಮದುವೆಯಾದರೆ ಜಾತಿ ಹೋಗುತ್ತದೆ" ಎನ್ನುವುದರೊಂದಿಗೆ ನಮ್ಮಪ್ಪನಿಂದ ಒಪ್ಪಿಗೆ ದೊರೆಯುವುದಿಲ್ಲ ಎಂದು ವಾದಿಸುತ್ತಾನೆ. ಜಾತಿ ಕೆಡಿಸಿಕೊಂಡು ಸಮಾಜ ಎದುರಿಸುವುದು ಸಾಧ್ಯವಿಲ್ಲ ಎಂದು ಕಡಾಖಂಡಿತವಾಗಿ ಹೇಳುತ್ತಾನೆ. ಆದರೂ ಸುಮ್ಮನಾಗದ ಲಲನಾ ತನ್ನ ತಂಗಿ ಚಲನಾಳ ಮದುವೆಯಾಗಲು ಯಾವ ಅಡ್ಡಿಯೂ ಇಲ್ಲವಲ್ಲ ಎಂದು ತನ್ನ ಅಪೇಕ್ಷೆ ಮುಂದಿಡುತ್ತಾಳೆ. ಈ ಸಂಬಂಧವನ್ನು ತಂದೆಯ ಹಣದ ಆಸೆಯನ್ನು ಮುಂದಿಟ್ಟು ತಿರಸ್ಕರಿಸುತ್ತಾನೆ.

> *"ಛಲನಾ ಅಂತಹ ಹುಡುಗಿ ಹುಡುಕಿದರೆ ಸಿಗುವವಳಲ್ಲ ರೂಪು ಬುದ್ಧಿ ಕೆಲಸ ಕುಟುಂಬದ ಮಾನರಕ್ಷಣೆ ಮಾಡಿದ ಹಾಗೆ ಆಗುತ್ತದೆ. ಮತ್ತು ನಾನು ನಿಮಗೆ ಬದುಕಿರುವವರೆಗೆ ಋಣಿಯಾಗಿರುವೆನು"*[೧]

---

೧. ಶುಭದಾ-ಶರಶ್ಚಂದ್ರ ಚಟರ್ಜಿ (ಅನು) ಅಹೋಬಲ ಶಂಕರ – ಕಾವ್ಯಾಲಯ ಪ್ರಕಾಶನ – ಮೈಸೂರು-೧೯೫೬-೧೯೨೦ ಪು.೬೨

ಎನ್ನುವ ಲಲನಾಳಿಗೆ ತಂದೆಯ ತೀರ್ಮಾನಕ್ಕೆ ಬದ್ಧನಾಗಿರುವ ಆಶ್ವಾಸನೆಯನ್ನು ಕೊಡುತ್ತಾನೆ.

ನಾಲ್ಕು ವರುಷಗಳ ಹಿಂದೆ ಪ್ರೀತಿಸಿದ ಶಾರದಾ ಚರಣನನ್ನು 'ಮರುಮದುವೆ'ಗೆ ಒಪ್ಪುವಂತೆ ಕೇಳಿಕೊಳ್ಳುವ ಲಲನಾಳ ಕಣ್ಣ ಮುಂದೆ ಇದ್ದದ್ದು ಕೇವಲ ತನ್ನ ಬಡಕುಟುಂಬ. ಎಲ್ಲೂ ತನ್ನ ದೈಹಿಕ ಆಸೆಗೆ ಅವಕಾಶವೇ ಇಲ್ಲ ಎಂದು ಲೇಖಕರು ನಿರೂಪಿಸುತ್ತಾರೆ. ಲಲನಾಗೆ ಶಾರದಾಚರಣನಂತ ಶ್ರೀಮಂತನನ್ನು ಮದುವೆಯಾದರೆ ತನ್ನ ತೌರಿನವರ ಬಡತನ ನೀಗಬಹುದೆಂಬ ಆಸೆಯೇ ವಿನಃ ತನಗಿರುವ ವಯೋ ಸಹಜ ಅಭಿಲಾಷೆ ಅಲ್ಲ. ಹೊಟ್ಟೆ ಹಸಿವು ಮುಖ್ಯವಾಗುವುದೇ ವಿನಃ ದೇಹದ ಹಸಿವು ಅಲ್ಲ ಎಂದು ಹೇಳುವ ಕಾದಂಬರಿಕಾರರು ತನ್ನ ಪ್ರೀತಿಯನ್ನು ತ್ಯಾಗಮಾಡಿ ತಂಗಿಯ ಬಾಳಿಗೆ ಆಶ್ರಯವಾಗುವ ಮುಖ್ಯವಾದ ಉದ್ದೇಶವನ್ನು ನಿರೂಪಿಸಿದ್ದಾರೆ. ತನ್ನ ಮರುಮದುವೆ ಸಮಾಜ ಒಪ್ಪಿತ ಅಲ್ಲ ಎಂದು ಗೊತ್ತಿದ್ದೂ ತನ್ನನ್ನು ತಿರಸ್ಕರಿಸಲಾಗದಂಥ ಸಂದಿಗ್ಧ ಪರಿಸ್ಥಿತಿಯನ್ನು ಸೃಷ್ಟಿಮಾಡುವ ಲಲನಾಳ ಬಗ್ಗೆ ಹೆಮ್ಮೆ ಎನಿಸುತ್ತದೆ. ಅವಳ ಉದ್ದೇಶ ಹೇಗಾದರೂ ಮರ್ಯಾದೆಯಿಂದ ತನ್ನ ಕುಟುಂಬ ಉಳಿಯಬೇಕೆಂಬುದೇ ಆಗಿದೆ. ಇದಕ್ಕಾಗಿ ಕಲ್ಕತ್ತಾದಲ್ಲಿ ವೇಶ್ಯೆಯಾಗಿ ಹಣಸಂಪಾದಿಸಿ ಕುಟುಂಬ ನಿರ್ವಹಣೆ ಮಾಡುವ ಅವಳ ಆಲೋಚನೆ ವ್ಯಥೆಯನ್ನುಂಟು ಮಾಡುತ್ತದೆ. ವೇಶ್ಯೆಯಾಗುವ ನಿರ್ಧಾರಕ್ಕೆ ಬರುವುದು ತನ್ನ ಐಷಾರಾಮದ ಬದುಕಿಗಾಗಿ ಅಲ್ಲ ಎನ್ನುವ ಸಂಗತಿ ಬಹಳ ಮುಖ್ಯವಾಗುತ್ತದೆ. ಲಲನಾಳ ತಂದೆ ದುಶ್ಚಟಗಳಿಗಾಗಿ ಹಣವನ್ನು ವ್ಯಯಮಾಡಿ ಉದ್ಯೋಗ ಕಳೆದು ಕೊಂಡು ಸಂಸಾರವನ್ನು ಬೀದಿಗೆ ತಂದಾಗ ವಿಧವೆಯಾದ ಮಗಳು ಕುಟುಂಬದ ಹೊರೆ ಹೊರುವುದು, ನಿಭಾಯಿಸುವುದು ಕಷ್ಟವಾದಾಗ ಹಣಕ್ಕಾಗಿ ವೇಶ್ಯೆಯಾಗಲು ಯಾಚಿಸುವುದರ ಹಿಂದೆ ಆ ಕಾಲಘಟ್ಟದ ಸಾಮಾಜಿಕ ಅನಿಷ್ಟ ಪದ್ಧತಿಗಳು ಹಿನ್ನಲೆಯಾಗಿ ನಿಲ್ಲುತ್ತವೆ. ವಿಧವಾ ಮರುವಿವಾಹಕ್ಕೆ ಅವಕಾಶವಿಲ್ಲದೆ ತೌರಿಗೆ ಹೊರೆಯಾಗುವ ಲಲನಾ ಮನೆ ಬಿಟ್ಟು ಗಂಗಾನದಿಯಲ್ಲಿ ಈಜಿಕೊಂಡು ಕಲ್ಕತ್ತೆಗೆ ಸೇರುವ ಆಲೋಚನೆ ಮಾಡುತ್ತಾಳೆ. ಇಲ್ಲೂ ಅವಳು ಕಷ್ಟಗಳಿಗೆ ಸಿಲುಕಿಕೊಳ್ಳುತ್ತಾಳೆ. ವಿವಸ್ತ್ರಳಾಗಿ ನೀರಿನೊಳಗೆ ಬಂದಿಯಾದ ಲಲನಾ ಮತ್ತೆ ಮರುಜೀವ ಪಡೆದುಕೊಳ್ಳುವುದು ಕಾದಂಬರಿಯ ಹೊಸ ಅಧ್ಯಾಯವಾಗಿ ಮೂಡಿಬಂದಿರುವುದು ವಿಶೇಷವಾಗಿದೆ.

ನಾರಾಯಣಪುರದ ಜಮೀನ್ದಾರ ಸುರೇಂದ್ರನಾಥ ಚೌದರಿ ಸಮುದ್ರದಲ್ಲಿ ವಿಹರಿಸುವ ಸಂದರ್ಭದಲ್ಲಿ ಅವನಿಗೆ ಗೋಚರಿಸುವ ಲಲನಾ ಮರುಹುಟ್ಟು ಪಡೆಯುತ್ತಾಳೆ. ಹಡಗಿನಲ್ಲಿ ಸಕಲ ಸೌಕರ್ಯಗಳನ್ನು ಹೊಂದುವ ಲಲನಾ ಯಾವ

ಸುಖಕ್ಕೂ ಹಾತೊರೆಯದೆ ತಾನು ಬಂದ ಉದ್ದೇಶಕ್ಕೆ ಹಾತೊರೆಯುತ್ತಾಳೆ. ಸುರೇಂದ್ರನಾಥ ಚೌದರಿ ಲಲನಾಳನ್ನು ತನ್ನ ಮನದರಸಿಯಾಗಿ ಸ್ವೀಕರಿಸಿ ಅವಳ ಯಾವ ಆಲೋಚನೆಗೂ ಅವಕಾಶಕೊಡದೆ ಸಂದರ್ಭನೋಡಿ ಮದುವೆಯಾಗುತ್ತಾನೆ. ಸುರೇಂದ್ರನಾಥನ ಅರಮನೆಯಲ್ಲಿ ಮಹಾರಾಣಿಯಂತೆ ಇದ್ದಾಗಲೂ, ತನ್ನ ಕುಟುಂಬದ ಬಡತನಕ್ಕಾಗಿ ಕೊರಗುವ ಸ್ವಂತ ದುಡಿಮೆಗಾಗಿ ಇಚ್ಚಿಸುವ, ಲಲನಾ ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಾಳೆ. ಬಂಗಾರದ ಪಂಜರದ ಬಗ್ಗೆ ಅವಳಿಗೆ ತಿರಸ್ಕಾರವಿರುವುದನ್ನು ಗುರುತಿಸಬಹುದು. ಸುರೇಂದ್ರನಾಥ ಚೌದರಿ ಅವಳ ಕುಟುಂಬಕ್ಕೆ ಹಣ ಕಳುಹಿಸಿಕೊಟ್ಟು ಅವಳ ಕುಟುಂಬದ ಎಲ್ಲಾ ಮಾಹಿತಿಗಳನ್ನು ತಿಳಿದು ಅವಳಿಗೆ ತಿಳಿಸುವಾಗ ಮಾಧವನ ಸಾವನ್ನು ಮುಚ್ಚಿಟ್ಟು ಚಲನಾಳ ಮದುವೆ ಶಾರದಾ ಚರಣನೊಂದಿಗೆ ನೆರವೇರಿದ್ದನ್ನು ತಿಳಿಸಿ ಅವಳ ಮನಸ್ಸನ್ನು ಪ್ರಸನ್ನ ಪಡಿಸುವುದು ತನ್ನ ಸ್ವಾರ್ಥಕ್ಕಾಗಿ. ಸುರೇಂದ್ರನ ವಸಾಹತುಶಾಹಿ ಸ್ವಭಾವವನ್ನು ಲೇಖಕರು ಪರಿಚಯಿಸುತ್ತಾರೆ. ಎಷ್ಟೇ ಆದರೂ ಆ ಕಾಲದ ಮುಗ್ಧ ಮನಸ್ಸಿನ ಪ್ರಾಮಾಣಿಕ ಬುದ್ಧಿಯ ಲಲನಾ ಯಾವುದನ್ನೂ ವಿರೋಧಿಸುವ ಸ್ಥಿತಿಯಲ್ಲಿಲ್ಲ ಒಂದೇ ಆಕಾಂಕ್ಷೆ ಅವಳಲ್ಲಿರುವುದು ಅದು ತಾನು ಸ್ವತಂತ್ರವಾಗಿ ತನ್ನ ಮನಃಸಾಕ್ಷಿಗೆ ಒಪ್ಪುವ ಕೆಲಸದಿಂದ ಸಂಪಾದಿಸಿ ತನ್ನವರನ್ನು ರಕ್ಷಿಸಬೇಕೆಂಬುದು. ಇದಕ್ಕೂ ಸುರೇಂದ್ರನಾಥನ ಅಭಿಲಾಷೆಗಳು ಅಡ್ಡಿಪಡಿಸಿದಾಗ ಅನಿವಾರ್ಯವಾಗಿ ಆತನ ಆಕಾಂಕ್ಷೆಗಳಿಗೆ ಬಾಗುತ್ತಾಳೆ. ಪಿತೃಪ್ರಧಾನ ವ್ಯವಸ್ಥೆ ಶತಮಾನಗಳಿಂದ ವಿಧವೆಯರಿಗೆ ವಿಧಿಸಿದ ನೈತಿಕತೆಯ ಮುಖ್ಯ ಸೂತ್ರ ಇಲ್ಲಿ ವ್ಯವಸ್ಥಿತವಾಗಿ ಕೆಲಸಮಾಡಿದೆ ಎಂದು ಭಾವಿಸಬಹುದು.

ತನ್ನ ಊರಿನಲ್ಲಿ ಬಾಲವಿಧವೆಯಾಗಿದ್ದಾಗ ಆರ್ಥಿಕವಾಗಿ ಸಹಾಯಮಾಡಲು ಮುಂದೆ ಬಂದ ಸದಾನಂದ, ಆಂತರ್ಯದಲ್ಲಿ ಪ್ರೀತಿತುಂಬಿಕೊಂಡ ಶಾರದಾಚರಣ, ಕಷ್ಟದಲ್ಲಿ ಸಹಕರಿಸಿ ಪ್ರೀತಿಸಿ ಮದುವೆಯಾಗಲು ಒಪ್ಪುವ ಸುರೇಂದ್ರ ಲಲನಾಳನ್ನು ಮೆಚ್ಚಿಕೊಳ್ಳುವವರೇ. ವಿಧವೆಯಾದವಳಿಗೆ ಮರುಮದುವೆ ಸುಸೂತ್ರವಾಗಿ ನೆರವೇರಲು ಸಾಧ್ಯವಿಲ್ಲದ ಮಾತು. ಆದರೆ ಸುರೇಂದ್ರನ ಮರುಮದುವೆಯ ತೀರ್ಮಾನ ಅವಳು ಅವನ ಊರಿನಲ್ಲಿ ಅಪರಿಚಿತಳಾಗಿ ಸುಂದರಿಯಾಗಿದ್ದರಿಂದ ಮಾತ್ರ ಸಾಧ್ಯವಾತ್ತದೆ. ಲಲನಾ 'ವಿಧವೆ' ಎಂದು ತಿಳಿದ ಸಮಾಜ ಅವಳನ್ನು ಕತ್ತಲೆಯಲ್ಲಿಟ್ಟಿದೆ. ಮರುಮದುವೆಗೆ ಮರುಜನ್ಮವನ್ನೇ ಪಡೆದ ಹಿನ್ನಲೆಯನ್ನು ಕಾದಂಬರಿಯಲ್ಲಿ ಗುರುತಿಸಬಹುದು. ಪುರುಷರ ಸಮಾಜದಲ್ಲಿ ಮಹಿಳೆಯ ಸ್ವಾತಂತ್ರ್ಯ ಹರಣ ಎಷ್ಟೋ ಶತಮಾನಗಳಷ್ಟು ಹಳೆಯದು. 'ವಿಧವೆ'ಗೆ ಮರುಮದುವೆಗೆ ಅವಕಾಶವೇ ಇಲ್ಲ ಎನ್ನುವ ಸ್ಥಿತಿಯಲ್ಲಿ ಆಕೆಯನ್ನು ಬಲವಂತವಾಗಿ ಹಿಂಸೆಗೆ ತಳ್ಳಲ್ಪಡುವ, ಅವಳ ಅಸಹಾಯಕತೆಯ ದಾರುಣ ಅವಸ್ಥೆಯನ್ನು ಮಾತಿಗೆ ನಿಲುಕದ ನೋವನ್ನು

ಮಾತಿನಲ್ಲಿ ಕಟ್ಟಿಕೊಡುವ ಪ್ರಯತ್ನ ಕಾದಂಬರಿಯಲ್ಲಿದೆ. ಬದುಕು ದುರ್ಭರವಾದಾಗ ಕೂಡ ಸಾವೇ ಉತ್ತರವಲ್ಲ ಎನ್ನುವುದು ಕಾದಂಬರಿಯ ವಿಶೇಷವಾಗಿದೆ.

ಇಪ್ಪತ್ತನೆ ಶತಮಾನದಲ್ಲಾದ ರಾಜಕೀಯ ಮತ್ತು ಸಾಮಾಜಿಕ ಬದಲಾವಣೆಗಳು ಕನ್ನಡ ಸಾಹಿತ್ಯದಲ್ಲಿ ಮಹತ್ತರವಾದ ಬದಲಾವಣೆ ಮಾಡಿದವು. ವಸಾಹತುಶಾಹಿ ಪ್ರವೇಶದಿಂದ ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಬದಲಾವಣೆಗಳಾದುವು. ಸುಧಾರಣಾವಾದಿಗಳ ಚಳುವಳಿ ಹಾಗೂ ಚಿಂತನೆಗಳು ಶೋಷಿತಸಮುದಾಯದವರಿಗೆ ಹೊಸ ಸಂಚಲನವನ್ನುಂಟು ಮಾಡಿದವು. ಈ ಹಿನ್ನೆಲೆಯಲ್ಲಿ ಕನ್ನಡದ ಮೊದಲ ಕಥನ ಸಾಹಿತ್ಯ ಉತ್ತಮಗುಣಮಟ್ಟದ ಅಧ್ಯಯನಕ್ಕೆ ಅವಕಾಶವೀಯುತ್ತವೆ. ಹಾಗಾಗಿ ಕೆರೂರು ವಾಸುದೇವಾಚಾರ್ಯರು, ಗುಲ್ವಾಡಿ ವೆಂಕಟರಾಯರನ್ನು ಆಧುನಿಕ ಕನ್ನಡ ಸಾಹಿತ್ಯದ ಮೊದಲ ಲೇಖಕರೆಂದು ಗುರುತಿಸುವುದು ತಾತ್ವಿಕವಾಗಿ ಸಮಂಜಸವಾಗುತ್ತದೆ. ಜಾತಿ ಪದ್ಧತಿ, ಅಸ್ಪೃಶ್ಯತೆ, ಲಿಂಗಭೇದ ನೀತಿಗಳಿಂದ ರೋಗಗ್ರಸ್ಥವಾದ ಸಮಾಜದಲ್ಲಿ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳಾ ಸಮುದಾಯವು ಹೆಚ್ಚಿನ ದಾಸ್ಯಕ್ಕೊಳಗಾಗಿರುವುದು ಮೊದಲ ಕಾದಂಬರಿಗಳಲ್ಲಿ ಅನಾವರಣಗೊಂಡಿವೆ. ಸ್ವಾನುಭವದಿಂದಲೇ ಬರೆಯಬೇಕಾದ ಒತ್ತಡಗಳು ಇಲ್ಲವಾದಾಗಲೂ ತನ್ನ ಸುತ್ತ ಹರಡಿಬಿದ್ದ ಪ್ರಕರಣಗಳು ಲೇಖಕರ ಚಿಂತನೆಗಳಿಗೆ ಗ್ರಾಸವಾದವು.

ಪ್ರಾರಂಭಿಕ ಕಾಲಘಟ್ಟದಲ್ಲಿ ವಿಧವೆ ಅನೇಕ ಅಂಶಗಳಲ್ಲಿ ದೌರ್ಬಲ್ಯಕ್ಕೊಳಗಾಗಿ ಆಳಿಸಿಕೊಳ್ಳುವ ಸ್ಥಿತಿ ತಲುಪಿದಾಗ ಆಳುವವರ ಇಚ್ಛೆ ಪ್ರಬಲವಾಗಿರುವುದರ ಚಿತ್ರಣವೂ ಆ ಕಾಲದ ಕಥನ ಸಾಹಿತ್ಯ ಕಟ್ಟಿಕೊಡುತ್ತವೆ. ಇಂತಹ ಸೇವಾಕ್ರಮ ಬೆಳೆದು ಬಂದು ಬೇರೆ ಸಾಧ್ಯತೆಗಳ ಪ್ರಶ್ನೆ ಮಾಡಲು ಅವಕಾಶವಾಗದೆ ಕಾಲಕ್ರಮೇಣ ದಮನಿತ ಜೀವನ ಕ್ರಮಕ್ಕೇ ಹೆಚ್ಚು ಹೆಚ್ಚು ನಿಷ್ಠೆ ತೋರುತ್ತಾ ಬಂದಿದ್ದಾರೆ. ಮಹಿಳೆಯ ಆಂತರ್ಯದಲ್ಲಿದ್ದ ಸಹನೆ ಕ್ಷಮೆ ವಿಧೇಯತೆಯನ್ನು ಬೆಂಬಲಿಸಿದ ವ್ಯವಸ್ಥೆ ಅವಳ ಹಕ್ಕಿನ ಮಾರ್ಗವನ್ನು ತೋರಿಸುವಲ್ಲಿ ವಿಫಲವಾಗಿದೆ. ಕನ್ನಡ ಸಾಹಿತ್ಯದಲ್ಲಿ ಮಹಿಳಾ ಹೋರಾಟ ಇತ್ತೀಚಿನದಲ್ಲ. ಆಕೆ ಆ ಕಾಲದಲ್ಲಿ ತನ್ನ ವೈಧವ್ಯದಲ್ಲಿ ತಲೆಕೂದಲನ್ನು ಉಳಿಸಿಕೊಳ್ಳಲು, ಪುಸ್ತಕ ಹಿಡಿಯಲು ಹೋರಾಡಬೇಕಾದ ತುರ್ತು ಇರುವುದನ್ನು ಗಮನಿಸಲಾಗಿದೆ. ಆ ಕಾಲದ ಸಮಸ್ಯೆಗೆ ಸ್ಪಂದಿಸಿದ ಲೇಖಕರು ಪ್ರಚಲಿತ ಸಮಸ್ಯೆಗಳನ್ನು ಬಿಂಬಿಸಿದ್ದಾರೆ. ಮೌಲ್ಯಗಳ ಮುಸುಕಿನಲ್ಲಿ ಮಹಿಳೆಯ ಬಾಳು ಬೀದಿ ಪಾಲು ಮಾಡುವ ವ್ಯವಸ್ಥೆಯ ವಿರುದ್ಧ ಕಥನ ಸಾಹಿತ್ಯ ಪರಂಪರೆಯಿಂದ ಹೆಪ್ಪುಗಟ್ಟಿದ್ದ ನೋವನ್ನು ಬಿಚ್ಚಿಟ್ಟಿವೆ.

# ಅಧ್ಯಾಯ – ೪

## ಮಹಿಳಾ ಕಥನಗಳಲ್ಲಿ ವೈಧವ್ಯ–ಸ್ವಾತಂತ್ರ್ಯಪೂರ್ವದಲ್ಲಿ ಸಮಾಜಮುಖಿ ಚಿಂತನೆ

೧. ಅನನ್ಯ ಆತ್ಮಶಕ್ತಿಯಾಗಿ ವಿಧವೆ

೨. ಪರಾಧೀನರಾದ ವಿಧವೆಯರ ಸಂಕಥನ

೩. ವೈಧವ್ಯ–ಬದುಕು–ಹೋರಾಟ

೪. ವಿಧವಾ ಮೌಲ್ಯಾಚರಣೆ

೫. ವೈಧವ್ಯದೊಳಗಿನ ಜೀವನ ಪ್ರೀತಿ

೬. ಪುರುಷ ಪ್ರಧಾನ ವ್ಯವಸ್ಥೆಯ 'ಆಳುವ ನೀತಿ'

ಅಧ್ಯಾಯ ೪

## ಮಹಿಳಾ ಕಥನಗಳಲ್ಲಿ ವೈಧವ್ಯ – ಸ್ವಾತಂತ್ರ್ಯ ಪೂರ್ವದಲ್ಲಿ ಸಮಾಜಮುಖಿ ಚಿಂತನೆ

ಸಾಹಿತ್ಯದ ಇತಿಹಾಸದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಬರವಣಿಗೆಯ ಮೂಲಕ ಸಾಮಾಜಿಕ ಕಳಕಳಿಯನ್ನು ಅಭಿವ್ಯಕ್ತಿಸಿದ ಲೇಖಕಿಯರು ಕಡಿಮೆಯೇ ಎನ್ನಬಹುದು. ೧೯೦೦ ರಿಂದ ೧೯೫೦ರವರೆಗೆ ಐದು ದಶಕಗಳಲ್ಲಿ ಸ್ವಾತಂತ್ರ್ಯ ಬರುವವರೆಗೆ ಕೆಲವೇ ಮಹಿಳೆಯರು ಬರಹನಿರತರಾಗಿದ್ದರು ಎಂದು ಹೇಳಬಹುದು. ಹಾಗಾಗಿ ಈ ಅಧ್ಯಯನದ ಈ ಅಧ್ಯಾಯದಲ್ಲಿ ನಂಜನಗೂಡು ತಿರುಮಲಾಂಬಾ, ಆರ್. ಕಲ್ಯಾಣಮ್ಮ, ಸರಸ್ವತಿ ಬಾಯಿ ರಾಜವಾಡೆ, ಕೊಡಗಿನ ಗೌರಮ್ಮ, ದೇವಾಂಗನಾ ಶಾಸ್ತ್ರಿಯವರನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಈ ಐವರಲ್ಲಿ ತಿರುಮಲಾಂಬಾ, ಕಲ್ಯಾಣಮ್ಮ ವಿಶಿಷ್ಟರೀತಿಯಲ್ಲಿ ಮಹಿಳಾ ಅಭಿವೃದ್ಧಿಯನ್ನು ಗುರಿಯಾಗಿಟ್ಟುಕೊಂಡಿದ್ದರು.

> *"ಸ್ತ್ರೀಯರ ಸಮಗ್ರ ವ್ಯಕ್ತಿತ್ವ ವಿಕಾಸಕ್ಕಾಗಿ ತಿರುಮಲಾಂಬಾ ತಮ್ಮ ಬರಹದಲ್ಲಿ ತೀವ್ರವಾಗಿ ತೊಡಗಿಕೊಂಡರೆ, ಕಲ್ಯಾಣಮ್ಮ, ಸ್ತ್ರೀಯರು ಮಾಡಬಹುದಾದ ಸಾಧನೆಗಳಿಗೆ ಸ್ವತಃ ತಮ್ಮ ಬದುಕನ್ನೇ ಪ್ರಯೋಗರಂಗವಾಗಿ ಭಾವಿಸಿಕೊಂಡವರು. ಆಧುನಿಕ ಕನ್ನಡ ಮಹಿಳಾ ಸಾಹಿತ್ಯದ ಪರಂಪರೆಯ ಮೊದಲ ಹಂತವನ್ನು ನಿರ್ಮಿಸಿದ ಈ ಲೇಖಕಿಯರ ತಲೆಮಾರು ಪರಿಸರಗಳು ಬದಲಾಗ ತೊಡಗಿದಂತೆ ಅವರ ಸ್ತ್ರೀಪರ ಚಿಂತನೆಯಲ್ಲೂ ಬರವಣಿಗೆಯ ಸ್ವರೂಪದಲ್ಲೂ ಬೆಳವಣಿಗೆಗಳಾದುದನ್ನು ಗುರಿತಿಸಲು ಸಾಧ್ಯವಿದೆ"[೧]*

ಆಧುನಿಕ ಕನ್ನಡದ ಲೇಖಕಿಯರ ಬರಹಗಳಲ್ಲಿ ಸ್ತ್ರೀಪರತೆ ತೀವ್ರವಾಗಿರಲು ಆ ಕಾಲದ ಸಾಂಸ್ಕೃತಿಕ ಪರಿಸರದ ಒತ್ತಡ ಕಾರಣವಾಗಿತ್ತು. ಸ್ವಾತಂತ್ರ್ಯ ಪೂರ್ವದ ರಾಷ್ಟ್ರೀಯ ಪುನರುತ್ಥಾನ ಆಂದೋಲನದಲ್ಲಿ ತಲೆದೋರಿದ್ದ 'ಸ್ತ್ರೀಪರ ಕಾಳಜಿ' ಅಂದಿನ ಬರಹಗಳಲ್ಲಿ ಕಾಣಿಸಿಕೊಂಡಿತ್ತು. ಸ್ತ್ರೀ ಶಿಕ್ಷಣಕ್ಕೆ ಆದ್ಯತೆ ಶಾಸನ ಬದ್ಧವಾಗಿ ಜಾರಿಯಲ್ಲಿದ್ದರೂ ಅದರ ಅವಶ್ಯಕತೆಯನ್ನು ಮನದಟ್ಟು ಮಾಡುವುದು ಲೇಖಕಿಯರಿಗೆ ಅನಿವಾರ್ಯವಾಗಿತ್ತು. ಇದರೊಂದಿಗೆ, ವಿಧವೆಯರ ಕೇಶಮುಂಡನ, ಬಾಲ್ಯ ವಿವಾಹ, ಸತಿಪದ್ಧತಿಗಳನ್ನು ವಿರೋಧಿಸುವುದರೊಂದಿಗೆ ವಿಧವಾ ವಿವಾಹವನ್ನು ಬೆಂಬಲಿಸುತ್ತಿದ್ದ ಸುಧಾರಣಾವಾದಿಗಳು ದೇಶದಲ್ಲಿ ಗಮನಸೆಳೆದಿದ್ದರು. ಇವರೊಂದಿಗೆ ಕನ್ನಡದ ಮೊದಲ ತಲೆಮಾರಿನ ಪತ್ರಕರ್ತರು, ಮುದ್ರಕರು, ಬರಹಗಾರರು ಬೆಂಬಲಿಸಿದ್ದರು. ಕರ್ಕಿ ವೆಂಕಟರಮಣ ಶಾಸ್ತ್ರಿ, ಮುದವೀಡು ಕೃಷ್ಣರಾಯರು, ಆಲೂರು ವೆಂಕಟರಾಯರು, ವೆಂಕಟರಂಗೋಕಟ್ಟಿ, ಕೆರೂರು ವಾಸುದೇವಾಚಾರ್ಯ

---

೧. ವಿಚಯ – ಬಿ.ಎನ್.ಸುಮಿತ್ರಾಬಾಯಿ–ವಿಜಯಾ ಪ್ರಕಾಶನ–ಬೆಂಗಳೂರು. ೧೯೯೫. ಪು.೭೫

ಮುಂತಾದವರು ಇವರಲ್ಲಿ ಮುಖ್ಯರಾಗುತ್ತಾರೆ. ಇವರ ಪ್ರಯತ್ನಗಳಲ್ಲಿ ಸ್ತ್ರೀಪರಕಾಳಜಿಯೂ ಪ್ರಧಾನವಾಗಿ ಸೇರಿಕೊಂಡಿತ್ತು. ಇವರೊಂದಿಗೆ ಬರವಣಿಗೆಯಲ್ಲಿ ತೊಡಗಿದ್ದ ತಿರುಮಲಾಂಬಾ, ಕಲ್ಯಾಣಮ್ಮನವರಿಗೆ ನವೋದಯ ಶಿಷ್ಟ ಸಾಹಿತ್ಯ ಸೃಷ್ಟಿಸುತ್ತಿದ್ದ ಮಾಸ್ತಿ, ಕುವೆಂಪು, ಬೇಂದ್ರೆ, ಕಾರಂತ ಮುಂತಾದವರ ಧೋರಣೆಗಿಂತ ಸುಧಾರಣಾ ಮನೋಧರ್ಮದ ಲೇಖಕರ ವಿಚಾರಗಳು ಹೆಚ್ಚು ಆದರ್ಶವಾಗಿದ್ದವು ಎಂದು ಅವರ ಕಾರ್ಯಚಟುವಟಿಕೆಗಳಿಂದ ಗಮನಿಸಬಹುದು.

### ೧. <u>ಅನನ್ಯ ಆತ್ಮಶಕ್ತಿಯಾಗಿ ವಿಧವೆ</u>

ತಿರುಮಲಾಂಬಾ ಮತ್ತು ಕಲ್ಯಾಣಮ್ಮನವರಿಗೆ ವಿದ್ಯಾಭ್ಯಾಸವನ್ನು ಪಡೆಯುವುದೇ ಒಂದು ದೊಡ್ಡ ಸಾಧನೆಯಾಗಿತ್ತು. ಆ ಕಾಲದ ಲೇಖಕಿಯರು ಶಿಕ್ಷಣಕ್ಕಾಗಿ ಬವಣೆಪಟ್ಟಿರುವ ನಿದರ್ಶನಗಳು ಗಮನಸೆಳೆಯುತ್ತವೆ. ಸ್ತ್ರೀಯರ ಶಿಕ್ಷಣದ ಬಗ್ಗೆ ತಿರಸ್ಕಾರವಿದ್ದ ಆ ಕಾಲಘಟ್ಟದಲ್ಲಿ ಸಂಪ್ರದಾಯಸ್ಥ ಪರಿಸರದಲ್ಲಿ ಪುಸ್ತಕ ಹಿಡಿಯುವುದೇ ಬಂಡಾಯವಾಗಿತ್ತು. ತಾವು ಓದಿದ ಸಂಸ್ಕೃತ, ತಮಿಳು, ಆಂಗ್ಲ ಭಾಷೆ, ಸ್ತ್ರೀಪರ ಕಾಳಜಿಯನ್ನು ಮೂಡಿಸುವಲ್ಲಿ ವಿಫಲವಾಗುತ್ತವೆ. ಕಾರಣ ಹಿಂದುಳಿದ ಸ್ತ್ರೀ ಸಮುದಾಯವನ್ನು ಮೇಲೆತ್ತುವ ಕಾಳಜಿ ಮುಖ್ಯವಾಗಿತ್ತು. ಅದಕ್ಕಾಗಿ ಬರಹವನ್ನೇ ಪ್ರಬಲವಾದ ಸಾಧನವನ್ನಾಗಿಸಿಕೊಳ್ಳುತ್ತಾರೆ. ಹಾಗಾಗಿ ಲೇಖಕಿಯರು ತಮ್ಮ ಜ್ಞಾನವನ್ನು ಸ್ತ್ರೀಕುಲದ ಉದ್ಧಾರಕ್ಕಾಗಿ ಮಾತ್ರ ಬಳಸಿಕೊಳ್ಳುವಂತಾಗಿತ್ತು. ಆ ಕಾಲದ ಸಾಂಸ್ಕೃತಿಕ ಪರಿಸರದ ಅಸಮಾನತೆಯೊಳಗೂ ಬಳಲಬೇಕಾಗುತ್ತದೆ.

ತಿರುಮಲಾಂಬಾರವರು ಮಹಿಳೆಗೆ 'ಶಿಕ್ಷಣ' –ಆತ್ಮ ವಿಶ್ವಾಸ, ಧೈರ್ಯಗಳನ್ನು ಹುಟ್ಟಿಸಬಲ್ಲದು ಎಂದು ಅವರ ಕಥಾ ನಾಯಕಿಯರ ಮೂಲಕ ನಿರೂಪಿಸಿದ್ದಾರೆ. 'ನೈತಿಕ ಆತ್ಮವಿಶ್ವಾಸ' ಮಹಿಳೆಗೆ ಅವಶ್ಯ ಎನ್ನುವುದನ್ನು ಒತ್ತಿ ಹೇಳುತ್ತಾರೆ. ಪರಂಪರಾಗತವಾದ ಪತಿವ್ರತಾ ಧರ್ಮಕ್ಕೆ ಭಂಗ ತರದ 'ಶಿಕ್ಷಣ'ವನ್ನು ಕೇಂದ್ರಮೌಲ್ಯವಾಗಿಟ್ಟುಕೊಂಡು ಆ ಕಾಲದ ಸಾಮಾಜಿಕ ಸ್ಥಿತಿಯನ್ನು ಚರ್ಚಿಸುತ್ತಾರೆ.

> *"ಸಮಾಜದ ಮೇಲು ಜಾತಿಯವರಲ್ಲಿ ಅಂದಿನ ತೀವ್ರತರ ಸಮಸ್ಯೆ ವಿಧವೆಯರ ಕೇಶವಪನದ ಸಮಸ್ಯೆ. ಬಲವಂತವಾಗಿ ಹೆಣ್ಣಿನ ತಲೆಬೋಳಿಸುವ ಈ ಕ್ರೂರ ವಿಧಿಯಿಂದ ಆಕೆಗೆ ಆಗುವ ಹಿಂಸೆ, ಅವಮಾನಗಳನ್ನು ಅತ್ಯಂತ ನಿಕಟ ನೆಲೆಯಲ್ಲಿ ಗ್ರಹಿಸಿ ತಮ್ಮ ಕೃತಿಗಳಲ್ಲಿ ಅಂಥ ಸಂದರ್ಭಗಳನ್ನು ಚರ್ಚೆಗೆ ಗುರಿಪಡಿಸಿ, ಅಂಥ ಆಚರಣೆಯನ್ನು ಬಲವಾಗಿ ನಿರಾಕರಿಸಿದ್ದಾರೆ. ಆದರೆ ತಿರುಮಲಾಂಬಾ ಎತ್ತಿಹಿಡಿಯುವ ನೈತಿಕ ವ್ರತ ಅಥವಾ ಪಾತಿವ್ರತ್ಯದ ಮೌಲ್ಯ ಸಾಂಸ್ಕೃತಿಕವಾಗಿ ಹೆಣ್ಣನ್ನು ನಿಯಂತ್ರಿಸಲು ಪುರುಷ ಪ್ರಧಾನ ವ್ಯವಸ್ಥೆ ಸೃಷ್ಟಿಸಿಕೊಂಡ ಮೌಲ್ಯ"*[೧]

---

೧. ವಿಚಯ – ಬಿ.ಎನ್.ಸುಮಿತ್ರಾಬಾಯಿ–ವಿಜಯಾ ಪ್ರಕಾಶನ–ಬೆಂಗಳೂರು. ೧೯೯೫. ಪು.೭೮–೭೯

ಮೇಲಿನ ಮಾತುಗಳ ಹಿನ್ನೆಲೆಯಲ್ಲಿ ತಿರುಮಲಾಂಬಾರವರ ಬರಹಗಳನ್ನು ಚರ್ಚಿಸಬಹುದು. ಆ ಕಾಲದ ಸಾಮಾಜಿಕ ಸಮಸ್ಯೆಗಳಾದ ಧರ್ಮದ ಹೆಸರಿನಲ್ಲಿ ನಡೆಯುವ ವಂಚನೆ, ವಿಧವೆಯರಿಗೆ ಎದುರಾಗುವ ದುಷ್ಪಪ್ರಲೋಭನೆ ಮತ್ತು ಕೇಶಮುಂಡನದ ಹಿಂಸೆಯನ್ನು ತಿರುಮಲಾಂಬಾರವರು ನಿಷ್ಠುರವಾಗಿ ಚಿತ್ರಿಸುತ್ತಾರೆ. ಅವರ 'ನಭಾ' – ವಿರಾಗಿಣಿಯರು ದಿಟ್ಟತನ, ಅನನ್ಯ ಆತ್ಮಶಕ್ತಿ, ಸಾಹಸಗಳನ್ನು ಬಿಂಬಿಸುವ ಪಾತ್ರಗಳಾಗಿ ಮೂಡಿಬಂದಿದ್ದಾರೆ. ಅವರ ಕೃತಿಗಳು ಆ ಕಾಲದ ಹೊಸದನ್ನೆಲ್ಲ ಮೈಗೂಡಿಸಿಕೊಂಡು ಬೆಳೆಯಲು ಸಾಧ್ಯವಾಗದಿದ್ದರೂ, ನಂತರದವರಿಗೆ ಪ್ರಭಾವ ಬೀರಲು ಸೋತರೂ ಹೆಣ್ಣಿನ ಅನನ್ಯ ಆತ್ಮಶಕ್ತಿ, ದಿಟ್ಟತನಗಳು, ಸ್ವಾವಲಂಬಿ ಆತ್ಮವಿಶ್ವಾಸ ಮುಂದಿನ ಪೀಳಿಗೆಯವರಿಗೆ ಮಾರ್ಗದರ್ಶನವಾದುದರಲ್ಲಿ ಸಂಶಯವಿಲ್ಲ.

೨. <u>ಪರಾಧೀನರಾದ ವಿಧವೆಯರ ಸಂಕಥನ</u> :

ನಂಜನಗೂಡು ತಿರುಮಲಾಂಬಾರವರು ೧೮೮೭ರಲ್ಲಿ ಜನಿಸಿದರು. ತಮ್ಮ ಹದಿಮೂರನೆ ವಯಸ್ಸಿನಲ್ಲಿ ವಿಧವೆಯಾದರು. ಈ ಕಷ್ಟಗಳ ಜೊತೆಗೆ ತಂದೆಯ ಮನೆಯಲ್ಲೇ ಉಳಿಯುತ್ತಾರೆ. ಅವರು ಎಂಟುವರ್ಷದವರಿದ್ದಾಗಲೇ ನಂಜನಗೂಡಿನ ಬಾಲಿಕಾ ಪ್ರೌಢಶಾಲೆಯ ವಿದ್ಯಾರ್ಥಿನಿಯಾಗಿದ್ದರು. ಹದಿಮೂರು ವರ್ಷದಲ್ಲಿ ಹಸೆಮಣೆ ಏರಿದ ಮುಗ್ದೆ ಪ್ಲೇಗಿಗೆ ಬಲಿಯಾದ ಗಂಡನನ್ನು ಕಳೆದುಕೊಂಡು ವಿಧವೆಯಾದರು. ನಂತರ ತಮ್ಮನನ್ನು ತಂಗಿಯನ್ನು ಕಳೆದುಕೊಂಡರು. ಆದರೆ ಆ ಆಘಾತಗಳಲ್ಲೇ ಅರಳಿದ ತಿರುಮಲಾಂಬಾ ಸಂಪಾದಕಿ, ಲೇಖಕಿ, ಪ್ರಕಾಶಕಿಯಾಗಿ ಮತ್ತೆ ಹುಟ್ಟಿದರು.

ತಿರುಮಲಾಂಬಾರವರು ಶಿಸ್ತಿನ ಜೊತೆಗೆ ಸೊಗಸುಗಾರಿಕೆಯ ಆಕಾಂಕ್ಷಿಯೂ ಆಗಿದ್ದರು. ನಾಟಕ ಸಂಘ, ರಾತ್ರಿಯ ಶಾಲೆಯನ್ನೂ ನಡೆಸುತ್ತಿದ್ದರು. ಕೆಲವು ಔಷಧಿಗಳನ್ನೂ ಅವರೇ ತಯಾರಿಸಿ ಚಿಕಿತ್ಸೆ ನಡೆಸುತ್ತಿದ್ದರು. ಆದರೂ ಓದು ಬರಹ ಅವರ ನೆಚ್ಚಿನ ಕ್ಷೇತ್ರ ಎನ್ನುವುದೂ ಮುಖ್ಯವಾಗುತ್ತದೆ. ಪುಸ್ತಕಗಳು ಅವರ ನಿತ್ಯ ಸಂಗಾತಿಗಳಾಗಿದ್ದವು. ಕನ್ನಡ ನವೋದಯಕ್ಕೆ ಮೊದಲ ಸ್ತ್ರೀ ಧ್ವನಿಯನ್ನು ಸೇರಿಸಿದ ಸಾಹಸ ತಿರುಮಲಾಂಬಾ ಅವರದು. ಆ ಕಾಲದ ಸಾಮಾಜಿಕ ಹಿನ್ನೆಲೆಯಲ್ಲಿ ಇದು ಅಪೂರ್ವ ಸಾಹಸ. ತಿರುಮಲಾಂಬಾ ಅವರ ಕಾರ್ಯವನ್ನು ಕರ್ನಾಟಕ ವಿದ್ಯಾವರ್ಧಕ ಸಂಘ, ಮದ್ರಾಸಿನ ಪಠ್ಯಪುಸ್ತಕ ಮತ್ತು ಸಾಹಿತ್ಯ ಸಂಘ. ಮದ್ರಾಸ್, ಮುಂಬೈ, ಮೈಸೂರು ಶಿಕ್ಷಣ ಇಲಾಖೆಗಳು ಮಹಾರಾಜರು, ಸರ್ಕಾರ – ಈ ಎಲ್ಲಾ ವ್ಯಕ್ತಿ ಸಂಸ್ಥೆಗಳೂ ಗುರುತಿಸಿ ಅಷ್ಟಿಷ್ಟು ಪ್ರೋತ್ಸಾಹಕೊಟ್ಟವು.

*"ಹದಿಮೂರರ ಮುಗ್ಧ ಮುತ್ತೈದೆಯಾಗಿ, ಹದಿನಾಲ್ಕರ ಬಾಲವಿಧವೆಯಾಗಿ, ತಪಸ್ಸಿನಂತೆ ಬರಹ ಪ್ರಕಾಶನ, ಪತ್ರಿಕಾ ಸಂಪಾದನೆಯನ್ನು ಹಚ್ಚಿಕೊಂಡ*

*ಯುವತಿಯಾಗಿ, ಪ್ರಕಾಶನ ಸಂಪಾದನೆಯಿಂದ ಎದುರಾದ ಆರ್ಥಿಕ ಮುಗ್ಗಟ್ಟಿನಲ್ಲಿ ಹಾಗೂ ಸಮಾಜ ಮತ್ತು ಸಾಹಿತ್ಯ ಕ್ಷೇತ್ರದ ವಿಮರ್ಶೆ, ಟೀಕೆಗಳ ನಡುವೆ ದೃಢವಾಗಿ ಹೋರಾಡಿದ ಸ್ಥಿರಚಿತ್ತೆಯಾಗಿ, ನಿಷ್ಠಾವಂತೆಯಾಗಿ, ಅನಿಕೇತನೆ ಸ್ನೇಹಮಯಿಯಾಗಿ ಬದುಕಿನ ಕಹಿಸಿಹಿಗಳನ್ನುಂಡು ಏರುತಗ್ಗುಗಳನ್ನು ಕಂಡು ಹಣ್ಣಾದ ತಿರುಮಲಾಂಬಾರ ಜೀವ ಇಹದ ತೊಟ್ಟಿನಿಂದ ೧.೯.೧೯೮೨ರಂದು ಕಳಚಿಬಿದ್ದಿತು."*[೧]

ಕರ್ನಾಟಕ ತನ್ನ ಒಬ್ಬಳು ಲೇಖಕಿ, ಪ್ರಕಾಶಕಿ, ಸಂಪಾದಕಿಯನ್ನು ಕಳೆದುಕೊಂಡಿತು. ತನ್ನ ವೈಯಕ್ತಿಕ ಸಾಧನೆಯಿಂದ ತನ್ನ ಮಿತಿಯೊಳಗೇ ಚಲನೆಯ ಅಲೆಗಳನ್ನೆಬ್ಬಿಸಿ ಮುಂದಿನ ಶತಕಗಳ ಚಲನೆಗೆ ನಾಂದಿ ಹಾಡಿದ ಮಹಿಳೆ ಸದಾ ಕಾಲಕ್ಕೂ ಸ್ಮರಣೀಯವಾಗಿರುವುದು ವಿಶೇಷವಾದುದಾಗಿದೆ.

ತಿರುಮಲಾಂಬಾರವರ 'ನಭಾ' ಮತ್ತು 'ವಿರಾಗಿಣಿ' ಕಾದಂಬರಿಗಳು ವಿಧವೆ ಚಿರಸನ್ಯಾಸಿನಿಯಾಗಿ ಉಳಿಯುವ ಮತ್ತು ಎದುರಿಸುವ ಸಮಸ್ಯೆಗಳನ್ನು ಮುಖ್ಯವಾಗಿ ಚರ್ಚಿಸುತ್ತವೆ. ಹಾಗೂ ಈ ಎರಡೂ ಕಾದಂಬರಿಗಳು 'ವಿಧವಾ ಚಾರಿತ್ರ್ಯದ ಪವಿತ್ರತೆ'ಯನ್ನು ಪ್ರಧಾನವಾಗಿ ನಿರೂಪಿಸುತ್ತವೆ. ಚಿಕ್ಕ ವಯಸ್ಸಿನಲ್ಲೇ ವಿಧವೆಯಾಗುಳಿಯುವ ನಭಾ ವಿಧವಾ ಪುನರ್ವಿವಾಹವನ್ನು ತಳ್ಳಿಹಾಕುವುದು ಈ ಕಾದಂಬರಿಯ ಉದ್ದೇಶ. ಸಾಂಕ್ರಾಮಿಕ ರೋಗಕ್ಕೆ ಬಲಿಯಾದ ನಭಾಳ ಪತಿ ಮರಣಹೊಂದುವ ಮುನ್ನ 'ನಭಾ'ಳಿಗೆ ಪತ್ರವೊಂದನ್ನು ಬರೆದಿರುತ್ತಾನೆ. ಆ ಪತ್ರದಲ್ಲಿ 'ನಭಾ'ಳು ಬ್ರಹ್ಮಚರ್ಯವನ್ನು ಪಾಲಿಸಬೇಕು ಇದರಿಂದ ಸುಖ ಹೊಂದಬಹುದು ಎನ್ನುವುದನ್ನೇ ಮನಗಾಣಿಸಲಾಗಿರುತ್ತದೆ. ಅಲ್ಲದೆ 'ವಿಷಯೋಪಭೋಗ'ಗಳಿಂದಾಗಿ ಚಿರಕಳಂಕಿನಿಯಾಗದೆ ವಿವೇಕದಿಂದ ಉಭಯ ಕುಲವನ್ನು ಉದ್ಧರಿಸಬಹುದೆಂದು ಪತ್ರದಲ್ಲಿ ನಭಾಳ ಪತಿಯು ಬರೆದಿರುತ್ತಾನೆ. ಪತಿ ಶ್ರೀನಿವಾಸನ ಪತ್ರವೇ ನಭಾಳ ಬದುಕನ್ನು ರೂಪಿಸುತ್ತದೆ. ಮುಂದೆ ಅವಳ ಚಿಕ್ಕಪ್ಪನ ಆಶ್ರಯದಲ್ಲಿದ್ದ ನಭಾಳಿಗೆ ಯುವಕನೂ, ಯೋಗ್ಯನೂ ಆದ ರಾಜಶೇಖರನು ವಿವಾಹದ ಪ್ರಸ್ತಾಪವನ್ನು ಮುಂದಿಡುತ್ತಾನೆ. ಇದನ್ನು ಒಪ್ಪದ ನಭಾ ತನ್ನ ಚಿಕ್ಕಪ್ಪನ ಮನೆಯನ್ನು ತೊರೆಯುವ ನಿರ್ಧಾರವನ್ನು ಮಾಡುತ್ತಾಳೆ. ಮತ್ತು ರಾಜಶೇಖರನನ್ನು ಮದುವೆಯಾಗುವುದು ಪಾಪಕಾರ್ಯ ಎಂದು ಭಾವಿಸುತ್ತಾಳೆ. ಹೀಗೆ 'ನಭಾ' ಕಾದಂಬರಿಯ ನಾಯಕಿ 'ವಿಧವಾ ವಿವಾಹ' ದಿಂದ ದೂರವುಳಿಯುತ್ತಾಳೆ. ನಭಾಳಿಗೆ 'ಮರುವಿವಾಹ' ಸನ್ಯಾಸಿನಿಯಾಗಿ ಬಾಳುವುದನ್ನು ವಿರೋಧಿಸುವಂತೆ ಕಾಣುತ್ತದೆ. 'ವೈಧವ್ಯ'ವನ್ನು ಸಾಮಾಜಿಕ ಸಮಸ್ಯೆಯಾಗಿ ತಿರುಮಲಾಂಬಾರವರು ನೋಡುವುದಿಲ್ಲ.

---

೧. ಚಿತ್ರೈಪಿಣಿಯ ಹೆಜ್ಜೆಗಳು–(ಸಂ) ವಿಜಯಾ ದಬ್ಬೆ – ಕನ್ನಡ ಮತ್ತು ಸಂಸ್ಕೃತಿ ಇಲಾಖೆ– ಬೆಂಗಳೂರು – ೧೯೯೨ – ಪು. ೧೫–೧೬

ನಭಾಳ 'ಮರುಮದುವೆ'ಯ ಪ್ರಸ್ತಾಪ ಬಂದಾಗ ನಭಾ ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸುತ್ತಾಳೆ. ಈ ವಿಚಾರವಾಗಿ ಅಣ್ಣ ನಿರಂಜನನೊಂದಿಗೆ ಚರ್ಚೆಗೆ ಇಳಿಯುವ ನಭಾ ಶೂದ್ರರಲ್ಲಿರುವ 'ಕೂಡಾವಳಿ' ಪದ್ಧತಿಯ ಬಗ್ಗೆ ವಿವರಿಸುತ್ತಾಳೆ.

> *"ಆವ ಕನ್ಯೆಯು ದಾನವಾಗದೆ ಸ್ವೇಚ್ಛೆಯಿಂದವರನನ್ನು ವರಿಸುವಳೋ ಅಂಥವಳು ಅವನನ್ನು ಬಿಟ್ಟು ಅಥವಾ ಆ ವರನು ಮೃತನಾದ ಅನಂತರ ಮತ್ತೊಬ್ಬನನ್ನು ವರಿಸಬಹುದು. ಶೂದ್ರಾಚಾರದಲ್ಲಿ ಇದನ್ನು ಚನ್ನಾಗಿ ತಿಳಿಯಬಹುದು. ಶೂದ್ರಾದಿಗಳಲ್ಲಿ 'ಕೂಡಾವಳಿ' ಎಂಬ ಪದ್ಧತಿಯುಂಟಷ್ಟೆ, ಆ ರೀತಿಯಾಗಿಯೇ ಇದಾಗುವುದು. ಅದು ಇಹಪರ ತತ್ವಜ್ಞರಾಗಿ ಆಸ್ತಿಕರೆನ್ನಿಸಿರುವ ನಮ್ಮ ಭಾರತೀಯರಿಗೆ ಅಷ್ಟಾಗಿ ಸುಖಕರವಾಗಲಾರದು. ಹಾಗೆ ಮಾಡುವುದರಿಂದ ನಮ್ಮ ದೇಹದ ಧರ್ಮ ಜಾಗ್ರತೆಯೇ ನಷ್ಟವಾಗಿ ಹಲವು ವಿಧ ಕಷ್ಟಕ್ಲೇಶಗಳುಂಟಾಗುವುದರಲ್ಲಿ ಅಡ್ಡಿಯಿಲ್ಲ."*[೧]

ಈ ಮಾತುಗಳು ಲೇಖಕಿಯ ಅಭಿಪ್ರಾಯವನ್ನು ಮುಂದಿಡುತ್ತವೆ. ವೈಧವ್ಯವನ್ನು ಸಹಜವೆಂಬುವಂತೆ ನಂಬಿ ಬದುಕುವುದು ಮೇಲ್ವರ್ಗ ಜಾತಿಯಲ್ಲಿ ಒಪ್ಪಿತ ಮೌಲ್ಯಗಳು ಎನ್ನುವಂತೆ 'ನಭಾ' ಮತ್ತು 'ವಿರಾಗಿಣಿ' ಕಾದಂಬರಿಗಳಲ್ಲಿ ಸಮರ್ಥಿಸುತ್ತಾರೆ. ಶೂದ್ರರಲ್ಲಿರುವ 'ಕೂಡಾವಳಿ' ಪದ್ಧತಿಯನ್ನು ಬೆಂಬಲಿಸುವ ವಿಚಾರ ವಿಮರ್ಶೆಗಳು ಕಾದಂಬರಿಯಲ್ಲಿ ಬರುವುದಿಲ್ಲ. ನೈಸರ್ಗಿಕ ನ್ಯಾಯ ಸಿಗದೆ ಬಾಲ್ಯದಿಂದಲೂ ವೈಧವ್ಯದ ಜೀವನವೇ ಸ್ಥಾಯಿಯಾಗುತ್ತದೆ. ಬಾಲವಿಧವೆಯರಾದವರ ಬಗ್ಗೆ ಅವರ ದಾಸ್ಯದ ಬಗ್ಗೆ ತಿರುಮಲಾಂಬಾರವರಿಗೆ ಸಹಾನುಭೂತಿ ಇದೆ. ಆದರೆ ಈ ಸಮಸ್ಯೆಯ ಆಳವನ್ನು ಚರ್ಚಿಸುವುದರಿಂದ ದೂರ ಉಳಿಯುತ್ತಾರೆ. ಬಾಲವಿಧವೆಯರ ಬಾಹ್ಯವಿರೂಪದ ಬಗ್ಗೆ ಕಟುವಾಗಿ ವಿರೋಧಿಸುತ್ತಾರೆ. ಶಿಕ್ಷಣದ ಮೂಲಕ 'ಸಚ್ಚಾರಿತ್ರ್ಯ'ದ ಬದುಕನ್ನು ಬೆಂಬಲಿಸುತ್ತಾರೆ. ವಿಧವಾ ಶಿಕ್ಷಣದ ಸಾಕಾರವಾಗಿ 'ಆನಂದಭವನ' ಎಂಬ ಅಬಲಾಶ್ರಮದ ಸ್ಥಾಪನೆ 'ವಿರಾಗಿಣಿ' ಕಾದಂಬರಿಯಲ್ಲಿ ಬರುತ್ತದೆ. ಸಾಮಾಜಿಕ ಕಳಕಳಿಯನ್ನು ವಿರಾಗಿಣಿಯಲ್ಲಿ ಬಿಂಬಿಸುತ್ತಾರೆ. 'ನಭಾ' ವಿರಾಗಿಣಿಯಾಗಿ ತನ್ನ ಬದುಕಿನ ಮಾರ್ಗವನ್ನು ಕಂಡುಕೊಂಡಿರುವುದನ್ನು ವಿರಾಗಿಣಿ ಕಾದಂಬರಿ ವ್ಯಕ್ತಪಡಿಸುತ್ತದೆ.

ತಿರುಮಾಲಾಂಬಾರವರ ಕಾದಂಬರಿಗಳು ವಿಧವಾ ವಿವಾಹವನ್ನು ಕುರಿತು ಮಹತ್ವದ ಒಳನೋಟಗಳನ್ನು ದಾಖಲಿಸುತ್ತವೆ. ಬದುಕಿಗೆ ವಿವಾಹವೇ ಅನಿವಾರ್ಯವಲ್ಲ ಎಂದು ಭಾವಿಸುವ ನಭಾ ಬದುಕಿನ ಸಾರ್ಥಕತೆಗೆ ಹಲವು ಮಾರ್ಗಗಳಿವೆ ಎಂದು ಪ್ರತಿಪಾದಿಸುತ್ತಾಳೆ. 'ಚಿರಸನ್ಯಾಸಿನಿ'ಯಾಗಿ ಉಳಿಯುವುದೇ ಪರಿಹಾರವಾಗಿರುವುದನ್ನು ವಿಜಯಾ ದಬ್ಬೆಯವರು ಹೇಗೆ ವಿಶ್ಲೇಷಿಸುತ್ತಾರೆ.

---

೧. **ಹಿತೈಷಿಣಿಯ ಹೆಜ್ಜೆಗಳು–(ಸಂ) ವಿಜಯಾದ ದಬ್ಬೆ – ಕನ್ನಡ ಮತ್ತು ಸಂಸ್ಕೃತಿ ಇಲಾಖೆ– ಬೆಂಗಳೂರು – ೧೯೯೨ ಪು. ೫೩**

*"ಇಲ್ಲಿ ವೈಧವ್ಯ ನಭೆಯ ಜೀವನದ ದುರಂತವೇ ಆಗಿದೆ. ಆದರೆ ಇದನ್ನು ಈ ಜನ್ಮದಲ್ಲಿ ಪರಿಹರಿಸಿಕೊಳ್ಳಬೇಕೆಂಬ ಬಯಕೆ ಇಲ್ಲಿಲ್ಲ. ಅದಕ್ಕೆ ಬದಲಾಗಿ ಈ ಸಮಸ್ಯೆಯನ್ನು ಬಯಸುವವರ ವಿರುದ್ಧ ನಿಂತು ವೈಧವ್ಯವನ್ನು ಕಟ್ಟುನಿಟ್ಟಾಗಿ ಅನುಸರಿಸಬೇಕೆಂಬುದನ್ನು ಸಮರ್ಥಿಸಲಾಗಿದೆ. ತಿರುಮಲಾಂಬಾರವರ ಯೋಚನಾಕ್ರಮ ಅದುವರೆಗಿನ ಸಾಂಪ್ರಾದಾಯಿಕ ನೆಲೆಗಿಂತ ಮೂಲಭೂತವಾಗಿ ಬೇರೆಯಾಗಿಲ್ಲವಾದ್ದರಿಂದ ಅವರಿಗೆ ವೈಧವ್ಯವು ಪೂರ್ವಕರ್ಮದ ಫಲವಾಗಿ ಕಾಣುತ್ತದೆ. ಹೀಗೆ ನಂಬಿದ ಮೇಲೆ ಅದೊಂದು ಸಾಮಾಜಿಕ ಸಮಸ್ಯೆಯಾಗಿ ಕಾಣುವುದಿಲ್ಲ."*[೧]

ಸಮಾಜದ ಒಪ್ಪಿತ ಮೌಲ್ಯಗಳನ್ನು ವಿನಯದಿಂದ ಸ್ವೀಕರಿಸುವ ನಭಾ ವಿಧವೆಗೆ ಮರುವಿವಾಹ ಅಪಮಾನವೆಂದೇ ಭಾವಿಸುತ್ತಾಳೆ. ಹಲವು ಸಮುದಾಯಗಳಲ್ಲಿ ವಿಧವಾ ವಿವಾಹವೆನ್ನುವುದು ಪ್ರಚಲಿತದಲ್ಲಿದ್ದರೂ 'ನಭಾ' 'ವಿರಾಗಿಣಿ'ಯಲ್ಲಿ ತಿರುಮಲಾಂಬಾ ಉನ್ನತಜಾತಿ ವರ್ಗದ ವಿಧವೆಯರಿಗೆ ನಿಷೇಧವಿದೆ ಎಂದೇ ಸಾಧಿಸುತ್ತಿರುವುದು ಗಮನಾರ್ಹವಾದುದು. 'ವಿಧವಾ ವಿವಾಹ' ಎಂಬುದು ಆ ಕಾಲಕ್ಕೆ ಬಹುದೊಡ್ಡ ಸವಾಲಾಗಿತ್ತು. ಅದರಲ್ಲೂ ಲೇಖಕಿಯರು 'ವಿಧವಾ ವಿವಾಹ' ಕುರಿತಂತೆ ಸಾಮಾಜಿಕವಾದ ಜಿಜ್ಞಾಸೆಗಿಂತ ಕೌಟುಂಬಿಕ ಸ್ವರೂಪವನ್ನು ಚರ್ಚಿಸಿರುವುದೇ ಹೆಚ್ಚು. ನಭಾ ಕಾದಂಬರಿಯ ಬಾಲವಿಧವೆಯ ಸಮಸ್ಯೆ ಪರಿಹಾರವಾಗದೆ 'ನೈಸರ್ಗಿಕ ನ್ಯಾಯ' ದೊರಕಿಸಿಕೊಳ್ಳುವುದು ಅಸಾಧ್ಯವಾಗಿದೆ. ಹೆಣ್ಣು-ಗಂಡಿನ ಸಹಜ ಪ್ರೀತಿಗೆ ವಿವಾಹವಲ್ಲದೆ ಬೇರೆದಾರಿಗಳಿಲ್ಲದಿರುವುದರಿಂದ 'ವಿವಾಹ' 'ನೈಸರ್ಗಿಕ ನ್ಯಾಯಕ್ಕೆ' ಅನಿವಾರ್ಯವಾಗಿದೆ. ಆದರೆ ವಿವಾಹ ಸಂಸ್ಥೆಯೇ ಶೋಷಣೆಯ ಮೂಲವಾಗಿರುವುದರಿಂದ ಅದನ್ನು ಭಾರತೀಯ ಸಮಾಜದಲ್ಲಿ ಬೇಕಾದಂತೆ ಬದಲಾಯಿಸುವುದೂ ಕಷ್ಟಸಾಧ್ಯ. ಇಂತಹ ವಿವಾಹ ಮೂಲದ ಸಮಸ್ಯೆಗಳನ್ನು ತಿರುಮಲಾಂಬಾ ಮತ್ತು ಆರ್.ಕಲ್ಯಾಣಮ್ಮನವರು ತಮ್ಮ ಪ್ರಾರಂಭದ ಕೃತಿಗಳಲ್ಲಿ ಚರ್ಚಿಸುತ್ತಾರೆ. ಹಾಗೂ ಇವರ ಕೃತಿಗಳು ವಿಧವಾ ವಿವಾಹವನ್ನು ಜಾತಿಯ ಸ್ವರೂಪದ ನೆಲೆಯಿಂದಲೂ ಚರ್ಚಿಸುವುದು ಮುಖ್ಯವಾಗುತ್ತದೆ.

*"ಒಂದು ಖಚಿತವಾದ ಶೀಲ ಪಾವಿತ್ರ್ಯ-ನೀತಿಯ ಬಿಂದುವಿನಿಂದ ಅವರು ಸುತ್ತಲಿನ ಬದುಕನ್ನು ವೀಕ್ಷಿಸುತ್ತಾರೆ. ಅದರಿಂದಾಗಿ ಜನರ ವರ್ತನೆಗಳು ದೌರ್ಬಲ್ಯ ದೃಢತೆ, ಪ್ರಲೋಭನೆ – ಜಿತೇಂದ್ರಿಯತೆ, ಸತ್ವ-ನಿರ್ವೀರ್ಯತೆ, ಒಳಿತು-ಕೆಡಕು ಮುಂತಾಗಿ ಸರಳ ದ್ವಂದ್ವಗಳ ರೂಪದಲ್ಲಿ ಅವರಿಗೆ ಕಂಡಿವೆ.. ಒಂದೊಂದು ಗುಣಕ್ಕೆ ಒಂದೊಂದು ಪಾತ್ರವನ್ನು ಪ್ರತಿನಿಧಿಯಾಗಿ ಕಲ್ಪಿಸಿ. ಅಂದಿನ ಸಮಾಜದಲ್ಲಿ ಕಾಣಿಸುತ್ತಿದ್ದ ಹಳೆಯ ಮತ್ತು ಹೊಸ ವಿಚಾರಗಳ ಸಂಘರ್ಷವನ್ನು ಸಂಭಾಷಣೆಯ ರೂಪದಲ್ಲಿ ಚಿತ್ರಿಸುತ್ತಾರೆ.*

೧. ಹಿತೈಷಿಣಿಯ ಹೆಜ್ಜೆಗಳು-(ಸಂ) ವಿಜಯಾ ದಬ್ಬೆ – ಕನ್ನಡ ಮತ್ತು ಸಂಸ್ಕೃತಿ ಇಲಾಖೆ- ಬೆಂಗಳೂರು – ೧೯೯೨ ಪು. ೩೦-೩೧

*ಕನ್ಯಾಪಿತೃಗಳ ಗೋಳು ಧರ್ಮದ ಹೆಸರಲ್ಲಿ ನಡೆಯುವ ವಂಚನೆ, ವಿಧವೆಯರಿಗೆ ಎದುರಾಗುವ ದುಷ್ಟ ಪ್ರಲೋಭನೆಗಳು, ಕೇಶವಪನದ ಹಿಂಸೆ ಮುಂತಾದುವನ್ನು ತಿರುಮಲಾಂಬಾ ದಾಖಲಿಸಿರುವ ಬಗೆ ಕುತೂಹಲವನ್ನು ಹುಟ್ಟಿಸುವಂತಿದೆ. ಕೇವಲ ರಮ್ಯವಾದೊಂದು ಕಲ್ಪನೆಯ ನೆಲೆಯಲ್ಲೇ ಆದರೂ ಅವರ ನಾಯಕಿಯರು ಅನನ್ಯ ರೀತಿಯ ಆತ್ಮಶಕ್ತಿ. ದಿಟ್ಟತನ ಸಾಹಸದ ಮನೋಧರ್ಮಗಳನ್ನು ಬಿಂಬಿಸುವುದು ವಿಶಿಷ್ಟವಾಗಿದೆ. ಅವರ ನಭಾ ವಿರಾಗಿಣಿಯರು ಬಹುಮಟ್ಟಿಗೆ ತಿರುಮಲಾಂಬಾರವರ ಬದುಕಿನ ಸಿದ್ಧಾಂತಗಳನ್ನೇ ಸಾರುತ್ತಾರೆ ಎನ್ನಬಹುದು."*[೧]

ತಿರುಮಲಾಂಬಾರವರ 'ನಭಾ' ಮತ್ತು 'ವಿರಾಗಿಣಿ' ಕಾದಂಬರಿಗಳು 'ವಿಧವಾ ವಿವಾಹ' ವಿರೋಧಿಸಿ ತಪಸ್ವೀ ಜೀವನವನ್ನು ಪ್ರತಿಪಾದಿಸುತ್ತವೆ. ವಿಧವೆಯರ ಮುಂದೆ ಇದ್ದ ಆಯ್ಕೆಗಳಲ್ಲಿ ಶಿಕ್ಷಣವನ್ನೇ ಬಹಳ ಮುಖ್ಯವಾಗಿ ಪ್ರಧಾನ ನೆಲೆಯಲ್ಲಿ ಕಂಡುಕೊಳ್ಳುತ್ತಾರೆ. ಶೈಕ್ಷಣಿಕವಾದ ಪರಿಸರ ಆಗತಾನೇ ತನ್ನ ದಾರಿಯನ್ನು ನಿರ್ಮಿಸಿದ್ದು ಉನ್ನತ ಜಾತಿವರ್ಗದವರಿಗೆ ಒತ್ತಡವೂ ಆಗಿತ್ತು. ಹಾಗಾಗಿ ಕನ್ನಡದ ಆಧುನಿಕ ಲೇಖಕಿಯರಾದ ತಿರುಮಲಾಂಬಾ, ಕಲ್ಯಾಣಮ್ಮನವರ ಬರಹದಲ್ಲಿ ಸ್ತ್ರೀಪರತೆ ತೀವ್ರವಾಗಿ ಪ್ರಕಟವಾಗಿರುವುದು ಆಕಸ್ಮಿಕವಲ್ಲ. ಆದುನಿಕ ಕನ್ನಡ ಮಹಿಳಾ ಸಾಹಿತ್ಯದ ಪರಂಪರೆಯ ಮೊದಲ ಹಂತವನ್ನು ನಿರ್ಮಿಸಿದ ಲೇಖಕಿಯರು ಎಂದು ಕರೆಯಬಹುದು, ನಂತರದ ದಿನಗಳಲ್ಲಿ ಲೇಖಕಿಯರ ತಲೆಮಾರು ಪರಿಸರಗಳು ಬದಲಾಗ ತೊಡಗಿದಂತೆ ಅವರ ಸ್ತ್ರೀಪರ ಚಿಂತನೆಗಳಲ್ಲೂ ಬೆಳವಣಿಗೆಗಳಾದುದನ್ನು ಗಮನಿಸಬಹುದು.

**೩. <u>ವೈಧವ್ಯದ ಬದುಕು – ಹೋರಾಟ</u>**

ಕನ್ನಡ ಭಾಷೆಗೆ ಶಿಕ್ಷಣದಲ್ಲಾಗಲಿ, ಸಾಮಾಜಿಕ ಕ್ಷೇತ್ರದಲ್ಲಾಗಲಿ ಯಾವ ಆದ್ಯತೆಯೂ ಇಲ್ಲದಿದ್ದ ಕಾಲದಲ್ಲಿ ಹೆಚ್ಚಿನ ಸ್ಥಾನ ದೊರಕಿಸಿಕೊಡುವಲ್ಲಿ ಶ್ರಮಿಸಿದ ಅನೇಕರಲ್ಲಿ ಆರ್. ಕಲ್ಯಾಣಮ್ಮ ಒಬ್ಬರು. ಮಹಿಳೆಗೆ ಯಾವ ಪ್ರೋತ್ಸಾಹವು ಇಲ್ಲದ ಕಾಲದಲ್ಲಿ ನಲವತ್ತೈದಕ್ಕೂ ಹೆಚ್ಚು ವರ್ಷಗಳ ಕಾಲ ಪತ್ರಿಕೆಯನ್ನು ನಡೆಸಿ, ಮಕ್ಕಳ ಸಾಹಿತ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದವರು. ಎಸ್. ರಾಮಸ್ವಾಮಿ ಅಯ್ಯಂಗಾರ್ ಮತ್ತು ಜಾನಕಮ್ಮ ದಂಪತಿಗಳಿಗೆ ೧೮೯೪ರಲ್ಲಿ ಎರಡನೇ ಮಗಳಾಗಿ ಜನಿಸಿದರು. ಆರ್ಯಬಾಲಿಕಾ ಶಾಲೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮಾಡುತ್ತಿದ್ದಂತೆ ಹತ್ತನೇ ವರ್ಷದಲ್ಲಿ ವಿವಾಹ ನಡೆಯಿತು. ಮದುವೆಯಾದ ಮೂರು ತಿಂಗಳಿಗೆ ವಿಧವೆಯಾದರು.

ವಿಧವೆಯಾದ ಕಲ್ಯಾಣಮ್ಮ ತಂದೆಯ ಸಹಾಯದಿಂದ ಸಾಹಿತ್ಯಾಸಕ್ತರಾಗಿ

೧. ವಿಚಯ – ಬಿ.ಎನ್ ಸುಮಿತ್ರಾಬಾಯಿ – ವಿಜಯಾ ಪ್ರಕಾಶನ – ಬೆಂಗಳೂರು – ೧೯೯೫ – ಪು. ೭೯

ಮೊದಲು ತಮಿಳಿನಿಂದ ಅನುವಾದದ ಕೃತಿಗಳನ್ನು ತಂದರು. ನಂತರ ಸ್ವಾನುಭವದ ಕಾದಂಬರಿಗಳನ್ನು ಬರೆದರು. 'ಪ್ರಿಯಂವದೆ'–'ಇಂದಿರೆ' (ನಿರ್ಭಾಗ್ಯವನಿತೆ) ಕಾದಂಬರಿಗಳಲ್ಲಿ ವಿಧವೆಯ ಗೋಳಿನ ವಸ್ತುವನ್ನೇ ಇಟ್ಟುಕೊಂಡು ಬರೆದರು. ಅವರ 'ಇಂದಿರೆ' ಕಾದಂಬರಿಯ ಮುನ್ನುಡಿಯಲ್ಲಿ ಹೀಗೆ ಬರೆಯುತ್ತಾರೆ.

> *"ಕನ್ಯೆಯರು ಏಳೆಂಟು ವರ್ಷಗಳೊಳಗೆ ವಿವಾಹಿತರಾಗುವುದು ವಿವಾಹವಾದ ಕೂಡಲೇ ವಿಧವೆಯಾದರೂ ಆಮರಣಪರ್ಯಂತವೂ ದುಃಖಿಸುವುದರಲ್ಲಿ ಮುಳುಗಿ ದಡವನ್ನು ಕಾಣದೆ ಪರಿತಪಿಸುವುದೂ ಭಾರತೀಯ ನಿರ್ಭಾಗ್ಯವಿತಂತುಗಳ ಶೋಚನೀಯವಾದ ದುಃಸ್ಥಿತಿಯಾಗಿದೆ. ಇವರಿಗೋಸ್ಕರ ಎಷ್ಟೋ ಶಾಲೆ ಕಲಾಶಾಲೆಗಳು, ವಿದ್ಯಾಭವನಗಳು ಸ್ಥಾಪಿಸಲ್ಪಟ್ಟಿದ್ದರೂ ನಾಗರಿಕತೆಯ ಬೆಳಕನ್ನು ಕಾಣದ ಅನೇಕ ಕಡೆಗಳಲ್ಲಿ ವಿಧವೆಯರು ಅನುಭವಿಸುತ್ತಿರುವ ದುರವಸ್ಥೆಯನ್ನು ನೋಡಿದ ಮಾತ್ರದಲ್ಲಿ ಎಂಥ ಕೆಚ್ಚೆದೆಯ ಕಟ್ಟಾಳುಗಳ ಹೃದಯವಾದರೂ ಕರಗಿ ನೀರಾಗದಿರದು__ ಅನೇಕ ಕಡೆಗಳಲ್ಲಿರುವ ವಿಧವೆಯರು ಯಾವಕಾರ್ಯಕ್ಕೂ ಅನರ್ಹರಾಗಿ ಸದಾ ಸರ್ವ ಕಾಲವೂ ಚಿಂತಾಬ್ಧಿಯಲ್ಲಿ ಮುಳುಗಿ ತಮ್ಮ ಜೀವನವು ಈ ಭೂಮಾತೆಗೊಂದು ಭಾರವಾಗಿರುವುದೆಂದು ಭಾವಿಸಿ ತಮ್ಮ ಮರಣಕಾಲಕ್ಕೆ ಮೃತ್ಯುದೇವತೆಗೆ ಸುಖಾಗಮನವನ್ನು ಕೊಡುತ್ತಾ ಇಂದು ಕಳೆಯಿತೇ ಬೆಳಗಾಯಿತೇ ರಾತ್ರಿಯಾಯಿತೇ ಎಂದು ದಿನವನ್ನು ಅತಿ ಕಷ್ಟದಿಂದ ಕಳೆಯುತ್ತಿರುವುದನ್ನು ನಮ್ಮಲ್ಲನೇಕರು ಪ್ರತ್ಯಕ್ಷವಾಗಿ ನೋಡಿರುವುದರಿಂದ ಹೃದಯವಿದ್ರಾವಕವಾದ ಈ ದೃಷ್ಯವನ್ನು ನಾನು ವರ್ಣಿಸಬೇಕಾಗಿಲ್ಲ. ಇತರರಿಂದ ಕಸಕ್ಕೂ ಕಡೆಯಾಗಿ ಭಾವಿಸಲ್ಪಡುತ್ತಿರುವುದನ್ನು ಅವರ ನಿಕೃಷ್ಟ ಸ್ಥಿತಿಯನ್ನು ವೀಕ್ಷಿಸಿದ ಯಾವ ಭಾರತೀಯ ಭ್ರಾತೃವಿನ ಹೃದಯವಾದರೂ ಕರಗಿ ನೀರಾಗದಿರದು. ತುಂಬಿದ ಮನೆಯಲ್ಲಿ ಅತ್ತರೆ ಮನೆ ಅಭಿವೃದ್ಧಿಯಾಗುವುದಿಲ್ಲವೆಂದು ಇದರಲ್ಲೂ ಆಕ್ಷೇಪಿಸುವವರಾದ್ದರಿಂದ ತಾನಿರುವ ಮನೆಯಲ್ಲಿ ಅಳುವುದಕ್ಕೂ ಕೂಡಸ್ವಾತಂತ್ರ್ಯವಿಲ್ಲದೆ ಪರಾಧೀನೆಯರಾಗಿ ದುಃಖವನ್ನು ನುಂಗಿಕೊಂಡು ಹೇಳಲಾರದೆ ಅನುಭವಿಸಲಾರದೆ ಮೂಗಜೀವಿಗಳಂತೆ ಕಾಲಕಳೆಯುತ್ತಿದ್ದಾರೆ."*[೧]

ಕಲ್ಯಾಣಮ್ಮನವರು ಹಿಂದೂ ವಿಧವೆಯರ ಬಗ್ಗೆ ಸ್ವಾನುಭವದಿಂದ ಬರೆದಿರುವುದು ಗಮನಾರ್ಹವಾಗಿದೆ. ವಿಧವೆಯಾಗಿ ತೌರಿನಲ್ಲಿ ನೆಲೆಸಿದ್ದ ಕಲ್ಯಾಣಮ್ಮ ಮನೆಕೆಲಸದೊಂದಿಗೆ ಓದುವ ಹವ್ಯಾಸವನ್ನು ಹಚ್ಚಿಕೊಂಡರು. ಇದರಿಂದ ಅವರ ಅಕ್ಕ ವಿಧವೆಯಾದ ಶಲ್ಲಮ್ಮನಿಗೆ ಇವರನ್ನು ಕಂಡರೆ ಸಿಡಿಮಿಡಿ. ಆದರೆ ತಮ್ಮಂತ ವಿಧವೆಯರಾದವರ ಗೋಳನ್ನು ಪರಿಹರಿಸುವುದಕ್ಕೆ ಸದಾ ಚಿಂತಾಮಗ್ನರಾದರು. ಆಗ ಪ್ರಸಿದ್ಧವಾಗಿದ್ದ 'ಸಾಧ್ವಿ' 'ಒಕ್ಕಲಿಗರ ಪತ್ರಿಕೆ', 'ನುಡಿಗನ್ನಡ', 'ವಿದ್ಯಾದಾಯಿನಿ',

---

೧. ಆರ್. ಕಲ್ಯಾಣಮ್ಮ – ಜೀವನ ಕಾರ್ಯ–ಹೆಚ್.ಎಸ್.ಪಾರ್ವತಿ–ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೨೦೦೮ ಪು. ೫

'ಕೊಡಗು', 'ಕಂಠೀರವ' ಮುಂತಾದ ಎಲ್ಲ ಪತ್ರಿಕೆಗಳಲ್ಲೂ ಕಲ್ಯಾಣಮ್ಮನವರ ಲೇಖನ ಸಣ್ಣಕಥೆಗಳು ಪ್ರಕಟವಾದವು. ಸಾಧ್ವಿ ಪತ್ರಿಕೆಯ ಸಂಪಾದಕರಾಗಿದ್ದ ತಾತಯ್ಯನೆಂದೇ ಪ್ರಸಿದ್ಧರಾಗಿದ್ದ ಎಂ.ವೆಂಕಟಕೃಷ್ಣಯ್ಯನವರು ಮೊಟ್ಟಮೊದಲು ಕಲ್ಯಾಣಮ್ಮನವರ ಬರಹಗಳನ್ನು ಪ್ರಕಟಿಸಿ ಪ್ರೋತ್ಸಾಹ ಕೊಟ್ಟರು. ಅನಂತರ ಮುದವೀಡು ಕೃಷ್ಣರಾಯರು, ಆಲೂರು ವೆಂಕಟರಾಯರು, ಕೆ.ಪಿ.ಪುಟ್ಟಪ್ಪನವರು, ಅಂದಿನ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಬಿ.ಎಂ. ಶ್ರೀಕಂಠಯ್ಯನವರು ಕಲ್ಯಾಣಮ್ಮನವರಿಗೆ ಉತ್ತೇಜನವಿತ್ತರು. ಇದರಿಂದ ಕಲ್ಯಾಣಮ್ಮನವರ ಸಾಹಿತ್ಯಾಸಕ್ತಿ ಚಿಗುರೊಡೆಯಿತು. ಆ ಕಾಲದ ಅಸಹಾಯ ಸ್ತ್ರೀಯರ ದುಸ್ಥಿತಿಯನ್ನು ಕಂಡು ಸುಮ್ಮನಿರುವುದು ಅವರ ಮನಸ್ಸಿಗೆ ಒಪ್ಪಲಿಲ್ಲ. ವಿಧವೆಯರಿಗೆ ಮರುವಿವಾಹ ಮಾಡಿಸುವ ಕ್ರಾಂತಿಕಾರಿ ನಿಲುವಿಗೆ ಬರುವುದು ಕಷ್ಟದ ಕಾಲವಾದ್ದರಿಂದ ಅವರನ್ನು ಆರ್ಥಿಕವಾಗಿ ಸ್ವತಂತ್ರರನ್ನಾಗಿಸಿ ಸ್ವಲ್ಪ ಮಟ್ಟಿನ ಸಮಸ್ಯೆ ಪರಿಹಾರ ಮಾಡುವುದರ ಕಡೆಗೆ ಗಮನ ಹರಿಸಲು ಮುಂದಾದರು. ಶಿಕ್ಷಣದ ಮಹತ್ವ ಅವರ ಮುಂದಿದ್ದು ಶಾಲೆಯನ್ನು ಪ್ರಾರಂಭಿಸಲು ಯೋಚಿಸಿದರು. ೧೯೧೩ರಲ್ಲಿ 'ಶ್ರೀ ಶಾರದಾ ಸ್ತ್ರೀ ಸಮಾಜ'ವನ್ನು ಪ್ರಾರಂಭಿಸಿದರು. ೧೯೨೬ರವರೆಗೆ ಕಾರ್ಯದರ್ಶಿಯಾಗಿ ದುಡಿದು ಅಲ್ಲಿಂದ ಹೊರಬಂದು ಪತ್ರಿಕೆಯನ್ನು ನಡೆಸಿದರು. ಆ ಕಾಲದಲ್ಲಿ ಪತ್ರಿಕೆಯನ್ನು ನಡೆಸುವುದು ಬಹಳದೊಡ್ಡ ಸಾಹಸವಾಗಿತ್ತು. ಆದರೂ 'ಸರಸ್ವತಿ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿ ಜನಜಾಗೃತಿಯನ್ನು ಮೂಡಿಸಿದರು. 'ಮಕ್ಕಳ ಕೂಟ' ಎಂಬ ಸಂಸ್ಥೆಯನ್ನು ಹುಟ್ಟುಹಾಕಿ ಮಕ್ಕಳ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಿದರು. ಮಕ್ಕಳಿಗಾಗಿ ಅನೇಕ ಪುಸ್ತಕಗಳನ್ನು ಪ್ರಕಟಿಸಿದರು.

ಕಲ್ಯಾಣಮ್ಮನವರು ಕಾದಂಬರಿ ಸಣ್ಣಕಥೆಗಳು, ಲೇಖನಗಳು, ನಾಟಕಗಳು, ಮಕ್ಕಳ ಸಾಹಿತ್ಯ ಮುಂತಾಗಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅವರು 'ಪ್ರಿಯಂವದೇ' 'ನಿರ್ಭಾಗ್ಯವನಿತೆ' (ಇಂದಿರೆ) 'ಸುಖಲತೆ' 'ಭಕ್ತೆಮೀರಾ' 'ಮಾಧವಿ' 'ನಿರ್ಮಲಾ' 'ಸತೀಪದ್ಮಿನಿ', 'ನೀರದಾ' ಹಾಗೂ 'ರಣಕೇಸರಿ', 'ಷಹಜಹಾನ್' ಮುಂತಾದ ಸಾಮಾಜಿಕ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ್ದಾರೆ. 'ಸುಖಲತೆ' ಕಾದಂಬರಿಯಲ್ಲಿ ಜ್ಯೋತಿಪುರದ ರಾಜಾ ಅಮರಸಿಂಹ ತನ್ನ ಇಳಿವಯಸ್ಸಿನಲ್ಲಿ ಎರಡನೆಯ ಮದುವೆಯಾಗಿ ಹೆಂಡತಿಯ ಮಾತಿನಂತೆ ಕುಣಿಯುವುದನ್ನು ಹೀಗೆ ಬರೆಯುತ್ತಾರೆ.

> *"ವಿಷಯಾಸಕ್ತರಾದ ವೃದ್ಧರು ಪುನರ್ವಿವಾಹವಾಗುವುದೂ, ಇದರಿಂದ ಸಪತ್ನೀ, ಸುಪುತ್ರೀ ಮಾತ್ಸರ್ಯವು ಹೆಚ್ಚಾಗಿ ತಾನಿದರ ಕಾರಣವನ್ನು ಅರಿತಿದ್ದರೂ ಪತ್ನಿಯ ಕಡೆಗೂ ಮಾತನಾಡಲಾರದೆ, ಪುತ್ರಿಯ ಕಡೆಗೂ ಮಾತನಾಡಲಾರದೆ ಧರ್ಮಸಂಕಟದಲ್ಲಿ ಸಿಕ್ಕಿಬಿದ್ದು ಒದ್ದಾಡುವ ವ್ಯಕ್ತಿಗಳನ್ನೆಷ್ಟೋ ನಾವೀಗಲೂ ನೋಡಬಹುದು."*[೧]

---

೧. ಆರ್. ಕಲ್ಯಾಣಮ್ಮ – ಜೀವನ ಕಾರ್ಯ–ಹೆಚ್.ಎಸ್.ಪಾರ್ವತಿ–ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು –೨೦೦೧ ಪು. ೬

ಎಂದು ಪ್ರತಿಕ್ರಿಯಿಸುತ್ತಾರೆ. ಸ್ತ್ರೀಯರಿಗೆ ಅವರು ಕೊಟ್ಟ ಉಪದೇಶ ಹೀಗಿದೆ, *"ಸ್ತ್ರೀಜನ್ಮವು ತುಚ್ಛವಾದುದೆಂಬ ಭಾವನೆಯ ಆರ್ಯಾವರ್ತದ ರಮಣಿಯರ ಹೃದಯದಲ್ಲಿ ಬೇರೂರುತ್ತ ಬಂದಂತೆಲ್ಲಾ ನಾವು ಪುರುಷರ ಮೋಹವಸ್ತುವಾಗಿ, ಕ್ರೀಡಾವಸ್ತುವಾಗಿ, ನಮ್ಮ ಧೈರ್ಯ-ಸ್ಥೈರ್ಯ ತೇಜಸ್ಸನ್ನು ಕಳೆದುಕೊಂಡು ಅಬಲಾನಾಮವನ್ನು ಸಾರ್ಥಕ ಮಾಡಿಕೊಳ್ಳುವೆವು"* ಎನ್ನುತ್ತಾ ಸ್ತ್ರೀಯರ ಸ್ವಾತಂತ್ರ್ಯ ಹರಣವಾಗುವುದನ್ನು ಸ್ತ್ರೀಯನ್ನು ಎರಡನೇ ದರ್ಜೆಯವಳೆಂದು ಕೀಳಾಗಿ ಕಾಣುವುದನ್ನು ವಿರೋಧಿಸುತ್ತಾರೆ. 'ಸರಸ್ವತಿ' ಪತ್ರಿಕೆಯ ಸಂಪಾದಕೀಯದಲ್ಲಿ ಸುಮಾರು ಐದುನೂರಕ್ಕಿಂತ ಹೆಚ್ಚು ಲೇಖನಗಳನ್ನು ಬರೆದು ಜನಜಾಗೃತಿಯನ್ನು ಮೂಡಿಸುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ.

ಕಲ್ಯಾಣಮ್ಮನವರಿಗೆ ಗೌರವ ಪುರಸ್ಕಾರಗಳೂ ಆಗಿನ ಮೈಸೂರು ಸರ್ಕಾರದಿಂದ ಲಭಿಸಿದ್ದವು. ೧೯೩೩ರಲ್ಲಿ ಗೌರವ ನ್ಯಾಯಾಧೀಶೆಯಾದರು. ೧೯೬೦ರಲ್ಲಿ ಕಾಂಗ್ರೆಸ್ ಸ್ಮರಣ ಸಂಚಿಕೆಯ ಸಲಹಾ ಸಮಿತಿಯ ಸದಸ್ಯರಾದರು. ೧೯೩೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಮೊದಲ ಮಹಿಳಾ ಸದಸ್ಯೆಯಾಗಿ ಆರಿಸಲ್ಪಟ್ಟರು. ಮಾದರಿವಿದ್ಯಾ ಶಾಲೆಗೆ ಅಧ್ಯಕ್ಷೆಯಾಗಿದ್ದರು. ಇವರಿಗೆ ಸಮಾಜದಿಂದ ಪುರಸ್ಕಾರಗಳು ಸಂದಿವೆ. ೧೯೩೮ರಲ್ಲಿ ಕೃಷ್ಣರಾಜ ಒಡೆಯರ್ ಪ್ರಥಮ ವರ್ಗದ ಸಾರ್ವಜನಿಕ ಸುವರ್ಣ ಪದಕವನ್ನಿತ್ತು ಗೌರವಿಸಿದ್ದರು. ಮಕ್ಕಳ ಮತ್ತು ಮಹಿಳೆಯರ ವಿದ್ಯಾಭ್ಯಾಸಕ್ಕಾಗಿ ದುಡಿದ ಇವರಿಗೆ 'ವಿದ್ಯಾವಿನೋದಿನಿ' ಎಂಬ ಬಿರುದನ್ನು ಕೊಟ್ಟು ಗೌರವಿಸಿದರು. ಇಷ್ಟೆಲ್ಲಾ ಗೌರವ, ಪ್ರಶಸ್ತಿಗಳಿಗೆ ಪಾತ್ರರಾದ ಕಲ್ಯಾಣಮ್ಮನವರು ಸಮಾಜದ ಟೀಕೆಯನ್ನು ಸಹಿಸಬೇಕಾಯಿತು. ಆದರೆ ಸಂಪ್ರದಾಯವಾದಿಗಳ ಮಧ್ಯೆ ವಿಚಾರವಾದಿಯಾಗಿ ಅದರಲ್ಲೂ ಮಹಿಳೆಯಾಗಿ ಮಾಡಿರುವ ಕೆಲಸ ಸ್ಮರಣೀಯವಾದುದು.

ಆರ್.ಕಲ್ಯಾಣಮ್ಮನವರ 'ಜೀವನ-ಕಾರ್ಯ'ವನ್ನು ಅವರ ಕಾರ್ಯಸಾಧನೆಯೊಂದಿಗೆ ಅವರ ಆಂತರ್ಯದ ಭಾವನೆಗಳನ್ನು ಅರ್ಥೈಸಿಕೊಳ್ಳಬಹುದಾಗಿದೆ. ಆಂತರ್ಯದಲ್ಲಿ ವೈಚಾರಿಕತೆಯನ್ನಿಟ್ಟುಕೊಂಡು ಬಹಿರಂಗದಲ್ಲಿ ಸಂಪ್ರದಾಯವಾದಿಗಳಂತೆ ಬದುಕ ಬೇಕಾದ ಅನಿವಾರ್ಯತೆ ಆ ಕಾಲದಲ್ಲಿತ್ತು. ಕಲ್ಯಾಣಮ್ಮನವರು ಪ್ರಕಾಶಕಿಯಾಗಿ ಪತ್ರಕರ್ತೆಯಾಗಿ ಲೇಖಕಿಯಾಗಿ ತಿರುಮಲಾಂಬಾರವರ ಮಾರ್ಗವನ್ನೇ ಅನುಸರಿಸಿದರು. ನಾಗರಿಕ ಬದುಕಿನ ವಿಶಾಲ ಸಂಪರ್ಕಗಳಿಂದ ಅವರ ಅನುಭವ ವಿಸ್ತಾರ ಪಡೆದಿತ್ತು. ವೈಚಾರಿಕತೆಯ ನೆಲೆಯಲ್ಲಿ ತಿರುಮಲಾಂಬಾ ಅವರಿಗಿಂತ ಹೆಚ್ಚು ಸ್ಪಷ್ಟವಾದ ನಿಲುವು ಕಲ್ಯಾಣಮ್ಮನವರದೆಂದು ಅವರ ಕೃತಿಗಳು, ಲೇಖನಗಳು ಸ್ಪಷ್ಟಪಡಿಸುತ್ತವೆ.

*"ಹೆಂಗಸರು ಪರಪುಟ್ಟಗಳಾಗಿ, ಪೂರ್ತಿಯಾಗಿ ಗಂಡಸರನ್ನು ಅವಲಂಬಿಸಿ, ಆಲಸ್ಯ, ಸೋಮಾರಿತನದಿಂದ ಬದುಕುವುದು, ಶೃಂಗಾರ, ವಿಲಾಸ, ಒಡವೆ ವಸ್ತ್ರಗಳಷ್ಟೇ*

*ಮುಖ್ಯವೆಂದು ನಂಬಿ ತಮ್ಮನ್ನು ತಾವೇ ಭೋಗವಸ್ತುಗಳಾಗಿರುವಂತೆ ಮಾಡಿಕೊಳ್ಳುವುದರ ವಿರುದ್ಧ ಅವರು ತೀವ್ರವಾಗಿ ಟೀಕಿಸುತ್ತಿದ್ದರು*"[1]

ಸಾಮಾಜಿಕ ಕಾರ್ಯಕ್ಕೆ ತಮ್ಮನ್ನು ಪೂರ್ಣವಾಗಿ ಒಪ್ಪಿಸಿಕೊಂಡ ಕಲ್ಯಾಣಮ್ಮ 'ಸರಸ್ವತಿ' ಪತ್ರಿಕೆಯಲ್ಲಿ ಸೃಜನಶೀಲ ಲೇಖಕಿಯಾಗಿ ಹೊರಹೊಮ್ಮುತ್ತಾರೆ. ಬಾಲ್ಯವಿವಾಹ, ವಿಧವೆಯರ ಯಾತನೆಗಳನ್ನು ಚಿತ್ರಿಸುವುದರೊಂದಿಗೆ ಯುವ ಜನತೆ ಪಾಶ್ಚಾತ್ಯ ಸಂಸ್ಕೃತಿಯನ್ನು ಆದರಿಸುವುದನ್ನು ವಿರೋಧಿಸುತ್ತಾರೆ. ಬಿಡುವಿಲ್ಲದ ಸಾಮಾಜಿಕ ಚಟುವಟಿಕೆಗಳೊಂದಿಗೆ ಸಾಹಿತ್ಯದಲ್ಲಿ ಬದಲಾಗುತ್ತಿದ್ದ ಸ್ವರೂಪವನ್ನು ಗಮನಿಸಿದ್ದಾರೆ. ಸಾಂಸಾರಿಕ ಚೌಕಟ್ಟಿನಲ್ಲಿ ಸ್ತ್ರೀಪುರುಷರ ನಡುವೆ ಉಂಟಾಗುವ ಭಿನ್ನಾಭಿಪ್ರಾಯಗಳನ್ನು ವಿಶ್ಲೇಷಿಸುತ್ತಾರೆ. ದಾಂಪತ್ಯದ ಕೋಟೆಯೇ ಹೆಣ್ಣಿಗೆ ಭದ್ರತೆಯ ನೆಲೆ ಎನ್ನುವುದನ್ನೂ ಅವರ ಕೃತಿಗಳು ತೋರಿಸುವ ಪ್ರಯತ್ನ ಮಾಡುತ್ತವೆ. ಅವರ 'ಸರಸ್ವತಿ' ಸಂಚಿಕೆಯು ಅನೇಕ ಹೊಸ ಬರಹಗಾರರನ್ನು ಹುಟ್ಟುಹಾಕಲು ಕಾರಣವಾಗುತ್ತದೆ.

'ವಿಧವಾವಿವಾಹ'ದ ಕುರಿತಂತೆ ಸುಧಾರಣೆಗಳು ಜರುಗಿದ ಮಹತ್ವದ ಸಂದರ್ಭದಲ್ಲಿ ಕಲ್ಯಾಣಮ್ಮ ಅವರು ಪ್ರತಿಪಾದಿಸುವ ವಿಧವಾಮೌಲ್ಯಗಳು ಅವರ ಕಾಲದ ಕ್ರಾಂತಿಕಾರಿ ನಿಲುವುಗಳಾಗಿ ಕಾಣುತ್ತವೆ. ಬದುಕನ್ನು ಪರಿಪೂರ್ಣವಾಗಿ ಸ್ವೀಕರಿಸಿದ ಲೇಖಕಿಯ ಸಹಜ ತೊಳಲಾಟವೆಂಬಂತೆ ಚಿತ್ರಣಗೊಂಡ ಅವರ ಕೃತಿಗಳು ಅಧ್ಯಯನಕ್ಕೆ ತೆರೆದುಕೊಳ್ಳುತ್ತವೆ. ಅವರ 'ನಿರ್ಭಾಗ್ಯ ವನಿತೆ' ಕಾದಂಬರಿ 'ವಿಧವಾ ವಿವಾಹ'ವನ್ನು ಕುರಿತು ದೀರ್ಘವಾಗಿ ವಿವೇಚಿಸುವ ಕೃತಿ. ಬಾಲ್ಯವಿವಾಹಕ್ಕೆ ವಿರೋಧವಿದ್ದ ಸಂದರ್ಭದಲ್ಲಿ ಸತೀಶನ ಮಗ ವಿದ್ಯಾವಂತ ಯುವಕ ಶಚೀಂದ್ರ ತನ್ನ ತಂಗಿ ಇಂದಿರೆಯನ್ನು ಬಾಲ್ಯವಿವಾಹವಾಗದಂತೆ ತಡೆಯುವಲ್ಲಿ ವಿಫಲನಾಗುತ್ತಾನೆ. ಮಗಳನ್ನು ಅನಾರೋಗ್ಯದಿಂದ ನರಳುವ ನಾರಾಯಣನಿಗೆ ಕೊಟ್ಟು ಮದುವೆ ಮಾಡುವ ಮನಸ್ಸಿಲ್ಲದಿದ್ದರೂ ತಾಯಿಯ ಮಾತಿಗೆ ಒಪ್ಪಿ ನಾರಾಯಣನ ಶ್ರೀಮಂತಿಕೆಯನ್ನು ಗಮನಿಸಿ ಇಂದಿರೆಯನ್ನು ನಾರಾಯಣನಿಗೆ ಮದುವೆ ಮಾಡಿಸುತ್ತಾರೆ. ಬಾಲ್ಯವಿವಾಹಕ್ಕೊಳಗಾದ ಇಂದಿರೆ ಅನಾರೋಗ್ಯದಿಂದ ನರಳುತ್ತಿದ್ದ ನಾರಾಯಣನ ಮರಣದಿಂದ ಬಾಲವಿಧವೆಯಾಗುತ್ತಾಳೆ. ಇಂದಿರೆಯ ಬಾಳು ಕಷ್ಟ ಪರಂಪರೆಯಲ್ಲಿ ಸಿಲುಕಿಕೊಳ್ಳುತ್ತದೆ. ವಿದ್ಯಾವಂತರಾದ ತಂದೆ, ಅಣ್ಣ ಭಾವಂದಿರು ಅವಳ ವೈಧವ್ಯದ ಕುರಿತು ಚಿಂತಿತರಾಗುತ್ತಾರೆ. ಇಂದಿರೆಯ ವೈಧವ್ಯದ ದುಃಖದಲ್ಲಿಯೆ ಅವಳ ತಾಯಿ ಮರಣಹೊಂದುತ್ತಾಳೆ. ತಂದೆ ವಿಧುರನಾಗುವುದು ಮಗಳು ವಿಧವೆಯಾಗುವುದು. ಈ ಎರಡೂ ಚಿತ್ರಣಗಳು ಏಕಕಾಲದಲ್ಲಿ ಕಾದಂಬರಿಯಲ್ಲಿ ಚಿತ್ರಣಗೊಳ್ಳುತ್ತವೆ. ತಂದೆ ಸತೀಶ ಹೆಂಡತಿಯ ಮರಣದ ನಂತರ ಶ್ರಾದ್ಧಕ್ರಿಯೆ ಮುಗಿಯುತ್ತಿದ್ದಂತೆ ಮದುವೆಯಾಗಲು ನಿಶ್ಚಯಿಸುತ್ತಾನೆ. ನಲವತ್ತೈದು ವರ್ಷದ ತಂದೆ

೧. (ಉದ್ಧೃತ) ವಿಚಯ– ಬಿ.ಎನ್.ಸುಮಿತ್ರಾಬಾಯಿ– ವಿಜಯಾ ಪ್ರಕಾಶನ – ಬೆಂಗಳೂರು –೧೯೯೫ – ಪು. ೮೧

ಹದಿನಾಲ್ಕು ವರ್ಷದ ಹೆಣ್ಣನ್ನು ಹೆಂಡತಿಯಾಗಿ ಪಡೆಯುವುದು ಮಗ ಶಚೀಂದ್ರನಿಗೆ ಸಮ್ಮತವೆನಿಸುವುದಿಲ್ಲ. ತಂದೆಯ ಪುನರ್ವಿವಾಹ, ತಂಗಿಯು ಬಾಲ್ಯವಿವಾಹವಾಗಿ ಬಾಲವಿಧವೆಯಾಗಿರುವ ವಿಚಾರ ಅವನನ್ನು ಚಿಂತಿಸುವಂತೆ ಮಾಡುತ್ತವೆ.

> *"ಪುರುಷನನ್ನೇ ಸ್ಪರ್ಶಿಸಿ ಅರಿಯದ ಕೇವಲ ಬಾಲೆಯರಾದ ಅಬಲೆಯರು ಪತಿವಿಯೋಗ ಹೊಂದಿದರೆ ಮತ್ತೊಬ್ಬನನ್ನು ವರಿಸಕೂಡದಂತೆ. ಜೀವಿತ ಕಾಲವನ್ನೆಲ್ಲಾ ಚಿಂತಿಸಿ ಕಂಡಕಂಡವರಿಂದ ತಿರಸ್ಕರಿಸಲ್ಪಟ್ಟು ಕಾಲವನ್ನು ಕಳೆಯಬೇಕಂತೆ ಏತಕ್ಕಾಗಿ ಹೀಗಿರಬೇಕು? ಸ್ವಾರ್ಥವನುದ್ದೇಶಿಸಿ ಮತಿಹೀನತೆಯಿಂದಲೂ ಪರವಿಶ್ವಾಸದಿಂದಲೂ ಯಾವುದನ್ನೂ ಲಕ್ಷ್ಯಮಾಡದೆ ಪುರುಷನ ದೇಹಸೌಖ್ಯವನ್ನೂ ಸ್ತ್ರೀಯ ಸಮ್ಮತವನ್ನೂ ಲೆಕ್ಕಿಸದೆ ಮಾರಿಗೆ ಬಲಿಕೊಡಲು ಕನ್ಯೆಯನ್ನರ್ಪಿಸುವಂತೆ ಎಲ್ಲರ ತೃಪ್ತಿಗಾಗಿ ಅಬಲೆಯರನ್ನು ಗುರಿಮಾಡಿ ನಾಲ್ಕು ದಿನಗಳು ಸ್ವಪ್ನದಂತೆಯೂ ಹುಡುಗರ ಬೊಂಬೆಯಾಟದಂತೆಯೂ ಪುಷ್ಪಹಾರಗಳನ್ನು ಧರಿಸಿಕೊಂಡು ಸಭಾಮಧ್ಯದಲ್ಲಿ ಕುಳಿತಿದ್ದಕ್ಕೆ ಈ ಶಿಕ್ಷೆಯಂತೆ ಮತ್ತು ತನ್ನ ಯೌವನ ಕಾಲದಲ್ಲಿ ವಿವಾಹಿತವಾಗಿ ಸುಖವನ್ನನುಭವಿಸಿ ಮಕ್ಕಳನ್ನು ಪಡೆದು ಇರತಕ್ಕ ಪುರುಷನೋರ್ವನು ತನ್ನ ವಯೋಧಿಕ ಕಾಲದಲ್ಲಿ ವಿಧುರನಾದರೆ ಅವನು ಮಾತ್ರ ಬಾಲಪ್ರಾಯದ ಕನ್ಯೆಯನ್ನು ವರಿಸಬಹುದಂತೆ? ಏನನ್ಯಾಯ? ವೃದ್ಧಕಾಲದ ಆದರಣೆಗೋಸ್ಕರ ವಿವಾಹವಾಗುವ ಪುರುಷರು ಜೀವಿತ ಕಾಲವೆಲ್ಲ ಆದರವಿಲ್ಲದೆ ತಪಿಸುತ್ತಿರುವ ಅಬಲೆಯರ ವಿಷಯವನ್ನು ಏತಕ್ಕೆ ಯೋಚಿಸಕೂಡದು? ಈ ವಿಧಿಯನ್ನು ಸಹಿಸುವವರಾರು? ಎಲ್ಲಾ ವಿಧಿಯ ವಿಚಿತ್ರ. ಎಂದು ಪ್ರಲಾಪಿಸುವನು"[1]*

ಶಚೀಂದ್ರನು ತನ್ನ ತಂದೆಯ ಮರುವಿವಾಹವನ್ನು ತಡೆದರೂ ನಡೆದು ಹೋಗುತ್ತದೆ. ನಲವತ್ತೈದು ವರ್ಷದ ವಿಧುರ ಹದಿನಾಲ್ಕು ವರ್ಷದ ಕನ್ಯೆಯನ್ನು ವಿವಾಹವಾಗುವುದು ಆ ಕಾಲಕ್ಕೆ ಸಾಮಾನ್ಯವಾದ ಸಂಗತಿ. ಮದುವೆಯಾಗುವ ವಿಧುರರೂ ಅವಿವಾಹಿತ ಕನ್ಯೆಯರನ್ನೆ ಮದುವೆಯಾಗುತ್ತಿದ್ದರು. ಆದರೆ ವಿಧವೆಗೆ ಮರುವಿವಾಹ ಅಸಾಧ್ಯವಾದ ಮಾತಾಗಿತ್ತು. ಪುರುಷಕೇಂದ್ರಿತ ಧಾರ್ಮಿಕ ನಿಯಮಗಳು, ಪುರುಷರಿಗೆ ಪೂರಕವಾಗಿದ್ದವು. ಅದರಲ್ಲಿ ಮಹಿಳೆ ತನಗೆ ಸಿಗಬೇಕಾದ ನ್ಯಾಯಿಕ ಹಕ್ಕುಗಳಿಗಾಗಿ ಹೋರಾಟಕ್ಕಿಳಿಯಬೇಕಾಗಿತ್ತು. ಧರ್ಮದ ಬುನಾದಿಯಲ್ಲಿ ನಿಂತ ಪುರುಷ ಕೇಂದ್ರಿತ ಸಮಾಜದ ಬೇರನ್ನು ಅಲುಗಾಡಿಸುವುದನ್ನೆ ಆ ಕಾಲದ ಲೇಖಕಿಯರ ಕೃತಿಗಳಿಂದ ವಿಶ್ಲೇಷಿಸಬಹುದು. ಇಂದಿರೆಯನ್ನು ವಿವಾಹವಾಗಲು ಮುಂದೆ ಬರುವ ಆಕೆಯ ಸೋದರ ಸಂಬಂಧಿ ವಿಧುರ ಸುಂದರೇಶನಿಗೆ ಧರ್ಮ ಸಮ್ಮತಿಯನ್ನು ಪಡೆಯುವುದು ತೊಡಕಾಗಿರುವುದನ್ನು ಕಾದಂಬರಿ ತೆರೆದಿಡುತ್ತದೆ. ಸುಂದರೇಶ ಹಾಗೂ ಶಚೀಂದ್ರ

---

೧. ಕಲ್ಯಾಣ ಸರಸ್ವತಿ–(ಸಂ)– ಬಿ.ಎನ್.ಸುಮಿತ್ರಾಬಾಯಿ–ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು–೧೯೯೨ ಪು. ೨೦೯

ಇಂದಿರೆಯ ಪುನರ್ವಿವಾಹಕ್ಕೆ ಧರ್ಮಸಮ್ಮತಿಯನ್ನು ಪಡೆಯಲು ಸಾಧ್ಯವಾಗದೆ ನಿರಾಶರಾಗುತ್ತಾರೆ.

ಕೊನೆಗೂ ಇಂದಿರೆ ಹಾಗೂ ಸುಂದರೇಶ 'ಮರುವಿವಾಹ'ದ ಒಪ್ಪಿಗೆಯನ್ನು ಸಮಾಜದಿಂದ ಪಡೆಯುವಲ್ಲಿ ವಿಫಲರಾಗುತ್ತಾರೆ, ಕಲ್ಕತ್ತೆಯ ಬ್ರಹ್ಮಸಮಾಜವನ್ನು ಸೇರಿ ವಿವಾಹವಾಗುತ್ತಾರೆ. 'ಪುನರ್ವಿವಾಹ' ಕಾದಂಬರಿಯ ನೆಲೆಯಲ್ಲಿ ಸಮಸ್ಯೆಯ ಪರಿಹಾರವಾಗಿದ್ದು ಹೆಣ್ಣು ಗಂಡಿನ ಪ್ರೀತಿಗೆ ಹೊಂದಾಣಿಕೆಗೆ ವಿವಾಹದ ಮಾರ್ಗವೇ ಮುಖ್ಯವಾಗಿರುವುದನ್ನು ಗಮನಿಸಬಹುದು.

> *"ಗಂಡು ಹೆಣ್ಣಿನ ಸಂಬಂಧಗಳಲ್ಲಿ ವಿವಾಹದಿಂದಾಗಿ ನೈಸರ್ಗಿಕ ನ್ಯಾಯ ದೊರಕಿಸಿಕೊಳ್ಳುವುದು ಭಾರತೀಯ ಸಮಾಜದಲ್ಲಿ ಅನಿವಾರ್ಯ. ಹೀಗಿರುವಲ್ಲಿ ಅಂತಹ ವಿವಾಹ ಸಂಸ್ಥೆಯೇ ಶೋಷಣೆಯ ಮೂಲರೂಪದಲ್ಲಿದ್ದು ಅದನ್ನು ಹೇಗೆ ಬೇಕೆಂದರೆ ಹಾಗೆ ಬದಲಾಯಿಸುವುದು ಅಸಾಧ್ಯ. ಇದಕ್ಕೆ ಮುಖ್ಯ ಕಾರಣ ಭಾರತೀಯ ಸಮಾಜದಲ್ಲಿ ಮೇಲ್ಜಾತಿಗಳಲ್ಲಿ 'ಧರ್ಮ'ವನ್ನು ಹೆಚ್ಚು ಕಟ್ಟುನಿಟ್ಟಾಗಿ ಪಾಲಿಸಬೇಕೆಂಬ ಅಪೇಕ್ಷೆ ಇರುವುದು. ಧಾರ್ಮಿಕ ಪಂಥೀಯ ಸ್ವಂತಿಕೆಯನ್ನು ಜಾತೀಯ ಸ್ವರೂಪದ ಅಡಿಯಲ್ಲಿ ನೋಡಲಾಗುತ್ತಿದ್ದುದರಿಂದ ಜಾತಿಯೊಂದರ ಲಕ್ಷಣ ಮೂಲಭೂತವಾಗಿ 'ವಿವಾಹನಿಯಮ'ಗಳನ್ನು ಪರಿಗಣನೆಗೆ ತೆಗೆದುಕೊಳ್ಳುತ್ತದೆ. ವಿವಾಹದ ನಿಯಮಗಳಿಗೆ ಸಂಬಂಧಿಸಿದ ಪೂರ್ಣರೂಪದ ವಿವರಗಳು ತಿರುಮಲಾಂಬಾ ಮತ್ತು ಆರ್, ಕಲ್ಯಾಣಮ್ಮನವರ ಕೃತಿಗಳಲ್ಲಿ ಕಾಣಿಸಿಕೊಳ್ಳುವ ಬಗೆ ಜಾತಿಯ ಸ್ವರೂಪದ ನೆಲೆಯಿಂದಲೂ ಮುಖ್ಯವಾಗುತ್ತದೆ"*[೧]

ವಿವಾಹದ ನೆಲೆಯಲ್ಲಿ ಬದುಕು ಕಟ್ಟಿಕೊಳ್ಳಬೇಕಾದ ಅನಿವಾರ್ಯತೆ ಆ ಕಾಲದ ಎಲ್ಲಾ ಮಹಿಳೆಯರ ಮೇಲಿತ್ತು. ಆದರೆ ವಿಧವೆ ವಿವಾಹವಾಗುವುದರಿಂದ ವಂಚಿತಳಾಗಿದ್ದು ಪುರುಷ ಕೇಂದ್ರಿತ ಸಮಾಜದ ನಿಯಂತ್ರಣದಲ್ಲಿ ಪುರುಷನ ಅಪೇಕ್ಷೆಯಂತೆ ಬದುಕಬೇಕಾಗಿತ್ತು. ವಿಧವೆಯಾಗುತ್ತಿದ್ದಂತೆ ಅವಳನ್ನು ಸುತ್ತಿಕೊಂಡ ವಿಧವಾ ಮೌಲ್ಯಗಳನ್ನು ಮೀರುವ ಸಾಧ್ಯತೆಗಳಿಲ್ಲದೆ ಪುರುಷ ಸಮಾಜದ ಅಲಿಖಿತ ಶಾಸನಗಳು ಹೇರಲ್ಪಡುತ್ತಿದ್ದವು. ಇದನ್ನು ಮೀರುವ ವಿಧವೆ ಅನೇಕ ಸಮಸ್ಯೆಗಳಿಗೆ ಸಿಲುಕುತ್ತಿದ್ದುದು ಸಾಮಾನ್ಯವಾದ ವಿಚಾರಗಳಾಗಿದ್ದವು. ಸಾಕಷ್ಟು ಸ್ವಾತಂತ್ರ್ಯವನ್ನು ತಂದುಕೊಡಬಲ್ಲ 'ಮರುವಿವಾಹ' ಮಹಿಳೆಗೆ ನಿಷಿದ್ದವಾಗಿದ್ದ ಕಾಲಘಟ್ಟದಲ್ಲಿ ಕಲ್ಯಾಣಮ್ಮನವರು ತಮ್ಮ ಕೃತಿಗಳಲ್ಲಿ ವಿಧವೆಯರನ್ನು ಅವರ ಸಮಸ್ಯೆಗಳನ್ನು ಪ್ರತಿನಿಧಿಸಿದ್ದಾರೆ. ಆ ಕಾಲದ ಧಾರ್ಮಿಕ ನಿಯಮಗಳ ಕಠೋರ ನೀತಿಯನ್ನು ತೆರೆದಿಡುತ್ತಾರೆ. ಕಾಲಕಾಲಕ್ಕೆ ಬದಲಾಗಿ ಅನುಷ್ಠಾನಕ್ಕೆ ಬಂದ ವೇದಶಾಸ್ತ್ರಗಳು, ಶೃತಿಸ್ಮೃತಿಗಳು ವಿಧವಾ ವಿವಾಹಕ್ಕೆ ಅಡ್ಡಿಮಾಡದಿರುವುದನ್ನು ತಮ್ಮ ಕೃತಿಯಲ್ಲಿ ಚರ್ಚಿಸುತ್ತಾರೆ. ಸುಂದರೇಶನು ವಿಧವಾ

---

೧. ಮಹಿಳೆ–ಅಸ್ತಿತ್ವದ ಸಂಕಥನ–ಕವಿತಾರೈ–ಸಿ.ವಿ.ಜಿ ಪ್ರಕಾಶನ ಬೆಂಗಳೂರು – ೨೦೦೫ ಪು. ೧೧೯–೧೨೦

ವಿವಾಹದ ಅನುಷ್ಠಾನದ ಬಗ್ಗೆ ಪಂಡಿತರೊಂದಿಗೆ ಸಮಾಲೋಚಿಸಿ ದೇಶದ ವಿವಿಧ ಊರುಗಳಲ್ಲಿ ಉಪನ್ಯಾಸ ಮಾಡಿ ಜನರ ಅಭಿಪ್ರಾಯ ಪಡೆಯಲು ಮುಂದಾಗುವುದನ್ನು ಕಾದಂಬರಿ ಚಿತ್ರಿಸುತ್ತದೆ. ಸುಂದರೇಶನು ಉಪನ್ಯಾಸದಲ್ಲಿ 'ವಿಧವಾವಿವಾಹ'ವನ್ನು ಹೀಗೆ ವಿಶ್ಲೇಷಿಸುತ್ತಾನೆ.

> *"ವಿಧವಾ ವಿವಾಹವನ್ನು ನಡೆಸಲು ವೇದಶಾಸ್ತ್ರಗಳೂ ಶೃತಿ ಸ್ಮೃತಿಗಳೂ ಅಡ್ಡಿಮಾಡಲಿಲ್ಲ. ಮಾಡಬಹುದೆಂದು ಅನುಮತಿ ಇತ್ತಿರುವುವು. ಆದರೂ ಸಹಗಮನವು ಅತಿಶ್ರೇಷ್ಠವಾಗಿ ಭಾವಿಸಲ್ಪಟ್ಟಿದ್ದರಿಂದ ವಿಧವಾ ವಿವಾಹವನ್ನು ಅನೇಕರು ಅನುಷ್ಠಾನಕ್ಕೆ ತರಲಿಲ್ಲ. ಆದರೂ ವಿಧವಾ ವಿವಾಹವು ಅನುಷ್ಠಾನದಲ್ಲಿದ್ದಿತೆನ್ನುವುದಕ್ಕೆ ಅನೇಕ ಆಧಾರಗಳಿರುವುವು"*[೧]

ವಿಧವಾವಿವಾಹ ಅನುಷ್ಠಾನಗೊಳ್ಳಲು ಇರುವ ತೊಡಕನ್ನು ವಿವರಿಸುತ್ತಾನೆ. ಸಹಗಮನವನ್ನು ಸರ್ಕಾರದವರ ನಿಬಂಧನೆಯಿಂದ ವಿರೋಧಿಸಿದ್ದರಿಂದ ಧಾರುಣ ಸ್ಥಿತಿ ತಲುಪಿದ ಬಾಲವಿಧವೆಯರ ಪುನರ್ವಿವಾಹದ ಅನಿವಾರ್ಯತೆಯನ್ನು ವಿವರಿಸುತ್ತಾನೆ. 'ವಿಧವಾ ವಿವಾಹ'ವನ್ನು ಕಾಲದೇಶ ವರ್ತಮಾನಗಳಿಗನುಸಾರವಾಗಿ ಬದಲಾಯಿಸಬಹುದಾದ ಅಧಿಕಾರವಿದ್ದಾಗ್ಯೂ ಜನರು ಮುಂದಾಗದಿರುವುದರ ಬಗ್ಗೆ ಅಸಮಾಧಾನವನ್ನು ಕೃತಿ ವ್ಯಕ್ತಪಡಿಸುತ್ತದೆ. 'ಸಹಗಮನ ಪದ್ಧತಿ' ಮತ್ತು ೧೨ ವರ್ಷದೊಳಗಿನ ಕನ್ಯೆಯರಿಗೆ ನಿಷೇಕಪ್ರಸ್ತ ನಿಷೇಧವನ್ನು ಜಾರಿಗೆ ತಂದ ಸರ್ಕಾರ 'ಪುನರ್ವಿವಾಹ' ಜಾರಿಗೆ ತರಲು ಅಸಾಧ್ಯವಾದುದರ ಬಗ್ಗೆ ಪ್ರಶ್ನೆಯನ್ನೆತ್ತುತ್ತಾನೆ. ವಿಧವಾ ವಿವಾಹ ಜಾರಿಗೆ ತರುವಲ್ಲಿ ವಿಳಂಬವಾಗುವುದನ್ನು ಸಹಿಸದೆ ಸಮ್ಮತಿ ಸೂಚಿಸುವುದು ಅಗತ್ಯ ಎನ್ನುವಂತೆ ಒತ್ತಿ ಹೇಳುತ್ತಾನೆ. ವಿಧವಾ ವಿವಾಹದ ಸಮ್ಮತಿಗಾಗಿ ದೀರ್ಘಕಾಲದ ಪ್ರಯತ್ನದ ನಂತರ ಕಲ್ಕತ್ತೆಯ ಬ್ರಹ್ಮಸಮಾಜವನ್ನು ಸೇರಿ ಅವರ ಮತವನ್ನಂಗೀಕರಿಸಿ ವಿಧವೆ ಇಂದಿರೆಯನ್ನು ವಿವಾಹವಾಗುವ ಸುಂದರೇಶ ಗಟ್ಟಿ ನಿರ್ಧಾರವನ್ನು ಕೈಗೊಳ್ಳುತ್ತಾನೆ.

ನಿರ್ಭಾಗ್ಯಳಾದ ಇಂದಿರೆಗೆ ಬದುಕು ನೀಡಿದ ಸುಂದರೇಶನು ಇಂದಿರೆಯ ಸಹಕಾರದೊಂದಿಗೆ ಹಲವಾರು ಬಾಲವಿಧವೆಯರಿಗೆ ವಿವಾಹ ಮಾಡಿಸಿ ಪೂಜನೀಯ ಸ್ಥಾನವನ್ನು ಪಡೆದರು ಎಂದು ಕಾದಂಬರಿ ವಿಧವಾವಿವಾಹದ ಸಾರ್ಥಕ್ಯವನ್ನು ಮನಗಾಣಿಸುತ್ತದೆ. ಬಾಲವಿಧವೆಯರನ್ನು ನಿರ್ಲಕ್ಷದಿಂದ ದಯನೀಯ ಸ್ಥಿತಿಗೆ ತಳ್ಳುವ ಆ ಕಾಲದ ಸಾಮಾಜಿಕ ಸ್ಥಿತಿಯನ್ನು ಕಾದಂಬರಿ ವಿಶ್ಲೇಷಿಸುತ್ತದೆ. ಬಾಲವಿಧವೆಯರ ಗೋಳಿನ ಕಥೆಗೆ ಸ್ಪಂದಿಸದ ವ್ಯವಸ್ಥೆ ವಿಧವೆಯರ ತಾಯಂದಿರನ್ನು ಬಲಿತೆಗೆದುಕೊಂಡಿರುವ ನಿದರ್ಶನಗಳನ್ನು ಕಾದಂಬರಿ ತೆರೆದಿಡುತ್ತದೆ. ಕಾದಂಬರಿಯ ಉಪಸಂಹಾರದಲ್ಲಿ ಅವರು ವಿಧವೆಯ ಬಗ್ಗೆ ತಮಗಿರುವ ಕಳಕಳಿಯನ್ನು

೧. ಕಲ್ಯಾಣ ಸರಸ್ವತಿ-(ಸಂ)- ಬಿ.ಎನ್.ಸುಮಿತ್ರಾಬಾಯಿ-ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು-೧೯೯೨ ಪು. ೧೪೧

ವ್ಯಕ್ತಪಡಿಸುತ್ತಾರೆ. ಆದಷ್ಟು ಶೀಘ್ರವೇ ಈ ಶೋಚನೀಯ ಸ್ಥಿತಿಯಿಂದ ಹೊರಬರುವಂತಾಗಲಿ ಎಂದು ಆಶಿಸುತ್ತಾರೆ. ಸಾಮಾಜಿಕ ಪದ್ಧತಿಗಳೂ. ಜಾತಿ ಪದ್ಧತಿಗಳೂ, ಪೂರ್ವಾಚಾರಗಳೂ ಈ ವಿಷಯಕ್ಕೆ ಪ್ರತಿಕೂಲವಾಗಿರುವುದರಿಂದ ಸುಧಾರಣೆಗೆ ತೊಡಕಾಗಿರುವುದನ್ನು ವಿಶ್ಲೇಷಿಸುತ್ತಾರೆ. ಸಾಮಾಜಿಕ ಅನಿಷ್ಟ ಪದ್ಧತಿಗಳಲ್ಲಿ ಆಗಿರುವ ಸುಧಾರಣೆಗಳ ಹಿನ್ನೆಲೆಯಲ್ಲಿ ಅವಲೋಕಿಸುವಾಗ ವಿಧವೆಯರ ವಿಚಾರದಲ್ಲಿ ಹಿನ್ನಡೆಯುಂಟಾಗಿರುವುದರ ಬಗ್ಗೆ ಅಸಮಾದಾನವನ್ನು ವ್ಯಕ್ತಪಡಿಸುತ್ತಾರೆ. ಮಂದಗತಿಯಲ್ಲಾದರೂ ವಿಧವೆಯರ ಬಾಳಿನಲ್ಲಿ ಬದಲಾವಣೆಗಳಾಗುವ ಸಾಧ್ಯತೆಯನ್ನು ಅವರ ಕೃತಿ ಬಿಂಬಿಸುತ್ತದೆ. ಅವರೇ ಹೇಳುವಂತೆ

> *"ಈಚೀಚೆಗೆ ಅಲ್ಲಲ್ಲಿ ಕೆಲವು ಪುಣ್ಯಮೂರ್ತಿಗಳು ಅವತರಿಸಿ ಇವರನ್ನುದ್ಧರಿಸಲು ಕಂಕಣಬದ್ಧರಾಗಿರುವರೆನ್ನುವುದು ವಿಧವೆಯರ ಪುಣ್ಯವೆಂತಲೇ ಹೇಳಬೇಕು. ಈ ಬಾಲವಿಧವೆಯರ ಕಷ್ಟವು ಲೆಕ್ಕಿಸಲಸಾಧ್ಯವಾಗಿದ್ದರೂ ಶೀಘ್ರದಲ್ಲಿಯೇ ವಿಮೋಚನೆಯಾಗುವುದೆಂದು ನಂಬಬಹುದಾಗಿದೆ"*[೧]

ಬೊಂಬಾಯಿ ಮದರಾಸು ಅಧಿಪತಿಗಳಲ್ಲಿ ಹಾಗೂ ಪಂಜಾಬ್ ಮುಂತಾದ ಕಡೆಗಳಲ್ಲಿ ವಿಧವೆಯರ ಕಷ್ಟನಿಷ್ಟುರಗಳು ಅರ್ಥವಾಗುತ್ತಿದ್ದು ಹಿಂದಿನಷ್ಟು ವಿರೋಧಗಳಾಗಿಲ್ಲ ಎನ್ನುವ ವಿಚಾರವನ್ನು ಉಲ್ಲೇಖಿಸುತ್ತಾರೆ. ಪ್ಲೇಗ್ ಮತ್ತು ಯುದ್ಧಗಳು ಅವತರಿಸಿ ವಿಧವೆಯರ ಸಂಖ್ಯೆಯನ್ನು ಹೆಚ್ಚಿಸುತ್ತಿರುವುದರ ಕುರಿತು ಆತಂಕ ವ್ಯಕ್ತಪಡಿಸುತ್ತಾ ಸಮಕಾಲೀನ ಸಮಾಜದ ಸಮಸ್ಯೆಗೆ ತೀವ್ರವಾಗಿ ಪ್ರತಿಕ್ರಿಯಿಸುತ್ತಾರೆ. ಪ್ರತಿಯೊಂದು ಮನೆಯಲ್ಲೂ ಕನಿಷ್ಟ ಪಕ್ಷ ಇಬ್ಬರು ಮೂವರು ವಿಧವೆಯರಿರುವುದನ್ನು ಪ್ರಸ್ಥಾಪಿಸುತ್ತ ಅವರ ಉದ್ಧಾರಕ್ಕಾಗಿ ಸರ್ವರೂ ಪ್ರಯತ್ನಿಸುವಂತೆ ತಮ್ಮ ಕೃತಿಯಲ್ಲಿ ಮನವಿ ಮಾಡುವುದು ಗಮನಾರ್ಹವಾದ ಅಂಶ.

'ನಿರ್ಭಾಗ್ಯವನಿತೆ'ಯಲ್ಲಿ ಕಲ್ಯಾಣಮ್ಮನವರು ಅಭಿವ್ಯಕ್ತಿಪಡಿಸಿರುವ ವೈಧವ್ಯದ ಸಮಸ್ಯೆ ಆ ಕಾಲಘಟ್ಟ ತನ್ನೊಳಗೆ ಹುದುಗಿಸಿಟ್ಟುಕೊಂಡ ಅತ್ಯಂತ ಕ್ರೂರವಾದ ಸಮಸ್ಯೆಯಾಗಿದೆ. ಅದರ ಪೂರ್ವಾಪರಗಳನ್ನು ಅತ್ಯಂತ ನಾಜೂಕಾಗಿ ಎಳೆಎಳೆಯಾಗಿ ತೆರೆದಿಡುವಲ್ಲಿ ಈ ಕಾದಂಬರಿ ಯಶಸ್ವಿಯಾಗುತ್ತದೆ. ೧೯೦೦ರ ದಶಕದಲ್ಲಿ ಸ್ವತಃ ಬಾಲವಿಧವೆಯಾಗಿ ವೈಧವ್ಯದ ಆಚರಣೆ, ವಿಧವೆಯರ ಬಗ್ಗೆ ಇರುವ ಅನಾದರ, ಅಗೌರವಗಳು ಹೇಯವಾದವು ಎಂದು ಬಿಂಬಿಸುತ್ತಾರೆ. ವಿಧವೆಯ ಅಂತರಾಳದ ನೋವಿಗೆ ಧ್ವನಿಯಾಗಿದ್ದಾರೆ. ವಿಧವಾ ಸಮಸ್ಯೆಗಳನ್ನು ಬಿಡಿಸುವ ಪ್ರಯತ್ನ ಸರ್ವರಿಂದಲೂ ನಡೆಯಬೇಕು. ಇದರಿಂದ ಸಾಮಾಜಿಕ ಪ್ರಗತಿ ಸಾಧ್ಯ ಎನ್ನುವ ಗಟ್ಟಿ ನಿರ್ಧಾರದ ಮಾತುಗಳು ಅವರ ಕೃತಿಯಲ್ಲಿ ಹೊಮ್ಮಿವೆ. 'ವಿಧವಾ ವಿವಾಹ'ಕ್ಕೆ ಅಡ್ಡಿಯಾದ ಶಾಸ್ತ್ರ ಸಂಪ್ರದಾಯಗಳನ್ನು ದೂರವಿಟ್ಟು ಮಾನವೀಯ ನೆಲೆಯಲ್ಲಿ

---

೧. ವಿಚಯ – ನಿರ್ಭಾಗ್ಯವನಿತೆ (ಸಂ) ಬಿ.ಎನ್.ಸುಮಿತ್ರಾಬಾಯಿ – ಲೇಖಕಿಯರ ಸಂಘ–ಬೆಂಗಳೂರು–೧೯೯೨– ಪು. ೩೪೬

ನೆರವೇರುವುದು ಕಾದಂಬರಿ ಹೊಮ್ಮಿಸುವ ಹೊಸ ಎಚ್ಚರದ ನಿಲುವು ಎಂದು ಭಾವಿಸಬಹುದು. ಹೀಗೆ ಸಾಹಿತ್ಯ ಕೃತಿಗಳ ಮೂಲಕ ಮಹಿಳಾ ಸುಧಾರಣೆಯ ವ್ರತವನ್ನು ಕೈಗೊಂಡ ಕಲ್ಯಾಣಮ್ಮ ರಾಜಕೀಯ, ಪತ್ರಿಕೋದ್ಯಮ, ಸಾರ್ವಜನಿಕ ಸೇವೆಗಳೆಲ್ಲದರಲ್ಲೂ ಮಹಿಳೆಯರು ಸಮರ್ಥವಾಗಿ ಕರ್ತವ್ಯ ನಿರ್ವಹಿಸಬಲ್ಲರು ಎನ್ನುವುದನ್ನು ನೂರುವರ್ಷಗಳ ಹಿಂದೆಯೇ ತೋರಿಸಿಕೊಟ್ಟಿದ್ದಾರೆ. ಮಹಿಳಾ ವಿಧ್ಯಾಭ್ಯಾಸದ ಸಾರ್ಥಕತೆಯನ್ನು ತಮ್ಮ ಸೃಜನಶೀಲ ಸಾಹಿತ್ಯದ ಮೂಲಕ ಅಭಿವ್ಯಕ್ತ ಪಡಿಸಿದ್ದಾರೆ.

**೪. ವಿಧವಾ ಮೌಲ್ಯಾಚರಣೆ**

ವ್ಯಕ್ತಿಗತ ಬದುಕಿನ ಯಾತನೆಗಳನ್ನು ಮೀರುತ್ತಲೇ ಸಮಾಜಕ್ಕೆ ತಮ್ಮನ್ನು ಉಪಯುಕ್ತವಾಗುವಂತೆ ರೂಪಿಸಿಕೊಂಡಿರುವ ತಿರುಮಲಾಂಬಾ, ಕಲ್ಯಾಣಮ್ಮನವರಂತೆ ಸರಸ್ವತಿಬಾಯಿರಾಜವಾಡೆಯವರೂ ವಿಶಿಷ್ಟರಾಗುತ್ತಾರೆ. ಮಹಿಳೆಯರಿಗಾಗಿ ಮೀಸಲಾಗಿದ್ದ 'ಸುಪ್ರಭಾತ' ಪತ್ರಿಕೆಯನ್ನು ನಡೆಸುತ್ತಿದ್ದ ಗಿರಿಬಾಲೆಯವರು ಸಣ್ಣಕಥೆಗಳ ಮೂಲಕ ತಮ್ಮ ಸೃಜನಶೀಲತೆಯನ್ನು ಪ್ರಕಟಿಸಿದರು. ಇವರು ತಿರುಮಲಾಂಬಾ ಕಲ್ಯಾಣಮ್ಮನವರ ನಂತರದವರಾಗಿದ್ದುದರಿಂದ ಸ್ತ್ರೀ ಶಿಕ್ಷಣದ ಕಡೆಗೆ ಹೆಚ್ಚು ಗಮನ ಹರಿಸಬೇಕಾದ ಸಂದರ್ಭವಿರಲಿಲ್ಲ. ಇವರಿಗೆ ಹೆಚ್ಚಿನ ಓದಿನಿಂದಾಗಿ ಬದುಕಿನ ಅನುಭವಗಳು ವಿಸ್ತಾರಗೊಂಡಿದ್ದವು.

ವರದಕ್ಷಿಣೆ ವಿಧವಾ ವಿವಾಹಗಳಂತ ವಸ್ತುಗಳನ್ನು ಕಲ್ಯಾಣಮ್ಮ ನಿರ್ವಹಿಸುವುದಕ್ಕಿಂತ ಹೆಚ್ಚು ಸೂಕ್ಷ್ಮವಾಗಿ ಇವರು ನಿರ್ವಹಿಸಲು ಸಾಧ್ಯವಾಗಿದ್ದರೆ. ಅದು ಕಾಲಗತಿಯ ಜೊತೆ ಸ್ತ್ರೀಯರ ಸಂವೇದನಾಶೀಲತೆಯೂ ಹೆಚ್ಚು ಸೂಕ್ಷ್ಮವಾಗುತ್ತಿದುದರ ಕುರುಹಾಗಿದೆ. ಇವರು ಬದುಕನ್ನು ಮಾನವ ಸಂಬಂಧಗಳನ್ನು ತೀರ ಕಪ್ಪು ಬಿಳುಪಿನ ಘಟಕಗಳಾಗಿ ನೋಡಲು ಒಲ್ಲದವರು. ತಮ್ಮ ಬರಹದ ಸೊಬಗನ್ನು ಅನುಭವಿಸಿ ಓದಬಲ್ಲ ಓದುಗರ ವೃಂದ ಕೂಡ ಇವರಿಗೆ ಪತ್ರಿಕೆಗಳಿಂದ ಒದಗಿತ್ತು. ಸಾಮಾಜಿಕ ಅನ್ಯಾಯಗಳಿಂದ ಇವರು ನೊಂದರೂ ವಿಮರ್ಶಾತ್ಮಕ ಒಳನೋಟ, ವಾಸ್ತವತೆಯ ಅರಿವಿನಿಂದ ತಮ್ಮ ನೋವಿಗೆ, ಮಿಡಿತಕ್ಕೆ ಕಲಾತ್ಮಕ- ಅಭಿವ್ಯಕ್ತಿ ನೀಡುವ ಸೃಜನಾತ್ಮಕ ಶಿಸ್ತು ಇವರಿಗಿತ್ತು. ಸಾಹಿತ್ಯ ಜನಜೀವನದ ಪ್ರತಿಬಿಂಬ ಅದು ಜನರ ಪ್ರಗತಿಗೆ ಪ್ರೇರಣೆಯಾಗಬೇಕು ಎನ್ನುವುದು ಗಿರಿಬಾಲೆಯರ ದೋರಣೆ. ಕ್ರೌರ್ಯ, ಹಿಂಸೆ ಶ್ರೀಮಂತರಲ್ಲಿ ಮನೆಮಾಡಿದ್ದು ಅಶಕ್ತರು ಇದರಿಂದ ನರಳುವುದಕ್ಕೆ ತಮ್ಮ ಕೃತಿಗಳಲ್ಲಿ ತೀವ್ರ ವಿರೋಧ ವ್ಯಕ್ತಪಡಿಸುತ್ತಾರೆ. ಇವರ ಕಥೆಗಳಲ್ಲಿ ವ್ಯಕ್ತಿಗಳ ಆಯ್ಕೆಗಳ ಸರಿ ತಪ್ಪುಗಳ ವಿವೇಚನೆಗಿಂತ ಸಾಮಾಜಿಕ ವಿಮರ್ಶೆ ಮುಖ್ಯವಾಗಿರುವುದನ್ನು ಗಮನಿಸಬಹುದು. ಅವರ 'ಅವಳ ಉದ್ಧಾರ' ಕಥೆಯಲ್ಲಿ

ಪತಿತೆಯೊಬ್ಬಳು ವ್ಯವಸ್ಥೆಯ ಕಪಿಮುಷ್ಟಿಯಲ್ಲಿ ಸಿಲುಕಿ ಹೊರಬರಲಾರದೆ ಬದುಕು ದುರ್ಭರವಾಗುವುದನ್ನು ಚಿತ್ರಿಸುತ್ತಾರೆ. ಇಲ್ಲಿ ಅನಾಥಾಶ್ರಮಗಳು ಹೆಣ್ಣಿನ ರಕ್ಷಣೆಯ ಸಂಸ್ಥೆಗಳಲ್ಲ. ವೇಶ್ಯಾವಾಟಿಕೆಗಳಂತೆ ಶೋಷಕ ಸಂಸ್ಥೆಗಳಾಗಿರುವುದನ್ನು ಚಿತ್ರಿಸುತ್ತಾರೆ. ವಯಕ್ತಿಕ ಆಯ್ಕೆಗಿಂತ ಸಮಾಜ ಇಂತಹ ಹೆಣ್ಣುಮಕ್ಕಳನ್ನು ಕ್ರೂರವಾಗಿ ಆಶ್ರಮ, ವೇಶ್ಯಾವಾಟಿಕೆಗಳಿಗೆ ದೂಡುವ ಅಮಾನವೀಯತೆಯನ್ನು ಬಯಲುಮಾಡುತ್ತಾರೆ.

೧೯೧೩ರಲ್ಲಿ ಉಡುಪಿಯ ಬಳಿ ಇರುವ ಪಣಜಾಲ ಎಂಬ ಸಣ್ಣಹಳ್ಳಿಯಲ್ಲಿ ಗಿರಿಬಾಲೆಯವರ ಜನನವಾಯಿತು. ತೀರಾ ಬಡಕುಟುಂಬದವರಾದ ತಂದೆ ನಾರಾಯಣರಾವ್ ಶಿವಳ್ಳಿ, ತಾಯಿ ಕಮಲಾಬಾಯಿ ಮಹಾರಾಷ್ಟ್ರದಿಂದ ವಲಸೆ ಬಂದ ಕರಾಡಿ ಬ್ರಾಹ್ಮಣರು. ಮಗುವಿನ ಜನನವಾಗುವ ಮೊದಲೇ ತಂದೆ ನಾರಾಯಣರಾವ್ ಮನೆಬಿಟ್ಟು ಹೋಗುತ್ತಾರೆ. ಮಗುವಿನೊಂದಿಗೆ ಕಡುಬಡತನ ಅನುಭವಿಸುತ್ತಿದ್ದ ತಾಯಿ 'ತಂದೆಯನ್ನು ತಿಂದಮಾರಿ' ಎಂದು ಬೈಯ್ಯುವುದು ಸಾಮಾನ್ಯವಾಗಿತ್ತು. ಕಷ್ಟಪಟ್ಟು ಸ್ಲೇಟು ಬಳಪ ಪಡೆದು ಶಾಲೆಗೆ ನಡೆದ ಸರಸ್ವತಿಗೆ ಅಧ್ಯಾಪಕರ ಪ್ರೋತ್ಸಾಹ ಸಿಗುತ್ತದೆ. "ದೇವರು ಭಕ್ತರ ಮೊರೆ ಕೇಳುತ್ತಾನೆ" ಎನ್ನುವ ಕಥೆಕೇಳುವ ಸರಸ್ವತಿಗೆ ದೇವರಲ್ಲಿ ತನ್ನ ಬಡತನ ನಿವಾರಣೆಗಾಗಿ ಮೊರೆಯಿಡುವ ಮನಸ್ಸಾಗುತ್ತದೆ. ಹಾಗಾಗಿ ದೇವರಿಗೆ ಒಂದು ಪತ್ರ ಬರೆದು "ಓ ದೇವರೆ ನನಗೆ ತುಂಬಾ ಕಷ್ಟವಾಗಿದೆ, ನಾನು ತುಂಬಾ ಓದಬೇಕು, ನನಗೆ ಸ್ಲೇಟು ಬಳಪಕೊಳ್ಳಲೂ ಹಣವಿಲ್ಲ. ನನಗೆ ತುಂಬಾ ಹಣಕೊಡು, ಕಲೆಕ್ಟರ್ ಗಂಡನನ್ನು ಕೊಡು" ಎಂದು ಬೇಡಿಕೊಳ್ಳುತ್ತಾರೆ. ಕೊನೆಗೂ "ತನ್ನ ಮೊರೆಕೇಳಿ ತುಂಬಾ ಹಣವಿದ್ದ ಗಂಡನನ್ನು ಕರುಣಿಸಿದ" ಎಂದು ಭಾವುಕರಾಗಿ ಸ್ಮರಿಸುತ್ತಿದ್ದರು.

ಇವರ ಮೊರೆಗೆ ದೇವರು ಒಲಿದನೇನೋ ಎನ್ನುವಂತೆ ಕಲೆಕ್ಟರ್ ಪತಿಯನ್ನು ಪಡೆದರು ಆದರೆ ತಂದೆಯ ವಯಸ್ಸಿನ ರಾಜವಾಡೆಯವರು ವಿವಾಹವಾಗಿ ಸರಸ್ವತಿಯನ್ನು ಸಿಂಗಪುರಕ್ಕೆ ಕರೆದೊಯ್ಯುತ್ತಾರೆ. ಓದುವ ಹಂಬಲ ವಿಪರೀತವಾಗಿದ್ದ ಸರಸ್ವತಿಯವರಿಗೆ ಮನೆಯಲ್ಲೇ ಪಾಠಹೇಳಿಸಿದ್ದರಿಂದ ಎಸ್.ಎಸ್.ಎಲ್.ಸಿ ಪರೀಕ್ಷೆ ಕಟ್ಟಲು ಅವಕಾಶವಾಯಿತು. ಎಸ್.ಎಸ್.ಎಲ್.ಸಿಯಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿ ಹಿಂದಿಯಲ್ಲಿ ರಾಷ್ಟ್ರಭಾಷಾ ವಿಶಾರದ ಪರೀಕ್ಷೆ ಮುಗಿಸಿದರು. ಜೊತೆಗೆ ಬರವಣಿಗೆಯನ್ನು ಮುಂದುವರಿಸಿದರು. ಸರಸ್ವತಿ, ಗಿರಿಬಾಲೆ, ವಿಶಾಖ, ವೀಣಾಪಾಣಿ ಮುಂತಾದ ಹೆಸರುಗಳಿಂದ ಇವರು ಬರೆಯ ತೊಡಗಿದರು. 'ಗಿರಿಬಾಲೆ' ಎಂಬ ಕಾವ್ಯನಾಮದಿಂದ ಅವರ ಕೃತಿಗಳು ಹೆಚ್ಚು ಪ್ರಸಿದ್ಧಿಗೆ ಬಂದವು. ೧೯೩೮ರಲ್ಲಿ ಸಿಂಗಪುರದಿಂದ ಬೆಂಗಳೂರಿಗೆ ಬಂದರು. ೧೯೪೧ರಲ್ಲಿ ಪತಿ ನಿಧನರಾದರು. ಒಂಟಿ ಜೀವನವನ್ನು ತಮ್ಮ ಸಾಹಿತ್ಯ ರಚನೆಗೆ ತೊಡಗಿಸಿಕೊಂಡರು. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಬರೆಯತೊಡಗಿದರು.

'ಕಥಾವಳಿ' ಮಾಸಪತ್ರಿಕೆಯನ್ನು 'ಸುಪ್ರಭಾತ' ಎಂಬ ಇನ್ನೊಂದು ಮಾಸಪತ್ರಿಕೆಯನ್ನು ಮಹಿಳೆಯರಿಗಾಗಿಯೇ ಆರಂಭಿಸಿದರು. ಕಿರುಕಾದಂಬರಿಗಳನ್ನು ಸಣ್ಣಕಥೆಗಳನ್ನು ನಾಟಕಗಳನ್ನು ರಚಿಸಿರುವ ರಾಜವಾಡೆಯವರು ಭಕ್ತಿಗೀತೆಗಳನ್ನು ರಚಿಸಿದ್ದಾರೆ.

ದೈವಭಕ್ತೆಯಾದ ಗಿರಿಬಾಲೆ ಉಡುಪಿಯಲ್ಲಿ ನೆಲೆಸಿ ಶ್ರೀ ಶಾರದಾಂಬ ದೇವಾಲಯವನ್ನು ಕಟ್ಟಿಸಿ ಅಲ್ಲೇ ತಮ್ಮ ಬಾಳನ್ನು ಸವೆಸಿದ್ದಾರೆ. ಇವರು ೬೫ ಕಥೆಗಳನ್ನು ಪ್ರಕಟಿಸಿ ಸಾಮಾಜಿಕ ಸಮಸ್ಯೆಗಳನ್ನು ವಿಶ್ಲೇಷಿಸಿದ್ದಾರೆ. ಮುಖ್ಯವಾಗಿ 'ವಿಧವಾ ಸಮಸ್ಯೆ', 'ವರದಕ್ಷಿಣೆ" ವಿಧವಾ ಪುನರ್‌ವಿವಾಹ' 'ವೇಶ್ಯಾಸಮಸ್ಯೆ', ಜಾತಿಬೇಧ ನೀತಿಯನ್ನು ತಮ್ಮ ಕೃತಿಗಳಲ್ಲಿ ಚರ್ಚಿಸುತ್ತಾರೆ. 'ಅವಳ ಉದ್ಧಾರ' ಕೃತಿ ವಿಧವಾ ಸಮಸ್ಯೆಯ ತೀವ್ರತೆಯನ್ನು ಮನಮುಟ್ಟುವಂತೆ ಚಿತ್ರಿಸುತ್ತದೆ. ಪತಿತೆಯೊಬ್ಬಳು ವಿಧವಾಶ್ರಮದ ಮುಂದೆ ನಿಂತಾಗ

*"ಭಗಿನಿ ಸಂಕೋಚ ಪಡಬೇಡ, ಬಾ ಒಳಗೆ ಬಾ, ನಿನ್ನ ಮನೆಯೇ ಎಂದು ತಿಳಿ. ಸಮಾಜರೂಪಿ ಕರಾಳ ರಾಕ್ಷಸನಿಂದ ನಿಮ್ಮಂಥರವರನ್ನು ರಕ್ಷಿಸಲೆಂದೇ ಈ ಆಶ್ರಮದ ಸ್ಥಾಪನೆಯಾಗಿರುತ್ತದೆ."*[೧]

ಪ್ರೀತಿಯಿಂದ ಬರಮಾಡಿಕೊಳ್ಳುವ ವಿಧವಾಶ್ರಮ ಪತಿತೆಯ ಪಾಲಿಗೆ ಆಶಾದಾಯಕವಾಗಿದೆ. ಅದಕ್ಕಾಗಿ

*"ಪತಿತೆಯ ಕಣ್ಣುಗಳಲ್ಲಿ ನೀರು ತುಂಬಿತು. ಅಹ ! ತನ್ನದಲ್ಲದ-ತನ್ನೊಂದು ಸಣ್ಣ ಅಪರಾಧಕ್ಕಾಗಿ ಮನೆಯಿಂದಲೇ ಹೊರದೂಡಿ ಬೀದಿಯ ಭಿಕಾರಿಣಿಯನ್ನಾಗಿ ಮಾಡಿದ ತನ್ನವರೆಲ್ಲಿ ! ಸಹೋದರ ವಾಂಛೆಯಿಂದ ಅನಾಥಳಾದ ತನ್ನನ್ನು ಬರಮಾಡಿಕೊಳ್ಳುತ್ತಿರುವ ಈ ಮಹಾತ್ಮರೆಲ್ಲಿ !"*[೨]

ಪ್ರೀತಿಯಿಂದ ಬರಮಾಡಿಕೊಂಡ ವಿಧವಾ ಶ್ರಮದವರು ಒಡಲಲ್ಲಿ ಬಚ್ಚಿಟ್ಟುಕೊಂಡ ವ್ಯಾವಹಾರಿಕ ಬುದ್ಧಿಯನ್ನು ಅರ್ಥಮಾಡಿಕೊಳ್ಳುವ ಪ್ರಬುದ್ಧತೆ ಪತಿತೆಗೆ ಇರಲಿಲ್ಲ. ಪ್ರಾಮಾಣಿಕವಾಗಿ ನಂಬಿದವಳಿಗೆ ಮೋಸಮಾಡುವ ವಿಧವಾಶ್ರಮ ಐದು ಸಾವಿರಕ್ಕೆ ಮಾರಾಟ ಮಾಡುವುದು ಅಮಾನವೀಯವಾಗಿ ಕಾಣುತ್ತದೆ. ಇಂತಹ ವ್ಯವಹಾರದ ನೀತಿಯನ್ನು ತಮ್ಮ ಕೃತಿಯಲ್ಲಿ ಬಯಲುಮಾಡುತ್ತಾರೆ.

ತನ್ನ ಭಾವನಿಂದಾಗಿ ಏಳು ತಿಂಗಳ ಗರ್ಭಿಣಿಯಾಗಿ ವಿಧವಾಶ್ರಮದ ಆಶ್ರಯ ಪಡೆದರೆ ಆಕೆಯ ಮಗುವನ್ನು ಹೆಚ್ಚಿನ ಹಣದ ಆಸೆಗಾಗಿ ಆಶ್ರಮದಲ್ಲೇ ಇರಿಸಿಕೊಂಡು ತಾಯಿಮಗುವನ್ನು ಬೇರೆಮಾಡುವುದು ಅಮಾನವೀಯವಾಗಿದೆ. ಮಗುವನ್ನು ಕೇಳುವ ಪತಿತೆಗೆ

*"ಎಲ್ಲಿಯ ಮಗು ತಾಯಿ ? ಅದು ಅನೀತಿಯ ಸಾಕ್ಷಿ ಒಬ್ಬ ಕಾಮುಕನ ವಾಸನಾ ಪಿಂಡ ! ಅದು ಆಶ್ರಮದಲ್ಲೇ ಉಳಿಯಲಿ ! ಅನಾಥ ಬಾಲಕರೊಂದಿಗೆ ಬೆಳೆದು*

---

೧. ಗಿರಿಬಾಲೆ- ಸಾಹಿತ್ಯ ವಾಚಿಕೆ - ಶ್ರೀವಳ್ಳಿ ಟಿ.ಎಸ್. - ಕರ್ನಾಟಕ ಸಾಹಿತ್ಯ ಅಕಾಡೆಮಿ- ಬೆಂಗಳೂರು - ೧೯೯೪ ಪು. ೧೦೬.

೨. ಅದೇ ಪು - ಪು. ೧೦೬.

*ಕಲಾಶಾಲೆಯಲ್ಲಿ ಕಲಿತು ಪ್ರಸಿದ್ಧಿಗೆ ಬರಲಿ. ಅದನ್ನು ನೀನು ಹೆತ್ತಿರುವೆಯೆಂದು ಯಾರಲ್ಲೂ ಪ್ರಸ್ತಾಪಿಸಬೇಡ ನಿನ್ನ ಜೀವನದಲ್ಲಿ ಅದೊಂದು ಅಜ್ಞಾತ ಸಂಭವವಾಗಿರಲಿ."*[೧]

ಎಂದು ಆರೋಪಿಸುವ ವಿಧವಾಶ್ರಮ ಮಹಿಳೆಯ ಬದುಕಿನ ಮಟ್ಟವನ್ನು ನಿರ್ಧರಿಸುವಲ್ಲಿ ಅವಳ ವೈವಾಹಿಕ ಬಂಧನವನ್ನು ನಿರೀಕ್ಷಿಸುತ್ತದೆ. ಬಾಲವಿಧವೆಯಾದವಳ ಹೊರೆಯಾದ ಬದುಕು ಈ ಕೃತಿಯಲ್ಲಿ ತೆರೆದುಕೊಳ್ಳುತ್ತದೆ.

ಶ್ರೀಮಂತನ ತೆಕ್ಕೆಗೆ ಬಿದ್ದ ಪತಿತೆಯನ್ನು ಅವನೇ ಟೀಕಿಸುವುದು ಸಮಾಜದ ಕ್ರೌರ್ಯಕ್ಕೆ ಪುರುಷ ಪ್ರಧಾನ ವ್ಯವಸ್ಥೆಯ ಧೋರಣೆಗೆ ಹಿಡಿದ ಕನ್ನಡಿ. ಪತಿತೆಯನ್ನು 'ಗೊಡ್ಡು' ಎಂದು ದೂರುವ ಶ್ರೀಮಂತನನ್ನು ವಿರೋಧಿಸುವ ಮನೋಭಾವ ಬಹಳ ಧೈರ್ಯದ್ದು. ತನಗೆ ಮಗುವಿರುವ ಸುದ್ದಿಯನ್ನು ಹೇಳುತ್ತಿದ್ದಂತೆ ಶ್ರೀಮಂತನಿಂದ ಮತ್ತೆ ಬೀದಿಗೆ ಬೀಳುವ ಸ್ಥಿತಿ ಕೃತಿಯಲ್ಲಿ ಸಾಮಾಜಿಕ ಕ್ರೌರ್ಯವನ್ನು ತೆರೆದಿಡುತ್ತದೆ. ಮತ್ತೆ ಮೆಹಬೂಬಿಯ ಮನೆ ಸೇರುವ ಪತಿತೆಗೆ ವಿಧವಾಶ್ರಮ ತೋರಿದ ದಾರಿ ಕ್ರಮಿಸಲಾರದೆ ಮುಚ್ಚಿಹೋಗಿತ್ತು. ಹೀಗೆ ಸಮಾಜದ ಮಹಿಳಾ ವಿರೋಧಿ ನೀತಿ ಸರಸ್ವತಿಬಾಯಿಯವರಿಗೆ ಹೀನಾಯವಾಗಿ ಕಂಡಿರುವುದು ಅವರ ಕೃತಿಗಳಲ್ಲಿ ಅನಾವರಣಗೊಂಡಿದೆ.

ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಬೆಳೆದ ದೇವಾಂಗನೆಯವರಿಗೆ ಹೊರಗಿನ ಒಡನಾಟಕ್ಕೆ ಅವಕಾಶಗಳಾಗಲಿಲ್ಲ. ಆದರೂ ಮನೆಯ ವಾತಾವರಣದಲ್ಲಿದ್ದ ಸಾಹಿತ್ಯಾಭ್ಯಾಸ ಅವರ ಭಾಷಾಜ್ಞಾನಕ್ಕೆ ಪೂರಕವಾಗಿತ್ತು. ಕನ್ನಡ, ಹಿಂದಿ, ಇಂಗ್ಲೀಷ್, ಮರಾಠಿ ಭಾಷೆ, ಸಾಹಿತ್ಯದ ಪರಿಚಯವಿದ್ದಿರಬಹುದು. ದೇವಾಂಗನೆಯವರ ಬರವಣಿಗೆಯ ಮೂಲ ಪ್ರೇರಣೆ ಎಂದರೆ ಸುತ್ತಲಿನ ಪರಿಸರದಲ್ಲಿ ಕಂಡುಬರುವ ಹೆಣ್ಣಿನ ಬವಣೆಗಳು. ಅವರು ಬರೆದ 'ವೇಣಿಸಂಹಾರ' ಕಥೆಗೆ ಅವರ ಸ್ವಂತ ಅಕ್ಕ ವೆಂಕಮ್ಮನವರು ನಿದರ್ಶನವಾಗಿರಬಹುದು ಎಂದು ಊಹಿಸಬಹುದು.

*"ಆಕಾಲಕ್ಕಾಗಲೇ ಪ್ರಸಿದ್ಧವಾದ 'ಜಯಂತಿ' ಪತ್ರಿಕೆ ದೇವಾಂಗನೆಯವರ ಕಥೆಗಳನ್ನು ಪ್ರಕಟಿಸುವ ಮೂಲಕ ಅವರನ್ನು ಸಾಹಿತ್ಯವಲಯಕ್ಕೆ ಪರಿಚಯಿಸುವ ಕೆಲಸ ಮಾಡಿತ್ತು."*[೨]

ಅವರು ಆಕಾಲಕ್ಕೆ ಇದ್ದ ಬಾಲ್ಯವಿವಾಹವನ್ನು ವಿರೋಧಿಸಿ ತಮ್ಮ ೨೧ನೇ ವಯಸ್ಸಿಗೆ (೧೯೪೬) ವಿವಾಹವಾದರು. ಪಡಿತರ ವಿತರಣಾಧಿಕಾರಿಯಾದ ಸರಕಾರಿ ನೌಕರ ವೆಂಕಟರಮಣಕೂರ್ಸೆ ಗೋಕರ್ಣ ಇವರೊಂದಿಗೆ ವಿವಾಹವಾದ ದೇವಾಂಗನೆ ಕೆಲವೇ ವರ್ಷಗಳ ದಾಂಪತ್ಯ ಜೀವನವನ್ನು ಅನುಭವಿಸುತ್ತಾರೆ. ಮೂರು ವರ್ಷದ ಮಗಳು

---

೧. ಗಿರಿಬಾಲೆ– ಸಾಹಿತ್ಯ ವಾಚಿಕೆ – ಶ್ರೀವಳ್ಳಿ ಟಿ.ಎಸ್. – ಕರ್ನಾಟಕ ಸಾಹಿತ್ಯ ಅಕಾಡೆಮಿ– ಬೆಂಗಳೂರು – ೧೯೯೪ ಪು. ೧೧೦.

೨ 'ವೇಣಿಸಂಹಾರ'–ದೇವಾಂಗನಾಶಾಸ್ತ್ರೀ ಗೋಕರ್ಣ–(ಸಂ.)ಯಶೋಧಾಭಟ್–ಅವನಿ ರಸಿಕ ರಂಗ ದಾರವಾಡ–೨೦೦೫ – ಪು. ೧೦

ಉಷಾ ಮತ್ತು ಪತಿಯನ್ನು ಅವರ ೨೬ನೇ ವಯಸ್ಸಿಗೆ ಅಗಲುತ್ತಾರೆ. ಅವರ ಅಕಾಲಿಕ ಮರಣ ಸಾಹಿತ್ಯ ಕ್ಷೇತ್ರದ ನಷ್ಟ ಎಂದೇ ಭಾವಿಸಬಹುದು. ತ್ರಿವೇಣಿ, ಕೊಡಗಿನ ಗೌರಮ್ಮನವರಂತೆ ಅಲ್ಪಕಾಲಕ್ಕೇ ದುರ್ಮರಣಕ್ಕೆ ಗುರಿಯಾಗಿರುವುದು ಸಾಹಿತ್ಯ ಕ್ಷೇತ್ರದ ದುರ್ದೈವ ಎಂದೇ ಭಾವಿಸಬಹುದು.

ಇವರ 'ವೇಣಿಸಂಹಾರ'ದಲ್ಲಿ ಬರುವ ಶಾಂತೆಗೆ ಶಂಭುವಿನ ಮಗಳು ಏಳುವರ್ಷದವಳಿರುವಾಗಲೇ ನಾಲ್ಕು ಮಕ್ಕಳ ತಂದೆ ವಿಧುರನೊಂದಿಗೆ ವಿವಾಹವಾಗುತ್ತದೆ. ವಿವಾಹವಾಗಿ ಕಲವೇ ದಿನಗಳಲ್ಲಿ ಶಾಂತೆಯ ಪತಿ ಮರಣ ಹೊಂದಿದ್ದರಿಂದ ತೌರನ್ನು ಸೇರಿದ ಶಾಂತೆಯ ಕೇಶಮುಂಡನ ಕಾರ್ಯ ನಡೆಯುವುದಿಲ್ಲ. ಶಾಂತೆ ಹದಿನೆಂಟು ವರ್ಷದವಳಿರುವಾಗ ಬ್ರಾಹ್ಮಣ ಸಂಪ್ರದಾಯದ ಕುಟುಂಬ ವ್ಯವಸ್ಥೆ ಆಕೆಯ ಕೇಶಮುಂಡನಕ್ಕೆ ಒತ್ತಾಯಿಸುತ್ತದೆ. ಶಾಂತಳ ತಂದೆ ಶಂಭುವಿಗೆ ಸಂಪ್ರದಾಯಸ್ಥ ಸ್ವಜಾತಿಯವರ ವಿರೋಧಿಯಾಗಿ ಬಹಳ ಕಾಲ ಇರಲಾರದೆ ಶಾಂತೆಯ ವೇಣೀಸಂಹಾರಕ್ಕೆ ತಯಾರಿ ನಡೆಸುತ್ತಾರೆ. ಇದನ್ನು ಒಪ್ಪುವುದು ಅನಿವಾರ್ಯವಾಗಿ ನಾಪಿತನಿಗೆ ತಲೆಯನ್ನು ನೀಡಿ ಕುಳಿತುಕೊಂಡಳು. ನಾಪಿತ ತನ್ನ ಕೆಲಸ ಪ್ರಾರಂಭಿಸಿದ

*"ಒಂದು ಕ್ಷಣಕ್ಕೆ ಹಿಂದೆ ಬಿನ್ನಾಣದಿಂದ ಕುಲುಕುಲು ನಗುವವೋ ಎನ್ನುವಂತಿದ್ದ ಕುರುಳುಗಳು ಇದೀಗ ಕೆಸರುಮಣ್ಣಿನ ಹಾವಸೆಯಂತೆ ಒಂದೆಡೆ ರಾಶಿಬಿದ್ದಿತ್ತು. ಅಂತೂ ಧರ್ಮ ಉಳಿದುಕೊಂಡಿತು. ಪರಲೋಕದ ಗಂಡನಿಗೆ ಆಹಾರದ ಜೊತೆಯಲ್ಲಿ ಭೂಲೋಕದಲ್ಲಿಯ ಹೆಂಡತಿಯ ತಲೆಗೂದಲಿನ ನೀರು ಬೆರೆದುಕೊಳ್ಳುವುದು ತಪ್ಪಿತು. ಹೆಣ್ಣು ಮಡಿಯಾದಳು. ಸ್ವರ್ಗಕ್ಕೆ ಹಾದಿ ನಿರಂತರವಾಯ್ತು."*[೧]

ಬಾಹ್ಯರೂಪ ವಿಕಾರವಾಯಿತು. ಆದರೆ ಒಳಗಿನ ಭಾವನೆಗಳು ವಯೋಸಹಜವಾಗಿ ಕಾಡುವುದನ್ನು ಶಾಸ್ತ್ರ ಸಂಪ್ರದಾಯಗಳು ತಪ್ಪಿಸಲಾರದೆ ಹೋಗುತ್ತವೆ.

*"ಶಂಭುವಿನ ತ್ಯಾಗ, ಸಹನೆ, ಧರ್ಮಬುದ್ಧಿ ಒಂದೂ ಆತನ ಲೌಕಿಕವನ್ನು ಸುಧಾರಿಸುವುದಕ್ಕೆ ಸಹಾಯಕವಾಗಲಿಲ್ಲ. ಬರಲಿದ್ದ ಶ್ರೀಮಂತ ಯಜಮಾನನು ಮಗಳನ್ನು ಕಟ್ಟಿಕೊಂಡು ಬೇರಾವುದೋ ಊರಿಗೆ ಹೋದನೆಂಬ ಸುದ್ದಿ ಅನಂತರ ತಿಳಿದು ಬಂದಿತು."*[೨]

ಸಾಂಪ್ರದಾಯಿಕ ಕಟ್ಟುಗಳಿಗೆ ಮಣಿಯದ ಶಾಂತೆಯ ಮನಸ್ಸು ನೈತಿಕ ಮೌಲ್ಯಗಳನ್ನು ಮೀರುವುದರೊಂದಿಗೆ ತನ್ನ ಆಮಿಷಗಳಿಗೆ ಬಲಿಯಾಗುತ್ತಾಳೆ. ತನ್ನ ವೈಯಕ್ತಿಕ ದೌರ್ಬಲ್ಯವನ್ನು ಹತ್ತಿಕ್ಕಲಾರದೆ 'ವಿವಾಹ'ದಿಂದ ಸಂಸಾರ ಸುಖವನ್ನು ಅನುಭವಿಸಲಾರದೆ ಸಮಾಜ ಬಾಹಿರ ನೀತಿಯನ್ನು ಅನುಸರಿಸಿದಳು ಎನ್ನುವ ಮಾತಿಗೆ

---

೧. 'ವೇಣಿಸಂಹಾರ'–ದೇವಾಂಗನಾಶಾಸ್ತ್ರೀ ಗೋಕರ್ಣ–(ಸಂ.) ಯಶೋಧಾಭಟ್–ಅವನಿ ರಸಿಕ ರಂಗ ದಾರವಾಡ–೨೦೦೫ – ಪು. ೨೬

೨. ಅದೇ ಪು – ಪು –೨೭

ಪಕ್ಕಾಗಬೇಕಾಗುತ್ತದೆ. ವೇಣಿಸಂಹಾರ ಅವಳ ಜೀವಕಾಮವನ್ನು ಸಂಹಾರ ಮಾಡಲಾರದೆ ಹೋಗುವುದು ವ್ಯವಸ್ಥೆಯ ವ್ಯಂಗ್ಯವಾಗಿದೆ.

**೫. ವೈಧವ್ಯದೊಳಗಿನ ಜೀವನ ಪ್ರೀತಿ**

ಇಪ್ಪತ್ತನೇ ಶತಮಾನದ ಮೂವತ್ತರ ದಶಕದಲ್ಲಿ ಕಾಣಿಸಿಕೊಂಡ ಕೊಡಗಿನ ಗೌರಮ್ಮ ಕನ್ನಡ ಕಥಾಲೋಕ ಕಂಡ ಸಂವೇದನಾ ಶೀಲ ಕತೆಗಾರ್ತಿ. ದಟ್ಟಮಲೆನಾಡಿನ ಮೇಲ್ಜಾತಿಯ ಸುಶಿಕ್ಷಿತ ಕುಟುಂಬದಿಂದ ಬೆಳೆದು ಬಂದವರು. ತಮ್ಮ ಇಪ್ಪತ್ತೇಳನೇ ವಯಸ್ಸಿಗೇ ಅಕಾಲಮರಣಕ್ಕೆ ತುತ್ತಾದರು. ಇವರ ಎರಡು ಕಥಾ ಸಂಕಲನ 'ಕಂಬನಿ'(೧೯೩೯), 'ಚಿಗುರು' (೧೯೪೨) ಪ್ರಕಟವಾಗಿವೆ. ಸಂಪ್ರದಾಯಸ್ಥ ಸಮಾಜದ ವಿಧವಾ ಸಮಸ್ಯೆ ಹದಿಹರೆಯದವರ ಪ್ರೇಮ, ಕೌಟುಂಬಿಕ ಪ್ರೀತಿ, ಅಲ್ಲಿನ ಮಾನವೀಯ ಸಂಬಂಧಗಳು ಇವರ ಕಥನದ ವಸ್ತುವಾಗಿದೆ. ಶಿಕ್ಷಣ, ವರದಕ್ಷಿಣೆ ಮುಂತಾದ ವಿಷಯಗಳು ಇವರ ಕಥೆಗಳಲ್ಲಿ ನವಿರಾಗಿ ಚಿತ್ರಣಗೊಂಡಿವೆ.

ಆ ಕಾಲಘಟ್ಟದ ಸುಶಿಕ್ಷಿತ ಸಂಪ್ರದಾಯಸ್ಥ ಮಹಿಳೆಯರಿಗೆ ಎದುರಾದ ಸಮಸ್ಯೆಗಳು ಇವರ ಕಥೆಗಳಲ್ಲಿ ಅನಾವರಣಗೊಂಡಿವೆ. ಕೌಟುಂಬಿಕ ಸಮಸ್ಯೆಗಳು, ಒಂಟಿತನ, ಬಡತನಕ್ಕೆ ಇವರ ಕಥೆಯಲ್ಲಿನ ಪಾತ್ರಗಳು ಬೆನ್ನುಹಾಕುವುದಿಲ್ಲ. ದ್ವೇಷ ಅಸೂಯೆಗಳಿಲ್ಲದೆ ಎಲ್ಲವನ್ನು ಮೀರಿ ಅಪರಿಮಿತ ಜೀವನೋತ್ಸಾಹದಿಂದ ತುಂಬಿರುವುದು ಮುಖ್ಯವಾಗುತ್ತದೆ. ಸುಂದರ ಗಿರಿವನ ಪ್ರದೇಶದಲ್ಲಿ ೧೯೧೨ರಲ್ಲಿ ಹುಟ್ಟಿದ ಗೌರಮ್ಮ ೧೯೩೯ರಂದು ತಮ್ಮ ಮನೆಯ ಹತ್ತಿರದಲ್ಲಿ ಹರಿಯುತ್ತಿದ್ದ ಹಟ್ಟಿಹೊಳೆಯಲ್ಲಿ ಮುಳುಗಿ ಮರಣವಪ್ಪುತ್ತಾರೆ. ಇವರ ಅಕಾಲಿಕ ಮರಣ ಸಾಹಿತ್ಯ ವಲಯಕ್ಕೆ ತುಂಬಲಾರದ ನಷ್ಟ ಎಂದೇ ಭಾವಿಸಬೇಕಾಗಿದೆ. ಗಾಂಧೀಜಿಯವರು ೧೯೩೩ರಲ್ಲಿ ಕರ್ನಾಟಕದ ಪ್ರವಾಸದಲ್ಲಿದ್ದಾಗ ಅವರನ್ನು ಭೇಟಿ ಮಾಡಿ ಸ್ವಾತಂತ್ರ್ಯ ಹೋರಾಟಕ್ಕಾಗಿ ಅವರ ಮೈಮೇಲಿದ್ದ ಆಭರಣಗಳನ್ನು ನೀಡಿ ಚಳವಳಿಯನ್ನು ಬೆಂಬಲಿಸಿದ್ದರು ಎನ್ನುವುದು ಅವರ ರಾಷ್ಟ್ರ ಪ್ರೇಮಕ್ಕೆ ದ್ಯೋತಕವಾಗಿದೆ. ಭಾರತೀಯ ಸಮಾಜದ ಸಾಮಾಜಿಕ ಮೌಲ್ಯಗಳು ಮಹಿಳೆಯನ್ನು ಹಿಂಸೆಗೆ ತಳ್ಳಿ ಅಮಾನವೀಯವಾಗಿ ಕಾಣುವುದನ್ನು ಇವರು ಸ್ಪಷ್ಟವಾಗಿ ಗ್ರಹಿಸಿದ್ದರು. ಬಾಲವಿಧವೆಯರು ಮತ್ತು ಸ್ತ್ರೀಚೇತನಗಳು ಹೊಸ ಜೀವನಕ್ಕಾಗಿ ಹಾತೊರೆಯುವುದನ್ನು ಅವರ ಕೃತಿಗಳು ಬಿಂಬಿಸುತ್ತವೆ. ಕಾರ್ಮಿಕ ಲೋಕದ ಪಾತ್ರಗಳು ಪ್ರಾಮಾಣಿಕ ಪ್ರಯತ್ನದಿಂದ ಜಾತಿ, ಮತ, ಧರ್ಮವನ್ನು ಮೀರುವ ಪ್ರಯತ್ನ ನಡೆಸುವುದನ್ನು ವಿಶ್ಲೇಷಿಸುತ್ತಾರೆ.

ಇವರ 'ಕಂಬನಿ ಮತ್ತು ಚಿಗುರು' ಕಥಾ ಸಂಕಲದಲ್ಲಿ ಪ್ರಕಟವಾದ 'ವಾಣಿಯ ಸಮಸ್ಯೆ' ಮತ್ತು 'ಪುನರ್ವಿವಾಹ' ಕಥೆಗಳು ಬಾಲವಿಧವೆಯರ ಸಮಸ್ಯೆಯನ್ನು ಕುರಿತು

ಚಿಂತಿಸುತ್ತವೆ. ಆ ಕಾಲಘಟ್ಟ ವೈಧವ್ಯದ ಸಮಸ್ಯೆ ಒಪ್ಪಿತ ಮೌಲ್ಯಗಳ ಉಸಿರು ಕಟ್ಟಿಸುವ ವಾತಾವರಣದಲ್ಲಿ ಪರ್ಯವಸಾನವಾಗುತ್ತದೆ. 'ವಾಣಿಯ ಸಮಸ್ಯೆ" ಕಥೆಯಲ್ಲಿ ಬರುವ ಬಾಲವಿಧವೆ ಇಂದು. ಇವಳ ಮದುವೆಯಾಗಿ ಆರು ತಿಂಗಳೊಳಗೆ ಪತಿಯನ್ನು ಕಳೆದುಕೊಂಡು ವಿಧವೆಯಾದಳು. ಒಂಟಿಯಾಗಿ ಪುಟ್ಟಮನೆಯಲ್ಲಿ ಕಾಲಕಳೆಯುವ ಆಕೆ ಹುಟ್ಟಿನ ಮೊದಲೇ ತಂದೆಯನ್ನು ಹುಟ್ಟುವಾಗ ತಾಯಿಯನ್ನು ಕಳೆದುಕೊಂಡವಳು. ಆ ಮನೆಯೇ ಅವಳಿಗೆ ಸರ್ವಸ್ವ ಅದರ ಸೌಂದರ್ಯ ಸ್ವಚ್ಛತೆಯಲ್ಲಿ ತನ್ನ ಸಮಯ ಕಳೆದುಹೋಗುತ್ತ ಅನೇಕ ವರ್ಷಗಳು ಕಳೆದಿವೆ. ಈ ಆರುವರ್ಷಗಳಲ್ಲಿ ಖಾಲಿ ಇದ್ದ ಪಕ್ಕದ ಮನೆಗೆ ಬಾಡಿಗೆಗೆ ಬಂದವರು ವಾಣಿ ಮತ್ತು ಅವಳ ಪತಿ ರತ್ನ. ಆ ಊರಿಗೆ ವೈದ್ಯರಾಗಿ ಬಂದ ರತ್ನ ಮತ್ತು ವಾಣಿದಂಪತಿಗಳು ಇಂದುವಿಗೆ ಬಹಳ ಹತ್ತಿರದವರಾಗುತ್ತಾರೆ.

ಇಂದು ವಾಣಿಯ ಸ್ನೇಹ ಬೆಳೆದಮೇಲೆ ವಾಣಿಯ ಮನೆಕೆಲಸಗಳನ್ನು ಓರಣವಾಗಿ ಮಾಡಿಕೊಡುತ್ತಿದ್ದಳು. ಸದಾ ಮನೆಕೆಲಸದಲ್ಲಿ ಆಲಸಿಯಾಗಿದ್ದ ವಾಣಿ ಮನೆಯನ್ನು ಸ್ವಚ್ಛವಾಗಿಟ್ಟು ಶುಚಿರುಚಿಯಾದ ಅಡಿಗೆ ಮಾಡುವುದರ ಹಿಂದೆ ಇಂದುವಿನ ಪಾತ್ರ ಇರುವುದನ್ನು ರತ್ನ ಗಮನಿಸುತ್ತಾನೆ ಎಂದೂ ಭೇಟಿಯಾಗದೆ ಪರಿಚಯವಿಲ್ಲದ ಅವಳ ಕೆಲಸಗಳಿಂದಲೇ ಅವಳನ್ನು ತನ್ನ ಅಂತರಂಗದಲ್ಲಿ ಚಿತ್ರಿಸಿಕೊಳ್ಳುತ್ತಾನೆ. ವಾಣಿಗೂ ಇಂದುವಿಗೂ ಹೋಲಿಸಿ ಇಂದುವನ್ನು ಮನಸಾರೆ ಮೆಚ್ಚಿಕೊಳ್ಳುತ್ತಾನೆ. ಇಂದು ರತ್ನರ ಪರಿಚಯ ಆತ್ಮೀಯವಾಗಿ ಆ ದಂಪತಿಗಳೊಂದಿಗೆ ತಾನೂ ಒಬ್ಬಳಾಗಿ ಸೇರಿಕೊಂಡಳು. ವಾಣಿ ತಾಯಿಯ ಶುಶ್ರೂಷೆಗೆಂದು ತೌರಿಗೆ ಹೋದ ಮೇಲೆ ಮನಸಾರೆ ರತ್ನನನ್ನು ಪ್ರೀತಿಸುತ್ತಿದ್ದ ಇಂದುವಿಗೆ ಅವನನ್ನು ಮೊದಲಿನಂತೆ ಎದುರಿಸುವುದು ಕಷ್ಟವಾಯಿತು. ರತ್ನನು ಬರೆದ ಪತ್ರಕ್ಕೆ ಪ್ರತಿಯಾಗಿ ಇಂದು ಮನೆಯನ್ನೇ ಬಿಟ್ಟು ದೂರದ ಸಂಬಂಧಿಕರ ಮನೆಯನ್ನು ಸೇರುತ್ತಾಳೆ.

ಇಂದುವಿಗೆ ವಾಣಿಯ ಪರಿಚಯವಾಗಿ ಆಪ್ತ ಸ್ನೇಹಿತರಾಗುವುದು ಸಹಜ ಪ್ರಕ್ರಿಯೆ ಎಂದು ಭಾವಿಸಬಹುದು. ವಾಣಿಯ ಪತಿ ರತ್ನನ ಪರಿಚಯ ಪ್ರೀತಿಯಾಗಿ ಪರಿಣಮಿಸುವುದೂ ಅಷ್ಟೇ ಸಹಜ. ಆದರೆ ಪತಿ ಪತ್ನಿಯರ ಸಮ್ಮುಖದಲ್ಲಿ ತನ್ನನ್ನು ತೊಡಗಿಸಿಕೊಂಡ ಹಾಗೆ ರತ್ನ ಒಂಟಿಯಾಗಿದ್ದಾಗ ಸಾಧ್ಯವಾಗದೆ ಹೋಗುತ್ತದೆ. ಇಂದುವಿನಲ್ಲಿ ಸುಪ್ತವಾಗಿದ್ದ ಭಾವನೆಗಳು ಒಂಟಿಯಾಗಿದ್ದಾಗ ಸ್ವತಂತ್ರವಾಗಿದ್ದು ಸುಖವನ್ನೂ ನೀಡಿದ್ದವು. ಆದರೆ ಎಚ್ಚೆತ್ತ ಭಾವನೆಗಳಿಗೆ ಸ್ವಾತಂತ್ರ್ಯವಿಲ್ಲದೆ ಇಂದುವನ್ನು ಬಂದಿಸಿ ಸಂಕಟಕ್ಕೆಡೆ ಮಾಡುತ್ತವೆ. ಪರಿಚಯ ಪ್ರೀತಿಯಾಗಿ ವಾಸ್ತವದಲ್ಲಿ ಅನುಭವಿಸಲಾಗದುದಕ್ಕೆ ತನ್ನನ್ನು ತಾನು ಹತ್ತಿಕ್ಕಿಕೊಳ್ಳುವ ಇಂದು ಸಂಪ್ರದಾಯ ಸಮಾಜದಲ್ಲಿ ಬಂಧಿಸಲ್ಪಡುತ್ತಾಳೆ ಹಾಗಾಗಿ ವಾಣಿ ತೌರಿಗೆ ಹೊದ ಮೇಲೆ ಇಂದು ಅವರ ಮನೆಯ ಕಡೆ ಸುಳಿಯಲಿಲ್ಲ.

*"ಅವಳು ಸ್ವಭಾವತಃ ಪಾಪಭೀರು. ಸಮಾಜದ ಕಟ್ಟುಕಟ್ಟಳೆಗಳನ್ನೇ ದೇವರ ನಿಯಮಗಳು ಎಂದು ತಿಳಿದು ಬೆಳೆದವಳು. ಅವಳಿಗೆ ತನ್ನೊಲವು ರತ್ನನ ಕಡೆ ತಿರುಗಿದೆ ಎಂಬುದರ ಅರಿವು ಆದಾಗಲೇ ಬಹಳ ಭಯವಾಯಿತು."*[೧]

ಮೊದಲೇ ದಾಂಪತ್ಯ ಜೀವನದಲ್ಲಿ ಪ್ರವೇಶಿಸಿರುವುದು ತಪ್ಪು ಎನ್ನುವ ಭೀತಿ ಜೊತೆಗೆ ಸಮಾಜದ ಕಟ್ಟುಪಾಡುಗಳನ್ನು ವಿರೋಧಿಸುತ್ತಿದ್ದೇನೆ ಎಂಬ ಪಾಪ ಪ್ರಜ್ಞೆ ಸೇರಿ ಇಂದುವನ್ನು ಸಂಕಟಕ್ಕೆ ಗುರಿಮಾಡಿದವು. ತಾನು ರತ್ನನನ್ನು ಪ್ರೀತಿಸುವುದರ ಕಾರಣ ತಿಳಿಯದೆ ಚಡಪಡಿಸುತ್ತಾಳೆ.

"ವಾಣಿಯ ಪತಿಯನ್ನು ತಾನು ಪ್ರೀತಿಸುವುದು ಅನುಚಿತ ಎಂಬುದು ಅವಳಿಗೆ ತಿಳಿದಿದ್ದರೂ ಆ ವಿಷಯದಲ್ಲವಳು ಏನೂ ಮಾಡಲಾರದವಳಾಗಿದ್ದಳು."[೨]

ವಾಣಿ ಇಲ್ಲದಿರುವಾಗ ಇಂದು ಮನೆಯ ಹಿತ್ತಲಿಗೂ ಕಾಲಿಡದೆ ತನ್ನನ್ನು ಮರೆಮಾಡಿಕೊಳ್ಳುತ್ತಾಳೆ. ಆಕಸ್ಮಿಕವಾಗಿ ಹಿತ್ತಲಿನ ಬಾವಿಯಲ್ಲಿ ನೀರು ಸೇದುವಾಗ ರತ್ನನನ್ನು ಕಂಡು ವಾಣಿಯಾವಾಗ ಬರುತ್ತಾಳೆ ಎಂದು ವಿಚಾರಿಸಿದರೆ ಅದಕ್ಕೆ ಉತ್ತರವಾಗಿ 'ಆರೋಗ್ಯವಾಗಿರುವೆಯಾ ಇಂದಿರಾ ? ಇದೇನು ಇತ್ತೀಚೆಗೆ ನೀನು ಕಾಣುವುದಿಲ್ಲ ? ಎಂದು ಕೇಳುವುದು ಅವಳಲ್ಲಿ ರೋಮಾಂಚನವನ್ನುಂಟು ಮಾಡಿತು.

*"ಅದೇ ಮೊದಲವಳು ಅವನ ಬಾಯಿಂದ ತನ್ನ ಹೆಸರನ್ನು ಕೇಳಿದ್ದು, ಆದಿನದವರೆಗೂ ಅವಳಿಗೆ ತನ್ನ ಹೆಸರು ಅಷ್ಟೊಂದು ಸುಂದರವೆಂದು ತಿಳಿದಿರಲಿಲ್ಲ."*[೩]

ರತ್ನನ ಬಾಯಿಂದ ಹೊರಟ 'ಇಂದಿರಾ' ಎನ್ನುವ ಹೆಸರು ಅವಳು ಇದುವರೆಗೂ ಅನುಭವಿಸಿರದ ಪ್ರೀತಿಯ ಸಂಚಲನವನ್ನುಂಟು ಮಾಡಿತು. ಮೂರು ದಿನದ ನಂತರ ಟಪಾಲಿನಲ್ಲಿ ಬಂದ ಪತ್ರ ರತ್ನನದೆಂದು ತಿಳಿದು ಇಂದು ಅದನ್ನು ತೆರೆದು ನೋಡಿದರೆ ನಿರ್ಧಾರ ಕೈಗೊಳ್ಳುವುದು ಕಷ್ಟ ಎಂದು ಭಾವಿಸಿ ಒಲೆಯ ಉರಿಯಲ್ಲಿ ಬೂದಿ ಮಾಡುತ್ತಾಳೆ. ಪ್ರಕೃತಿ ಸಹಜವಾಗಿ ನಡೆದ ಪ್ರೇಮಾಂಕುರ ಸುಟ್ಟು ಬೂದಿಯಾಗುವುದು ವ್ಯವಸ್ಥೆ ಬಾಲವಿಧವೆಯ ಮೇಲೆ ಹೇರಿದ ಸಾಂಪ್ರದಾಯಿಕ ಕಟ್ಟುಪಾಡುಗಳು ಎಂದು ಭಾವಿಸಬಹುದು. ಇಂತಹ ಕ್ರೌರ್ಯಗಳು ಅವಳಿಗೆ ಪಾಪಪ್ರಜ್ಞೆಯಾಗಿ ಕಾಡುತ್ತ ಹೊಸಬದುಕಿಗೆ ತೆರೆದುಕೊಳ್ಳದಂತೆ ತಡೆಯುತ್ತವೆ. ಇನ್ನೆಂದೂ ಮುಗ್ಧ ಜೀವ ವಾಣಿಗೆ ಇಂದು ಸಮಸ್ಯೆಯಾಗಿಯೇ ಉಳಿದಳು. ಎಲ್ಲಾ ತಿಳಿದಿದ್ದ ರತ್ನ ಮಾತ್ರ ತಟಸ್ಥನಾಗಿದ್ದ.

ಇಂದು, ರತ್ನರ ಆಕರ್ಷಣೆ ಬಲವಾಗುವ ಹಲವು ಘಟನೆಗಳು ಜರುಗುತ್ತವೆ. ಇವರೊಳಗೆ ಬೆಳೆದ ಪ್ರೀತಿಯ ತೀವ್ರತೆ ವಾಣಿ ತೌರಿಗೆ ಹೋದಮೇಲೆ

---

೧. ಜೀವನ ಪ್ರೀತಿ (ಕೊಡಗಿನ ಗೌರಮ್ಮ ಬರೆದ ಎಲ್ಲಾ ಕಥೆಗಳು)(ಸಂ.) ಕಾಳೇಗೌಡ ನಾಗವಾರ-ಕನ್ನಡ ಪುಸ್ತಕ ಪ್ರಾಧಿಕಾರ-ಬೆಂಗಳೂರು -೨೦೦೨- ಪು. ೧೩

೨. ಅದೇ ಪು – ಪು –೧೩

೩ ವಾಣಿಯ ಸಮಸ್ಯೆ-ಕೊಡಗಿನ ಗೌರಮ್ಮ –ಜೀವನ ಪ್ರೀತಿ-(ಸಂ.) ಕಾಳೇಗೌಡ ನಾಗವಾರ-ಕನ್ನಡ ಪುಸ್ತಕ ಪ್ರಾಧಿಕಾರ – ಬೆಂಗಳೂರು – ೨೦೦೨ – ಪು. ೧೪.

ಸಾಕ್ಷಾತ್ಕಾರವಾಗುತ್ತದೆ. ತನ್ನ ಶಾಂತ ಬದುಕಿನಲ್ಲಿ ತೀವ್ರ ಕೊರತೆಯ ಅರಿವುಂಟಾಗಿ ಅವಳ ಸುಖ ಸಂತೋಷಗಳು ಮಾಯವಾಗುತ್ತವೆ. ತನ್ನ ಮನಸ್ಸು ಉತ್ಕಟವಾಗಿ ರತ್ನನ ಕಡೆಗೆ ಹರಿಯುವುದನ್ನು ನಿಗ್ರಹಿಸಲಾಗದೆ ಪಲಾಯನವನ್ನು ಆಯ್ಕೆ ಮಾಡಿಕೊಳ್ಳುತ್ತದೆ. ಸಂಬಂಧಿಕರ ಆಶ್ರಯವನ್ನು ಬಯಸದೆ ಸ್ವತಂತ್ರವಾಗಿ ಬದುಕುವ ನಿರ್ಧಾರ ಕೈಬಿಡುವ ಮೂಲಕ ಮತ್ತೆ ಸಾಂಪ್ರದಾಯಿಕ, ನೈತಿಕ ದೃಷ್ಟಿಯಿಂದ ಪರಿಹಾರ ಕಂಡುಕೊಳ್ಳುತ್ತಾಳೆ ಎನ್ನುವ ಸುಮಿತ್ರಾಬಾಯಿಯವರು ಹೀಗೆ ಅಭಿಪ್ರಾಯಪಡುತ್ತಾರೆ.

> *"ಆದರೆ ಯಾವುದರ ಬೆಲೆಯನ್ನೂ ಅರಿಯದ ವಾಣಿಗೆ ಎಲ್ಲವನ್ನೂ ಕೊಟ್ಟ ದೇವರು ತನ್ನ ಜೀವನವನ್ನೇಕೆ ಅಂಧಕಾರಮಯವನ್ನಾಗಿ ಮಾಡಿದ" ಎಂಬುದು ಇಂದುವಿಗೆ ಎಲ್ಲಕ್ಕಿಂತ ದೊಡ್ಡ ಪ್ರಶ್ನೆಯಾಗಿ ಕಾಡಿದುದಾಗಲಿ, ತನ್ನ ಶಾಂತ ಜೀವನ ಪ್ರವಾಹವನ್ನು ಕಲಕಿ, ಕದಲಿಸುವ ಯೋಚನೆಗಳಿಗೆ ಪರಿಹಾರವೇನೆಂಬ ಅವಳ ಅಸಹಾಯಕತೆಯಾಗಲಿ ಕಥೆಯೊಳಗೆ ಕಾಣುವುದಿಲ್ಲ. ಬದಲಾಗಿ ಅವು ಇಂದುವಿನ ನೆಲೆಯಿಂದ ಹೊರಟು ಓದುಗರ ಮನದಲ್ಲಿ ಕಾಡತೊಡಗುತ್ತವೆ".*[೧]

ಬಾಲವಿಧವೆಯ ಮನಸ್ಸಿನ ಒಳತೋಟಿಯನ್ನು ಹಲವು ಮಗ್ಗುಲುಗಳಿಂದ ಪರಿಶೀಲಿಸುತ್ತ, ಸಾಂಪ್ರದಾಯಿಕ ಹಾಗೂ ನೈತಿಕ ಚೌಕಟ್ಟಿನೊಳಗೇ ಸೇರಿಹೋಗುವ ಪರಿಹಾರಗಳಿಗೆ ಆ ಕಾಲಘಟ್ಟದ ಸಾಮಾಜಿಕ ವ್ಯವಸ್ಥೆ ಹಿನ್ನೆಲೆಯಾಗಿದೆ. ಹಾಗೂ ಕರ್ಮಸಿದ್ಧಾಂತದ ಹಿನ್ನೆಲೆಯಿಂದ ಪಾಪಭೀರುಗಳಾದ ಬಾಲವಿಧವೆಯರು ಸಾಂಪ್ರದಾಯಿಕ ಪರಿಹಾರಕ್ಕೆ ಬದ್ಧರಾಗುತ್ತಾರೆ ಎಂದು ಕಥೆ ನಿರೂಪಿಸುತ್ತಿದೆ.

ಗೌರಮ್ಮನವರ ಮೊದಲ ಕಥೆ 'ಪುನರ್ವಿವಾಹ' (೧೯೩೧) ವಿಧವಾ ಸಮಸ್ಯೆಯನ್ನು ಕುರಿತದ್ದು. ಮೂವತ್ತೈದು ವರ್ಷದ ವಿಧುರ ಹೆಂಡತಿ ಸತ್ತು ಆರು ತಿಂಗಳಾಗುವ ಮೊದಲೆ ಪಕ್ಕದ ಮನೆಯ ಹದಿನೈದು ವರ್ಷದ ಯುವತಿ ರಾಜಿಯನ್ನು ಮನಸಾರೆ ಪ್ರೀತಿಸುತ್ತಾನೆ. ಶ್ರೀಮಂತನಾದ ತಾನು ಬಡವೆಯಾದ ರಾಜಿಯನ್ನು ಮದುವೆಯಾಗಿ ಉದ್ಧಾರ ಮಾಡುವ ಕನಸು ಕಾಣುತ್ತಾನೆ. ಆದರೆ ಆಕೆ ತಾನು 'ಬಾಲವಿಧವೆ' ಎಂದು ತಿಳಿಸಿದಾಗ ವಿಧವೆಯರನ್ನು ನೋಡುವುದೂ 'ಅಮಂಗಳ' ಎಂದು ತಿರಸ್ಕರಿಸುತ್ತಾನೆ. ವಿಧುರರು ಎಷ್ಟು ಮದುವೆಯಾದರೂ ತಪ್ಪಲ್ಲ. ವಿಧವೆ ಮದುವೆಯಾದರೆ ತಪ್ಪಾಗುವುದು ಹೇಗೆ ? ಎಂದು ಈ ಕಥೆ ಪ್ರಶ್ನೆಯನ್ನೆತ್ತುತ್ತದೆ. ಆದರೆ ಹದಿನೈದು ವರ್ಷದ 'ವಿಧವೆ' ರಾಜಿಯ ವಾಗ್ವೈಖರಿ ವೈಚಾರಿಕ ಪ್ರಬುದ್ಧತೆಯಿಂದ ಕೂಡಿದೆ. ಅವಳು ಮೊದಲು ಕೇಳುವ ಪ್ರಶ್ನೆ ತುಂಬಾ ಮಾರ್ಮಿಕವಾಗಿದೆ.

> *"ಈಗ ಪ್ರೀತಿಸುವುದು ನನ್ನನ್ನೇ? ನಾಳೆ ಪ್ರೀತಿಸುವುದು ಇನ್ನು ಯಾರನ್ನೋ ?*

---

೧. ವಿಚಯ –ಬಿ.ಎನ್. ಸುಮಿತ್ರಾಬಾಯಿ – ವಿಜಯಾ ಐ.ಎಸ್.ಎ. ಪ್ರಕಾಶನ – ಬೆಂಗಳೂರು – ೧೯೯೩–ಪು. ೯೯.

*ಪ್ರೀತಿಸುತ್ತಿದ್ದರಂತೆ ! ಪ್ರೀತಿಸಿ ಪ್ರೀತಿಸಿ ಸತ್ತು ಇನ್ನೂ ಆರು ತಿಂಗಳಾಗುವ ಮೊದಲೇ ಎರಡನೆಯ ಮದುವೆಗೆ ಅವಸರ ಇದೀಗ ನಿಜವಾದ ಪ್ರೇಮ ಅಲ್ಲವೆ?*[1]

ಎಂದು ಪ್ರಶ್ನಿಸುವ ರಾಜಿಗೆ ನಾನು ನಿಜವಾಗಿಯೂ ಪ್ರೀತಿಸುತ್ತೇನೆ, ಎನ್ನುವ ಮೂವತ್ತೈದರ ಯುವಕನಿಗೆ, ಅವಳ ಉತ್ತರ 'ನಿಮಗೆ ನನ್ನಲ್ಲಿರುವ 'ಪ್ರೇಮ'ವಲ್ಲ 'ಮೋಹ" ನಿಮ್ಮ ಹೆಂಡತಿಯನ್ನು ನೀವು ನಿಜವಾಗಿ ಪ್ರೀತಿಸುತ್ತಿದ್ದಿರಾದರೆ ಅವಳನ್ನು ಅವಳ ಮಗಳು ಕುಸುಮಳನ್ನು ಮರೆಯುತ್ತಿರಲಿಲ್ಲ. ನೀವು ಸತ್ತು ಅವಳು ಬದುಕಿದ್ದರೆ ಎರಡನೆ ಮದುವೆಯಾಗುತಿದ್ದಳೆ ಎನ್ನುವ ಪ್ರಶ್ನೆ ವ್ಯವಸ್ಥೆಯಲ್ಲಿನ ಸಾಂಪ್ರದಾಯಿಕ ಮೌಲ್ಯಗಳು ವಿಧವೆಯನ್ನು ಹೇಗೆ ಅಂಧಕಾರದಲ್ಲಿಟ್ಟಿವೆ ಎಂದು ತಿಳಿಸುತ್ತವೆ. ವೈವಾಹಿಕ ಚೌಕಟ್ಟಿನೊಳಗೆ ದ್ವಿಸ್ತರ ನೀತಿ ಸಮಾಜದಲ್ಲಿ ಗಟ್ಟಿಯಾಗಿ ನೆಲೆಯಾಗಿರುವುದನ್ನು ಲೇಖಕಿ ಪ್ರಶ್ನಿಸುತ್ತಾರೆ.

*"ನಾನು ನಿಮ್ಮನ್ನು ಮದುವೆಯಾಗುವೆನೋ ಇಲ್ಲವೋ ಎಂಬುದನ್ನು ಬಿಡಿರಿ. ಧೈರ್ಯವಿದ್ದರೆ ನೀವು ಹೇಳಿದಂತೆ ನನಗಾಗಿ ಏನು ಬೇಕಾದರೂ ಮಾಡುವ ಶಕ್ತಿ ಇದ್ದರೆ, ನನ್ನನ್ನು ನಿಜವಾಗಿ ಪ್ರೀತಿಸುತ್ತಿದ್ದರೆ ಮದುವೆಯಾಗಿರಿ ನಾನು ಬಾಲವಿಧವೆ"*[2]

ಎನ್ನುವ ಪ್ರಶ್ನೆಗೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಉತ್ತರ ಸಿಗದು. ನಾವು ಮುಖ್ಯವಾಗಿ ಗಮನಿಸುವುದು ಬಾಲವಿಧವೆಯ ಪ್ರಶ್ನೆ ಅವಳ ಹಕ್ಕನ್ನು ಮರೆಮಾಡಿದ್ದ ಸಮಾಜ ಅವಳ ಅಭಿವ್ಯಕ್ತಿ ಸ್ವಾತಂತ್ರ್ಯವನ್ನೂ ಕಸಿದುಕೊಂಡಿತ್ತು. ಕಥಾನಾಯಕಿಯ ದಿಟ್ಟತನದ ಪ್ರಶ್ನೆಗಳ ಮೂಲಕ ಸನಾತನಿಗಳನ್ನು ಎಚ್ಚರಿಸಿರುವುದು, ಆ ಮೂಲಕ 'ವಿಧವಾ ಪುನರ್ವಿವಾಹ'ವನ್ನು ಪ್ರತಿಪಾದಿಸಿರುವುದು ಗೌರಮ್ಮನವರ ಧೈರ್ಯಕ್ಕೆ ಪ್ರತೀಕವಾಗಿದೆ. ಅಷ್ಟೇ ಅಲ್ಲ ವಿಧವೆ 'ಅಮಂಗಲ' ಎಂದು ವಾದಿಸುವ ವಿಧುರನನ್ನು ಪ್ರಶ್ನಿಸುತ್ತಾಳೆ.

*"ಹೆಂಡತಿ ಸತ್ತು ಆರು ತಿಂಗಳಾಗುವ ಮೊದಲೇ ತನ್ನ ಮಗುವನ್ನು ಮರೆತು ಪುನರ್ವಿವಾಹ ಬಯಸುವ ಗಂಡಸಿನ ಮುಖ ನೋಡುವ ಆಸೆ ನನಗೂ ಇಲ್ಲ"*[3].

ಮನುಧರ್ಮಶಾಸ್ತ್ರ ಮೊದಲಾಗಿ ಹಿಂದೂ ವಿಧವೆಯರನ್ನು ಕಂಡಿರಿಸಿದ ರೀತಿಯನ್ನು ಲೇಖಕಿ ತೆರೆದಿಡುತ್ತಾರೆ. ವಿಧವೆಯರ ಮೇಲೆ ಹೇರಿರುವ ಅನಿಷ್ಟ ಪದ್ಧತಿಯ ಕ್ರೌರ್ಯದಿಂದ ಹೊರ ಬರಲು ಸಾಧ್ಯವಾಗದೆ ಅಲವತ್ತವರೆಷ್ಟು ಮಂದಿ ಎಂದು ವೈಚಾರಿಕ ನೆಲೆಯಲ್ಲಿ ಚರ್ಚೆ ಮಾಡುತ್ತಾರೆ. ಸಾಂಪ್ರದಾಯಿಕ ಕಟ್ಟು-ಕಟ್ಟಲೆಗಳನ್ನು ಪ್ರಶ್ನೆಮಾಡುವ ಕಥೆ ವೈಚಾರಿಕವಾಗಿ ಗಮನ ಸೆಳೆಯುತ್ತದೆ.

---

೧. ಪುನರ್ವಿವಾಹ-ಕೊಡಗಿನ ಗೌರಮ್ಮ- ಜೀವನ ಪ್ರೀತಿ-(ಸಂ.) ಕಾಳೇಗೌಡ ನಾಗವಾರ-ಕನ್ನಡ ಪುಸ್ತಕ ಪ್ರಾಧಿಕಾರ-ಬೆಂಗಳೂರು ೨೦೦೨- ಪು. ೧೨೪

೨. ಅದೇ ಪು-ಪು-೧೨೫

೩. ಅದೇ ಪು-ಪು-೧೨೬

## ೬. ಪುರುಷ ಪ್ರಧಾನ ವ್ಯವಸ್ಥೆಯ ಆಳುವ ನೀತಿ

"ಒಂದು ಪುಟ್ಟ ಚಿತ್ರ' ಕಥೆಯ ನಾಯಕಿ ಬಾಲವಿಧವೆ ಶಾಂತಿ. ಬಾಲ್ಯದಲ್ಲೇ ತಂದೆ ತಾಯಿಯನ್ನು ಕಳೆದುಕೊಂಡು ಅಣ್ಣ ಅತ್ತಿಗೆಯರ ಆಶ್ರಯಕ್ಕೆ ಬೀಳುತ್ತಾಳೆ. ಪ್ರೀತಿಯಿಂದ ವಂಚಿತಳಾದ ಶಾಂತಿ ಆರ್ಥಿಕವಾಗಿ ಮತ್ತು ಮಾನಸಿಕವಾಗಿ ಪರಾವಲಂಬಿತನಕ್ಕೆ ಒಳಗಾಗುತ್ತಾಳೆ. ಇವಳು ಮನೆಯೊಳಗೆ ಸಿಗದ ಪ್ರೀತಿಗಾಗಿ ಹೊರಗಿನಿಂದ ಅರಸುತ್ತಾಳೆ. ದುರ್ಬಲ ಸ್ಥಿತಿಯನ್ನು ಬಳಸಿಕೊಂಡ ಅತ್ತಿಗೆಯ ಅಣ್ಣ ರಘು ಶಾಂತಿಗೆ ಮೋಸಮಾಡಿ ದೂರಾಗುತ್ತಾನೆ. ಅವಳು ಗರ್ಭಿಣಿ ಎಂದು ತಿಳಿದಾಗ ರಘು ಕೈಬಿಡುತ್ತಾನೆ. ಇದರಿಂದ ಆಘಾತಕ್ಕೊಳಗಾದ ಶಾಂತಿ ಅನಾಥ ಪ್ರಜ್ಞೆಯಿಂದ ನರಳುತ್ತಾಳೆ. ಪಾಪಭೀತಿಯು ಅವಳನ್ನು ಬದುಕಿನಿಂದ ಪಲಾಯನ ಮಾಡಲು ಪ್ರೇರೇಪಿಸುತ್ತದೆ. ದಾರಿಕಾಣದ ಶಾಂತಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಸರಿಯಾದ ಆಶ್ರಯ, ಅಗತ್ಯವಾದ ಪ್ರೀತಿಯಿಂದ ವಂಚಿತರಾದ ಎಷ್ಟೋ ಬಾಲವಿಧವೆಯರು ತಮಗೊದಗಿದ ಸಮಸ್ಯೆಯಿಂದ ಪಾರಾಗಲು ಸಾಧ್ಯವಾಗದೆ ಸಾವನ್ನೇ ಪರಿಹಾರವಾಗಿ ಕಂಡುಕೊಂಡಿದ್ದಾರೆ. ಸಮಾಜದಲ್ಲಿದ್ದ ಹೆಣ್ಣಿಗೊಂದು ನ್ಯಾಯ ಗಂಡಿಗೊಂದು ನ್ಯಾಯ ತನ್ನ ಅಸಹಾಯಕತೆಯ ಅರಿವು, ಪಾಪಭೀತಿ, ಶಾಂತಿಯನ್ನು ಅಂತ್ಯಕಾಣಿಸುತ್ತವೆ. ಶಾಂತಿಯ ಅಣ್ಣ ತಡವಾಗಿಯಾದರೂ ಎಚ್ಚೆತ್ತುಕೊಂಡು ತಂಗಿಯ ಬಾಳನ್ನು ಸರಿಪಡಿಸಲು ಯೋಚಿಸುವುದು ತನ್ನ ಸಮಾಧಾನಕ್ಕಾಗಿ ಮಾತ್ರ. ಪತ್ರಗಳ ಮೂಲಕ ಇಡೀ ಕಥೆ ಹೆಣೆಯಲ್ಪಟ್ಟಿದ್ದು ಸಮಸ್ಯೆಯ ಹಲವು ಮಗ್ಗುಲುಗಳು ಅನಾವರಣಗೊಳ್ಳುತ್ತವೆ. ಅಮಾನವೀಯವಾಗಿ ಶಾಂತಿಯ ಬದುಕನ್ನು ದುರಂತಕ್ಕೊಯ್ಯುವುದು ವ್ಯವಸ್ಥೆಗೆ ಹಿಡಿದ ಕನ್ನಡಿಯಾಗಿದೆ.

ಶಾಂತಿಗೆ ತಾನು ಗರ್ಭಿಣಿ ಎಂದು ತಿಳಿದು ಕಳವಳದಿಂದ ರಘುವಿಗೆ ಬರೆಯುವ ಪತ್ರದಲ್ಲಿ ತಮ್ಮ ಮನೆಕೆಲಸದವನ ಮಗಳು ಕೆಲವು ವರ್ಷಗಳ ಹಿಂದೆ ಓಡಿಹೋದವಳು ವಾಪಾಸಾಗಿದ್ದಾಳೆ. ಅವಳನ್ನು ಕರೆದುಕೊಂಡು ಹೋದವನು ಅವಳನ್ನು ತಿರಸ್ಕರಿಸಿದ್ದ. ಈ ವಿಚಾರವನ್ನು ಮುಂದಿಟ್ಟು ಸಮಾಜದ ದ್ವಂದ್ವನೀತಿಯನ್ನು ಪ್ರಶ್ನೆಮಾಡುತ್ತಾಳೆ.

> *"ಅವಳನ್ನು ಕೆಡಿಸಿದವನಿಗೆ ಶಿಕ್ಷೆಯೇ ಇಲ್ಲವೆ ? ಇರಲಾರದು : ಏಕೆಂದರೆ ಅವನು ಗಂಡಸು ಅಪರಾಧವು ಗಂಡಸರದೇ. ಅವಳನ್ನು ಕೆಟ್ಟದಾರಿಯಲ್ಲಿ ಕರೆದುಕೊಂಡು ಹೋದಾತನೀಗ ಇನ್ನೊಬ್ಬಳನ್ನು ಅದೇ ಹಾದಿಯಲ್ಲಿ ಕರೆದೊಯ್ಯಲು ಯತ್ನಿಸುತ್ತಿರಬಹುದು. ಆದರೆ ಗಂಡಸಾದುದರಿಂದ ಅವನಿಗೆ ಶಿಕ್ಷೆಯಿಲ್ಲ. ಅನಾಚಾರದ ಅಧಿಕಾರ ಅಬಲೆಯರ ಮೇಲೆಯೇ"*[೧]

---

೧. ಒಂದು ಪುಟ್ಟ ಚಿತ್ರ – ಕೊಡಗಿನ ಗೌರಮ್ಮ– ಜೀವನ ಪ್ರೀತಿ–(ಸಂ.) ಕಾಳೇಗೌಡ ನಾಗವಾರ – ಕನ್ನಡ ಪುಸ್ತಕ ಪ್ರಾಧಿಕಾರ– ಬೆಂಗಳೂರು ೨೦೦೨– ಪು. ೨೮

ಲೇಖಕಿ ಪುರುಷ ಪ್ರಧಾನ ವ್ಯವಸ್ಥೆ ತನ್ನಲ್ಲಿ ಹುದುಗಿಸಿಟ್ಟುಕೊಂಡ 'ಆಳುವ' ನೀತಿಯನ್ನು ನಿರ್ಬಿಢೆಯಿಂದ ಪ್ರಶ್ನೆಮಾಡಿದ್ದಾರೆ. ಅನಾಥ ವಿಧವೆಯರಿಗೆ ಶ್ರೀಮಂತ ಯುವಕರಿಂದಾಗುತ್ತಿದ್ದ ಅನ್ಯಾಯವನ್ನು ಬಯಲು ಮಾಡುತ್ತಾರೆ. ಶಾಂತಿಯ ಆತ್ಮಹತ್ಯೆಗೆ ಸಮಾಜದಲ್ಲಿದ್ದ ಸಾಂಪ್ರದಾಯಿಕ ಕಠೋರ ನೀತಿಯೇ ಕಾರಣ ಎನ್ನುವುದು ಮೇಲ್ನೋಟಕ್ಕೆ ಕಾಣಿಸುತ್ತದೆ. ಪತ್ರಗಳು ವಿಧವೆಯ ಬದುಕಿನ ದುರಂತದ ಕಥೆಯ ವಿವಿಧ ಮಜಲುಗಳನ್ನು ಬಿಚ್ಚಿಡುವುದರಲ್ಲಿ ಗೆಲ್ಲುತ್ತವೆ. ವಾಸ್ತವ ಗ್ರಹಿಕೆಯಲ್ಲಿ ಅವರು ತೋರುವ ವಿಸ್ತಾರವಾದ ಅರಿವು ಮಾನವೀಯವಾದುದು.

'ಅಪರಾಧಿಯಾರು' ಕತೆಯಲ್ಲಿ ಹಿಂದೂ ಸಮಾಜದ ಅನಿಷ್ಟ ಪದ್ಧತಿಗಳಿಗೆ ಬಲಿಯಾದ ವಿಧವೆ ಪಾರ್ವತಿ. ಮದುವೆಯಾಗುತ್ತಿದ್ದಂತೆ ತಂದೆಯನ್ನು ಕಳೆದುಕೊಂಡು, ಒಂದು ಮಗುವಿನ ತಾಯಿಯಾದ ನಂತರ ಪತಿಯನ್ನು ಕಳೆದುಕೊಂಡು ಅನಾಥೆ ಆದವಳು. ಜೀವನಕ್ಕಾಗಿ ಅದೇ ಊರಿನ ನಾಗೇಶರಾಯರ ಮನೆಯಲ್ಲಿ ಅಡಿಗೆ ಕೆಲಸಕ್ಕೆ ಸೇರಿಕೊಂಡಳು. ಆದರೆ ಅನಾಚಾರದ ಹೊರೆ ಹೊರಿಸಿ ಮನೆಯಿಂದ, ಜಾತಿಯಿಂದಲೇ ಹೊರಹಾಕಿಸುತ್ತಾರೆ. ಬಾವಿಗೆ ಬಿದ್ದು ಆತ್ಮಹತ್ಯೆಗೆ ಪ್ರಯತ್ನಿಸುತ್ತಿದ್ದವಳನ್ನು ಉನ್ನೀಸಾ ಎನ್ನುವ ಮುಸ್ಲಿಂ ಹುಡುಗಿ ತನ್ನ ಮನೆಯಲ್ಲಿ ಕಾಪಾಡುತ್ತಾಳೆ. ಪಾರ್ವತಿ ರಜಿಯಾ ಆಗಿ ಮುಸ್ಲಿಂ ಬಾಂಧವರ ಮನೆಯಲ್ಲಿ ಬದುಕು ಕಾಣುತ್ತಾಳೆ. ಹಿಂದೂ ವಿಧವೆ ಮುಸಲ್ಮಾನಳಾಗಿ ಮತಾಂತರ ಹೊಂದುವುದು ಕಥೆಯ ವಸ್ತು. ಅವಳ ದುರವಸ್ಥೆ ಯಾರಿಗೂ ಯಾವ ನೋವುಂಟು ಮಾಡದೆ, ಮತಾಂತರಗೊಂಡಾಗ ಜಾತಿಬಾಂಧವರು ಸಭೆ ಸೇರಿ ಖಂಡಿಸುವುದನ್ನು ಹೇಳುವ ಲೇಖಕಿ ಸಾಮಾಜಿಕ ಮೌಲ್ಯಗಳ ಕ್ರೌರ್ಯವನ್ನು ವಿಡಂಬಿಸುತ್ತಿದ್ದಾರೆ ಎನಿಸುತ್ತದೆ.

> *"ನಮ್ಮವರ ಹೃದಯದಲ್ಲಿ ಜಾತಿಗಲ್ಲದೆ ದಯೆಗೆ ಎಡೆಯಿಲ್ಲ. ಅದೂ ಜಾತಿ ನಿಯಮಗಳು ಹೆಂಗಸರಿಗೆ ಮಾತ್ರ ಗಂಡಸರು ಆ ನಿಯಮಕ್ಕೆ ಒಳಪಡಬೇಕಾಗಿಲ್ಲ. ಇದೇ ನೋಡು ನಮ್ಮ ಜಾತಿಯ ದೊಡ್ಡತನದ ಕುರುಹು."*[೧]

ಎಂದು ವಿಶ್ಲೇಷಿಸುವ ಕಥೆ ಮಾನವೀಯತೆಯ ಬುಡವನ್ನೇ ಅಲುಗಾಡಿಸುವ ಜಾತಿ ವ್ಯವಸ್ಥೆಯನ್ನು ವಿರೋಧಿಸುತ್ತದೆ. ಹೀಗೆ ವೈಧವ್ಯದ ಸಮಸ್ಯೆಯನ್ನು ಆ ಕಾಲಮಾನದಲ್ಲಿ ಒರೆಗೆ ಹಚ್ಚುವ ಲೇಖಕಿ ಸಮಸ್ಯೆಗಳ ಭೀಕರತೆಯನ್ನು ಮನಮುಟ್ಟುವಂತೆ ಚಿತ್ರಿಸುತ್ತಾರೆ. ಲಿಂಗ ಅಸಮಾನತೆಯನ್ನು ನಿರ್ಬಿಢತೆಯಿಂದ ಪ್ರಶ್ನಿಸುತ್ತಾರೆ. ಸಮಾಜದಲ್ಲಿ ಬೇರೂರಿರುವ ಕುರುಡು ಕಟ್ಟುಪಾಡುಗಳು ಜಾತಿ ಧರ್ಮದ ಹಿನ್ನೆಲೆಯಲ್ಲಿ ಮಾನವ ವಿರೋಧಿ ನೀತಿ ಎಂದು ಕಟುವಾಗಿ ವಿರೋಧಿಸಿದ್ದಾರೆ.

---

೧. ಅಪರಾಧಿಯಾರು ?– ಕೊಡಗಿನ ಗೌರಮ್ಮ –ಜೀವನ ಪ್ರೀತಿ–(ಸಂ.) ಕಾಳೇಗೌಡ ನಾಗವಾರ – ಕನ್ನಡ ಪುಸ್ತಕ ಪ್ರಾಧಿಕಾರ– ಬೆಂಗಳೂರು –೨೦೦೨– ಪು. ೭೩.

ಇಂತಹ ಸಮಸ್ಯೆಗಳ ಗ್ರಹಿಕೆಯಲ್ಲಿ ಅವರಿಗಿದ್ದ ಅಪಾರವಾದ ಜ್ಞಾನ ಅವರ ಕಥೆಗಳಲ್ಲಿ ಅನಾವರಣಗೊಂಡಿವೆ. ಆ ಕಾಲಘಟ್ಟದಲ್ಲಿ ಬರವಣಿಗೆಯ ಮೂಲಕ ಬಹಳ ತೀವ್ರವಾಗಿ ಪ್ರತಿಕ್ರಿಯೆ ನೀಡಿದ ಲೇಖಕಿ ಎನ್ನುವುದು ಮನನೀಯವಾದುದು.

> *"ಕೇವಲ ಸಾಮಾಜಿಕ ಸಮಸ್ಯೆಗಳನ್ನು ಬಿಂಬಿಸಿ ಅಥವಾ ಸುಲಭ ಪರಿಹಾರ ಸೂಚಿಸಿ ಪಾರಾಗದೆ ತಮ್ಮ ಅನುಭವ ಗ್ರಹಿಕೆಗಳನ್ನು ಕಲೆಯ ಶಿಸ್ತಿನೊಂದಿಗೆ ಬಿಡುಗಡೆ ಮಾಡಲು ಯತ್ನಿಸಿರುವ ಗೌರಮ್ಮನವರ ಪ್ರಯತ್ನವೇ ಕನ್ನಡ ಕಥೆಗಾರ್ತಿಯರಿಗೆ ಒಂದು ಮಾದರಿಯಾಗಬಲ್ಲದು. ಅನ್ಯಾಯಗಳನ್ನು ಆಕೆ ಪ್ರಶ್ನಿಸಿರುವುದಷ್ಟೇ ಅಲ್ಲ ಪರಿಹಾರವು ಓದುಗರ ವಿಚಾರ ಪ್ರಚೋದನೆಯಲ್ಲಿದೆ, ಎಂಬುದನ್ನೂ ಆಕೆ ಕಂಡುಕೊಂಡಿದ್ದರು"[೧]*

ಎನ್ನುವ ಸುಮಿತ್ರಾ ಬಾಯಿಯವರ ಅಭಿಪ್ರಾಯ ಸಮಂಜಸವಾದುದು. ಆ ಕಾಲಕ್ಕೆ ಆಳವಾಗಿ ಬೇರೂರಿದ್ದ ವೈಧವ್ಯದಂತಹ ಸಮಸ್ಯೆಯ ಭೀಕರತೆಯನ್ನು ನ್ಯಾಯೋಚಿತವಾಗಿ ಪ್ರಶ್ನಿಸುತ್ತಾರೆ. ಮತ್ತು ಸಮಾಜ ಅನುಸರಿಸುವ ಲಿಂಗಬೇಧ, ಜಾತಿಬೇಧ ನೀತಿಯನ್ನು ಮಹಿಳೆಯ ಮೇಲೆ ಹೇರಿದ್ದನ್ನು ಖಂಡಿಸುತ್ತಾರೆ. ವೈವಾಹಿಕ ಚೌಕಟ್ಟಿನೊಳಗೇ ಸುಖದ ಬದುಕಿಗಾಗಿ ಹಾತೊರೆಯುವ ಸುಸಂಸ್ಕೃತ ಮನಸ್ಸಿನ ಮಹಿಳೆಯರನ್ನು ಚಿತ್ರಿಸುತ್ತಾರೆ. ಹಾಗಾಗಿ ತಮ್ಮ ಕಾಲದಲ್ಲಿ ಬರವಣಿಗೆಯ ಮೂಲಕ ಮಾಡಿರುವ ಕ್ರಾಂತಿ ಮಹತ್ವವಾದುದಾಗಿದೆ ಮತ್ತು ಈ ಅಧ್ಯಾಯ ಬಾಲವಿಧವೆಯ ಬವಣೆಯ ಜೀವನ ವಿಧವಾ ವಿವಾಹ ಕುರಿತ ಜಿಜ್ಞಾಸೆಯನ್ನು ನಡೆಸುತ್ತವೆ. ಕುರುಡು ಸಂಪ್ರದಾಯ ಧರ್ಮ ಶಾಸ್ತ್ರಗಳನ್ನೇ ಬಲವಾಗಿ ನಂಬಿರುವ ವಿಧವೆಯರ ಸ್ಥಿತಿ ಶೋಚನೀಯ. ಮೇಲ್ಜಾತಿ ಸಮುದಾಯದಲ್ಲಿ ವಿಧವೆಯರನ್ನು ನೋಡುವ ದೃಷ್ಟಿಬದಲಾಗಬೇಕು. ಹಳೆಸಂಪ್ರದಾಯದ ಹಿರಿಯ ತಲೆಮಾರಿನವರು ಬದಲಾದ ಕಾಲಕ್ಕೆ ಯುವಪೀಳಿಗೆಯವರೊಂದಿಗೆ ಹೊಂದಿಕೊಂಡು ಬದುಕುವಂತಾಗಬೇಕೆಂದು ಬಿಂಬಿಸುತ್ತವೆ. ಹಾಗೂ ವಿಧವಾ ಮೌಲ್ಯಾಚರಣೆಯಲ್ಲಿ ಅವಳ ಅಸಹಾಯಕತೆ ಆಂತರಿಕ ದುಃಖದ ತೀವ್ರತೆಯನ್ನು ಅನೇಕ ಲೇಖಕಿಯರು ತಮ್ಮ ಕೃತಿಗಳಲ್ಲಿ ಹಿಡಿದಿಡುವಲ್ಲಿ ಯಶಸ್ವಿಯಾಗಿದ್ದಾರೆ.

ಈ ಎಲ್ಲಾ ಕೃತಿಗಳೂ ವಿಧವೆಯರ ಬಗೆಗಿನ ಕಳಕಳಿ, ಸಮಾಜದ ಪಕ್ಷಪಾತಧೋರಣೆ ಜೀವನದ ಮೂಲಭೂತ ಪ್ರಶ್ನೆಗಳನ್ನು ಎತ್ತುತ್ತವೆ. ಸಮಾಜ ವಿಧವೆಯರನ್ನು ನೋಡುವ ದೃಷ್ಟಿ ಬದಲಾಗಬೇಕು ಎನ್ನುವ ತುಡಿತವೂ ಕೃತಿಗಳಲ್ಲಿ ಅಭಿವ್ಯಕ್ತವಾಗಿವೆ. ಸಂಪ್ರದಾಯದ ಕೋಟೆಯನ್ನು ದಾಟಿ ಹೊರಬಂದು ಕುಟುಂಬದ ವ್ಯಕ್ತಿಗಳೆಲ್ಲರೂ ಮಾನವೀಯತೆಯಿಂದ ವಿಧವೆಯರ ಬಾಳನ್ನು ಪೂರ್ಣವಾಗಿಸಲು ಮುಂದಾದರೆ ಅವರ ಜೀವನ ಸುಗಮವಾಗಬಲ್ಲದು ಎಂಬ ಹಿನ್ನೆಲೆಯಲ್ಲಿ ಕೃತಿಗಳು

---

೧. ವಿಚಯ – ಬಿ.ಎನ್.ಸುಮಿತ್ರಾಬಾಯಿ – ವಿಜಯಾ ಪ್ರಕಾಶನ – ಬೆಂಗಳೂರು ೧೯೮೫. ಪು ೧೦೧–೧೦೨.

ಚರ್ಚಿಸುತ್ತವೆ. ಪ್ರಾರಂಭದಲ್ಲಿ ಬರೆದ ತಿರುಮಲಾಂಬಾ ಆರ್.ಕಲ್ಯಾಣಮ್ಮನವರಿಂದ ರಾಜವಾಡೆ, ದೇವಾಂಗನಾ ಶಾಸ್ತ್ರಿ, ಕೊಡಗಿನ ಗೌರಮ್ಮನವರ ಕೃತಿಗಳಲ್ಲಿ ವಿಧವಾ ಸಮಸ್ಯೆ ಸಮಾಜದ ಒಂದು ಗಂಭೀರ ಸಮಸ್ಯೆಯಾಗಿರುವುದು ಅನಾವರಣಗೊಂಡಿದೆ. 'ವಿಧವಾ ಸಮಸ್ಯೆ'ಯನ್ನು ಸಮಸ್ತ ಆಯಾಮಗಳಿಂದ ನೋಡುವುದು ಸಾಧ್ಯವಾಗಿದೆ. 'ವಿಧವಾ ವಿವಾಹ'ವು ಸಂಕೀರ್ಣವಾಗಿ ಹಲವು ಸಮಸ್ಯೆಗಳನ್ನು ಪ್ರಶ್ನೆಗಳನ್ನು ಎದುರು ನಿಲ್ಲಿಸಿಕೊಳ್ಳುತ್ತದೆ.

> *"ಬಂಗಾಳದ ವಿಧವೆಯರಿಗೆ ಆಯ್ಕೆಯ ಅವಕಾಶವೆಂಬುದೇ ಇರಲಿಲ್ಲ. ಸಮಾಜದ ದೃಷ್ಟಿಯಲ್ಲಿ ವಿಧವೆತನವೆಂಬುದು ಅತಿ ಸುಲಭವಾಗಿ ಅಪರಾಧವೆಂಬಂತೆ ನಿರ್ಣಯಗೊಂಡು ಬಿಡುತ್ತಿತ್ತು. ವಾರಣಾಸಿ, ಗಯಾ ಕಾಶಿಯಂತ ಯಾತ್ರಾಸ್ಥಳಗಳಲ್ಲಿ ಆಶ್ರಮಗಳಲ್ಲಿ ಇದ್ದು ಭಿಕ್ಷೆ ಬೇಡಿ ಬದುಕುವ ವಿಧವೆಯರ ಸ್ಥಿತಿ ಮತ್ತು ಅಂತಹ ಸ್ಥಳಗಳನ್ನು ದೇಹವನ್ನು ಮಾರಾಟಕ್ಕಿಟ್ಟು ಬದುಕುವ ವಿಧವೆಯರ ಸ್ಥಿತಿ ಇಂದಿಗೂ ಕೂಡ ಅತಿ ಶೋಚನೀಯ. ಇದನ್ನು Economic and Political weekly (April 1, 2000) ಯಲ್ಲಿ ಬಂದ Swath Ghosh ಅವರ Bengali widows of Varanasi : ಎನ್ನುವ ಲೇಖನ ಗಂಭೀರವಾಗಿ ಚರ್ಚೆಗೆ ಎತ್ತಿಕೊಂಡಿದೆ, ಪುರುಷ ಪ್ರಧಾನ ಸಮಾಜದ ರಾಜಕೀಯ, ಆರ್ಥಿಕ ಹುನ್ನಾರಗಳನ್ನು ಬಯಲುಗೊಳಿಸಲು ಪ್ರಯತ್ನಿಸಿದೆ"*[೧]

ಹಿಂದೂ ವಿಧವೆಯರ ಬದುಕು ಅತ್ಯಂತ ಅಸಹನೀಯವಾಗಿತ್ತು. ವೈದಿಕೇತರ ಹಲವು ಸಮಾಜಗಳಲ್ಲಿ ವಿಧವಾವಿವಾಹಕ್ಕೆ ಅವಕಾಶಗಳಿದ್ದುದು ಆ ಕಾಲಕ್ಕೆ ವಿಶೇಷವಾಗಿತ್ತು. ಅದರಲ್ಲೂ ಮೇಲ್ವರ್ಗದ ಮೇಲ್ಜಾತಿಯ ಹಿಂದೂ ವಿಧವೆಯರ ಸ್ಥಿತಿ ತುಂಬಾ ದಾರುಣವಾಗಿತ್ತು. ವಿಧವೆಯರಿಗೆ ಬೇರೆ ಆಯ್ಕೆಗಳಿರದೆ 'ವಿಧವಾ ಮೌಲ್ಯ'ಗಳಿಗೆ ಹೊಂದಿ ಬದುಕುವುದು ತೀರಾ ಅನಿವಾರ್ಯವಾಗಿತ್ತು. ವಿಧವೆಯರು ಬಾಹ್ಯವಾಗಿ ವಿರೂಪಗೊಳ್ಳುವುದು ಒಪ್ಪೊತ್ತಿನ ಊಟ ಮತ್ತು ಅಪರಿಮಿತ ಸಂಪ್ರದಾಯದ ಕಟ್ಟಳೆಗಳಿಂದ ಬಂದಿತರಾಗಿದ್ದರು. ವಿಧವೆಯರು ಜೀವಕಾಮವನ್ನು ಹತ್ತಿಕ್ಕಲಾರದೆ ಮೀರುವುದೂ ಸಾಮಾನ್ಯವಾಗಿತ್ತು. ಬಹಳ ಸಂದರ್ಭಗಳಲ್ಲಿ ಬಹಿಷ್ಕೃತರಾಗಿ ತೀರ್ಥಕ್ಷೇತ್ರಗಳಲ್ಲಿ ಅನಾಥರಾಗಿ ಬದುಕು ನಿರ್ವಹಿಸುತ್ತಿದ್ದರು. ವಿಧವೆಯರ ಅತಂತ್ರದ ಬದುಕಿನ ನೆಲೆಯಲ್ಲಿ ಸ್ವಾತಂತ್ರ್ಯ ಪೂರ್ವದ ಕಾಲಘಟ್ಟದ ಲೇಖಕಿಯರು ಕೃತಿಗಳನ್ನು ಬರೆದಿರುವುದು ಆ ಕಾಲದ ಮಹತ್ವವೇ ಆಗಿದೆ.

---

೧. ಮಹಿಳೆ : ಅಸ್ತಿತ್ವದ ಸಂಕಥನ – ಕವಿತಾರೈ – ಸಿ.ವಿ.ಜಿ ಪಬ್ಲಿಕೇಷನ್ – ಬೆಂಗಳೂರು – ೨೦೦೫–ಪು. ೧೯೨

# ಅಧ್ಯಾಯ – ೫

## ನವೋದಯ ಕಾಲಘಟ್ಟದಲ್ಲಿ ವೈಧ್ಯವ್ಯದ ಪರಿಕಲ್ಪನೆ

೧. ಪಾರಂಪರಿಕ–ಧಾರ್ಮಿಕ ಮೌಲ್ಯಗಳ ಮುಖಾಮುಖಿ

೨. ವಿಧುರ–ವಿಧವೆ–ಅಂತರಂಗದ ತಾಕಲಾಟಗಳು

೩. ಮರುವಿವಾಹ–ದಾಂಪತ್ಯ

೪. 'ವಿವಾಹ' ಬಂಧನದ ನೆಲೆಯಲ್ಲಿ

೫. ವಿಧವೆಯರ ಸಾಮಾಜಿಕ ಸ್ಥಾನಮಾನ

೬. ವಿಧವಾ ಮೌಲ್ಯಗಳ ನಿರಾಕರಣೆ

೭. ಸಾಮಾಜಿಕ ಮೌಲ್ಯಗಳಾಗಿ 'ಕೂಡಿಕೆ'–'ಸೀರುಡಿಕೆ'

೮. ವ್ಯವಸ್ಥೆಯ ವಿಕೃತಿಯಾಗಿ ವೈಧವ್ಯ

೯. ಕರ್ಮಸಿದ್ಧಾಂತದ ಹಿನ್ನೆಲೆಯಲ್ಲಿ ವೃದ್ಧವಿಧವೆಯರು

೧೦. ವಿಧವೆ ವೈಚಾರಿಕ ನೆಲೆಯಲ್ಲಿ

೧೧. ಪಾರಂಪರಿಕ ಸಮಸ್ಯೆಗಳ ಪಲ್ಲಟ

೧೨. ಮರುವಿವಾಹ ಕ್ರಾಂತಿಕಾರಿ ನೆಲೆಯಲ್ಲಿ

೧೩. ಅಸಮಾನ ನೆಲೆಯಲ್ಲಿ 'ವೈಧವ್ಯ'

೧೪. ನಗರ ಜೀವನದೊಳಗಿನ ವಿಧವಾ ಬದುಕು

ಅಧ್ಯಾಯ ೫

## ನವೋದಯ ಕಾಲಘಟ್ಟದ ವೈಧವ್ಯದ ಪರಿಕಲ್ಪನೆ

ವೈವಾಹಿಕ ಬದುಕಿನಲ್ಲಿ ವ್ಯಾಪಿಸುವ ದೀರ್ಘ ಅವಲಂಬನೆ ಹಾಗೂ ಬದುಕಿನ ಹಲವಾರು ವಿನ್ಯಾಸಗಳ ಸೂಕ್ಷ್ಮಗಳನ್ನು ನವೋದಯ ಕಾಲಘಟ್ಟದ ಕಥನ ಸಾಹಿತ್ಯಗಳು ತೆರೆದಿಡುತ್ತವೆ. ವೈವಾಹಿಕ ಬದುಕು ತೆರೆದುಕೊಳ್ಳುವ ರೀತಿಯೇ ಭಾರತೀಯ ಸಂಸ್ಕೃತಿಯಲ್ಲಿ ವಿಶೇಷವಾದುದು. ನಾಲ್ಕು ಗೋಡೆ ಮಧ್ಯೆ ಬದುಕುವ ಮಹಿಳೆಯರು ಪತಿಯ ಹೊರಜಗತ್ತಿನ ವಿವರಗಳನ್ನೆಲ್ಲಾ ಅರಿಯಲಾರರು. ದಾಂಪತ್ಯ ಜೀವನದ ಕಷ್ಟಗಳು ಪುರುಷನ ಅರಿವಿಗೆ ಬಂದಾಗಲೂ ಉಪೇಕ್ಷೆ ಮಾಡುವುದು ಸಾಮಾನ್ಯ ಸಂಗತಿ ಎನ್ನುವುದನ್ನು ಈ ಕಾಲಘಟ್ಟದ ಕೃತಿಗಳು ವಿಶ್ಲೇಷಿಸುತ್ತವೆ. 'ವಿಧವಾ ಮರುವಿವಾಹ'ದ ಸಂದರ್ಭ ಎದುರಾದಾಗ ಸಮಾಜದಲ್ಲಿ ನೆಲೆಯಾದ ಏಕಮುಖ ನೀತಿಯನ್ನು ಹಲವಾರು ಕೃತಿಗಳು ಚರ್ಚಿಸುತ್ತವೆ. ಮರುವಿವಾಹದ 'ಆಯ್ಕೆ' ಪುರುಷ ಸಮಾಜಕ್ಕೆ ಸರಳವಾಗಿದ್ದರೆ ಮಹಿಳೆಗೆ ನಿಷೇಧವಾಗಿರುವುದನ್ನು ನವೋದಯ ಕಾಲಘಟ್ಟದ ಕೃತಿಗಳು ಚರ್ಚಿಸುತ್ತವೆ. ವಿಧವೆಯ ದೈಹಿಕ ಬಯಕೆಗಳು ಸಾಮಾಜಿಕ ಕಟ್ಟುಪಾಡುಗಳಿಗೆ ಒಳಗಾಗಿ ಸಮಾಜ ಬಾಹಿರ ನೀತಿಗೆ ಪಕ್ಕಾಗಬೇಕಾದ ಅನಿವಾರ್ಯತೆಯನ್ನು ಕೃತಿಗಳು ತೆರೆದಿಡುತ್ತವೆ. 'ಪಾವಿತ್ರತೆ'ಯ ಮಾದರಿ ಅನುಸರಿಸುವ ಎಷ್ಟೋ ವಿಧವೆಯರು ತಮ್ಮೊಳಗಿನ ಜೀವಕಾಮವನ್ನು ಹತ್ತಿಕ್ಕುವುದನ್ನು ಕಥನಗಳು ವಿಶ್ಲೇಷಿಸುತ್ತವೆ. ವಿವಾಹದ ಒಳಗಾಗಲಿ, ಹೊರಗಾಗಲಿ ತನ್ನ ಅಗತ್ಯ ಕಾಮವನ್ನು ಅನುಭವಿಸುವುದಿರಲಿ ಕಲ್ಪಿಸುವುದೂ ಅಸಾಧ್ಯವೆನ್ನುವುದನ್ನು ಚಿತ್ರಿಸುತ್ತವೆ. 'ದೇಹಬಯಕೆ'ಯನ್ನು ಆ ಕಾಲದ ಕೃತಿಗಳು ನೈತಿಕ–ಅನೈತಿಕ ಧರ್ಮ–ಅಧರ್ಮದ ನೆಲೆಯಲ್ಲಿಚರ್ಚಿಸುತ್ತವೆ. ಪುರುಷನ ಸರ್ವಾಧಿಕಾರ ಬಲವಾಗಿದ್ದ ಸಾಮಾಜಿಕ ಮೌಲ್ಯಗಳನ್ನು ಮಹಿಳಾ ಬದುಕಿನ ಮೇಲೆ ಒತ್ತಾಯಪೂರ್ವಕವಾಗಿ ಹೇರಿರುವುದನ್ನು ನವೋದಯ ಕೃತಿಗಳಲ್ಲಿ ಗಮನಿಸಬಹುದು.

ಬಾಲವಿಧವೆಯರಾಗಿ ಸಮಾಜವನ್ನೆದುರಿಸುವ ರೀತಿ ತುಂಬಾ ಕ್ರೂರವಾಗಿದ್ದು ಸಾಂಪ್ರದಾಯಿಕ ಕಟ್ಟುಪಾಡುಗಳಿಂದ ಹೊರಬರಲಾರದೆ ಮಾನಸಿಕವಾಗಿ ಜರ್ಜರಿತರಾಗುತ್ತಿದ್ದ ರೀತಿಯನ್ನು ಈ ಕಾಲದ ಕೃತಿಗಳು ಅನಾವರಣಗೊಳಿಸಿವೆ. ಸ್ವಾತಂತ್ರ್ಯಪೂರ್ವದ ಕಾಲಘಟ್ಟದಲ್ಲಿ ವಿಧವಾ ಬದುಕಿನ 'ಆಯ್ಕೆ'ಗಳು ದುರ್ಬರವಾಗಿದ್ದವು. ವಿಧವಾ ಜೀವನ ವ್ಯವಸ್ಥೆಯ ವಿಕೃತಿಯಾಗಿರುವುದನ್ನು ಆ ಕಾಲದ ಕೃತಿಗಳು ಬಿಂಬಿಸಿವೆ. ವಿಧವೆಯರಾಗಿ ಬಾಳಿನ ಬವಣೆಗಳಿಂದ ಹಣ್ಣಾದ ವೃದ್ಧೆಯರು ಕರ್ಮಸಿದ್ಧಾಂತದ ಹಿನ್ನೆಲೆಯಲ್ಲಿ ನರಳುತ್ತಾರೆ. ಹೊರಜಗತ್ತಿಗೆ ವಿಧವಾ ಮೌಲ್ಯಗಳನ್ನು ಅಪ್ಪಿಕೊಂಡಂತೆ ಕಂಡರೂ ಆಂತರ್ಯದಲ್ಲಿ ವೈಚಾರಿಕತೆಯನ್ನು ತುಂಬಿಕೊಂಡಿರುವ ವಿಧವಾ ಪಾತ್ರಗಳು ಅನಾವರಣಗೊಂಡಿವೆ. ವಿಧವೆಯರು ಲಿಂಗ

ಅಸಮಾನ ನೆಲೆಯಲ್ಲಿ ಶೋಷಣೆಗೊಳಗಾಗುವ ದುರಂತ ಚಿತ್ರಣಗಳೂ ಗಮನಾರ್ಹವಾಗಿವೆ. ಸಂಪ್ರದಾಯ ಸಮಾಜಕ್ಕೆದುರಾದ ಆಧುನಿಕತೆಯನ್ನು ಮೈಗೂಡಿಸಿಕೊಳ್ಳಲಾಗದೆ ನಲುಗುವುದನ್ನು ಆ ಕಾಲಘಟ್ಟದಲ್ಲಿ ಚಿತ್ರಣ ಗೊಂಡಿರುವುದನ್ನು ಈ ಅಧ್ಯಾಯ ಒಳಗೊಂಡಿದೆ.

ನವೋದಯ ಕಾಲಘಟ್ಟದ ಕಥನ ಸಾಹಿತ್ಯ ವೈಧವ್ಯವನ್ನು ಕುರಿತು ವ್ಯಾಪಕವಾದ ಚರ್ಚೆಗೊಳಪಡಿಸಿವೆ. ವಿಧವೆಯ ಒಳಗಿನ ಪ್ರಕೃತಿ ಸಹಜ ಭಾವನೆಗಳಿಗೆ ಪಾರಂಪರಿಕ ಮತ್ತು ಧಾರ್ಮಿಕ ಮೌಲ್ಯಗಳು ಮುಖಾಮುಖಿಯಾಗುವುದನ್ನು ಗುರುತಿಸಬಹುದು. ಗಂಡನ ಮರಣದ ನಂತರ ಹೆಂಡತಿ ವಿಧವೆಯಾದರೆ ಹೆಂಡತಿಯ ಮರಣದ ನಂತರ ಗಂಡ ವಿಧುರನಾಗುವುದು ಸಹಜವಾದುದು. ವಿಧವೆಗೆ ಮರುವಿವಾಹ ನಿಷೇಧವಾಗಿ ವಿಧುರ ಎಷ್ಟಾದರೂ ವಿವಾಹವಾಗುವುದರ ಹಿಂದಿರುವ ಸಾಮಾಜಿಕ ಮೌಲ್ಯದ ಏಕಮುಖ ನೀತಿಯನ್ನು ಈ ಕಾಲಘಟ್ಟದ ಕಥನಗಳು ವಿಶ್ಲೇಷಿಸುತ್ತವೆ. ದಾಂಪತ್ಯದ ತಳಹದಿಯಲ್ಲಿ ಬಿರುಕುಂಟಾದಾಗ ಪುರುಷನಿಗೆ 'ಮರುವಿವಾಹ' ಸರಳವಾದ ಪರಿಹಾರವಾದರೆ ಮಹಿಳೆ ಅವಕಾಶ ವಂಚಿತಳಾಗುತ್ತಾಳೆ. ವಿಧುರ ವಿವಾಹಗಳು ನಿರಂತರವಾಗಿ ನಡೆಯುತ್ತ ಸಮಾಜದ ದ್ವಿಸ್ತರ ನೀತಿಯನ್ನು ತೆರೆದಿಡುತ್ತವೆ. ವಿಧವೆ-ವಿಧುರ ಇಬ್ಬರೂ 'ವಿವಾಹ'ದ ಚೌಕಟ್ಟಿನೊಳಗೆ ತಮ್ಮ ವ್ಯಕ್ತಿತ್ವವನ್ನು ಪಕ್ವವಾಗಿಸಿಕೊಳ್ಳುವುದರ ಕಡೆಗೆ ಮಹತ್ವ ನೀಡಿರುವುದನ್ನು ನಿರೂಪಿಸಲಾಗಿದೆ. ಶತಶತಮಾನಗಳಿಂದ ಮಹಿಳೆ ವೈಧವ್ಯಕ್ಕೆ ಹೊಂದಿಕೊಳ್ಳುವಂತೆ ನೋಡಿಕೊಂಡಿರುವುದರ ಚಿತ್ರಣಗಳೂ ಅಭಿವ್ಯಕ್ತವಾಗಿವೆ.

ನವೋದಯ ಕಾಲಘಟ್ಟದ ಕಥನಗಳು ಶತಮಾನಕ್ಕಿಂತಲೂ ಹಿಂದಿನ ಬದುಕಿನ ವೈಧವ್ಯವನ್ನು ಕುರಿತು ವಿಶ್ಲೇಷಿಸುತ್ತವೆ. ಕುಟುಂಬದಲ್ಲಿ ಮಹಿಳೆ ಪಡೆಯುವ ಲೈಂಗಿಕ ಪರವಾನಗಿ ಪುರುಷನ ಆಕಾಂಕ್ಷೆಗಳಿಗೆ ಪೂರಕವಾಗಿ ಆಕೆಗೆ ಬಂಧನವಾಗಿರುವುದು ಚರ್ಚೆಗೊಳಗಾಗುತ್ತವೆ. ತಳಸಮುದಾಯದಲ್ಲಿದ್ದ 'ಕೂಡಿಕೆ' 'ಸೀರುಡಿಕೆ'ಯಂತಹ 'ಮರುವಿವಾಹ' ಪದ್ಧತಿ ಈ ಕಾಲಘಟ್ಟದ ಕೃತಿಗಳಲ್ಲಿ ಅನಾವರಣಗೊಂಡಿವೆ. ವಿಧವಾ ಬದುಕು ಶೀಲ ಸಂಹಿತೆಯ ಗೆರೆದಾಟದಿರುವಂತೆ ಕಟ್ಟುನಿಟ್ಟಾಗಿರುವುದನ್ನು ಗುರುತಿಸುತ್ತವೆ. ವಿಧವೆಯರು ಮಾತೃತ್ವದ ಪರಿಕಲ್ಪನೆಯಿಂದ ಉನ್ನತಸ್ತರದಲ್ಲಿ ಚಿತ್ರಣಗೊಂಡಿರುವುದನ್ನು ಗಮನಿಸಬಹುದು. ವಿಧವೆಯರ ಬದುಕನ್ನು ಸಾಮಾಜಿಕ ಹಿನ್ನೆಲೆಯಲ್ಲಿ ಗ್ರಹಿಸುವುದಕ್ಕಿಂತ ಹೆಚ್ಚಾಗಿ ಆಕೆಯ ಮಾನಸಿಕ ಲೋಕ ವಿಶ್ಲೇಷಣೆಯಾಗಿರುವುದನ್ನು ಈ ಕಾಲಘಟ್ಟದ ಕಥನಗಳಲ್ಲಿ ಗುರುತಿಸಬಹುದು. ಸಾಂಪ್ರದಾಯಿಕ ಮೌಲ್ಯಗಳೊಂದಿಗೆ ಆಧುನಿಕ ಬದುಕು ಸಂಘರ್ಷಕ್ಕೊಳಗಾಗುವುದು ಗಮನಾರ್ಹವಾಗಿದೆ.

೧. **ಪಾರಂಪರಿಕ ಮತ್ತು ಧಾರ್ಮಿಕ ಮೌಲ್ಯಗಳ ಮುಖಾಮುಖಿ :**

ವಿಷಮಶೀತ ಜ್ವರದಿಂದ ಪತಿಯನ್ನು ಕಳೆದುಕೊಂಡು ವಿಧವೆ ಆ ಮನೆಯಲ್ಲಿ ತನ್ನ ಭಾವನೆಗಳ ವಿರುದ್ಧ ಹೋರಾಡುತ್ತ ಬದುಕುವುದನ್ನು 'ನನ್ನ ದೇವರು' ಕಥೆಯಲ್ಲಿ ಕುವೆಂಪುರವರು ಚಿತ್ರಿಸುತ್ತಾರೆ. ಆಕೆಗೆ ಪತಿಯನ್ನು ಕಳೆದುಕೊಂಡ ದುಃಖ ಶಮನವಾಗದಿರುವಾಗ ಅವಳ ಭಾವನ ಸಾಂತ್ವಾನ ಸ್ವಲ್ಪಮಟ್ಟಿನ ನೆಮ್ಮದಿಯನ್ನು ತರುತ್ತದೆ. ಅವಳ ಪತಿಯೊಂದಿಗೆ ಅವನ ಅಣ್ಣ ಇಟ್ಟುಕೊಂಡ ಪ್ರೀತಿ, ಅದರಿಂದ ತಮ್ಮನ ಸಾವಿನ ಶಯ್ಯೆಯಲ್ಲಿ ಮಾಡಿದ ಸೇವೆ ಇವುಗಳಿಂದ ಧನ್ಯತಾ ಭಾವನೆಯನ್ನು ತಾಳುತ್ತಾಳೆ. ಪತಿಯ ಮರಣದ ದುಃಖ ಕಾಲಕ್ರಮೇಣ ಮರೆಯಾಗುತ್ತ ಪ್ರಕೃತಿ ಸಹಜವಾದ ದೈಹಿಕ ತುಡಿತಗಳು ಅವ್ಯಕ್ತವಾಗಿ ನೆಲೆಯಾಗುತ್ತವೆ. ಪತಿಯನ್ನು ಕಳೆದುಕೊಂಡಾಗ ಅವಳ ಬಾಹ್ಯ ಅಲಂಕಾರಗಳನ್ನು ನಾಶಮಾಡುವುದನ್ನು ಕಥೆಯಲ್ಲಿ ಹೀಗೆ ಹೇಳುತ್ತಾರೆ.

> *"ಮರುದಿನದಲ್ಲಿ ಸ್ಮಶಾನದಲ್ಲಿ ನನ್ನ ಕೈಬಳೆ ಒಡೆದರು. ನನ್ನ ಮೈಮೇಲಿದ್ದ ಆಭರಣಗಳನ್ನೆಲ್ಲ ತೆಗೆದರು. ಮಂಗಲಸೂತ್ರ ಬಿಚ್ಚಿದರು. ನನ್ನ ಕಣ್ಣೆದುರಿನಲ್ಲಿಯ ಅಗ್ನಿ ದೇವನು ನನ್ನ ಪ್ರಿಯ ಪತಿಯ ದೇಹವನ್ನು ತನ್ನ ಭೀಮ ಜ್ವಾಲಾಜಿಹ್ವೆಗಳಿಂದ ನುಂಗಿಕೊಂಡನು. ನಾನೂ ಮಾವನ ಮನೆಗೆ ಬಂದ ಒಂದು ವರ್ಷದಲ್ಲಿಯೇ ನನ್ನ ಸಕಲ ಸೌಭಾಗ್ಯವೂ ಬರಿದಾಯಿತು. ನನಗಾಗ ಹದಿನೈದು ತುಂಬಿತ್ತು"*[1]

ಆಕೆಯ ಬಾಹ್ಯ ಸೌಂದರ್ಯ ಅಲಂಕಾರಗಳೆಲ್ಲ ಮರೆಯಾಗಿರಬಹುದು. ಆದರೆ ಅವಳ ಆಂತರ್ಯದ ಭಾವನೆಗಳನ್ನು ಪ್ರಕೃತಿ ಸಹಜ ಬಯಕೆಗಳನ್ನು ತೊಡೆದು ಹಾಕುವುದು ಕಷ್ಟಸಾಧ್ಯ. ಕಾಲ ಕಳೆದಂತೆ ಅವಿವಾಹಿತನಾದ ಭಾವನಲ್ಲಿ ತನ್ನ ಪತಿಯನ್ನು ಕಾಣುತ್ತ ಬದುಕುತ್ತಾಳೆ. ಅವಳ ಬಯಕೆಗಳು ತೀವ್ರವಾದಾಗ ಹೋರಾಟವಾಗಿ ಪರಿಣಮಿಸಿತು. ಅವಳ ಭಾವನನ್ನು ಎದುರಿಸಲಾಗದೆ ಚಡಪಡಿಸುತ್ತಾಳೆ.

ಒಮ್ಮೆ ಕಲ್ಲುಗುಡ್ಡಕ್ಕೆ ಹೋಗಿ ಹಾಡುತ್ತ ಕುಳಿತಿರುವ ಭಾವನನ್ನು ನೋಡುವ ತವಕ ಕಾಡುವುದು. ಮತ್ತೆ ಅನುಸರಿಸಿ ಹೋಗಿ ಅವರನ್ನು ಸಂಧಿಸಿ ಮಾತನಾಡಿಸಿದಾಗ ತಾನು ನಿರಪರಾಧಿ ಎಂದುಕೊಳ್ಳುವ ತೊಳಲಾಟಗಳಿಂದ ಬಳಲುತ್ತಾಳೆ. ವಿಧವೆ ತನ್ನೊಳಗನ್ನು ಮರೆಮಾಚಿ ಏನೋ ದಿಗ್ವಿಜಯ ಸಾಧಿಸಿದವರಂತೆ ನಟಿಸುತ್ತಾಳೆ. ಸಹಜವಾಗಿ ಅವಳ ವಯೋಸಹಜ ಭಾವನೆಗಳನ್ನು ಹತ್ತಿಕ್ಕಲಾರದೆ ಅವಳ ಭಾವನ ವರ್ತನೆಯನ್ನು ಛದ್ಮವೇಶದ ಪ್ರೇಮ ಎಂದು ಭಾವಿಸುತ್ತಾಳೆ. ಆದರೆ ಅವಳಲ್ಲಿದ್ದ ಪ್ರಕೃತಿ ಸಹಜ ಭಾವನೆಗಳಿಗೆ ಪಾರಂಪರಿಕ ಧಾರ್ಮಿಕ ಮೌಲ್ಯಗಳು ಮುಖಾಮುಖಿಯಾಗುವುದನ್ನು ಲೇಖಕರು ವಿವರಿಸುತ್ತಾರೆ. ಇಬ್ಬರು ತಮ್ಮ ದೈಹಿಕ ಕಾಮನೆಗಳನ್ನು ಅದುಮಿಟ್ಟು ತೋರುಗಾಣಿಕೆಗಾದರೂ ಸಾಮಾಜಿಕ ಮೌಲ್ಯಗಳನ್ನು

೧. ನನ್ನ ದೇವರು – ಕುವೆಂಪು. – ಉದಯರವಿ ಪ್ರಕಾಶನ – ಮೈಸೂರು – ೧೯೯೦ – ಪು. ೩

ಪ್ರತಿಪಾದಿಸುವ ಅನಿವಾರ್ಯತೆ ಕಥೆಯಲ್ಲಿ ಅನಾವರಣಗೊಂಡಿದೆ. ಅವಿವಾಹಿತ ಯುವಕ, ವಿಧವೆಯಾದ ಯುವತಿ ತಮ್ಮ ಸಹಜ ವಯೋಮಾನಕ್ಕೆ ತಕ್ಕಂತೆ ಬದುಕುವ ಸ್ವಾತಂತ್ರ್ಯವನ್ನು ಕಳೆದುಕೊಂಡು ಬದುಕುವುದನ್ನು ಸಮಾಜ ಹೇರಿದ ಕಟ್ಟುಪಾಡುಗಳು ಎಂದು ಭಾವಿಸಬಹುದು.

**೨. ವಿಧುರ-ವಿಧವೆ : ಅಂತರಂಗದ ತಾಕಲಾಟಗಳು**

'ಆದರ್ಶಸಾಧನೆ'ಯ ನಾಯಕ ಸನ್ಯಾಸಿಯಾಗಿ ತನ್ನ ಹೆಸರು ಧರ್ಮಚರಿತ್ರೆಯಲ್ಲಿ ಪ್ರತಿ ಪುಟದಲ್ಲಿಯೂ ಸುವರ್ಣಾಕ್ಷರಗಳಲ್ಲಿ ಲಿಖಿತವಾಗುವುದು ಎಂದು ಹರ್ಷಿತನಾಗಿದ್ದವನು. ವಿದ್ಯಾಭ್ಯಾಸ ಮುಗಿಸಿ ಊರಿಗೆ ಬಂದಾಗ ಮಾವನ ಮಗಳನ್ನು ನೋಡುತ್ತಿದ್ದಂತೆ ಬ್ರಹ್ಮಚರ್ಯವ್ರತ ಕ್ರಮೇಣ ಕರಗತೊಡಗಿತು. ಸಂಸಾರಿಯಾದ ಮೇಲೆ ಸಂಸಾರದಲ್ಲಿ ನಿರ್ಲಿಪ್ತನಾಗಿದ್ದು ಲೋಕೋಪಕಾರ ಮಾಡುವ ಕನಸು ಕಾಣುತ್ತ ಆದರ್ಶ ವ್ಯಕ್ತಿಯಾಗಲು ಬಯಸುತ್ತಾನೆ. ಸ್ನೇಹಿತರು ಸಂನ್ಯಾಸ ತ್ಯಜಿಸಿದ್ದಕ್ಕೆ ಗೇಲಿಮಾಡುವ ಮೊದಲೆ ಸಂಸಾರ ಸಾರದ ಬಗ್ಗೆ ಉದ್ದುದ್ದ ಭಾಷಣ ಮಾಡಿ ತನ್ನ ಆದರ್ಶ ಸ್ಥಾನವನ್ನು ಕಾಪಾಡಿಕೊಳ್ಳುತ್ತಾನೆ. ತಾನು ಫೇಲಾಗಿದ್ದನ್ನೂ ಸಮರ್ಥಿಸಿಕೊಳ್ಳುತ್ತಾನೆ.

> *"ನಾನು ಫೇಲಾದುದಕ್ಕಾಗಿ ವಿದ್ಯಾಭ್ಯಾಸವನ್ನು ನಿಲ್ಲಿಸಲಿಲ್ಲ. ಅಧೈರ್ಯವೆಂಬುದು ನಾನಿದ್ದೆಡೆ ಕಾಲಿಡಲರಿಯದು. ಆದರೆ ದೇಶೋದ್ಧಾರದ ದೃಷ್ಟಿಯಿಂದ ಗ್ರಾಮನಿವಾಸಿಯಾಗಿದ್ದೇನೆ. ಸ್ವಸಾಮರ್ಥ್ಯದಿಂದಲೇ ಆದರ್ಶ ಜ್ಞಾನಿಯಾಗುತ್ತೇನೆ. ಸಾಕ್ರೆಟೀಸನು ಎಂ.ಎ.ಪ್ಯಾಸು ಮಾಡಿದ್ದನೆ ? ವೇದವ್ಯಾಸರು ವಿಶ್ವವಿದ್ಯಾನಿಲಯದಲ್ಲಿ ಓದಿದ್ದರೆ ? ವಾಲ್ಮೀಕಿಗೆ ಸ್ಕಾಲರ್‌ಶಿಪ್ ಬರುತ್ತಿತ್ತೇ ಎಲ್ಲರೂ ಪಟ್ಟಣಗಳಲ್ಲಿ ಸೇರಿಬಿಟ್ಟರೆ ಹಳ್ಳಿಯನ್ನು ಉದ್ಧಾರ ಮಾಡುವವರಾರು ?"*[೧]

ಎನ್ನುತ್ತ ವಿಶೇಷವಾಗಿ ಆದರ್ಶವಾದಿಯಾಗಿ ಬಿಂಬಿಸಿಕೊಳ್ಳುತ್ತಾನೆ. ಆದರೆ ಆದರ್ಶವ್ಯಕ್ತಿಯ ಮುಖವಾಡ ಪತ್ನಿ ರೋಹಿಣಿಯ ಮುಂದೆ ನಿರಂತರವಾಯಿತು.

ಒಂದು ಗಂಡುಮಗುವಿಗೆ ಜನ್ಮ ನೀಡಿದ ರೋಹಿಣಿ ಕಾಯಿಲೆಯಿಂದ ನರಳಿ ತೀರಿಕೊಳ್ಳುತ್ತಾಳೆ. ಇದರಿಂದ ಸಾಕಷ್ಟು ಹಣ್ಣಾದವನಿಗೆ ಸಂಬಂಧಿಕರು ಮರುಮದುವೆಗೆ ಒತ್ತಾಯ ಮಾಡಿದಾಗ ಎರಡನೆ ಮದುವೆ 'ಮಹಾಪಾಪ' ಎಂದು ಮತ್ತೆ ಆದರ್ಶವಾದಿಯ ಮುಖವಾಡವನ್ನು ಧರಿಸುತ್ತಾನೆ. ಇದರೊಳಗೂ ಅನೇಕದಿನ ಬದುಕಲಾಗದೆ ಮರುಮದುವೆಗೆ ಪುನಃ ಸಿದ್ಧನಾಗುತ್ತಾನೆ. ವಿವಾಹದ ಸಂದರ್ಭದಲ್ಲಿ ಸರ್ವ ಋಷಿ, ವೇದ ಶಾಸ್ತ್ರ ಮಹಾಪುರುಷರನ್ನು ಸರ್ವ ತೀರ್ಥಗಳನ್ನು ಕರೆದು ನಾನು ನನ್ನ ಪತ್ನಿಯನ್ನು ಅನಂತಕಾಲದವರೆಗೆ ಕೈ ಬಿಡದೆ ಪ್ರೀತಿಸುತ್ತೇನೆ ಎಂದು ಹೇಳುವುದು ವಿರೋಧಾಭಾಸವಾಗಿ ಕಾಣುತ್ತದೆ.

---

೧. ಆದರ್ಶ ಸಾಧನೆ – ಕುವೆಂಪು. – ಉದಯರವಿ ಪ್ರಕಾಶನ – ಮೈಸೂರು – ೧೯೯೦ – ಪು. ೨೪

*"ನನ್ನ ಮನಸ್ಸಿಗೆ ಎರಡನೆ ಸಾರಿ ವಿವಾಹವಾಗುವುದು ವ್ಯಭಿಚಾರಕ್ಕಿಂತಲೂ ಭಯಂಕರವಾಗಿ ತೋರಿತು. ದ್ವಿತೀಯ ವಿವಾಹ ಎಷ್ಟು ಶಾಸ್ತ್ರ ಸಮ್ಮತವಾದರೂ ಪ್ರಥಮ ಪತ್ನಿದ್ರೋಹ ಎಂದು ಕಂಡುಬಂದಿತು. ಸ್ತ್ರೀಯು ಗಂಡ ಸತ್ತರೆ ತಾನು ದೇವತೆಗಳಿಗಿತ್ತ ಭಾಷೆಯನ್ನು ಪಾಲಿಸುತ್ತಾಳೆ. ಆದರೆ ಪುರುಷನು ಆಕೆಗೆ ದ್ರೋಹವೆಸಗುತ್ತಾನೆ. ಪ್ರೇಮ ನಿಶ್ಚಲವೂ ಶಾಶ್ವತವೂ ಆಗಿರಬೇಕು. ಸತಿ ಮಡಿದೊಡನೆ ಮತ್ತೊಬ್ಬಳನ್ನು ಬಯಸುವ ಪ್ರೇಮ ನಿಸ್ಸಂದೇಹವಾಗಿ ವೇಷಾಂತರ ಹೊಂದಿದ ಕಾಮ. ನಾನು ಆದರ್ಶ ಪತಿಯಾಗಿರುತ್ತೇನೆ."*[೧]

ಎಂದು ತಾನು ಲೋಕೋಪಕಾರಕ್ಕಾಗಿ 'ಕಾಮಿಯಲ್ಲ ನಿಷ್ಕಾಮಪ್ರೇಮಿ' ಎಂದು ಜಗತ್ತಿಗೇ ತೋರುತ್ತೇನೆ ಎಂದು ಸಂಕಲ್ಪ ಮಾಡುತ್ತಾನೆ. ರೋಹಿಣಿಯ ತಂಗಿ ಮಗುವನ್ನು ನೋಡಿಕೊಳ್ಳಲು ತನ್ನ ಮನೆಯಲ್ಲಿರುವುದು ಅವನ ಬ್ರಹ್ಮಚರ್ಯವ್ರತಕ್ಕೆ ಭಂಗಬರುತ್ತದೆ. ಅವಳಲ್ಲಿ ಅಂಕುರಿಸಿದ ಪ್ರೇಮ ಮದುವೆಯಲ್ಲಿ ಮುಕ್ತಾಯವಾಗುತ್ತದೆ. ತನ್ನ ಎಲ್ಲಾ ಆದರ್ಶಗಳನ್ನು ಮುರಿಯುವುದಕ್ಕೂ ಸ್ವಾಭಾವಿಕವಾದುದಕ್ಕೆ ಅಸ್ವಾಭಾವಿಕವಾದುದನ್ನು ಹೋಲಿಸುತ್ತ 'ಮರುವಿವಾಹ'ವೇ ಸ್ವಾಭಾವಿಕವಾದುದೆಂದು ಒಪ್ಪಿಕೊಳ್ಳುವುದು ಅವನ ಮನಸ್ಸಿನ ದೌರ್ಬಲ್ಯವನ್ನು ಸೂಚಿಸುತ್ತದೆ. ಇಲ್ಲಿ ಕಥೆಯ ನಾಯಕ ಆದರ್ಶತತ್ವಗಳನ್ನು ಆರೋಪಿಸಿಕೊಳ್ಳುತ್ತ ಅದರಿಂದ ಹೊರಬರಲು ನಡೆಸುವ ಹೋರಾಟ ನಗೆಪಾಟಲಿಗೆ ಗುರಿಯಾಗುತ್ತದೆ. ರೋಹಿಣಿಯ ತಂಗಿ ಸೀತೆಯನ್ನು ತಾನು ಮದುವೆಯಾದರೆ ಮಾತ್ರಸುಖಿಯಾಗಲು ಸಾಧ್ಯ ಎಂದು ಭಾವಿಸುತ್ತ ತನ್ನ ಅಪೇಕ್ಷೆಗಳನ್ನು ಹತ್ತಿಕ್ಕಲಾರದೆ ಚಡಪಡಿಸುತ್ತಾನೆ. ತಾನು ಎಲ್ಲಿ 'ಆದರ್ಶವಾದಿ' ಎಂದು ಬಿಂಬಿಸಲು ಪ್ರಯತ್ನಿಸುತ್ತಾನೋ ಅಲ್ಲೆಲ್ಲ ಸೋಲು ಒಪ್ಪಿಕೊಳ್ಳುತ್ತಾ ಸಾಗುತ್ತಾನೆ.

ಈ ಕಥೆ ವಿಧುರನ ಮರುವಿವಾಹವನ್ನು 'ಮಹಾತ್ಯಾಗ' ಎಂದು ಭಾವಿಸುತ್ತ ತನ್ನದು ಆದರ್ಶ ಜೀವನ ಎಂದು ಪ್ರತಿಪಾದಿಸುತ್ತದೆ. 'ನನ್ನದೇವರು' ಕಥೆಯ ನಾಯಕಿ ವಿಧವೆಯಾಗಿ ಅನುಭವಿಸುವ ಸಂಘರ್ಷಕ್ಕೂ ಈ ಕಥೆಯ ನಾಯಕ ವಿಧುರನಾಗಿ ಸಂಘರ್ಷಕ್ಕೊಳಗಾಗುವುದಕ್ಕೂ ಬಹಳಷ್ಟು ವ್ಯತ್ಯಾಸಗಳಿವೆ. ಇಲ್ಲಿ ವಿಧುರ ಮರುವಿವಾಹವಾಗಬಹುದಾದರೆ 'ನನ್ನ ದೇವರು' ಕಥೆಯ ನಾಯಕಿ ವಿಧವೆಗೆ ಮರುವಿವಾಹವಾಗುವುದು ವ್ಯವಸ್ಥೆಯಲ್ಲಿ ಸಾಧ್ಯವಿಲ್ಲ. ಪುರುಷ ಪ್ರಧಾನ ವ್ಯವಸ್ಥೆ ರೂಢಿಗತವಾಗಿಟ್ಟಿರುವ 'ಮೌಲ್ಯಗಳು' ಹೆಣ್ಣಿಗೊಂದು ಗಂಡಿಗೇ ಒಂದು ಬಗೆಯದು. 'ನನ್ನ ದೇವರು' ಕಥೆಯ ನಾಯಕಿ ಎಷ್ಟೇ ಪ್ರಯತ್ನ ಪಟ್ಟರು ಅವಳಿಗಿದ್ದ ನೈತಿಕ ಚೌಕಟ್ಟನ್ನು ಮೀರಿ ಅವಿವಾಹಿತನಾದ ಭಾವನನ್ನು ಮದುವೆಯಾಗಲು ಸಾಧ್ಯವಾಗುವುದಿಲ್ಲ. ಆದರೆ 'ಆದರ್ಶ ಸಾಧನೆ'ಯ ನಾಯಕ ವಿಧುರ ಆದರ್ಶಗಳನ್ನು ಬಾಹ್ಯದಲ್ಲಿ ಪ್ರದರ್ಶನಕ್ಕಿಟ್ಟು ತನ್ನ ಅನುಕೂಲಕ್ಕೆ ತಕ್ಕಂತೆ ಬದುಕಬಲ್ಲ. ಎರಡೂ ಕಥೆಯಲ್ಲಿ ಬರುವ 'ವಿಧುರ' ಮತ್ತು 'ವಿಧವೆ' ಅಂತರಂಗದ ತಾಕಲಾಟಗಳಲ್ಲಿ

---

೧. ಆದರ್ಶ ಸಾಧನೆ – ಕುವೆಂಪು. – ಉದಯರವಿ ಪ್ರಕಾಶನ – ಮೈಸೂರು – ೧೯೬೦ – ಪು. ೨೭

ಸಮಾನರು. ಆದರೆ ಅದನ್ನು ಮೀರುವುದು 'ಆದರ್ಶಸಾಧನೆಯ' ನಾಯಕನಿಗೆ ಸಾಧ್ಯವಾದರೆ, 'ನನ್ನ ದೇವರು' ಕಥೆಯ ನಾಯಕಿಗೆ ಅಸಾಧ್ಯ. ಇಂತಹ ದ್ವಿಸ್ತರ ಸಾಮಾಜಿಕ ನೀತಿ ಕಾಮಸಂಬಂಧಿ ವಿಚಾರದಲ್ಲಿ ಲಿಂಗ ಅಸಮಾನತೆಯನ್ನು ಹುಟ್ಟುಹಾಕಿರುವುದನ್ನು ಕಥೆಯಲ್ಲಿ ಚರ್ಚಿಸುತ್ತಾರೆ.

೩. ಮರುವಿವಾಹ-ದಾಂಪತ್ಯ

ಕುವೆಂಪುರವರ 'ಔದಾರ್ಯ' ಕಥೆಯಲ್ಲಿ ಬರುವ ಡೆವಿಡ್ ಮೇಷ್ಟರು ಪತ್ನಿಯನ್ನು ಕಳೆದುಕೊಂಡು ಮಗುವಿನ ಹೊಣೆ ಹೊರಬೇಕಾಯಿತು. ಮಗುವಿನ ಪಾಲನೆಗಾಗಿ ಒದಗಿದ ಮಹಿಳೆಯನ್ನೇ ಮರುವಿವಾಹವಾಗುವ ಸಂದರ್ಭವೊದಗಿ ವಿವಾಹವೂ ನಡೆಯಿತು. ಬರುಬರುತ್ತಾ ದಾಂಪತ್ಯದಲ್ಲಿ ಬಿರುಕುಂಟಾಯಿತು. ಪತ್ನಿ ಹೈಸ್ಕೂಲಿನಲ್ಲಿ ಉಪಾಧ್ಯಾಯಿನಿಯಾಗಿದ್ದು ಅಲ್ಲಿಯ ಉಪನ್ಯಾಸಕರೊಬ್ಬರೊಂದಿಗೆ ದುಷ್ಟಸಂಬಂಧ ಹೊಂದಿರುವುದೂ ದೇವಿಡ್ ಮೇಷ್ಟರಿಗೆ ತಿಳಿಯಿತು. ಆದರೂ ಹೊಂದಾಣಿಕೆಗಾಗಿ ಔದಾರ್ಯವನ್ನು ತೋರುತ್ತಾರೆ.

> *"ಸ್ವಾಮಿ ದುಡ್ಡು ಕೊಟ್ಟು ಔದಾರ್ಯ ತೋರಿಸಬಹುದು, ಭೂಮಿಕೊಟ್ಟು ಔದಾರ್ಯತೋರಿಸಬಹುದು ; ತನ್ನನ್ನೇ ಕೊಂದವನನ್ನು 'ಕ್ಷಮಿಸುದೇವ' ಎಂದು ಕ್ರಿಸ್ತ ಸ್ವಾಮಿಯಂತೆ ಔದಾರ್ಯ ತೋರಿಸಬಹುದು ಆದರೆ ನಾನು ತೋರಿಸಿದ ಔದಾರ್ಯ ಇದೆಲ್ಲವನ್ನೂ ಮೀರಿದುದೆಂದು ನನ್ನ ಭಾವನೆ !*[೧].

ಆ ಊರಿನಿಂದ ವರ್ಗವಾಗಿ ಈ ಊರಿಗೆ ಬಂದೆ. ಕೆಲವೇ ದಿನಗಳಲ್ಲಿ ನನ್ನ ಮಗು ತೀರಿಹೋದ ವಿಷಯ ತಿಳಿದು ಹತಾಶನಾದೆ ಎನ್ನುತ್ತ ಕೆಲವೇ ದಿನಗಳಲ್ಲಿ ಆತ್ಮಹತ್ಯೆಗೆ ಪ್ರಯತ್ನ ಮಾಡಿದ್ದನ್ನು ಶಿಷ್ಯನೊಂದಿಗೆ ಹೇಳಿಕೊಳ್ಳುತ್ತಾರೆ. ಆದರ್ಶ ಸಾಧನೆಯ ನಾಯಕ ಆದರ್ಶದ ಮುಖವಾಡ ಕಳಚಿಟ್ಟು ಆದರ್ಶವನ್ನು ತನ್ನಿಷ್ಟಕ್ಕೆ ತಕ್ಕಂತೆ ಬದಲಾಯಿಸುತ್ತ ಮರುಮದುವೆಯಾಗುತ್ತಾನೆ. 'ಮರುವಿವಾಹ' ಅವನಿಗೆ ಆದರ್ಶ. 'ಔದಾರ್ಯ'ದ ಡೇವಿಡ್ ಮೇಷ್ಟರು ಮಗುವಿನ ಪಾಲನೆಗಾಗಿ ಮರುವಿವಾಹವಾಗುತ್ತಾರೆ. ಎರಡೂ ಕಥೆಯಲ್ಲಿ ವಿಧುರರ 'ಮರುವಿವಾಹ'ವಾಗುವ ಸಂದರ್ಭಗಳು ಸಮಾಜದಲ್ಲಿ ಹೆಣ್ಣಿಗೆ ಇಲ್ಲದ 'ಆಯ್ಕೆ'ಯನ್ನು ಪುರುಷ ಹೊಂದಿರುವುದನ್ನು ತಿಳಿಸುತ್ತದೆ.

'ಮೀನಾಕ್ಷಿಯ ಮನೆಮೇಷ್ಟರು' ಕಥೆಯಲ್ಲಿಯೂ 'ವಿಧುರನ ವಿವಾಹ'ವನ್ನು ನಿರೂಪಿಸುತ್ತಾರೆ. ಶ್ರೀಮಂತ ಕುಟುಂಬದ ಮೀನಾಕ್ಷಿ ನೋಡಲು ಅಷ್ಟೇನೂ ಸುಂದರಿಯಲ್ಲ. ನಯವಿನಯದಿಂದ ಪಾಠಹೇಳಲು ಬಂದ ಮೇಷ್ಟರಿಗೆ ಇಷ್ಟವಾಗುತ್ತಾಳೆ. ಕಾಲೇಜು ಕಲಿಯುತ್ತಾ ಮನೆ ಪಾಠಮಾಡುತ್ತಿದ್ದ ಮೀನಾಕ್ಷಿ ಮೇಷ್ಟರಿಗೆ ಮೀನಾಕ್ಷಿಯನ್ನು ತನಗೆ ವಿವಾಹ ಮಾಡತ್ತಾರೆ ಎಂದು ಕನಸು ಕಾಣುವುದು ಕಥೆಯಲ್ಲಿ

೧. ಔದಾರ್ಯ - ಕುವೆಂಪು. - ಉದಯರವಿ ಪ್ರಕಾಶನ - ಮೈಸೂರು - ೧೯೯೦ - ಪು. ೩೮

ಸಹಜವಾಗಿ ಬಂದಿದೆ. ಮೀನಾಕ್ಷಿಯ ತಂದೆ ಮನೆಪಾಠ ನಿಲ್ಲಿಸುವಂತೆ ಹೇಳಿದಾಗ ನಿರಾಶರಾಗುತ್ತಾರೆ. ಮೀನಾಕ್ಷಿಯ ಮದುವೆ 'ವಿಧುರ'ನೊಂದಿಗೆ ಎಂದು ತಿಳಿದಾಗ ಇನ್ನೂ ಹತಾಶರಾಗಿ ಆಕೆಯ ಮದುವೆ ತಪ್ಪಿಸಲು ಎಡಗೈಯಿಂದ ಮೀನಾಕ್ಷಿಯ ತಂದೆ ಮತ್ತು ಮೀನಾಕ್ಷಿಯ ಭಾವೀಪತಿಗೆ ಬರೆಯುವ ಅನಾಮಧೇಯ ಪತ್ರಗಳು ವ್ಯರ್ಥವಾಗುತ್ತವೆ.

ಮೀನಾಕ್ಷಿಯನ್ನು ಮದುವೆಯಾಗಲು ಒಪ್ಪಿದ ವಿಧುರನ ಬಗ್ಗೆ ಇದ್ದ ಅಸಮಾಧಾನದಿಂದ ಮೇಷ್ಟರು ಚಾಕುವಿನಿಂದ ಇರಿದು ಕೊಲೆಮಾಡುವ ನಿರ್ಧಾರಕ್ಕೆ ಬರುತ್ತಾರೆ. ಅದರೆ ಇವ್ಯಾವುದರ ಅರಿವಿಲ್ಲದ ಮೀನಾಕ್ಷಿ ಮತ್ತು ಮೀನಾಕ್ಷಿಯ ಪತಿ ಅವರ ಆಗಮನವನ್ನು ಬಹಳ ಗೌರವದಿಂದ ಕಾಣುತ್ತಾರೆ. ಅವರ ಅತಿಥಿ ಸತ್ಕಾರಕ್ಕೆ ಅವರ ಶಿಷ್ಟ ಸಂಸ್ಕೃತಿಗೆ ತಲೆಬಾಗಿದ ಮೇಷ್ಟರು ವಿನೀತರಾಗಿ ವಾಪಾಸಾಗುತ್ತಾರೆ. ಇಲ್ಲಿ 'ವಿಧುರ ವಿವಾಹ' ಯಶಸ್ವಿಯಾಗುವುದನ್ನು ಲೇಖಕರು ಅನಾವರಣಗೊಳಿಸುತ್ತಾರೆ. ವಿಧುರನನ್ನು ಮದುವೆಯಾಗಲು ಮೀನಾಕ್ಷಿಯ ಒಪ್ಪಿಗೆ ಮುಖ್ಯವಾಗಿರಲಿಲ್ಲ. ಮೀನಾಕ್ಷಿಯ ತಂದೆ, ತಾಯಿ, ಬಂಧುಗಳು, ಸಮಾಜ ಒಪ್ಪುವುದು ಮುಖ್ಯವಾಗಿತ್ತು. ಮೀನಾಕ್ಷಿ ಪತಿಯನ್ನು ಸ್ವೀಕರಿಸಲು ಸಿದ್ಧಳಾಗಿದ್ದು ನೆರವೇರುವುದು ಬಿಡುವುದು ವಿಧಿಯ ನಿರ್ಣಯವಾಗಿದೆ ಎಂದು ಭಾವಿಸಲಾಗಿದೆ.

*"ಸ್ತ್ರೀಯ ಮನೋಮಯ ಕೋಶವು ಪುರುಷನ ಮನೋಮಯ ಕೋಶಕ್ಕಿಂತಲೂ ಹೆಚ್ಚು ಅಸ್ಪಷ್ಟವಾದುದು ಮಂಜಾದುದು ಅದರಲ್ಲಿಯೂ ಮದುವೆಯಾಗುವುದಕ್ಕೆ ಮೊದಲು ಅಮೂರ್ತವಾಗಿಯೇ ಇರುತ್ತದೆ."*[1]

ಮೀನಾಕ್ಷಿ ಅನಂತ ಕಲ್ಯಾಣಮಯಿಯೂ ಆಗಿರಲಿಲ್ಲ. ಅಪಾರ ಕ್ಲೇಶಕಾರಿಣಿಯೂ ಆಗಿರಲಿಲ್ಲ. ಸಾಧಾರಣ ಸ್ತ್ರೀಯಾಗಿದ್ದಳು ಮಹಿಳೆಗೆ ಕೌಟುಂಬಿಕ ಜೀವನ ಅವಳ ಸರ್ವಸ್ವ ಎನ್ನುವುದನ್ನು ನಿರ್ದೇಶಿಸುತ್ತಿದೆ. ಹಾಗೂ ಮಹಿಳೆಯ ಮಟ್ಟವನ್ನು ನಿರ್ಧರಿಸುವಲ್ಲಿ 'ವಿವಾಹ' ಮುಖ್ಯವಾಗುತ್ತದೆ. ಸಾಮಾಜಿಕ ಮೌಲ್ಯವಾಗಿದ್ದ 'ವಿವಾಹ' ಒಪ್ಪಿತ ಮೌಲ್ಯವೂ ಆಗಿದ್ದ ಕಾಲಘಟ್ಟದಲ್ಲಿ ಕಥಾವಿನ್ಯಾಸ ತೆರೆದುಕೊಳ್ಳುತ್ತದೆ. ಮುಖ್ಯವಾಗಿ ಮೀನಾಕ್ಷಿಯನ್ನು ಕಾಡುವುದು ತೀರಿಹೋದ ಮೊದಲ ಹೆಂಡತಿಯ ವಿಚಾರವೇ ಹೊರತು ತಾನು ಮರುಮದುವೆಯಾಗುತ್ತಿರುವುದಲ್ಲ. 'ವಿವಾಹ'ದ ವ್ಯವಸ್ಥೆಗೆ ಸೇರಿ ಹೋಗುವ ಮೀನಾಕ್ಷಿ ಸರಿತಪ್ಪು ಒಳಿತುಕೆಡುಕುಗಳ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. ಪುರುಷಪ್ರಧಾನ ವ್ಯವಸ್ಥೆ ಆ ಕಾಲಮಾನದ ಮಹಿಳೆಯನ್ನು ಅದೇ ಸ್ಥಿತಿಯಲ್ಲಿ ರೂಪಿಸಿದೆ. ಅದರೆ ಪಾಠದ ಮೇಷ್ಟರು ಈ ಮದುವೆಯನ್ನು ವಿರೋಧಿಸುವುದು ವ್ಯರ್ಥ ಎಂದು ಕಥೆ ನಿರೂಪಿಸುತ್ತದೆ.

---
೧. ಮೀನಾಕ್ಷಿಯ ಮನೇ ಮೇಷ್ಟರು – ಕುವೆಂಪು– ಉದಯರವಿ ಪ್ರಕಾಶನ – ಮೈಸೂರು – ೧೯೬೦ – ಪು. ೬೫

ಆ ಕಾಲದಲ್ಲಿ ಪುರುಷ ಹೆಂಡತಿ ಸತ್ತ ನಂತರ ಎರಡನೆ ಮದುವೆಯಾಗುವುದು ಸಾಮಾಜಿಕ ಮೌಲ್ಯವಾಗಿ ಅಂತಸ್ಥವಾಗಿತ್ತು. ಮೊದಲನೆಯ ವಿವಾಹದಷ್ಟೇ ಪವಿತ್ರ ಎಂದು ಭಾವಿಸುದರೊಂದಿಗೆ ಯಾವ ವಿರೋಧಗಳೂ ಇರಲಿಲ್ಲ. ಆದರೆ 'ನನ್ನ ದೇವರು' ಕಥೆಯಲ್ಲಿ ವಿಧವೆಯ ಅದುಮಿಟ್ಟ ಆಸೆಗಳು ಸ್ಫೋಟಗೊಳ್ಳುವುದು ಗಮನಾರ್ಹವಾದುದು. ಇಲ್ಲಿ 'ವಿಧವಾವಿವಾಹ' ಅಸಾಧ್ಯವಾಗುತ್ತದೆ. ತನ್ನ ಅವಿವಾಹಿತ ಭಾವನೊಂದಿಗೆ ತನ್ನ ಬಯಕೆಗಳನ್ನು ಈಡೇರಿಸಿಕೊಳ್ಳಲು ಮಾಡಿದ ಪ್ರಯತ್ನಗಳೆಲ್ಲ ವಿಫಲವಾಗುವುದು ಆ ವ್ಯವಸ್ಥೆಗೆ ಹಿಡಿದ ಕನ್ನಡಿ.

'ವೈರಾಗ್ಯದ ಮಹಿಮೆ' ಕಥೆಯಲ್ಲಿ ಕೇನರಾಮನ ತರುಣ ವಿಧವೆ ಭಗವಾನದಾಸಬಾಬುಜಿ ಕಟ್ಟಿಸಿದ್ದ ಮಠಕ್ಕೆ ಹೋಗಿ ರಾಧಾಕೃಷ್ಣರ ಮೂರ್ತಿಯ ಮುಂದೆ ಕಣ್ಣೀರು ಸುರಿಸಿ ತನ್ನ ದುರವಸ್ಥೆಯನ್ನು ಹೇಳಿಕೊಳ್ಳುತ್ತಿದ್ದಳು. ಮಠಕ್ಕೆ ಹೋಗಿ ಬಂದ ಹಾಗೆಲ್ಲಾ ಆಕೆಯ ಭಕ್ತಿಯನ್ನು ನೋಡಿ ಅವಳಿಗೆ ಬಾಬಾಜಿ 'ರಾಧಾದಾಸಿ' ಎಂದು ನಾಮಕರಣ ಮಾಡಿ ಬಿರುದು ಹೊರಿಸಿದ್ದನು. ರಾಧಾದಾಸಿ ಭಕ್ತಿಗೆ ಮಿಗಿಲಾದ ಭಕ್ತಿಯನ್ನು ಪ್ರದರ್ಶಿಸಲು ವಿಷ್ಣುಪತ್ನಿ ಲಕ್ಷ್ಮಿಯ ಸ್ಥಾನಕ್ಕೆ ಉಮೇದುವಾರರಾಗಲು ಆ ಊರಿನ ಅನೇಕ ವಿಧವೆಯರು ಮುಂದಾದರು. ಅಷ್ಟೇ ಅಲ್ಲ 'ರಾಧಾದಾಸಿ' ಎಂದು ಹೆಸರು ಕೊಟ್ಟ ಭಗವಾನ್‌ದಾಸನು ತನ್ನ ಹೆಸರನ್ನು 'ಕೃಷ್ಣದಾಸ' ಎಂದು ಬದಲಾಯಿಸಿಕೊಂಡನು. ಕ್ರಮೇಣ ತಾನೇ ಕೃಷ್ಣ ಎಂದು ಕೃಷ್ಣತ್ವವನ್ನು ಆರೋಪಿಸಿಕೊಂಡು ದಾಸತ್ವವನ್ನು ಅಳಿಸಿಕೊಂಡನು ಕೃಷ್ಣನಾಗಿ ಉಳಿದ ದಾದಾಜಿ, ದಾಸಿತ್ವವನ್ನು ಕಳೆದುಕೊಂಡ ರಾಧಾದಾಸಿ 'ರಾಧಾ' ಮಾತ್ರವಾಗುಳಿದಳು.

ಕೇನರಾಮಗೋಸ್ವಾಮಿಯ ನಾಲ್ಕನೆಯ ಹೆಂಡತಿ ತರುಣ ವಿಧವೆಯಾದವಳು ಬಾಬಾಜಿಯ ಮೋಸದ ಬಲೆಗೆ ಬೀಳುವುದು ಅವಳಲ್ಲಿದ್ದ ದೈಹಿಕ ಬಯಕೆಗಳೇ ಆಗಿವೆ. ಸಮಾಜಬಾಹಿರ ನೀತಿಗೆ ಬಲಿಬಿದ್ದ ವಿಧವೆಗೆ ಸಾಮಾಜಿಕ ಕಟ್ಟುಪಾಡುಗಳೇ ಬಂಧನವಾದಾಗ ಇದರಿಂದ ಆಚೆಬರುವುದಕ್ಕಾಗಿ ಕಂಡುಕೊಂಡ ಮಾರ್ಗವಾಗಿತ್ತು. ಸಾವಿನ ಹಂತದಲ್ಲಿರುವ ಪುರುಷ ತರುಣಿಯನ್ನು ವಿವಾಹವಾಗಿ ತನ್ನ ಅಪೇಕ್ಷೆಗಳಿಗೆ ತಕ್ಕಂತೆ ಆಕೆಯಿಂದ ತ್ಯಾಗ, ತಾಳ್ಮೆ ಮಾತ್ರ ಬಯಸುವಂತಾಗಬಾರದು. ಅವನ ಸಾವಿನ ನಂತರ ಆಕೆ ದಾರಿತಪ್ಪುವ ಸಾಧ್ಯತೆಗಳೇ ಹೆಚ್ಚಾಗಿದ್ದು ಸಮಾಜಬಾಹಿರವಾಗಿ ಬದುಕುವುದನ್ನು ನಿರೂಪಿಸುತ್ತದೆ. 'ನನ್ನ ದೇವರು' ಕಥೆಯಲ್ಲಿ ಬರುವ ವಿಧವೆ ಸಹಜ ಕಾಮನೆಗಳನ್ನು ನಿಗ್ರಹಿಸಲು ಸೋತು ತನ್ನ ಭಾವನ ಮೊರೆಹೋಗುತ್ತಾಳೆ. ಅದರೆ ಅವನ ಸಂಬಂಧ ಅಸಾಧ್ಯವಾದಾಗ ತಟಸ್ಥಳಾಗುತ್ತಾಳೆ. ಇದರ ಹಿಂದೆ ಮಹಿಳೆಗೆ ಪತಿವ್ರತೆಯ ಮಾದರಿಯನ್ನು ನೀಡಿರುವುದು ಗೋಚರವಾಗುತ್ತದೆ.

**೪. <u>'ವಿವಾಹ'-ಬಂಧನದ ನೆಲೆಯಲ್ಲಿ</u>**

'ನನ್ನ ದೇವರು' ಕಥಾ ಸಂಕಲನದಲ್ಲಿ ಮೂಡಿಬಂದ ಕುವೆಂಪುರವರ ಬಹುತೇಕ ಕಥೆಗಳು ವೈವಾಹಿಕ ಬಂಧನಗಳನ್ನು ಚರ್ಚೆಗೆ ಎತ್ತಿಕೊಳ್ಳುತ್ತವೆ. ಈ

ಕಥೆಗಳು ರಚನೆಯಾಗುವ ಕಾಲಘಟ್ಟದಲ್ಲಿ ಅವ್ಯಾಹತವಾಗಿ ನಡೆಯುತ್ತಿದ್ದ ವಿಧುರವಿವಾಹಗಳು ವಿಶ್ಲೇಷಣೆಗೊಳಗಾಗುತ್ತವೆ. ಆ ಸಾಮಾಜಿಕ ವ್ಯವಸ್ಥೆಯಲ್ಲಿ ಒಬ್ಬ ಪುರುಷ ಎಷ್ಟು ಮದುವೆಯಾಗುವುದಕ್ಕೂ ಅವಕಾಶಗಳಿದ್ದುವು. ಆದರೆ ಮಹಿಳೆಗೆ ಮಾತ್ರ ಅವಳ ಜೀವಮಾನಕ್ಕೆ ಒಂದೇ ಮದುವೆ. ಆಕಸ್ಮಿಕವಾಗಿ ಪತಿ ಮರಣ ಹೊಂದಿದಾಗ ಜೀವನ ಪರ್ಯಂತ ವಿಧವೆಯಾಗಿ ಕಾಲಕಳೆಯಬೇಕಾಗಿದ್ದು ಇದು ಸಾಮಾಜಿಕ ಕಟ್ಟುಪಾಡಾಗಿತ್ತು. ಇವರ 'ಸಾಲದ ಮಗು' ಕಥೆಯ ಗೌಡರಿಗೆ ಮೂರು ಮದುವೆಗಳಾಗಿದ್ದುವು. 'ವೈರಾಗ್ಯದ ಮಹಿಮೆ' ಕಥೆಯಲ್ಲಿ ಬರುವ ಕೇನರಾಯನಿಗೆ ನಾಲ್ಕು ಮದುವೆಗಳಾಗಿದ್ದವು. ಮೀನಾಕ್ಷಿ ಮನೇ ಮೇಷ್ಟರು' ಕಥೆಯ ಮೀನಾಕ್ಷಿ ಎರಡನೆ ಹೆಂಡತಿಯಾಗಿ ಮನೆತುಂಬಿದ್ದಳು. 'ಔದಾರ್ಯ' ಕಥೆಯ ಡೇವಿಡ್ ಮೇಷ್ಟರಿಗೆ ಎರಡು ಮದುವೆಗಳಾಗಿದ್ದವು. 'ಆದರ್ಶಸಾಧನೆ'ಯ ಕಥಾನಾಯಕ ಎರಡು ಮದುವೆಯಾಗಿದ್ದನು.

ವೈವಾಹಿಕ ಬದುಕು ಪುರುಷಪ್ರಧಾನ ವ್ಯವಸ್ಥೆಯಲ್ಲಿ ದ್ವಿಸ್ತರ ನೀತಿಯಾಗಿ ಸಮಾಜದಲ್ಲಿ ಹರಡಿಕೊಂಡಿತ್ತು. ಮಹಿಳೆಗೆ ಮರುಮದುವೆ ನಿಷಿದ್ಧವಾಗಿದ್ದು ಕೆಲವೊಮ್ಮೆ ನೆರವೇರಿದರೂ ಕೆಳಜಾತಿವರ್ಗದಲ್ಲಿ 'ಕೂಡಾವಳಿ' ನಿಯಮದಡಿಯಲ್ಲಿ ಅಲ್ಲೊಂದು ಇಲ್ಲೊಂದು ನಡೆಯುತ್ತಿದ್ದುವು. ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ನಾಗತ್ತೆ-ತನ್ನ ಸೊಸೆ ನಾಗಕ್ಕನಿಗೆ 'ಕೂಡಿಕೆ' ಮಾಡಿಸುವ ಮೂಲಕ ವಿಧವೆ ಸಂಸಾರಸ್ಥಳಾಗಲು ಇರುವ ಅವಕಾಶವನ್ನು ಪ್ರಸ್ತಾಪಿಸುತ್ತಾರೆ. ಆದರೆ ಬ್ರಾಹ್ಮಣ ಸಮುದಾಯದಲ್ಲಿ ವಿಧವೆಯರು ಮರುವಿವಾಹದ ಅವಕಾಶದಿಂದ ವಂಚಿತರಾಗಿ ಜೀವಮಾನವನ್ನು ಕೊನೆಗಾಣಿಸಿಕೊಳ್ಳುತ್ತಿದ್ದರು. ವಿಧವೆಯಾದವರಿಗೆ ಕೆಲವು ಆಯ್ಕೆಗಳಿದ್ದು ಅವುಗಳಲ್ಲಿ ಬ್ರಹ್ಮಚರ್ಯ ಪಾಲನೆ, ಆತ್ಮಹತ್ಯೆ, ವೇಶ್ಯೆಯರಾಗುವುದು ಮುಂತಾದವುಗಳಲ್ಲಿ ಸ್ವಾತಂತ್ರ್ಯ ಪೂರ್ವದ ದಶಕಗಳಲ್ಲಿ ಇಂತಹ ಆಯ್ಕೆಗಳೂ ದಮನಕಾರಿಯಾಗಿದ್ದವು. ಮಹಿಳೆಯನ್ನು ಹೆಚ್ಚುಹೆಚ್ಚು ವೈಭವೀಕರಿಸಿ ಸಾಮಾಜಿಕವಾಗಿ ಸ್ತ್ರೀತ್ವದ ಅದೋಗತಿಯನ್ನು ಬಿಂಬಿಸಲಾಗಿದೆ. ಸಾಮಾಜಿಕ ಒತ್ತಡಗಳಂತೆ ವೈಯಕ್ತಿಕ ದೌರ್ಬಲ್ಯಗಳೂ ಮಹಿಳೆಯ ದುರಂತಕ್ಕೆ ಕಾರಣವಾಗಿರುವುದನ್ನು ಆ ಕಾಲದ ಕಥನ ಸಾಹಿತ್ಯ ಚಿತ್ರಿಸುತ್ತವೆ. 'ಔದಾರ್ಯ'ದ ಉಪಾಧ್ಯಾಯಿನಿ, 'ವೈರಾಗ್ಯದ ಮಹಿಮೆ'ಯಲ್ಲಿನ ರಾಧಾದಾಸಿ ಇದಕ್ಕೆ ನಿದರ್ಶನವಾಗುತ್ತಾರೆ. ಇಲ್ಲಿ ಚರ್ಚಿತವಾಗುವ ಕಥೆಗಳು 'ಮರುವಿವಾಹ' ಕುರಿತಂತೆ 'ವಿಧವೆ', 'ವಿಧುರ' ಇಬ್ಬರೂ 'ವಿವಾಹ'ದ ಚೌಕಟ್ಟಿನೊಳಗೆ ತಮ್ಮ ವ್ಯಕ್ತಿತ್ವವನ್ನು ಪಕ್ವವಾಗಿಸಿಕೊಳ್ಳುವುದರ ಕಡೆಗೆ ಮಹತ್ವ ನೀಡುತ್ತವೆ. ಅದರೆ ಶತಮಾನಗಳಿಂದಲೂ ಹೆಣ್ಣನ್ನು 'ವೈಧವ್ಯ'ಕ್ಕೆ ಹೊಂದಿಕೊಳ್ಳುವಂತೆ ನೋಡಿಕೊಳ್ಳಲಾಗಿದೆ ಎನ್ನುವುದಕ್ಕೂ ಬಹಳಷ್ಟು ನಿದರ್ಶನಗಳು ಕುವೆಂಪುರವರ ಕೃತಿಗಳಲ್ಲಿ ದೊರೆಯುತ್ತವೆ.

ಇವರ ಕಥೆಗಳು ಮಹಿಳೆಯ ಕಾಮದ ಅಭಿವ್ಯಕ್ತಿಗೆ ಸಾಮಾಜಿಕ ನಿರ್ಬಂಧವಿರುವುದನ್ನು ತೆರೆದಿಡುತ್ತವೆ. ತನ್ನ ಅಗತ್ಯದ ದೈಹಿಕ ಆಸೆಯನ್ನು ಅನುಭವಿಸುವುದಿರಲಿ, ಕಲ್ಪಿಸುವುದೂ ಅಸಾಧ್ಯ ಎನ್ನುವುದನ್ನೆ ಮುಂದಿಡುತ್ತವೆ. ವಿವಾಹದಲ್ಲಾಗಲಿ ಅದರ ಹೊರಗಾಗಲಿ ಮಹಿಳೆ ನೈತಿಕ ಚೌಕಟ್ಟನ್ನು ಮೀರುವಂತಿರಲಿಲ್ಲ ಎನ್ನುವುದು ಚರ್ಚೆಗೊಂಡಿವೆ.

### ೫. ವಿಧವೆಯ ಸಾಮಾಜಿಕ ಸ್ಥಾನಮಾನ

ಕುವೆಂಪು ಕಾದಂಬರಿಗಳು ೧೯ನೇ ಶತಮಾನಕ್ಕಿಂತಲೂ ಹಿಂದಿನ ಒಂದು ಶತಮಾನದ ಜೀವನ ವೈವಿಧ್ಯವನ್ನು ನಿರೂಪಿಸುತ್ತವೆ. ಮತ್ತು ಆಯಾಯ ಕಾಲಘಟ್ಟಗಳ ಜೀವನ ವಿಧಾನ ಮತ್ತು ಸಾಮಾಜಿಕ ರಚನೆಗಳನ್ನು ಕಾದಂಬರಿಗಳು ವಿಶ್ಲೇಷಿಸುತ್ತವೆ. ಇವರ ಎರಡೂ ಕಾದಂಬರಿಗಳು ಬದುಕಿನ ಸಮಗ್ರ ಒಳನೋಟಗಳನ್ನು ಸೂಕ್ಷ್ಮವಾಗಿ ಅವಲೋಕಿಸುವ ಮತ್ತು ನಿರ್ವಹಿಸುವ ಕೆಲಸವನ್ನು ಮಾಡಿವೆ. ಹಾಗಾಗಿ ಈ ಕಾದಂಬರಿಗಳು ಸಾಹಿತ್ಯ, ಸಂಸ್ಕೃತಿ ಸಮಾಜದ ಅಸ್ತಿತ್ವದ ಸಂಕಥನಗಳೇ ಆಗಿವೆ.

ವ್ಯವಸ್ಥೆಯಲ್ಲಿ ಕೂಡುಕುಟುಂಬಗಳು ಪ್ರಾಚೀನ ಕಾಲದಿಂದಲೂ ಇರುವುದನ್ನು ಗಮನಿಸಬಹುದು. ಅದರಲ್ಲೂ ಭಾರತದ ಪ್ರಾಚೀನ ಸಮಾಜವು ಪರಿಪೂರ್ಣವಾದ ಒಟ್ಟು ಕುಟುಂಬಗಳ ಮಾದರಿಯಾಗಿದೆ. ಒಂದೇ ಸೂರಿನಡಿ ಮೂರು-ನಾಲ್ಕು ತಲೆಮಾರಿನ ಕುಟುಂಬದ ಸದಸ್ಯರು ಒಟ್ಟಾಗಿ ವಾಸಮಾಡುತ್ತಿದ್ದರು. ಸಾಮಾನ್ಯವಾಗಿ ಇಂತಹ ಕುಟುಂಬಗಳು ಸಂಪ್ರದಾಯ, ಆಚರಣೆ ಮತ್ತು ಸದ್ಗುಣಗಳನ್ನು ರಕ್ಷಿಸುತ್ತವೆ. ಹಾಗೂ ಪರಸ್ಪರ ಪ್ರೀತಿ ವಿಶ್ವಾಸ ಸಹಾಯ, ಸೇವೆ ಔದಾರ್ಯಗಳನ್ನು ಪೋಷಿಸಿಕೊಂಡು ಬಂದಿರುವುದನ್ನು ಗಮನಿಸಬಹುದು. ಒಟ್ಟು ಕುಟುಂಬದಲ್ಲಿ ಹೊಣೆ ಹೊರೆಗಳು ಹಂಚಿಹೋಗುವುದರಿಂದ ಒತ್ತಡಗಳು ಕಡಿಮೆಯಾಗುತ್ತವೆ. ಆರ್ಥಿಕವಾದ ಹಾಗೂ ಕೆಲಸದ ಹಂಚಿಕೆ ಸಮಾನವಾಗುವುದರಿಂದ ಹೆಚ್ಚಿನ ಸಂಪತ್ತನ್ನು ಹೊಂದುವುದರೊಂದಿಗೆ ಹೆಚ್ಚಿನ ಬಿಡುವೂ ದೊರೆಯುತ್ತದೆ. ಮನೆಯ ಸದಸ್ಯರೇ ಮನೆಮಂದಿಗೆಲ್ಲ ನೈತಿಕ ಶಿಕ್ಷಣದೊಂದಿಗೆ ಮನೋರಂಜನೆಯನ್ನು ನೀಡುತ್ತಿದ್ದರು. ಇಷ್ಟೆಲ್ಲ ಅನುಕೂಲತೆಯೊಂದಿಗೆ ಅನಾನುಕೂಲತೆಯನ್ನು ಹೊಂದಿರುತ್ತಿದ್ದವು. ಮನೆಯ ಯಜಮಾನನೇ ನಿರ್ದೇಶಕನಾಗಿರುವುದಕ್ಕಿಂತ ಸರ್ವಾಧಿಕಾರಿಯಾಗಿರುವ ಸಾಧ್ಯತೆಗಳಿರುತ್ತವೆ. ಸದಸ್ಯರಿಗೆ ಸ್ವಯಂ ನಿರ್ಧಾರಕ್ಕೆ, ಸ್ವಾವಲಂಬನೆಗೆ ಅವಕಾಶಗಳಿರುವುದಿಲ್ಲ. ಕೆಲಸದ ಹೊರೆ ಕೆಲವರ ಮೇಲೆ ಹೆಚ್ಚಾಗಿ ಉಳಿದವರು ಸೋಮಾರಿಗಳಾಗುವ ಸಾಧ್ಯತೆಗಳಿರುತ್ತವೆ. ಇದರಿಂದ ವೈಯಕ್ತಿಕ ಕ್ರಿಯಾಶೀಲತೆ ಕುಂಠಿತವಾಗುತ್ತದೆ. ಪುರುಷ ಪ್ರಾಧಾನ್ಯತೆಗೆ ಮಹತ್ವವಿರುವುದರಿಂದ ಸ್ತ್ರೀಯರಿಗೆ ಆದ್ಯತೆ ಇರುವುದಿಲ್ಲ. ಮಹಿಳೆ ಸ್ವಾತಂತ್ರ್ಯವಿಲ್ಲದೆ ಎಲ್ಲಾ ಸಂದರ್ಭಗಳಲ್ಲೂ ಪುರುಷನ ಹಿಂಸೆ

ಮತ್ತು ದೌರ್ಜನ್ಯಕ್ಕೊಳಗಾಗುತ್ತಾಳೆ. ಮನೆಯ ಹೊರಗಿನ ಮತ್ತು ಒಳಗಿನ ಯಾವ ವ್ಯವಹಾರದಲ್ಲೂ ಭಾಗವಹಿಸುವಂತಿಲ್ಲದೆ ಯಾವುದೇ ಸಮಾರಂಭಗಳಿಗೂ ಪುರುಷನ (ಯಜಮಾನ) ಅಪ್ಪಣೆಯಿಲ್ಲದೆ ಹೋಗುವಂತಿಲ್ಲ ಹಾಗೂ ದ್ವೇಷ ಮತ್ತು ಅಸೂಯೆ ಒಳಜಗಳಗಳನ್ನು ಹುಟ್ಟುಹಾಕುತ್ತವೆ.

ಇಂತಹ ಅವಿಭಕ್ತ ಕುಟುಂಬಗಳು ಪರಿವರ್ತನಶೀಲ ಸಾಮಾಜಿಕ ಸಂದರ್ಭದಲ್ಲಿ ಅನೇಕ ಬದಲಾವಣೆ ಮತ್ತು ಸವಾಲುಗಳನ್ನು ಎದುರಿಸುತ್ತವೆ. ಅನೇಕ ಕುಟುಂಬಗಳು ಕೈಗಾರಿಕೀಕರಣ, ನಗರೀಕರಣದ ಪ್ರಭಾವದಿಂದ ಒಡೆದು ವಿಭಕ್ತ ಕುಟುಂಬಗಳಾಗಿವೆ. ಇನ್ನೂ ಕೆಲವು ಒಟ್ಟುಕುಟುಂಬಗಳು ವೈಯಕ್ತಿಕ ಪ್ರಲೋಭನೆಗಳಿಂದ ಒಡೆದು ಹೋಗಿರುವುದನ್ನು ೨೦ನೇ ಶತಮಾನದ ಕಥನ ಸಾಹಿತ್ಯ ಅನಾವರಣಗೊಳಿಸುತ್ತವೆ.

ಕುವೆಂಪುರವರ ಕಾದಂಬರಿಗಳು ಒಟ್ಟು ಕುಟುಂಬದ ಪಿತೃಪ್ರಧಾನವ್ಯವಸ್ಥೆಯ ಯಜಮಾನನ ಸರ್ವಾಧಿಕಾರವನ್ನು ಬಿಂಬಿಸುತ್ತವೆ. 'ಬಹುಪತ್ನಿತ್ವ' ಪ್ರಧಾನವಾಗಿದ್ದ ಕಾಲಮಾನದಲ್ಲಿ ಕಾದಂಬರಿಯಲ್ಲಿ ಬರುವ ಮುಖ್ಯ ಪುರುಷ ಪಾತ್ರಗಳು ಮೂರು-ನಾಲ್ಕು ಮದುವೆಯಾಗುವುದನ್ನು ಗಮನಿಸಬಹುದು. ಪರಂಪರಾಗತ ಪಿತೃಪ್ರಧಾನ್ಯದ ಮೌಲ್ಯಗಳನ್ನು ಅರಗಿಸಿಕೊಂಡ ವೈವಾಹಿಕ ಬದುಕು ಪುರುಷನ ಮರುಮದುವೆಗಳಿಗೆ ಮಾನ್ಯತೆಯನ್ನು ನೀಡಿದೆ. ನಾಗರಿಕ ಹಿಂದೂ ಸಮಾಜದ 'ವೈವಾಹಿಕ' ಪದ್ಧತಿ ನೀಡಿದ ಹೆಣ್ಣುಗಂಡಿನ ಲೈಂಗಿಕ ಪರವಾನಗಿ ಗಂಡಿನ ಆಕಾಂಕ್ಷೆಗಳಿಗೆ ಪೂರಕವಾಗಿದ್ದು ಹೆಣ್ಣಿಗೆ ಬಂಧನವಾಗಿರುವುದು ಕಾದಂಬರಿಗಳಲ್ಲಿ ಚರ್ಚೆಗೊಳಪಡುತ್ತವೆ. ವೈವಾಹಿಕ ಬದುಕೇ ಹೆಣ್ಣಿಗೆ ಅನಿವಾರ್ಯ ಎಂದು ಬಿಂಬಿಸುವ ಮತ್ತೆ ಮತ್ತೆ ದೌರ್ಜನ್ಯಕ್ಕೊಳಗಾಗುವ ಹಿಂಸೆಯ ಘಟನೆಗಳು ಕುವೆಂಪುರವರ ಎರಡೂ ಕಾದಂಬರಿಯಲ್ಲಿ ತೆರೆದುಕೊಳ್ಳುತ್ತವೆ.

ಕಾನೂರಿನ ಸುಬ್ಬಯ್ಯ ಗೌಡರ ಪತ್ನಿ ನಾಗಮ್ಮ ಸುಸಂಸ್ಕೃತ ಮಹಿಳೆ. ಸುಬ್ಬಯ್ಯಗೌಡರು ಮತ್ತು ನಾಗಮ್ಮನ ಮಗ ಹೂವಯ್ಯ. ಹೂವಯ್ಯನು ಚಿಕ್ಕವನಿರುವಾಗ ಸುಬ್ಬಯ್ಯಗೌಡರು ಮರಣಹೊಂದಿ ನಾಗಮ್ಮ ವಿಧವೆಯಾಗುತ್ತಾಳೆ. ವಿಧವೆಯಾದ ನಾಗಮ್ಮ ಸುಬ್ಬಯ್ಯಗೌಡರ ತಮ್ಮ ಚಂದ್ರಯ್ಯಗೌಡರ ಅಧಿಕಾರದ ದರ್ಪಕ್ಕೆ ಸಿಲುಕುತ್ತಾಳೆ. ಹಿರಿಸೊಸೆಯಾಗಿ ವಿಧವೆಯಾಗಿ ಚಂದ್ರಯ್ಯಗೌಡರ ದಬ್ಬಾಳಿಕೆಯಲ್ಲಿ ಕಾಲದೂಡುವ ನಾಗಮ್ಮನಿಗೆ ತನಗೊದಗಿದ ವೈಧವ್ಯಕ್ಕಾಗಿ ತುಂಬಾ ನೋವಿದೆ, ಆದರೆ ಎಲ್ಲಾ ಸಂಕಟದಿಂದ ಪಾರಾಗಲು ಭವಿಷ್ಯಕ್ಕಾಗಿ ಹಾತೊರೆಯಲು ಮಗ ಹೂವಯ್ಯನಿದ್ದಾನೆ. ಪದೇ ಪದೇ ವಿವಾಹವಾಗುವ ಚಂದ್ರಯ್ಯಗೌಡರಿಗೆ ಸ್ವಾತಂತ್ರ್ಯವಿದೆ. ಆದರೆ ನಾಗಮ್ಮನಿಗೆ ಆ ಸ್ವಾತಂತ್ರ್ಯವಿಲ್ಲ. ಅಷ್ಟೇ ಅಲ್ಲ ತನಗೆ ಮತ್ತು ತನ್ನ ಮಗನಿಗೆ ಬರಬೇಕಾದ ಆಸ್ತಿಯನ್ನು ಸರಿಪಾಲಾಗಿ ಪಡೆಯುವ ಸಾಮರ್ಥ್ಯವೂ ಇಲ್ಲ. ಒಟ್ಟು ಕುಟುಂಬ ಮಹಿಳೆಯನ್ನು ದಾಸ್ಯದಿಂದ ನಡೆಸಿಕೊಳ್ಳುವುದನ್ನು ಕಾದಂಬರಿ

ಅನಾವರಣಗೊಳಿಸುತ್ತದೆ. ಮೂರನೆ ಮದುವೆಯಾಗುವ ಚಂದ್ರಯ್ಯ ಗೌಡರು ಕಾನೂರು ಮನೆಯ ಸರ್ವಾಧಿಕಾರಿ. ಆದರೂ ನಾಗಮ್ಮ ಚಂದ್ರಯ್ಯಗೌಡರ ದಬ್ಬಾಳಿಕೆಯಿಂದ ತಪ್ಪಿಸಿಕೊಂಡು ತಾನಿರುವುದೇ ಸುಖದ ಜೀವನ ಎಂದು ಸಾಂಪ್ರದಾಯಿಕ ಸ್ತ್ರೀ ಮೌಲ್ಯಗಳನ್ನೊಪ್ಪಿ ಬದುಕುತ್ತಾಳೆ.

ಕಾದಂಬರಿಯ ಪ್ರಾರಂಭದಲ್ಲಿ ನಾಗಮ್ಮನವರ ವೈಧವ್ಯದ ಕರಾಳ ಬದುಕು ತೆರೆದುಕೊಳ್ಳುತ್ತದೆ. ಸಮುದಾಯದ ನೆಲೆಯಲ್ಲಿ ವೈಧವ್ಯದ ಜೀವನ ಒಕ್ಕಲಿಗ ಸಮುದಾಯದ ಒಟ್ಟು ಕುಟುಂಬದಲ್ಲಿ ಗಂಭೀರವಾದ ಸಮಸ್ಯೆಯಾಗಿ ಕಾಣುವುದಿಲ್ಲ. ಆದರೆ ವೈಯಕ್ತಿಕ ನೆಲೆಯಲ್ಲಿ ಬಹಳ ದೊಡ್ಡ ಸಮಸ್ಯೆಯಾಗಿ ಕಾಣುತ್ತದೆ. ವೈಧವ್ಯದ ನೆಲೆಯಲ್ಲಿ ನಡೆಯುವ ಸ್ತ್ರೀಶೋಷಣೆಯ ಹಲವು ವಿನ್ಯಾಸಗಳು ನಾಗಮ್ಮನ ಬದುಕಿನಲ್ಲೂ ಬಿಡಿಸಿಕೊಳ್ಳುತ್ತವೆ.

ಕಾನೂರು ಮನೆಯಲ್ಲಿ ಸುಬ್ಬಯ್ಯಗೌಡರು ಹಿರಿಮಗ, ಚಂದ್ರಯ್ಯಗೌಡರು ಎರಡನೆಯವರು. ಆ ಮನೆ ಸುಮಾರು ಮೂವತ್ತು ನಲವತ್ತು ಮಂದಿ ನಿರಾತಂಕವಾಗಿ ವಾಸಮಾಡಬಹುದಾದಷ್ಟು ದೊಡ್ಡದಾಗಿತ್ತು. ಆದರೆ ಕೆಲವು ವರ್ಷಗಳ ಹಿಂದೆ ಸಿಡುಬು ರೋಗ ಕಾಲಿಟ್ಟು ಅನೇಕರನ್ನು ಆಹುತಿ ತೆಗೆದುಕೊಂಡಿತ್ತು. ಈಗ ಆ ಕುಟುಂಬದಲ್ಲಿ ಏಳು ಜನರು ಮಾತ್ರ ಇದ್ದರು. ಇದು ಕಾನೂರು ಮನೆಯ ಒಟ್ಟು ಕುಟುಂಬದ ಚಿತ್ರಣವಾಗಿದೆ. ಚಂದ್ರಯ್ಯಗೌಡರ ಅಣ್ಣ ಸುಬ್ಬಯ್ಯ ಗೌಡರು ಮೊದಲು ಮನೆಯ ಯಜಮಾನರಾಗಿದ್ದರು. ಅಣ್ಣ ತಮ್ಮನ ಮನಸ್ಸು ಸರಿ ಇರಲಿಲ್ಲವಾದ್ದರಿಂದ ಸುಬ್ಬಯ್ಯಗೌಡರ ಸಾವಿಗೆ ತಮ್ಮ ಚಂದ್ರಯ್ಯಗೌಡರೇ ಕಾರಣ ಎಂದು ನಾಗಮ್ಮ ಎಲ್ಲರೊಂದಿಗೆ ಸಾರುತ್ತಿದ್ದರು. ವಾಸ್ತವವಾಗಿ ಅವರು ರೇಷ್ಮೆ ಕಾಯಿಲೆಯಿಂದ ತೀರಿಕೊಂಡಿದ್ದರು.

*"ಚಂದ್ರಯ್ಯಗೌಡರೂ ನಾಗಮ್ಮನವರ ಮಾತಿನಲ್ಲಿ ಇತರರಿಗೆ ನಂಬುಗೆಯಾಗುವಂತೆ ವರ್ತಿಸುತ್ತಿದ್ದರು. ಆಕೆಯ ವಿಷಯದಲ್ಲಿ ದ್ವೇಷದಿಂದಲ್ಲದಿದ್ದರೂ ಅನಾದರದಿಂದ ಇರುತ್ತಿದ್ದರು. ನೊಂದೆದೆಯ ನಾಗಮ್ಮನವರಿಗೆ ಅವರ ಒಂದೊಂದು ಅನಾಧರಣೆಯೂ ಭಯಂಕರ ವೈರದಂತೆ ತೋರುತ್ತಿತ್ತು. ಹೂವಯ್ಯನಿಗೆ ಇದೆಲ್ಲ ಗೊತ್ತಿದ್ದರೂ ಆತನು ಭಾವಜೀವಿಯಾಗಿದ್ದುದರಿಂದಲೂ ಆತನ ಗಮನವೆಲ್ಲ ವಿದ್ಯಾರ್ಜನೆಯ ಕಡೆಗಿದ್ದುದರಿಂದಲೂ, ರಾಮಯ್ಯನ ವಿಶ್ವಾಸದ ಪ್ರಭಾವದಿಂದಲೂ ಯಾವ ಇತ್ಯರ್ಥದ ಕಾರ್ಯಕ್ಕೂ ಕೈ ಹಾಕದೆ ಸುಮ್ಮನಿದ್ದನು."*[೧]

ಆರ್ಥಿಕ ಅವಲಂಬನೆಗಾಗಿ ವೈಯಕ್ತಿಕ ರಕ್ಷಣೆಗಾಗಿ ಚಿಂತಿಸದ ನಾಗಮ್ಮ ಒಟ್ಟು ಕುಟುಂಬದ ಅವ್ಯಕ್ತ ಹಿಂಸೆಯಿಂದ ದಬ್ಬಾಳಿಕೆಗಳಿಂದ ಮುಕ್ತರಾಗಲು ಸಾಧ್ಯವಾಗಲಿಲ್ಲ.

೧. ಕಾನೂರು ಹೆಗ್ಗಡತಿ – ಕುವೆಂಪು – ಉದಯರವಿ ಪ್ರಕಾಶನ – ಮೈಸೂರು – ೨೦೦೯ – ಪು. ೩೪

ವಿಧವೆಗೆ ಮರುಮದುವೆಯಾಗುವ ಅವಕಾಶ ಇಲ್ಲದಿದ್ದರೂ ಎರಡನೇ ಮದುವೆಯಾಗಿ ವಿಧುರನಾದ ಚಂದ್ರಯ್ಯಗೌಡರಿಗೆ ಎರಡನೆ ಹೆಂಡತಿ ತೀರಿಕೊಂಡು ಒಂದು ವರ್ಷದ ಅವಧಿಯೊಳಗೆ ಮೂರನೆ ಮದುವೆಯಾಗುವ ಅವಕಾಶ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಅನಾಯಾಸವಾಗಿ ಒದಗಿಬಂತು. ನಡುವಯಸ್ಸು ಮೀರಿದ್ದ ಮೂರು ಮಕ್ಕಳ ತಂದೆಗೆ ಕನ್ಯೆಯರನ್ನು ಕೊಡಲು ಹಿಂಜರಿದಾಗ ನೆಲ್ಲುಹಳ್ಳಿಯ ಬಡವರು, ಅಸಂಸ್ಕೃತರು ಒರಟು ಜೀವಿಗಳು ಹಿಗ್ಗಿ ಮರುಮಾತಾಡದೆ ಸುಬ್ಬಮ್ಮನನ್ನು ಮದುವೆ ಮಾಡಿಕೊಡಲು ಒಪ್ಪಿದರು. ಆ ಕಾಲದ ಸಾಮಾಜಿಕ ನೀತಿ ನಿಯಮಗಳು ದಬ್ಬಾಳಿಕೆಯ ಶ್ರೀಮಂತ ವ್ಯಕ್ತಿಗಳಿಂದ ರೂಪಿಸಲ್ಪಡುತ್ತಿದ್ದವು. ಕಟ್ಟುಪಾಡುಗಳು ಅಲಿಖಿತ ಶಾಸನಗಳಾಗಿ ಒಟ್ಟು ಕುಟುಂಬದ ವಿಧವೆಯರನ್ನು ನಿಯಂತ್ರಿಸುತ್ತಿದ್ದವು.

ನೆಲ್ಲುಹಳ್ಳಿಯ ಸುಬ್ಬಮ್ಮ ಚಂದ್ರಯ್ಯಗೌಡರ ಮೂರನೆ ಪತ್ನಿಯಾಗಿ ಕಾನೂರಿಗೆ ಬಂದ ಕೆಲವೇ ದಿನಗಳಲ್ಲಿ ನಾಗಮ್ಮನವರನ್ನು ಅನಾದರದಿಂದ ಕಾಣುತ್ತಾಳೆ. ಇದರಿಂದಲೂ ನಾಗಮ್ಮನವರು ನೊಂದುಕೊಂಡು ಮಗನ ಭವಿಷ್ಯಕ್ಕಾಗಿ ಸಹಿಸಿಕೊಳ್ಳುತ್ತಾಳೆ. ಸಂದರ್ಭ ಸಿಕ್ಕಾಗಲೆಲ್ಲ ಸುಬ್ಬಮ್ಮ ನಾಗಮ್ಮನನ್ನು ತನ್ನ ಅಸಂಸ್ಕೃತಿಯ ಮಾತುಗಳಿಂದ ನಿಂದಿಸುತ್ತಾ ದುಃಖಕ್ಕೆ ಕಾರಣಳಾಗುತ್ತಾಳೆ. ಇಂತಹ ಸಂದರ್ಭದಲ್ಲಿ ನಾಗಮ್ಮನವರು ತಮ್ಮ ಸ್ಥಿತಿಗೆ ಮರುಗುತ್ತಿದ್ದರು. ವೈಧವ್ಯ ಅವರ ಬಾಳಿನಲ್ಲಿ ಬಹುದೊಡ್ಡ ಸಂಘರ್ಷಕ್ಕೆಡೆ ಮಾಡದಿದ್ದರೂ ಹಿರಿಸೊಸೆಯಾಗಿ ಸಂಸಾರ ನಿರ್ವಹಿಸುವ ಕನಸು ಕಂಡಿದ್ದವರು. ಅದಕ್ಕಾಗಿ ಪರಿತಪಿಸುತ್ತಾರೆ. ತಂದೆ ತೀರಿಕೊಂಡಾಗಿನಿಂದ ಹೂವಯ್ಯನನ್ನು ಕಡೆಗಣಿಸುತ್ತಿದ್ದ ಚಂದ್ರಯ್ಯಗೌಡರು ವಿದ್ಯಾಭ್ಯಾಸ ನಿಲ್ಲಿಸುವ ಯೋಚನೆಯಲ್ಲಿದ್ದರು. ಆದರೆ ವಿದ್ಯಾವಂತನಾಗುವುದನ್ನೆ ಆಯ್ಕೆ ಮಾಡಿಕೊಂಡ ಹೂವಯ್ಯ ಆಸ್ತಿ ಮನೆಯನ್ನು ಇಷ್ಟಪಡಲಿಲ್ಲ.

> *"ಆದರೆ ವಿಧವೆಯಾದ ತನ್ನ ತಾಯಿಯ ಸಲುವಾಗಿ ಅದನ್ನು ಬಾಯಿಬಿಟ್ಟು ಯಾರೊಡನೆಯೂ ಹೇಳಿರಲಿಲ್ಲ. ನಾಗಮ್ಮನವರು ಹಿಂದಿನ ವರ್ಷ ಮಗನು ರಜಕ್ಕೆ ಬಂದಾಗಲೆ ತಮಗೆ ಚಂದ್ರಯ್ಯಗೌಡರ ಸಂಸಾರದಲ್ಲಿ ಒಟ್ಟಾಗಿರಲು ಮನಸ್ಸಿಲ್ಲವೆಂದೂ, ತಾವಿಬ್ಬರೂ ತಮಗೆ ಬರಬೇಕಾದ ಆಸ್ತಿಯಲ್ಲಿ ಪಾಲು ತೆಗೆದುಕೊಂಡು ಬೇರೆಯಾಗಿ ಸಂಸಾರಹೂಡಬೇಕೆಂದೂ ಮಗನೊಡನೆ ಬಹಳವಾಗಿ ಹೇಳಿದ್ದರು. ಮಗನು ತನ್ನ ವಿದ್ಯಾಭ್ಯಾಸದ ನೆಪವನ್ನು ತಂದೊಡ್ಡಿ ತಾಯಿಯನ್ನು ಸುಮ್ಮನಿರಿಸಿದ್ದನು."*[೧]

ಇಲ್ಲಿ ವಸಾಹತುಶಾಹಿ ಸಂಸ್ಕೃತಿಗೆ ಪರ್ಯಾಯವಾಗಿ ಮೂಡಿಬಂದ ದೇಸಿಸಂಸ್ಕೃತಿ ವಿಧವೆಯ ಪಾವಿತ್ರ್ಯಕ್ಕೆ ಹೆಚ್ಚು ಒತ್ತುನೀಡಿದೆ. ಹಾಗಾಗಿ'ವಿಧವಾ ಜೀವನ ಮೌಲ್ಯ'ಗಳು ಆಸ್ತಿಸಮೇತ ಒಂಟಿಯಾಗಿ ಬದುಕಲು ಅಡ್ಡಿಪಡಿಸಿವೆ. ಮೂರನೆ ಮದುವೆಯಾಗ

---

೧. **ಕಾನೂರು ಹೆಗ್ಗಡತಿ – ಕುವೆಂಪು – ಉದಯರವಿ ಪ್ರಕಾಶನ – ಮೈಸೂರು – ೨೦೦೯ – ಪು.೧೧೪**

ಬಹುದಾದ ಚಂದ್ರಯ್ಯಗೌಡರು ವಿಧವೆಯಾದ ನಾಗಮ್ಮನವರ ಬದುಕಿನ ಬಗ್ಗೆ ನಿರ್ಲಕ್ಷ್ಯ ತಾಳುವುದು ಒಂದೇ ಕುಟುಂಬದಲ್ಲಿ ಅನುಸರಿಸುವ ದ್ವಂದ್ವನೀತಿಯನ್ನು ಹೊಮ್ಮಿಸುತ್ತವೆ. 'ವಿಧುರನ ಜೀವನ ಮೌಲ್ಯ'ಗಳಿಗೂ 'ವಿಧವೆಯ ಜೀವನ ಮೌಲ್ಯ'ಗಳಿಗೂ ಸಂಬಂಧವಿಲ್ಲದ ಸಾಮಾಜಿಕ ಸ್ಥಿತಿಯನ್ನು ಆಕಾಲ ಘಟ್ಟದಲ್ಲಿ ಗುರುತಿಸಬಹುದು – ಲಿಂಗ ಸಮಾನತೆಯ ಹಿನ್ನೆಲೆಯಲ್ಲಿ ಹೆಣ್ಣಿನ ಕನಿಷ್ಠ ಬೇಡಿಕೆಯನ್ನು ಈಡೇರಿಸದೆ ದರ್ಪದಿಂದ ವರ್ತಿಸುವುದೂ 'ಹೆಣ್ಣು ಗಂಡಿನ ಅಧೀನ' ಎಂಬುದನ್ನು ಮಾನ್ಯ ಮಾಡುತ್ತದೆ.

ಕಾನೂರಿನ ಆಸ್ತಿಮನೆ ಹಿಸ್ಸೆಯಾಗುವಾಗ ಯಾವ ವಿರೋಧವೂ ಇಲ್ಲದೆ ಹೂವಯ್ಯ ಚಿಕ್ಕಪ್ಪನು ಕೊಟ್ಟಿದ್ದನ್ನು ಒಪ್ಪಿಕೊಳ್ಳುವ ಉದಾರತೆಯನ್ನು ತೋರುತ್ತಾನೆ. ಆದರೆ ಚಂದ್ರಯ್ಯಗೌಡರ ಮೋಸವನ್ನು ಅರಿತ ನಾಗಮ್ಮ ತನ್ನ ವೈಧವ್ಯಕ್ಕೆ ಮರುಗುತ್ತಾಳೆ.

> *"ಏನ್ಮಾಡೋದು ? ನನ್ನ ಗಿರಾಚಾರ । ಅವರು ಇದ್ದಿದ್ರೆ ಹಿಂಗೆಲ್ಲಾ ಆಗ್ತಿತ್ತೇನು ?*
> *ಇವನಂತೂ ಬಸವನಂತ ಮನುಷ್ಯ ! ಸನ್ನೇಸಿಹಂಗೆ ಏನೂ ಬ್ಯಾಡ ಅಂತಾನೆ !*
> *ಎಂದು ಮಗನಕಡೆ ಅಕ್ಕರೆಯಿಂದ ತುಂಬಿದ ಕನಿಕರದಿಂದ ನೋಡಿದರು."*[೧]

ತಮಗೆ ಬರಬೇಕಾದ ಸಮಪಾಲು ಗಟ್ಟಿದ್ವನಿಯಿಂದ ಕೇಳಲಾಗದೆ ಧರ್ಮಕರ್ಮಗಳ ನೆಲೆಯಲ್ಲಿ ಹೂವಯ್ಯ ಮತ್ತು ನಾಗಮ್ಮ ವಿಶ್ಲೇಷಣೆ ಮಾಡುತ್ತಾರೆ. ಸಾಲ ಇದೆ ಎನ್ನುವ ಚಿಕ್ಕಪ್ಪ ತನ್ನ ವಿದ್ಯಾಭ್ಯಾಸಕ್ಕೆ ಹದಿನೈದು ಸಾವಿರ ಖರ್ಚು ಮಾಡಿರುವುದು ಮೋಸ ಎಂದು ತಿಳಿದಿದೆ. ಅದನ್ನು ನಾಗಮ್ಮ ಅವರ ಹೆಂಡಿರು ಮಕ್ಕಳಿಗೆ ಕೊಡಿಸಿದ ಒಡವೆ ವಸ್ತ್ರಕ್ಕೆ ಖರ್ಚಾಗಿರುವುದನ್ನು ಸ್ಪಷ್ಟಪಡಿಸುತ್ತಾರೆ. ಆದರೆ ಈ ವಿಚಾರವನ್ನು ನ್ಯಾಯ ಅನ್ಯಾಯದ ಹಿನ್ನೆಲೆಯಲ್ಲಿ ತಳ್ಳಿಹಾಕುತ್ತಾರೆ. ಸರಳ ಸುಂದರ ಬದುಕಿಗಾಗಿ ಮುನ್ನೋಟ ಹರಿಸುತ್ತಾರೆ. ಕಾನೂರಿನ ಮನೆ ಬಿಟ್ಟು ಹುಲ್ಲಿನ ಮನೆ ಕಟ್ಟಿಸಿಕೊಂಡು ಕೆಳಕಾನೂರಿಗೆ ಬಂದು ನೆಲಸುವ ನಾಗಮ್ಮನವರು ಸ್ವತಂತ್ರ ಬದುಕಿನಿಂದ ನೆಮ್ಮದಿಯ ಉಸಿರುಬಿಡುತ್ತಾರೆ. ಆದರೆ ಸದಾಕಾಲ ಹೂವಯ್ಯನ ಯೋಗಕ್ಷೆಮ ಕುರಿತು ಧ್ಯಾನ ಮಾಡುತ್ತಾರೆ. ಮುತ್ತಳ್ಳಿಯ ಸೀತೆಯ ವಿವಾಹ ರಾಮಯ್ಯನೊಂದಿಗೆ ನೆರವೇರಿದ ಮೇಲೆ ಹೂವಯ್ಯ ನಿರಾಸೆಯಿಂದ ಮೌನಿಯಾಗುತ್ತಾನೆ. ಆದರೆ ತಾಯಿಯ ಮುಗ್ಧ ಮನಸ್ಸು ಇದನ್ನು ಅರ್ಥಮಾಡಿಕೊಳ್ಳಲಾರದೆ ಮಗನ ಮದುವೆಯನ್ನೇ ಕುರಿತು ಚಿಂತಿಸುತ್ತಿತ್ತು. ಕೊನೆಗೂ ಮಗನ ಮದುವೆ ನೋಡದೆ ಆ ಸಂತೋಷಕ್ಕಾಗಿ ಹಾತೊರೆದ ನಾಗಮ್ಮನ ಪ್ರಾಣ ಹಾರಿ ಹೋಗುತ್ತದೆ.

### ೬. <u>ವಿಧವಾ ಮೌಲ್ಯಗಳ ನಿರಾಕರಣೆ</u>

'ವಿಧವಾ ಜೀವನದ ಮೌಲ್ಯ'ಗಳಿಗಾಗಿ ಪ್ರಾಣಾರ್ಪಣೆ ಮಾಡಿದ ನಾಗಮ್ಮ ಪವಿತ್ರವಾಗಿ ಬಿಂಬಿತವಾಗಿದ್ದಾರೆ. ಕಾದಂಬರಿ ನಾಗಮ್ಮನ ಪಾತ್ರವನ್ನು ದೀರ್ಘ

---

೧. **ಕಾನೂರು ಹೆಗ್ಗಡತಿ – ಕುವೆಂಪು – ಉದಯರವಿ ಪ್ರಕಾಶನ – ಮೈಸೂರು – ೨೦೦೯ – ಪು.೩೧೧**

ಚರ್ಚೆಗೊಳಪಡಿಸದಿದ್ದರು ಆಕೆಯ ಆಂತರಿಕ ದುಃಖದ ಸ್ಪಷ್ಟ ಅರಿವು ಓದುಗರಿಗೆ ಆಗುತ್ತದೆ. ಆದರೆ ಇನ್ನೂ ಇಬ್ಬರು ವಿಧವೆಯರು ಈ ಕಾದಂಬರಿಯಲ್ಲಿ ಚಿತ್ರಣಗೊಂಡಿದ್ದಾರೆ. ಕಾದಂಬರಿಯ ಗಂಗೆ ವ್ಯಭಿಚಾರಿಣಿಯಾದರೂ ಮೂಲತಃ ವಿವಾಹಿತಳು. ಗಂಗೆ ಕೃಷ್ಣಯ್ಯ ಶೆಟ್ಟಿ ಎಂಬಾತನನ್ನು ಪ್ರೇಮಿಸಿ ಮದುವೆಯಾಗಲು ನಿರ್ಧರಿಸಿದ್ದಳು. ಆದರೆ ತಂದೆ ತಾಯಿ ತಿಮ್ಮಯ್ಯ ಸೆಟ್ಟಿ ಎಂಬ ಶ್ರೀಮಂತ ಮುದುಕ ನಾಲ್ಕೈದು ಮದುವೆಯಾಗಿದ್ದವರು, ವಯಸ್ಸು ಅರವತ್ತು ಮೀರಿದ್ದರೂ ಗಂಗೆಯನ್ನು ಮದುವೆಮಾಡಲು ಒಪ್ಪುತ್ತಾರೆ. ತಮ್ಮ ದಾರಿದ್ರ್ಯವನ್ನು ಕಳೆಯಲು ಶ್ರೀಮಂತರನ್ನು ಎದುರುಹಾಕಿಕೊಳ್ಳಲಾಗದೆ ಮದುವೆ ಮಾಡುತ್ತಾರೆ. ಆದರೆ ಪ್ರೇಮಿಯಾದ ಕೃಷ್ಣಯ್ಯ ಶೆಟ್ಟಿಯನ್ನು ಖೂನಿ ಮಾಡುತ್ತಾರೆ. ಇದರಿಂದ ತಿಮ್ಮಯ್ಯ ಶೆಟ್ಟಿ ಜೀವನ ಪರ್ಯಂತ ಸೆರೆವಾಸವಾದರು. ಗಂಗೆ 'ವ್ಯಭಿಚಾರಿಣಿ' ಎಂದು ಮನೆಯಿಂದ ಹೊರದಬ್ಬಲ್ಪಟ್ಟಳು. ನಂತರ ರಂಗಪ್ಪಶೆಟ್ಟಿಯೊಂದಿಗೆ ಘಟ್ಟದ ಮೇಲೆ ಬಂದು ಕಾನೂರಿನಲ್ಲಿ ನೆಲೆಯಾದ ಗಂಗೆ ಮತ್ತು ಚಂದ್ರಯ್ಯಗೌಡರೊಂದಿಗಿನ ಸಂಬಂಧ ವಿವಾಹೇತರ ಸಂಬಂಧವಾಗಿತ್ತು. ಆಕೆ ವ್ಯಭಿಚಾರಿಣಿ ಎಂದು ಹೊರ ದೂಡಲ್ಪಟ್ಟು ರಂಗಪ್ಪ ಶೆಟ್ಟರೊಂದಿಗೆ ಘಟ್ಟದ ಮೇಲೆ ಬಂದು ನೆಲೆಸುವಾಗ ಶೆಟ್ಟರೊಂದಿಗೆ ವಿವಾಹಬಂಧನಕ್ಕೊಳಗಾಗಲಿಲ್ಲ. ಹಾಗಾಗಿ ವಿವಾಹದ ನಿಯಮಗಳಿಗೆ ಗಂಗೆ ಬದ್ಧಳಾಗಲಿಲ್ಲ. ಚಂದ್ರಯ್ಯಗೌಡರೂ ರಂಗಪ್ಪ ಶೆಟ್ಟರೂ ಗಂಗೆಯೊಂದಿಗೆ ಹೊಂದಿದ್ದ ಸಂಬಂಧ ಕೇವಲ ಹೆಣ್ಣುಗಂಡಿನ ಸಂಬಂಧ. ವೈಧವ್ಯದ ಸಮಸ್ಯೆ ಗಂಗೆಯನ್ನು ಕಾಡುವುದಿಲ್ಲ. ಅದರಲ್ಲೂ ಆ ಕಾಲಮಾನದ ಬ್ರಾಹ್ಮಣ ಸಮುದಾಯ ಮತ್ತು ಮೇಲ್ಜಾತಿ ಎಂದು ಗುರುತಿಸಿಕೊಂಡಿದ್ದ ಸಮುದಾಯಗಳಲ್ಲಿ ವೈಧವ್ಯದ ಸಮಸ್ಯೆ ತೀವ್ರವಾಗಿತ್ತು. ಕೆಳಜಾತಿವರ್ಗದವರಲ್ಲಿ ವೈಧವ್ಯ ಕಠಿಣವಾಗಿ ಪರಿಣಮಿಸಿರಲಿಲ್ಲ ಎನ್ನುವುದನ್ನೂ ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಆಕೆ ದುಡಿಮೆಯ ಅಲ್ಪ ಹಣದಿಂದಲೇ ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯುತ್ತಾಳೆ. ಪುರುಷನ ಅವಲಂಬನೆಯಿಂದ ಹೊರಗುಳಿಯುತ್ತಾಳೆ. ಆದರೆ ಕಾದಂಬರಿಯಲ್ಲಿ ವಿಧವೆಯರಾದ ನಾಗಮ್ಮ, ಸುಬ್ಬಮ್ಮರಿಗೂ, ಗಂಗೆಗೂ ಅನೇಕ ವ್ಯತ್ಯಾಸಗಳಿವೆ. ಚಂದ್ರಯ್ಯಗೌಡರ ಮೂರನೇ ಮಡದಿಯಾಗಿ ಬಂದ ಕಾನೂರು ಮನೆಯ ಹೆಗ್ಗಡತಿ ಸುಬ್ಬಮ್ಮನನ್ನೇ ಗಂಗೆ ದೂರ ಇಡುತ್ತಾಳೆ. ಯಾವ ಸಾಮಾಜಿಕ ಮೌಲ್ಯಗಳಿಗೂ ಬದ್ಧಳಾಗಿರದ ಗಂಗೆ ಸ್ವಚ್ಛಂದ ಬದುಕಿಗೆ ಒಗ್ಗಿಕೊಂಡಿದ್ದಳು. ವಿಧವೆಯಾದರೂ 'ವಿಧವಾ ಜೀವನ ಮೌಲ್ಯ' ಗಳಿಂದ ಹೊರಗುಳಿಯುತ್ತಾಳೆ. ನಾಗಮ್ಮ ಸುಸಂಸ್ಕೃತ ಮನೆಯ ಮಹಿಳೆಯಾಗಿ ಸಾಂಪ್ರದಾಯಿಕ ಮೌಲ್ಯಗಳನ್ನು ಒಪ್ಪಿ ಬದುಕುತ್ತಾಳೆ. ಸುಬ್ಬಮ್ಮನಿಗೆ ತನ್ನ ನಡತೆಯ ಬಗ್ಗೆ ಎಚ್ಚರಿಕೆಯಿದೆ. ಗಂಗೆಯ ಬದುಕಿಗೆ ಯಾವಕಟ್ಟುಪಾಡುಗಳೂ ಅಡ್ಡಿಯಾಗುವುದಿಲ್ಲ ಸಾಮಾಜಿಕ ಬದುಕು ವಿಧವೆಯನ್ನು

ಲಿಂಗ, ಜಾತಿ, ವರ್ಗಗಳ ನೆಲೆಯಲ್ಲಿ ತುಳಿಯುವುದನ್ನು ಕಾದಂಬರಿ ಅನಾವರಣಗೊಳಿಸುತ್ತದೆ. ವ್ಯವಸ್ಥೆಯ ಎಲ್ಲಾ ಶೋಷಕಾಂಶಗಳನ್ನು ಒಡಲಲ್ಲಿಟ್ಟುಕೊಂಡು ಸುಬ್ಬಮ್ಮನನ್ನು ಪುರುಷರಿಗೇನೂ ಕಡಿಮೆ ಇಲ್ಲದಂತೆ ಶೋಷಿಸುವ ಗಂಗೆ ಪರಂಪರಾಗತವಾಗಿ ಬಂದ ದಾಸ್ಯದ ಉಳಿವಿಗಾಗಿ ಇರುವಂತೆ ಭಾಸವಾಗುತ್ತದೆ. ಗಂಗೆ ತನ್ನ ಹೆಣ್ಣುತನವನ್ನು ಬಂಡವಾಳವನ್ನಾಗಿಸಿಕೊಂಡು ಯಜಮಾನರನ್ನು ಓಲೈಸುತ್ತ ಅವರ ಮೇಲೆ ಹಿಡಿತ ಸಾಧಿಸುವ ಅಧಿಕಾರ ಹೊಂದಿದವಳಂತೆ ಚಿತ್ರಿತವಾಗಿದ್ದಾಳೆ. ಪ್ರಾರಂಭದಿಂದಲೂ ಸಾಂಸ್ಕೃತಿಕವಾಗಿ ಬದುಕುಕಟ್ಟಿಕೊಳ್ಳಲಾಗದ ಗಂಗೆ ಸ್ವಚ್ಛಂದ ಬದುಕಿಗೆ ಒಗ್ಗಿಕೊಂಡು ವಿಧವಾ ಬದುಕಿನ ಕಟ್ಟುಪಾಡುಗಳಿಂದ ಹೊರಗುಳಿಯುವುದರಿಂದ ಸುಬ್ಬಮ್ಮನಂತವರ ಬಾಳಿಗೆ ಮುಳುವಾಗುವುದನ್ನು ಕಾದಂಬರಿ ವಿವರಿಸುತ್ತದೆ. ಗಂಗೆಯ ಕ್ರೌರ್ಯನೀತಿಯ ಹಿಂದೆ ಸೇರೇಗಾರನ ಪ್ರಲೋಭನೆಗಳಿರುವುದನ್ನು ಗಮನಿಸಬಹುದು.

ಕಾನೂರು ಚಂದ್ರಯ್ಯಗೌಡರಿಗೆ ಮೂರನೇ ಹೆಂಡತಿಯಾಗಿ ಬಂದ ಸುಬ್ಬಮ್ಮನಿಗೂ ಕೆಲವೇ ವರ್ಷಗಳಲ್ಲಿ ವೈಧವ್ಯ ಪ್ರಾಪ್ತವಾಗುತ್ತದೆ. ನೆಲ್ಲುಹಳ್ಳಿಯ ಬಡವರ ಮನೆಯ ಸುಬ್ಬಮ್ಮನನ್ನು ಮೂರನೆ ಪತ್ನಿಯಾಗಿ ಪಡೆಯುವುದು ಚಂದ್ರಯ್ಯಗೌಡರಿಗೇನೂ ಕಷ್ಟವಾಗಲಿಲ್ಲ. ಮದುವೆಯಾದ ಪ್ರಾರಂಭದಲ್ಲಿ ಚಿಕ್ಕಪ್ರಾಯದ ಹೆಂಡತಿಯನ್ನು ಒಲಿಸಿಕೊಳ್ಳುವ ಸಲುವಾಗಿ ಪ್ರೀತಿಯಿಂದ ಕಂಡರೂ ಬರುಬರುತ್ತಾ ತಮ್ಮ ದೌರ್ಬಲ್ಯಕ್ಕೆ ಸುಬ್ಬಮ್ಮನನ್ನು ಅನುಮಾನ ಪಡುತ್ತ ಕ್ರೌರ್ಯದಿಂದ ನಡೆಸಿಕೊಳ್ಳುತ್ತಾರೆ. ಇದು ಅವರ ಪುರುಷ ಪ್ರಾಬಲ್ಯದ ಮಹಿಳಾ ಅಧೀನತೆಯನ್ನು ಬಿಂಬಿಸುತ್ತದೆ. ಹೂವಯ್ಯನನ್ನು ಮತ್ತು ಸೇರೇಗಾರನನ್ನು ಅನುಮಾನ ಪಡುತ್ತಾರೆ. ಸುಬ್ಬಮ್ಮನನ್ನು ಮನೆಯಿಂದ ಓಡಿಹೋಗುವವರೆಗೆ ಗೌಡರು ದೌರ್ಜನ್ಯವೆಸಗುತ್ತಾರೆ. ಸುಬ್ಬಮ್ಮನ ಬಡತನ ಮತ್ತು ಅವಲಂಬನೆ ಆಕೆಯ ದೌರ್ಜನ್ಯಕ್ಕೆ ಎಡೆಮಾಡುತ್ತವೆ. ಗಂಗೆಗೆ ಸಿಗುವ ಪ್ರಾಮುಖ್ಯತೆ ಸುಬ್ಬಮ್ಮನಿಗೆ ಸಿಗದೆ ಹೋಗುತ್ತದೆ. ಆದರೆ ಹೆಂಗಸು ಗಂಡಿನ ದಬ್ಬಾಳಿಕೆಯನ್ನು ಸಹಿಸುವುದು ಅನಿವಾರ್ಯತೆಯ ನೆಲೆಯಲ್ಲಿ. ಇದನ್ನು ಪುರುಷ ಗೆಲುವಿನ ಅಂಶವಾಗಿ ಸ್ವೀಕರಿಸುತ್ತಾನೆ. ಮತ್ತು ಹೆಣ್ಣಿನ ಮಣಿಯುವಿಕೆಯನ್ನು ಗಂಡುತನದ ಜಯವಾಗಿ ಪರಿಭಾವಿಸುತ್ತಾನೆ. ಆಯಾ ವರ್ಗಗಳಿಗೆ ಅನುಗುಣವಾಗಿ ಪರಿಸ್ಥಿತಿಗಳು ಬೇರೆ ಬೇರೆಯಾದರು ಒಟ್ಟು ಮಹಿಳೆ ಎದುರಿಸುವ ಕುಟುಂಬದೊಳಗಿನ ದಾಂಪತ್ಯದ ತಲ್ಲಣಗಳು ಒಂದೇ ಬಗೆಯವಾಗಿರುತ್ತವೆ. ಪರಸ್ತ್ರೀ ವ್ಯಾಮೋಹಕ್ಕೊಳಗಾಗುವ ಗಂಡಸರ ಬಯಕೆಗಳು ಕೂಡ ಗಂಡಸರಿಗೆ ಪೂರಕವಾಗಿಯೇ ಇರುತ್ತದೆ. ಪರಪುರುಷನೊಂದಿಗೆ ಸ್ತ್ರೀ ಸಂಬಂಧ ಹೊಂದುವುದು ಅಪರಾಧವಾದರೆ ಪುರುಷನಿಗೆ ಇಂತಹ ಸಂಬಂಧ ಅಪರಾಧವಲ್ಲ.

ಚಂದ್ರಯ್ಯಗೌಡರು ಗಂಗೆಯೊಂದಿಗೆ ಸಂಬಂಧವಿರಿಸಿಕೊಳ್ಳುವುದು ಪ್ರತಿಷ್ಠೆಯಾದರೆ, ಸುಬ್ಬಮ್ಮ ಸೇರೇಗಾರರ ಸಂಬಂಧ ಅನೈತಿಕವಾಗುತ್ತದೆ. ಚಂದ್ರಯ್ಯ ಗೌಡರು ಮತ್ತು ಗಂಗೆಯೊಂದಿಗಿನ ವಿವಾಹವಾಗದೆ ಇಟ್ಟುಕೊಳ್ಳುವ 'ಸಂಬಂಧ' ಕೇವಲ ಲೈಂಗಿಕ ಆಕರ್ಷಣೆಯಾಗುತ್ತದೆ. ಸುಬ್ಬಮ್ಮನೊಂದಿಗಿನ ವೈವಾಹಿಕ ಸಂಬಂಧದಲ್ಲಿ ಭದ್ರತೆ ನಂಬಿಕೆಗಳನ್ನು ನಿರೀಕ್ಷಿಸಬಹುದಾಗಿದ್ದು 'ಪರಿಪೂರ್ಣತೆ'ಯನ್ನು ಕಂಡುಕೊಳ್ಳಬಹುದು. ಗಂಗೆಯಿಂದ ಪಡೆಯಲಾಗದ ಅನಿರ್ವಚನೀಯವಾದ ಅನುಭವವನ್ನು ಕೊನೆಗಾಲದಲ್ಲಿ ಸುಬ್ಬಮ್ಮನಿಂದ ಚಂದ್ರಯ್ಯಗೌಡರು ಪಡೆಯುತ್ತಾರೆ. ಲೇಖಕರು 'ವಿವಾಹ ಸಂಬಂಧ'ದಲ್ಲಿರುವ ಪರಿಪೂರ್ಣತೆಯನ್ನು ಮನಗಾಣಿಸುತ್ತಾರೆ. ಗಂಡನ ದೌರ್ಜನ್ಯಕ್ಕೆ ಹೆದರಿ ತೌರಿನಲ್ಲಿದ್ದ ಸುಬ್ಬಮ್ಮನಿಗೂ ತೌರೂರಿನವರ ಮಾತುಗಳು ಬರುಬರುತ್ತಾ ಅಸಹನೀಯವಾಗ ತೊಡಗಿದವು.

> *"ಗಂಡನನ್ನು ಬಿಟ್ಟುಬರುವ ತರುಣಿ ಬಹುಬೇಗ ನಿಂದೆಗೀಡಾಗುತ್ತಾಳೆ. ಸುಬ್ಬಮ್ಮನ ವಿಚಾರವಾಗಿ ಅಲ್ಲಿ ಇಲ್ಲಿ ಅವರು ಇವರು ಗುಸುಗುಸು ಕೆಟ್ಟ ಮಾತಾಡಿಕೊಳ್ಳ ತೊಡಗಿದರು. ಕೆಲವರಂತೂ ಸುಬ್ಬಮ್ಮ ಕಾನೂರಿನಲ್ಲಿ ಕೆಟ್ಟ ಕೆಲಸ ಮಾಡಿದುದರಿಂದಲೇ ಗೌಡರು ಅವಳನ್ನು ಒಡಿಸಿಬಿಟ್ಟರೆಂದೂ, ಇಲ್ಲದಿದ್ದರೆ ಅಂತಹ ದೊಡ್ಡ ಮನುಷ್ಯರು ಕೈಹಿಡಿದ ಹೆಂಡತಿಯನ್ನು ಕೈಬಿಟ್ಟು ಅವಮಾನಕ್ಕೆ ಗುರುಯಾಗುತ್ತಿದ್ದರೇ ಎಂದೂ ಇಲ್ಲದ ದೂರುಗಳನ್ನು ಸಿಕ್ಕಿದ ಕಡೆ ಬಿತ್ತಿ ಬಿಟ್ಟರು. ಸಾಲದಿದ್ದುದಕ್ಕೆ ಬೇರೆ ಕೆಟ್ಟ ನಾಲಗೆಗಳ ಜೊತೆಗೆ ಕೆಲವರ ಕೆಟ್ಟ ಕಣ್ಣು ಸುಬ್ಬಮ್ಮನ ಮೇಲೆ ಬೀಳತೊಡಗಿತ್ತು. ಆಕೆಯ ಮನಸ್ಸು ಒಂದೆರಡು ಸಾರಿ ಅತ್ತ ಇತ್ತ ಅಲೆದಾಡಿ, ಅಳುಕಿ ಬಳುಕಿ ಸೋಲಿನಂಚಿನವರೆಗೂ ಜಾರಿ ಬಹು ಕಷ್ಟದಿಂದ ಕೆಳಗೆ ಬೀಳದೆ ಆತುಕೊಂಡಿತ್ತು."*[೧]

ತೌರಿನವರ ತಾತ್ಸಾರಕ್ಕೆ ಉತ್ತರವಾಗಿ ಗಂಡನ ಮನೆಗೆ ವಾಪಾಸಾಗುವ ಸುಬ್ಬಮ್ಮನಿಗೆ ಗಂಡನ ದೌರ್ಜನ್ಯಗಳು ಮನಸ್ಸಿನಿಂದ ಮರೆಯಾಗುತ್ತವೆ. ಗಂಡನ ಸಾನಿಧ್ಯದಲ್ಲಿ ಸೇವೆ ಮಾಡುವುದನ್ನು ಶಿರಸಾ ಪಾಲಿಸುತ್ತಾಳೆ; ಗಂಡನ ಆಶ್ರಯ, ಆಸ್ತಿ, ಎಲ್ಲವೂ ಅವಳಿಗೆ ರಕ್ಷಣೆ ನೀಡುತ್ತವೆ. ಆದರೆ ಅವಳಿಗೆ ಬಂದ 'ವೈಧವ್ಯ' ಅವಳ ಬದುಕನ್ನೇ ನುಂಗಿಹಾಕುತ್ತದೆ. ಚಂದ್ರಯ್ಯ ಗೌಡರು ಬದುಕಿದ್ದಾಗ ಸೇರೇಗಾರನಿಗೆ ಸುಬ್ಬಮ್ಮನನ್ನು ಪಡೆಯುವ ಕುಟಿಲೋಪಾಯ ಯಶಸ್ವಿಯಾಗದಿರುವುದು ಅವರ ಸಾವಿನ ನಂತರ ಸುಲಭವಾಗಿ ನೆರವೇರುತ್ತದೆ. ಸೇರೆಗಾರನ ಪ್ರಲೋಭನೆಯ ಅರಿವಿಲ್ಲದ ಸುಬ್ಬಮ್ಮ ಆತನಿಗೆ ವಶವಾಗುವುದರೊಂದಿಗೆ ತನಗೆ ಮಕ್ಕಳಾಗುವುದಿಲ್ಲ ಎಂಬ ನಂಬಿಕೆಯೂ ಸೇರಿಕೊಳ್ಳುತ್ತದೆ.

---

೧. ಕಾನೂರು ಹೆಗ್ಗಡತಿ – ಕುವೆಂಪು – ಉದಯರವಿ ಪ್ರಕಾಶನ – ಮೈಸೂರು – ೨೦೦೯ – ಪು. ೫೩೦

*"ಸುಬ್ಬಮ್ಮ ತಾನು ಊಹಿಸಿದ್ದುದಕ್ಕಿಂತಲೂ ಆಳವಾದ ಬಾವಿಗೆ ಹಾರಿದ್ದಳು. ಮುಂಡೆಯಾದ ತಾನು ಬಸುರಿಯಾದರೆ ಸಹಿಸಲಸಾಧ್ಯವಾಗಿ ಅವಮಾನವಾಗುತ್ತದೆ ; ಜಾತಿಯಿಂದ ಹೊರಗೆ ಹಾಕುತ್ತಾರೆ, ಶಿಶುಹತ್ಯೆ ಮಾಡಿದರೆ ಕಠಿಣ ಸಜಾ ಹಾಕುತ್ತಾರೆ; ಮನೆತನದ ಹೆಸರಿಗೆ ಎಳ್ಳು ನೀರಾಗುತ್ತದೆ : ತನ್ನ ತಂದೆ ತಾಯಿಗಳೂ ಹತ್ತಿರದ ಬಂಧುಗಳೂ ತಲೆಯೆತ್ತಿ ನಡೆಯದಂತಾಗುತ್ತದೆ ; ಸಮಾಜದಿಂದಲೇ ತಿರಸ್ಕೃತಳಾಗಿ ನಾಯಿಯಂತೆ ಬಾಳಿ ಸಾಗಬೇಕಾಗುತ್ತದೆ. ಈ ಆಲೋಚನೆಗಳೆಲ್ಲವೂ ಆಕೆಗೆ ಬಂದಿದ್ದವು. ಆದರೆ ವಿವೇಕವನ್ನು ಕೊಚ್ಚಿ ನುಗ್ಗಿದ ಕಾಮಲಾಲಸೆಯೂ ತಾನು ಹುಟ್ಟು ಬಂಜೆಯಾಗಿರುವುದರಿಂದ ಗರ್ಭಿಣಿಯಾಗುವುದಿಲ್ಲ ಎಂಬ ನಂಬುಗೆಯೂ ಆಕೆಗೆ ಧೈರ್ಯ ತಂದುಕೊಟ್ಟಿದ್ದವು. ತನ್ನ ತೀರಿಹೋದ ಗಂಡ "ಬಂಜೆ ಬಂಜೆ"! ಎಂದು ಹಾಕುತ್ತಿದ್ದ ಶಾಪವೇ ಸುಬ್ಬಮ್ಮಗೆ ವರದಂತೆ ತೋರಿ ಸಂತೋಷವಾಗಿತ್ತು. ಜೊತೆಗೆ ನೀಚಜಾರನು ಬೀಸುತ್ತಿದ್ದ ಬಣ್ಣ ಬಣ್ಣದ ಬಲೆಯ ಆಕರ್ಷಣೆಯೂ ಆಕೆಯನ್ನು ನಾಗರ ಹಾವಿನ ಹೆಡೆ ಹಕ್ಕಿಯನ್ನು ಮೋಹಮುಗ್ಧವಾಗಿ ಮಾಡಿ ಸೆಳೆಯುವಂತೆ, ಸೇದಿ ಸೆಳೆಯಿತು."*[೧]

ಶತಮಾನಗಳಿಂದಲೂ ಹೆಣ್ಣನ್ನು ಅಧೀನವಾಗಿಸುವ ಉದ್ದೇಶದಿಂದ ಹೆಣ್ಣಿನ ಲೈಂಗಿಕ ಜೀವನದ ಮೇಲಿನ ನಿಯಂತ್ರಣಕ್ಕೆ ಅಗತ್ಯವಾಗಿ ಪಾವಿತ್ರತೆಯ ಮಾದರಿಯನ್ನು ನೀಡಲಾಗಿದೆ ಹೆಣ್ಣನ್ನು ವೈಧವ್ಯಕ್ಕೆ ಹೊಂದಿಕೊಳ್ಳುವಂತೆ ನೋಡಿಕೊಂಡಿದ್ದರ ಪರಿಣಾಮ ಮಹಿಳೆಯ ಬದುಕು ದುರಂತದಲ್ಲಿ ಕೊನೆಗೊಳ್ಳುವಂತಾಗಿದೆ. ಇಲ್ಲಿ ಸುಬ್ಬಮ್ಮನ ಬದುಕಿಗೆ ಸಾಮಾಜಿಕ ಒತ್ತಡಗಳಂತೆ ವೈಯಕ್ತಿಕ ದೌರ್ಬಲ್ಯಗಳೂ ದುರಂತಕ್ಕೆ ಕಾರಣವಾಗುವುದನ್ನು ಲೇಖಕರು ಚಿತ್ರಿಸುತ್ತಾರೆ. ಚಂದ್ರಯ್ಯಗೌಡರು ಗಂಗೆಯೊಂದಿಗಿಟ್ಟುಕೊಂಡ ಅನೈತಿಕ ಸಂಬಂಧ ಸಮಾಜ ಬಾಹಿರವಲ್ಲ. ಆದರೆ ಸುಬ್ಬಮ್ಮ ಸೇರೆಗಾರನ ಸಂಬಂಧ ಅನೈತಿಕ ಮಟ್ಟದ್ದಾಗಿದ್ದು ನೈಸರ್ಗಿಕವಾಗಿ ಬಹಿರಂಗಗೊಂಡು ಅವಳ ಬದುಕನ್ನೇ ಆಹುತಿ ತೆಗೆದುಕೊಳ್ಳುವುದು ಸಾಮಾಜಿಕ ದುರಂತ. ರಂಗಪ್ಪ ಸೇರೆಗಾರನ ಮೋಹ ಜಾಲದಲ್ಲಿ ಸಿಲುಕಿದ ಸುಬ್ಬಮ್ಮ ಆತ್ಮಹತ್ಯೆ ಮಾಡಿಕೊಳ್ಳುವ ಆಲೋಚನೆಯಿಂದ ಹೊರಗುಳಿಯುತ್ತಾಳೆ. ಆತ್ಮಹತ್ಯೆ ಮಹಾಪಾಪ ಎನ್ನುವ ಸಿದ್ಧಾಂತಕ್ಕೊಳಗಾಗಿ ಗರ್ಭಪಾತಕ್ಕಾಗಿ ತೆಗೆದುಕೊಳ್ಳುವ ಔಷಧಿ ಅವಳನ್ನು ಬಲಿತೆಗೆದುಕೊಳ್ಳುವುದು ಅನಪೇಕ್ಷಿತವಾದ ಸಾವು. ಪುರುಷ ಪ್ರಧಾನ ವ್ಯವಸ್ಥೆ ಶತಮಾನಗಳಿಂದ ಮಹಿಳೆಗೆ ನೈತಿಕ ಸಂಬಂಧದ ಏಕಮುಖ ಸೂತ್ರವನ್ನು ಮನನ ಮಾಡಿಸುತ್ತ ಬಂದಿದೆ. ಈ ಸೂತ್ರವನ್ನು ಪಾಲಿಸುವುದು ತಪ್ಪಿದಾಗ ಮಹಿಳೆ ತಾನು ಮಾಡಿದ ಕೆಲಸಕ್ಕೆ ತನ್ನನ್ನೇ ಆರೋಪಿಸಿಕೊಳ್ಳುತ್ತಾಳೆ. ಸುಬ್ಬಮ್ಮ ಪಾಪ ಪ್ರಜ್ಞೆಯಿಂದ ಸಾವಿನ ಜೊತೆಯಲ್ಲಿ ಸೆಣಸಾಡುವ ವಸ್ತುಸ್ಥಿತಿಯನ್ನು ಲೇಖಕರು ಚಿತ್ರಿಸುತ್ತ ವ್ಯವಸ್ಥೆಯ

೧. ಕಾನೂರು ಹೆಗ್ಗಡತಿ – ಕುವೆಂಪು – ಉದಯರವಿ ಪ್ರಕಾಶನ – ಮೈಸೂರು – ೨೦೦೯ – ಪು. ೫೭೭

ಭ್ರಷ್ಟತೆಯನ್ನು ಬಯಲುಮಾಡುತ್ತಾರೆ. ಸ್ವೇಚ್ಛಾಚಾರಿಯಾದ ಪುರುಷನಿಗೆ ಯಾವ ಕಟ್ಟಳೆಗಳನ್ನು ವಿಧಿಸದ ವ್ಯವಸ್ಥೆ ಸುಬ್ಬಮ್ಮನಂತಹ ಸಾವಿರಾರು ಮಹಿಳೆಯರು ಮೌಲ್ಯಗಳ ಮುಸುಕಿನಲ್ಲಿ ಬೀದಿ ಪಾಲಾಗುವುದನ್ನು ಬಿಂಬಿಸುತ್ತಾರೆ. ಚಂದ್ರೇಗೌಡರ ಸಾವಿನಿಂದ ವಿಧವೆಯಾದ ಸುಬ್ಬಮ್ಮ ಚಂದ್ರೇಗೌಡರ ಕ್ರೌರ್ಯ, ದರ್ಪ, ಅಹಂಕಾರ ಹಿಂಸೆಗಳನ್ನು ತನ್ನದಾಗಿಸಿಕೊಳ್ಳುತ್ತಾಳೆ. ಯಜಮಾನಿಕೆಯನ್ನು ಪಡೆದರೂ ಆಂತರ್ಯದಲ್ಲಿ ಸೇರೆಗಾರ ಗಂಗೆಯಂತಹ ವ್ಯಕ್ತಿಗಳಿಂದ ಶೋಷಿತಳಾಗುವುದನ್ನು ಕಾದಂಬರಿ ದಾಖಲಿಸುತ್ತದೆ. ಚಂದ್ರಯ್ಯಗೌಡರು ಲೈಂಗಿಕ ಸ್ವೇಚ್ಛಾಚಾರ ನಡೆಸಿ ಕೊನೆಯಲ್ಲಿ ಹೆಂಡತಿಯ ಗೌರವಕ್ಕೆ ಪಾತ್ರರಾಗುವುದು ವ್ಯವಸ್ಥೆಗೆ ಹೊಸದಾಗಿ ತೋರುವುದಿಲ್ಲ. ಆದರೆ ಸುಬ್ಬಮ್ಮನ ಬದುಕು ಚಂದ್ರಯ್ಯಗೌಡರ ಬದುಕಿನಂತೆಯೇ ಮುಂದುವರಿದು ಹೀನಾಯವಾಗಿ ಗರ್ಭಪಾತದಿಂದ ಸಾಯುವುದು ಸಮಾಜದ ದೃಷ್ಟಿಯಲ್ಲಿ ಅನಿಷ್ಟವಾಗುತ್ತದೆ. ಇದರಿಂದಾಗಿಯೇ ರಾಮಯ್ಯ ಮನೆತನಕ್ಕೆ ಕೆಟ್ಟ ಹೆಸರು ಬಂದಿತು ಎಂದು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಸುಬ್ಬಮ್ಮನ ಸಾವಿನಲ್ಲಿ ಅವಮಾನವೇ ಎದ್ದು ತೋರುವುದು ಸಮಾಜದ ಪ್ರತಿಬಿಂಬ.

*ಸುಬ್ಬಮ್ಮನನ್ನು ಬಿ.ಎನ್.ಸುಮಿತ್ರಾಬಾಯಿಯವರು ಹೀಗೆ ವಿಶ್ಲೇಷಿಸುತ್ತಾರೆ.*

> *"ಸರ್ವ ಚೇತನದ ವಿಕಾಸ ಸಾಧ್ಯತೆಯನ್ನು ಆಧ್ಯಾತ್ಮಿಕವಾಗಿ ಎತ್ತಿ ಹಿಡಿಯುವ ಕುವೆಂಪು ಅವರು ವೈಚಾರಿಕ ವಾಸ್ತವಾಂಶಗಳೊಂದಿಗೆ ಈಕೆಯ ಸ್ವಭಾವ ಹಾಗಾಗಲು ಕಾರಣಗಳನ್ನು ವ್ಯಾಖ್ಯಾನಿಸುತ್ತಾರೆ. ಮಾನವೀಯ ನೆಲೆಯಿಂದ ಈಕೆಯೊಳಗಿನ ಅಂತಃಸತ್ವಗಳನ್ನು ಅವಳಲ್ಲಿ ಶರೀರದ ಚಲುವು, ದುಡಿವ ಸಾಮರ್ಥ್ಯ, ಅದರಿಂದಾದ ದೈಹಿಕ ಗಟ್ಟಿತನ, ಚಟುವಟಿಕೆ ಸ್ವಭಾವ, ಅಧಿಕಾರವನ್ನು ಸಮರ್ಥವಾಗಿ ನಿರ್ವಹಿಸಬಲ್ಲ ದಕ್ಷತೆ ಎಲ್ಲವೂ ಇದ್ದರೂ ಅವೆಲ್ಲ ಸುಸಂಗತವಾಗಿ ಬೆಳೆಯಲಾಗದಷ್ಟು ದಮನಕಾರಿಯಾದ ವ್ಯವಸ್ಥೆಯಿಂದಲೂ, ಅದರ ಪರಿಣಾಮವಾದ ಸ್ವಭಾವದಿಂದಲೂ ಬಂಧಿತಳಾಗಿದ್ದಾಳೆಂಬುದನ್ನು ಕೃತಿಯ ವಿವರಗಳಿಂದಲೇ ಗ್ರಹಿಸಬಹುದು. ಈ ಪ್ರಭಲವಾದ ವಿನಾಶಾತ್ಮಕ ಶಕ್ತಿಗಳು ಎಳೆದ ಕಡೆಗೆ ಸಾಗುವ ಈಕೆಯ ಬದುಕಿಗೆ ದುರಂತ ಅನಿವಾರ್ಯವಾಗುತ್ತದೆ. ಮೌಲ್ಯರಹಿತವಾದ ನಿರ್ಮಾನವ ಸ್ಥಿತಿಯಲ್ಲಿ ಈಕೆಯ ಸಾವು ಸಂಭವಿಸಿ ಹೂವಯ್ಯ ಪ್ರತಿನಿಧಿಸುವ ಮೌಲ್ಯದ ದೃಷ್ಟಿಯಲ್ಲಿ ಈಕೆ ಕೇವಲ ಅನುಕಂಪದ ವಸ್ತುವಾಗುತ್ತಾಳೆ. ತನ್ನನ್ನು ಆವರಿಸಿರುವ ಬಂಧನಗಳೆದುರು ಸುಬ್ಬಮ್ಮ ತೀರಾ ಅಸಹಾಯಕಳಲ್ಲ ಆದರೆ ಪ್ರತಿಭಟನೆಗಿಂತ ಪರಿಸ್ಥಿತಿಯೊಂದಿಗೆ ರಾಜಿಮಾಡಿಕೊಳ್ಳುತ್ತ, ಅವಕಾಶ ಸಿಕ್ಕಿದಾಗ ಪ್ರಭಲವಾಗುವುದು ಈಕೆಯ ಸ್ವಭಾವವಾಗಿದೆ. ಚಂದ್ರಯ್ಯಗೌಡರಿಂದ ಕೊಲೆಯಾಗುವುದನ್ನು ತಪ್ಪಿಸಿಕೊಳ್ಳಲು ತವರಿಗೆ ಓಡುವುದು. ತವರಿನ ಅಗತ್ಯಕ್ಕೆ*

*ತಕ್ಕಂತೆ ಮತ್ತೆ ದುಡಿಮೆಗೆ ತನ್ನನ್ನು ತೆತ್ತುಕೊಳ್ಳುವುದರಲ್ಲಿ ಈ ಬಂಧನಗಳನ್ನು ಮೀರುವ ಹೋರಾಟ- ಅದು ಕೇವಲ ಅಸ್ತಿತ್ವಕ್ಕಾಗಿ ಹೋರಾಟವೇ ಇರಲಿ-ಅಂತೂ ಇದೆ. ಈ ಹೋರಾಟದಲ್ಲಿ ಆಕೆ ಶಕ್ತಿಗುಂದಿದ ಚಂದ್ರಯ್ಯ ಗೌಡರನ್ನು ಸೇವೆ, ಪ್ರೀತಿಗಳಿಂದ ಗೆದ್ದು, ಆತನ ಮರಣದ ನಂತರ ಅವರ ಅಧಿಕಾರ ತಾನು ಪಡೆದುಕೊಳ್ಳುವುದು ಒಂದು ಸ್ತರದಲ್ಲಿ ತನ್ನನ್ನು ಹತ್ತಿಕ್ಕಿದ್ದ ಭೌತಿಕ ಪರಿಸ್ಥಿತಿಗಳ ವಿರುದ್ಧ ಈಕೆ ಸಾಧಿಸುವ ವಿಜಯವೇ ಆಗಿದೆ"*[೧]

ಸುಬ್ಬಮ್ಮನ ಪಾತ್ರವನ್ನು ಕಾದಂಬರಿಯಲ್ಲಿ ಶೋಷಿತಾತಿ-ಶೋಷಿತ ನೆಲೆಯಲ್ಲಿ ಚಿತ್ರಿಸಿರುವುದು ಮುಖ್ಯ ಸಂಗತಿಯಾಗಿದೆ. ಸುಬ್ಬಮ್ಮ ಬಡಕುಟುಂಬದವಳಾಗಿದ್ದು ಚಂದ್ರಯ್ಯಗೌಡರಿಗೆ ಮೂರನೆ ಪತ್ನಿಯಾಗುವುದು ಅನಿರೀಕ್ಷಿತವಾದದ್ದು ಎನ್ನುವ ಕೆ.ವಿ.ಸುಬ್ಬಣ್ಣನವರು ಹೀಗೆ ಅಭಿಪ್ರಾಯಪಡುತ್ತಾರೆ.

*"ಸುಬ್ಬಮ್ಮ ಕಾನೂರಿಗಿಂತ ಕೊಂಪೆ ಎನಿಸಿಕೊಂಡ ಹಳ್ಳಿಯಿಂದ ತೀರಾ ಅಸಂಸ್ಕೃತವಾದ ಬಡ ಕುಟುಂಬದಿಂದ ಶ್ರೀಮಂತಿಕೆಯುಳ್ಳ ಚಂದ್ರೇಗೌಡರ ಕುಟುಂಬಕ್ಕೆ ಅವರ ಮೂರನೆಯ ಹೆಂಡತಿಯಾಗಿ ಬಂದವಳು ಅನಿರೀಕ್ಷಿತವಾಗಿ ಮೇಲಿನ ಅಂತಸ್ತಿಗೆ ಏರಿದ್ದೇ ಅವಳಿಗೆ ತೋಲ ತಪ್ಪುತ್ತದೆ. ಆಕೆ ನೈತಿಕವಾಗಿ ಭ್ರಷ್ಟಳಾಗುತ್ತ ಹೋಗುತ್ತಾಳೆ. ಕೆಲವೊಮ್ಮೆ ಆ ಪತನದಿಂದ ಮೇಲೆದ್ದುಕೊಳ್ಳಲು ಪ್ರಯತ್ನಿಸಿ ಚಪಲ ಲಂಪಟತನಗಳಿಂದ ಅದು ಸಾಧ್ಯವಾಗದೆ ಸೋತು ಕಡೆಗೆ ಭಯಾನಕವಾದ ದುರಂತದಲ್ಲಿ ತೀರಿಕೊಳ್ಳುತ್ತಾಳೆ. ಲೇಖಕರೇ ಹೇಳುವ ಹಾಗೆ ಅಸಂಸ್ಕೃತಿಯಿಂದ ಸಂಸ್ಕೃತಿಯೆಡೆಗೆ ಚಲಿಸುವುದು ಸುಲಭವಲ್ಲ. ಕಠಿಣ ಪ್ರಯತ್ನದಿಂದ ಮಾತ್ರವೇ ಸಾಧ್ಯ. ಆದರೆ ಕುಸಂಸ್ಕೃತಿಯೊಳಕ್ಕೆ ಜಾರಿಹೋಗುವುದು ಬಲು ಸುಲಭ. ಸುಬ್ಬಮ್ಮನು ಹೂವಯ್ಯನ ಹೆಂಡತಿಯೇ ಆಗುವುದೂ ಸಾಧ್ಯವಿತ್ತು. ಹಾಗಾಗಿ ಸರಿಯಾದ ನಿರ್ದೇಶನವಿದ್ದಿದ್ದರೆ ಅವಳ ಬದುಕಿನ ದಾರಿಯೂ ಬೇರೆಯೇ ಆಗಬಹುದಿತ್ತು."*[೨]

ಸುಬ್ಬಮ್ಮನ ಬದುಕು ದುರ್ಭರವಾದಾಗ ಸಾವೇ ಉತ್ತರವಲ್ಲ ಎಂದು ಹೇಳಲು ಪ್ರಯತ್ನಿಸಿರುವ ಲೇಖಕರು ಆಕೆಯ ಅನಿರೀಕ್ಷಿತ ಸಾವಿಗೆ ಅಂದಿನ ಸಾಮಾಜಿಕ ವ್ಯವಸ್ಥೆ ಕಾರಣವಾಗುವುದನ್ನು ಹೇಳುತ್ತಾರೆ. ಸುಬ್ಬಮ್ಮನ ದುರಂತ ಸಾವಿನ ಹಿಂದೆ ಅವಳ ಬಗ್ಗೆ ಅವಳಿಗೇ ಇದ್ದ ಅವಿಶ್ವಾಸವೂ ಕಾರಣವಾಗುತ್ತದೆ. ಅವಳ ಗಟ್ಟಿ ಮನಸ್ಸನ್ನು ದುರ್ಬಲಗೊಳಿಸಿದ ಪುರುಷ ಸಮಾಜದ ನಿರ್ಲಕ್ಷ್ಯ ತೀವ್ರವಾದ ಪರಿಣಾಮ ಬೀರುವುದನ್ನು ಕಾದಂಬರಿ ತೆರೆದಿಡುತ್ತದೆ.

---

೧. ವಿಚಯ -ಬಿ.ಎನ್.ಸುಮಿತ್ರಾಬಾಯಿ-ವಿಜಯಾ-ಐ.ಎಲ್.ಎ.ಪ್ರಕಾಶನ-ಬೆಂಗಳೂರು ೧೯೯೫. ಪು. ೧೯೯

೨. ಕುವೆಂಪು ಕೃತಿ ವಿಮರ್ಶೆ-(ಸಂ)ಅರವಿಂದ ಮಾಲಗತ್ತಿ - ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ-ಮೈಸೂರು -೨೦೦೬ ಪು. ೫೪೬

## ೭. ಸಾಮಾಜಿಕ ಮೌಲ್ಯಗಳಾಗಿ 'ಕೂಡಿಕೆ'– 'ಸೀರುಡಿಕೆ' ಪದ್ಧತಿಗಳು

ಮಲೆಗಳಲ್ಲಿ ಮದುಮಗಳು ಕಾದಂಬರಿಯ ನಾಗತ್ತೆ, ನಾಗಕ್ಕರು ಮಲೆನಾಡಿನ ಸಾಂಪ್ರದಾಯಿಕ ಸಂಸ್ಕೃತಿಯೊಳಗೆ ಮೂಡಿಬಂದವರು. ನಾಗತ್ತೆಯ ಮಗ ತೀರಿಕೊಂಡ ಬಳಿಕ ತನ್ನ ಸೊಸೆಯನ್ನು ಹೂವಳ್ಳಿಯ ವೆಂಕಪ್ಪಗೌಡರಿಗೆ 'ಸೀರುಡಿಕೆ' ಮಾಡುವ ಹುನ್ನಾರ ಹೆಣೆಯುತ್ತಾಳೆ.ಆದರೆ ರಂಗಪ್ಪ ಗೌಡರು ನಾಗಕ್ಕನನ್ನು 'ಇಟ್ಟುಕೊಳ್ಳುವ ಅಥವಾ ಸೀರುಡಿಕೆ' ಮಾಡಿಕೊಳ್ಳುವ ನಿರ್ಧಾರಕ್ಕೆ ಬರಲಾಗದೆ ಧರ್ಮ–ಅಧರ್ಮಗಳ ದ್ವಂದ್ವದಲ್ಲಿ ಸಿಲುಕುತ್ತಾರೆ. ನಾಗಕ್ಕ ಊರಿನ ಶ್ರೀಮಂತರಿಗೆ ಅನಾಯಾಸವಾಗಿ ಸಿಗಬಹುದಾದ ಅವರಿಗಿಷ್ಟವಾದ ರೀತಿಯಲ್ಲಿ ಬಳಸಿಕೊಳ್ಳಬಹುದಾದ ರೀತಿಯಲ್ಲಿ ಕಾಣುತ್ತಾಳೆ. ಅತ್ತೆ ಸೊಸೆ ಇಬ್ಬರೂ ವಿಧವೆಯರಾಗಿದ್ದು ಸಾಂಸಾರಿಕ ಜವಾಬ್ದಾರಿಗಳಿಲ್ಲದೆ ಜೀವನೋಪಾಯಕ್ಕಾಗಿ ಶ್ರೀಮಂತರ ಮನೆಗಳಲ್ಲಿ ವಾಸ್ತವ್ಯ ಹೂಡುತ್ತ ಮನೆಕೆಲಸಗಳಿಂದ ಬದುಕುತ್ತಾರೆ. ಇಬ್ಬರೂ ಶ್ರೀಮಂತರ ಮನೆಯಲ್ಲಿ ವಾಸ್ತವ್ಯ ಮಾಡುವುದರಲ್ಲಿ ನಾಗತ್ತೆಯ ಸುಲಭ ಜೀವನೋಪಾಯವೂ ಸೇರಿಕೊಂಡಿದೆ. ಆದರೆ ಮಲೆನಾಡಿನ ಶ್ರಮಿಕ ವರ್ಗದ ಮಹಿಳೆಯರ ಸಾಲಿಗೆ ಇವರು ಸೇರುವುದಿಲ್ಲ. ನಾಗತ್ತೆ ನಾಗಕ್ಕಳನ್ನು ಶ್ರೀಮಂತರಿಗೆ ಒಪ್ಪಿಸಿ ತನ್ನ ಬದುಕಿಗೂ ದಾರಿ ಹುಡುಕಿಕೊಳ್ಳುವುದು ಒಂದು ಹೆಣ್ಣು ಅವಕಾಶಸಿಕ್ಕಾಗಲೆಲ್ಲ ಇನ್ನೊಂದು ಹೆಣ್ಣನ್ನು ಶೋಷಣೆ ಮಾಡುತ್ತ ಬಂದಿರುವುದಕ್ಕೆ ನಿದರ್ಶನವಾಗುತ್ತದೆ.

ಮಲೆನಾಡಿನ ವಿಧವಾ ರೈತಮಹಿಳೆಯರು, ತಳಸಮುದಾಯದ ವಿಧವೆಯರು ಸುಧಾರಣೆ ಹೊಂದಿದ ಮೌಲ್ಯಗಳನ್ನು ಪಾಲಿಸುವ ಅವಕಾಶಗಳು ಲಭ್ಯವಿದ್ದುವು. 'ಕೂಡಿಕೆ' 'ಸೀರುಡಿಕೆ'ಯಂತಹ 'ಮರುವಿವಾಹ' ಪದ್ಧತಿಗಳ ನೆಲೆಯಲ್ಲಿ ಬದುಕು ಕಟ್ಟಿಕೊಳ್ಳುವುದನ್ನು ಕಾದಂಬರಿ ತೆರೆದಿಡುತ್ತದೆ.

ಲೇಖಕರು 'ಕೂಡಿಕೆ' ಪದ್ಧತಿಯನ್ನು ಕುರಿತು ಹೇಳುವಾಗ ಬ್ರಾಹ್ಮಣ ವಿಧವೆಯರ ಕಷ್ಟಗಳು ಕೆಳಜಾತಿವರ್ಗದವರಲ್ಲಿ ಇಲ್ಲ ಎನ್ನುತ್ತಾರೆ. ಈ ಪದ್ಧತಿ ಪುರುಷ ಪ್ರಧಾನ ಹಿತಾಸಕ್ತಿಯದ್ದಾಗಿದ್ದು ಕುವೆಂಪುರವರು ಈ ಪದ್ಧತಿಯನ್ನು ಪ್ರಶ್ನಿಸುತ್ತಿರುವಂತೆ ಭಾಸವಾಗುತ್ತದೆ. ನಾಗತ್ತೆಯ ಸೊಸೆ ನಾಗಕ್ಕ ಈಗಾಗಲೇ ಎರಡು ಭಾರಿ ವಿಧವೆಯಾಗಿದ್ದು ಮತ್ತೆ 'ಕೂಡಿಕೆ'ಯಾಗಲು ಒಪ್ಪುವುದಿಲ್ಲ. ಈ ವಿಚಾರದಿಂದ ನಾಗತ್ತೆ ಹಿಂದೆ ಸರಿಯುವುದು ಸಾಧ್ಯವಿಲ್ಲ. ಕಾರಣ ಆಕೆಯ ಆರ್ಥಿಕ ಅಭದ್ರತೆ ಹಾಗೂ ಶ್ರೀಮಂತರ ಆಶ್ರಯದಿಂದ ಸುಖಜೀವನ ಸಾಗಿಸುವ ಹಂಬಲ. ಅತ್ತೆ ಸೊಸೆಯನ್ನು ಶೋಷಿಸುವುದಕ್ಕೆ ನಾಗತ್ತೆ ನಿದರ್ಶನವಾಗುತ್ತಾಳೆ. ಹಾಗಾಗಿ ಲೈಂಗಿಕ ಶೋಷಕತೆಗೆ ತಮ್ಮನ್ನು ಒಡ್ಡಿಕೊಳ್ಳುವ ಸ್ಥಿತಿಯೂ ಕಾದಂಬರಿಯಲ್ಲಿ ವ್ಯಕ್ತವಾಗಿದೆ.

ಈ ಕಾದಂಬರಿಯಲ್ಲಿ ಬರುವ ತಳಸಮುದಾಯದ ವಿಧವೆ ಕಾಡಿ ಅನೈತಿಕ ಸಂಬಂಧದ ನೆಲೆಯಲ್ಲಿ ಅತ್ಯಂತ ಹೀನಾಯವಾದ ಸ್ಥಿತಿಯನ್ನು ತಲುಪುತ್ತಾಳೆ.

ಹಳೆಪೈಕದ ಪುಟ್ಟನಾಯ್ಕನ ಅತ್ತೆ ಕಾಡಿ ಕದ್ದು ಬಸಿರಾದಾಗ ಯಾರೂ ಪ್ರಶ್ನೆಮಾಡದಂತೆ ಹೆಂಡತುಂಡಿನ ಮೂಲಕ ಬಗೆಹರಿಸುವ ರೀತಿ ತುಂಬಾ ನಾಜೂಕಾಗಿ ಕಾಣುತ್ತದೆ. ಆದರೂ ಅವಳಿಂದ ರಹಸ್ಯ ಮುಚ್ಚಿಡಲಾಗುವುದಿಲ್ಲ. ನಾಯಿಗುತ್ತಿಗೆ ಊಟ ಬಡಿಸುವಾಗ ಗಮನಿಸಿ ಹೊಸದೇನನ್ನೋ ಪತ್ತೆಹಚ್ಚಿದವನಂತೆ ವರ್ತಿಸುವುದು ಆಶ್ಚರ್ಯವನ್ನುಂಟುಮಾಡುತ್ತದೆ. ಊರಿನ ಯಾವ ಮೂಲೆಯಲ್ಲಿರುವ ಹಳ್ಳಿಯೂ ರಹಸ್ಯಗಳನ್ನು ಅಡಗಿಸಿಟ್ಟುಕೊಳ್ಳಲು ಸೋಲುತ್ತಿತ್ತು. ಯಾರಿಗೂ ಅವಳ ಬಗ್ಗೆ ಗೌರವವಿರುವುದಿಲ್ಲ. ಅವಳು ಹಣತೆ ದೀಪವನ್ನು ತಂದಿರಿಸುವಾಗ ತಿಮ್ಮನಾಯ್ಕನ ದೃಷ್ಟಿ ಅವಳನ್ನು ಗಮನಿಸುವುದನ್ನು ಕುರಿತು ಲೇಖಕರು ಹೀಗೆ ಹೇಳುತ್ತಾರೆ.

> *"ಅವನ ದೃಷ್ಟಿ ಕಳವು ಮಾಲನ್ನು ಪತ್ತೆ ಮಾಡಲು ಹೊರಟ್ಟಿದ್ದ ಗುಪ್ತ ಪೋಲೀಸಿನಂತೆ ಕಾಡಿಯ ಮೋರೆಯ ಕಡೆ ತೆರಳದೆ ಅವಳ ಹೊಟ್ಟೆಯೆಡೆ ಸಂಚರಿಸುತ್ತಿತ್ತು"*[1]

ಆದರೆ, ತನ್ನ ಪಾಪದ ಹೊರೆ ಇಳಿಸಿಕೊಂಡಷ್ಟು ಸುಲಭವಾಗಿ ಸುತ್ತಲಿನವರ ಚುಚ್ಚುನೋಟದಿಂದ ಮುಕ್ತಳಾಗುವುದು ಸುಲಭವಾಗಲಿಲ್ಲ. ಕಾಡಿಯ ಆಶ್ರಿತ ಅದುಕಿನ ದುರಂತವನ್ನು ಚಿತ್ರಿಸುವ ಲೇಖಕರು ಅವಳ ವೇದನೆಯನ್ನು ಮೂಕವೇದನೆಯನ್ನಾಗಿಯೇ ಇರಿಸುತ್ತಾರೆ. ಸಮಾಜದ ಒಬ್ಬ ಗರಿಷ್ಟ ಶೋಷಿತ ವ್ಯಕ್ತಿಯಾದ ಗುತ್ತಿಯಿಂದಲೂ ಅಪಹಾಸ್ಯಕ್ಕೊಳಗಾದ ಕಾಡಿ ತನ್ನ ನೋವನ್ನು ಸ್ವಗತದಲ್ಲಿಯೂ ಹೇಳಿಕೊಳ್ಳಲಾರಳು. ಆದರೆ ಅವಳ ಆಂತರ್ಯದಲ್ಲಿ ಪಾಪಪ್ರಜ್ಞೆ ಅವಮಾನ ತುಂಬಿದ್ದವು ಎಂದು ಭಾವಿಸಬಹುದು. ಪತಿತೆಯಾಗಿ ಬದುಕುವ ಕಾಡಿಗೆ ಈ ವ್ಯವಸ್ಥೆ ಯಾವ ಗೌರವವನ್ನು ಕೊಡಲಾರದು. ಇಂತಹ ಹೀನ ಬದುಕಿನ ಹಿಂದಿದ್ದ ಪುರುಷ ಸಮುದಾಯ ನೈತಿಕ ನೆಲೆಯಲ್ಲಿ ಗೌರವಕ್ಕೆ ಪಾತ್ರವಾಗುತ್ತದೆ. ಇಂತಹ ಸಾಮಾಜಿಕ ನೀತಿ ಮಹಿಳೆಯನ್ನು ಏಕಮುಖ ಸೂತ್ರದಿಂದ ಬಂದಿಸಿಟ್ಟಿದೆ. ಈ ಕಾದಂಬರಿಯಲ್ಲಿ ಬರುವ ರಂಗಪ್ಪಗೌಡರು ಸುಪುಷ್ಟವಾಗಿದ್ದ ನಾಗಕ್ಕನನ್ನು ಹೆಂಡತಿ ಇದ್ದೂ 'ಇಟ್ಟುಕೊಳ್ಳುವ' ಅಥವಾ 'ಸೀರುಡಿಕೆ' ಮಾಡಿಕೊಳ್ಳುವ ಯೋಚನೆಯಲ್ಲಿ ತೊಡಗುತ್ತಾರೆ. ಹೂವಳ್ಳಿ ವೆಂಕಪ್ಪಗೌಡರು ಕಾಯಿಲೆಯಿಂದ ನರಳುತ್ತ ಮಗಳ ಮದುವೆಗಾಗಿ ಚಿಂತಿಸುತ್ತ ನಾಗಕ್ಕಳನ್ನು ತನ್ನ ಅಧೀನಕ್ಕೆ ಪಡೆದುಕೊಳ್ಳುವ ಮನಸ್ಸು ಮಾಡುತ್ತಾರೆ.

ಇಲ್ಲಿ ಪುರುಷನ ಲೈಂಗಿಕ ಆಸೆಗಳಿಗೆ ಮಿತಿಯೇ ಇಲ್ಲ. ಕಟ್ಟುಪಾಡುಗಳು ಅಡ್ಡಿಪಡಿಸುವುದಿಲ್ಲ. ಮಹಿಳೆಗೆ 'ಮರುವಿವಾಹ'ದ ನೆಲೆಯಲ್ಲಿ ಬದುಕು ಕಟ್ಟಿಕೊಳ್ಳಲು ಅನೇಕ ಸಾಮಾಜಿಕ ಮೌಲ್ಯಗಳು ಅಡ್ಡಿಪಡಿಸುತ್ತವೆ. ಇಂತಹ ಒಪ್ಪಿತ ಮೌಲ್ಯಗಳ

---

೧. ಮಲೆಗಳಲ್ಲಿ ಮದುಮಗಳು–ಕುವೆಂಪು–ಉದಯರವಿ ಪ್ರಕಾಶನ – ಮೈಸೂರು–೨೦೦೯–ಪು. ೧೧–೧೨

ಪುರುಷ ಮತ್ತು ಮಹಿಳೆಯ ಮೇಲೆ ಬೀರುವ ಪರಿಣಾಮಗಳು ವಿಭಿನ್ನವಾಗಿವೆ ಎಂದು ಕಾದಂಬರಿ ಬಿಂಬಿಸುತ್ತದೆ.

## ೮. ವ್ಯವಸ್ಥೆಯ ವಿಕೃತಿಯಾಗಿ ವೈಧವ್ಯ

ಕುವೆಂಪುರವರ ಕಥನ ಸಾಹಿತ್ಯದ ಅಧ್ಯಯನದೊಂದಿಗೆ ಕಾರಂತರ ಕೃತಿಗಳ ಅಧ್ಯಯನ ಸಮಕಾಲೀನವಾದುದಾಗಿದೆ. ಈ ಸಂಧರ್ಭದಲ್ಲಿ ಬಾಲ್ಯವಿವಾಹವನ್ನು ನಿರಾಕರಿಸುತ್ತ ವಿಧವಾ ವಿವಾಹಕ್ಕೆ ಹೆಚ್ಚು ಒತ್ತುನೀಡಿರುವುದು ಮುಖ್ಯವಾಗುತ್ತದೆ. ಬಾಲ್ಯವಿವಾಹ ಮೇಲ್ಜಾತಿ ವರ್ಗಗಳಲ್ಲಿ ಸಾಮಾನ್ಯವಾಗಿತ್ತು. ಈ ಕಾರಣಕ್ಕಾಗಿಯೇ ಬಾಲವಿಧವೆಯರಾಗಿ ಸಮಾಜವನ್ನೆದುರಿಸುವ ರೀತಿ ತುಂಬಾ ಕ್ರೂರವಾಗಿತ್ತು. ಬಾಲವಿಧವೆಯರು ಸಾಮಾಜಿಕ ಅಭದ್ರತೆಯಿಂದ ನರಳುವುದು ಸಾಮಾನ್ಯವಾಗಿತ್ತು. ಹಲವಾರು ಸಾಂಪ್ರದಾಯಿಕ ಕಟ್ಟುಪಾಡುಗಳನ್ನು ವಿಧಿಸುವುದರೊಂದಿಗೆ ಅವರನ್ನು ಮಾನಸಿಕವಾಗಿ ಜರ್ಜರಿತರನ್ನಾಗಿಸಲಾಗುತ್ತಿತ್ತು. ಅವಿವಾಹಿತರಾಗಿ ಸಮಾಜವನ್ನೆದುರಿಸುವುದು ಘೋರವಾದ ಶಿಕ್ಷೆ ಎಂದೇ ಪರಿಗಣಿಸಬೇಕಾಗುತ್ತದೆ. ಸ್ವಾತಂತ್ರ್ಯಪೂರ್ವದ ಕಾಲಘಟ್ಟದ ಇವರ ಮುಂದಿದ್ದ ಆಯ್ಕೆಗಳೆಂದರೆ 'ವಿಧವಾ ಮರುವಿವಾಹ', ಬ್ರಹ್ಮಚರ್ಯ' 'ಆತ್ಮಹತ್ಯೆ' ಧರ್ಮವನ್ನು ತ್ಯಜಿಸುವುದು ಅಥವಾ ಸೇರುವುದು, ವೇಶ್ಯೆಯರಾಗುವುದು ಮುಂತಾದುವು. ಇದನ್ನು ಆ ಕಾಲಘಟ್ಟದ ಸಾಹಿತ್ಯ ಕೃತಿಗಳು ವಿವಿಧ ಆಯಾಮಗಳಲ್ಲಿ ತೆರೆದಿಡುತ್ತವೆ.

ಶಿವರಾಮಕಾರಂತರ ಮೊದಲ ಕಾದಂಬರಿ 'ಕನ್ಯಾಬಲಿ' 'ವೈಧವ್ಯ'ದ ಕರಾಳ ಮುಖವನ್ನು ತೆರೆದಿಡುತ್ತದೆ. ಈ ಕಾದಂಬರಿಯ ನಾಯಕಿ ಮಾಲತಿ 'ಬಾಲವಿಧವೆ'. ವಿಧವೆಯಾದ ಕೆಲವು ಸಮಯದಲ್ಲಿ ತಾಯಿಯನ್ನು ಕಳೆದುಕೊಂಡ ಮಾಲತಿ ತಂದೆ ಮತ್ತು ಅಣ್ಣನ ಆಶ್ರಯದೊಂದಿಗೆ ಶ್ರೀಮಂತಿಕೆಯಲ್ಲಿ ಕೆಲವು ವರ್ಷಗಳನ್ನು ಕಳೆಯುತ್ತಾಳೆ. ಅರ್ಥಿಕವಾಗಿ ಯಾರ ಅವಲಂಬನೆಗೊಳಗಾಗದಿದ್ದರೂ ಯೌವನದ ಬಯಕೆಯಿಂದ ದೂರ ಉಳಿಯಲು ಸಾಧ್ಯವಾಗುವುದಿಲ್ಲ. ಹತೋಟಿ ಕಳೆದುಕೊಂಡು ವೇಶ್ಯಾ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುವುದು ಘೋರವಾಗಿ ಕಾಣುತ್ತದೆ. ಅಣ್ಣ ಮಹೇಶನ ಮದುವೆಯ ಸಂದರ್ಭದಲ್ಲಿ ಅವಗಣನೆಗೆ ಒಳಗಾದ ಮಾಲತಿ ಆತ್ಮಹತ್ಯೆಗೆ ಪ್ರಯತ್ನಿಸುವುದು ಕಾದಂಬರಿಯಲ್ಲಿ ಬರುವ ಮಹತ್ತರವಾದ ತಿರುವು. ಮಾಲತಿಯ ಆತ್ಮಹತ್ಯೆಯನ್ನು ತಪ್ಪಿಸಿ ತನ್ನ ಪ್ರೀತಿಯನ್ನು ಅವಳಿಗೆ ತಿಳಿಸುವ ಪ್ರಫುಲ್ಲನೆಂಬ ಮದುವೆ ಪ್ರಾಯದ ಯುವಕ ಮಾಲತಿಯ 'ಜೀವನಪ್ರೀತಿ'ಗೆ ಕಾರಣನಾಗುತ್ತಾನೆ. "ಮಾಲತಿ ನೀನು ಸಾಯಬಾರದು ನನಗಾಗಿ ನೀನು ಬದುಕಬೇಕು" ಎಂದು ಹೇಳುವಾಗ ಮಾಲತಿಗೆ ಬದುಕುವ ಆಸೆ ಚಿಗುರುತ್ತದೆ. ಆದರೆ ಪ್ರಫುಲ್ಲನಿಗೆ ಮಾಲತಿಯನ್ನು ಮದುವೆಯಾಗಿ ಸಂಸಾರ ಮಾಡುವ ಕನಸು ಕಾಣುವಂತಿಲ್ಲ. ಬದುಕಿನ ಆಸೆ

ಚಿಗುರಿಸುವ ಪ್ರಫುಲ್ಲ ಮಾಲತಿಯ ತಂದೆಯ ವಿರೋಧವಿದ್ದುದರಿಂದ ದೂರ ಸರಿಯಬೇಕಾಗುತ್ತದೆ. ಇದಕ್ಕಾಗಿ ಮಾಲತಿಯನ್ನು ವಿರೂಪಗೊಳಿಸಿ ಅವಳನ್ನು ಕಳೆದುಕೊಳ್ಳುವುದಕ್ಕೂ ತಯಾರಾದ ಮಧುಕರ (ಮಾಲತಿಯ ತಂದೆ) ತುಂಬಾ ಕ್ರೂರಿಯಾಗಿ ಕಾಣುತ್ತಾನೆ. ಇದು ವ್ಯವಸ್ಥೆಯ ವಿಕೃತಿಯಾಗಿ ಕಾಣುತ್ತದೆ. ಹಾಗೂ ಹೆಂಡತಿಯನ್ನು ಕಳೆದುಕೊಂಡು ವಿಧುರನಾದ ಮಾಲತಿಯ ತಂದೆ ಮರುಮದುವೆಗೆ ತಯಾರಾಗುವುದು ಆ ವ್ಯವಸ್ಥೆಯ ಪ್ರತಿಬಿಂಬ.

ಸಮಾಜದ ಭ್ರಷ್ಟ ನೀತಿಯನ್ನು ಪ್ರಶ್ನೆಮಾಡುವ ಮಾಲತಿ

*"ವಿಧವೆಯರೆಂದರೆ ಪುರುಷರ ಗುಲಾಮರೆ? ಪಶುಗಳೇ ? ಅವರ ಆಸೆ ಅನುರಾಗಗಳು ಅವರ ಪತಿಯ ಮರಣದೊಡನೆ ಒಮ್ಮೆಗೇ ಸುಟ್ಟು ಭಸ್ಮವಾಗುತ್ತವೆಯೆ? ಅವರಲ್ಲಿ ಕಾಮಾತುರತೆಯೂ ಇದ್ದರೆ ಅದನ್ನು ಬಲವಂತದಿಂದ ಮುರಿಯಲು ಬರುತ್ತದೆಯೆ?"*[1]

ಎನ್ನುವ ಪ್ರಶ್ನೆಗಳ ಹಿಂದೆ ಸಮಾಜದ ನಿಷ್ಟುರ ವರ್ತನೆ ಮಾಲತಿಗೆ ಕಗ್ಗಂಟಾಗಿ ಕಾಡಿದೆ. ವಿಧವೆ ಅನಿಷ್ಟಗಳ ಕೋಟೆಯನ್ನು ನಿರ್ಗಮಿಸುವುದು ಅತ್ಯಂತ ಪ್ರಯಾಸವಾಗಿ ಕಂಡು ಸಾಮಾಜಿಕ ಮೌಲ್ಯಗಳ ತರತಮಗಳು ಅರಿವಾಗುವಾಗ ಸಾಮಾಜಿಕ ಕ್ರೌರ್ಯದ ಬಂಧನದೊಳಗೆ ದುರಂತವನ್ನಪ್ಪುತ್ತಾಳೆ. ಕಾದಂಬರಿ ವಿಧವೆಯರಲ್ಲಿ ಸಹಜವಾಗಿದ್ದ ಎಚ್ಚೆತ್ತ ಲೈಂಗಿಕ ಹಸಿವು ಶಮನವಾಗುವುದರೆಡೆಗೆ ಹೆಚ್ಚು ಗಮನ ಹರಿಸುವಂತೆ ಭಾಸವಾಗುತ್ತದೆ. ಆದರೆ ಆ ಕಾಲಘಟ್ಟದ ಹಲವಾರು ಕೃತಿಗಳು 'ವೈಧವ್ಯ'ವನ್ನು 'ವ್ರತ' ಎಂದು ಒಪ್ಪಿ ಪಾಲಿಸುವುದನ್ನು ಚಿತ್ರಿಸಿದೆ. ತಿರುಮಲಾಂಬಾ ಲೈಂಗಿಕ ನಿಯಂತ್ರಣದ ಕಡೆಗೆ ಒತ್ತು ನೀಡುತ್ತಾರೆ. ವಿಧವೆ ತಪಸ್ವಿಯಾದಾಗ ಮಾತ್ರ ಬದುಕು ಪರಿಪೂರ್ಣ ಎಂದು ತಮ್ಮ ನಭಾ ಕಾದಂಬರಿಯ ಮೂಲಕ ವ್ಯಕ್ತಪಡಿಸುವುದನ್ನು ಗಮನಿಸಬಹುದು.

'ಕನ್ಯಾಬಲಿ' ಕಾದಂಬರಿಯ ನಾಯಕ ಪ್ರಫುಲ್ಲ. ಮಾಲತಿಯ ಪ್ರೀತಿಗೆ ಅಡ್ಡಿಯಾದ 'ಜಾತಿ' ಮತ್ತು 'ಸಮಾಜ'ಕ್ಕೆ ನೊಂದು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಪ್ರಫುಲ್ಲನ ಆತ್ಮಹತ್ಯೆ ಮಾಲತಿಗೆ ಹೇಡಿತನದ್ದಾಗಿ ಕಾಣುತ್ತದೆ. ಇದಕ್ಕಾಗಿ ಹೀಗೆ ಹೇಳುತ್ತಾಳೆ.

*"ಹಾಲನ್ನಾದರು ನಾನು ಕಳ್ಳತನದಿಂದ ಕುಡಿಯಲಾರೆ" ಅಣ್ಣಾ, ನಾನಿನ್ನು ಹೇಡಿಗಳಿಲ್ಲದ ರಾಜ್ಯದಲ್ಲಿ ತಿರುಗುವೆ ಸ್ವತಂತ್ರಳಾಗಿ"*[2]

ಮಾಲತಿ ಬೀದಿಗೆ ಬಂದಮೇಲೆ 'ಸಧವೆ' 'ವಿಧವೆ' ಎನ್ನುವ ಬೇಧವಿಲ್ಲ. ಕೇವಲ 'ಹೆಣ್ಣು'. ವಿಧವೆ ಸಾಂಪ್ರಾದಾಯಿಕ ಚೌಕಟ್ಟನ್ನು ಮೀರಿದರೂ ಪುರುಷ ಪ್ರಪಂಚದ ಆಮಿಷಗಳನ್ನು ಮೀರುವುದು ಅಸಾಧ್ಯವಾದ ಮಾತು. ಶೋಷಣಾ ಪ್ರಪಂಚದಿಂದ

---

೧. ಕನ್ಯಾಬಲಿ-ಶಿವರಾಮಕಾರಂತ-ಐ.ಬಿ.ಹೆಚ್. ಪ್ರಕಾಶನ - ಬೆಂಗಳೂರು - ೧೯೭೪. ಪು. ೧೯

೨. ಅದೇ ಪು. ಪು-೨೫

ಹೊರಬರುವ ಆಸೆಗಳಿದ್ದರು ಅದರ ರಹದಾರಿಗಳು ಕಾಣದೆ ಒದ್ದಾಡುತ್ತಾಳೆ. ಶತಮಾನಗಳಿಂದಲೂ ಹೆಣ್ಣನ್ನು ವೈಧವ್ಯಕ್ಕೆ ಹೊಂದಿಕೊಳ್ಳುವಂತೆ ನೋಡಿಕೊಂಡ ವ್ಯವಸ್ಥೆಯಿಂದ ಹೊರಬರುವ ಪ್ರಯತ್ನದಲ್ಲಿ ಯಶಸ್ವಿಯಾದ ಮಾಲತಿ ಪುರುಷ ಸಮಾಜದ ಆಮಿಷಗಳಿಂದ ಹೊರಬಗಲಾಗುವುದಿಲ್ಲ.

> *"ಕಾಮದ ಅಭಿವ್ಯಕ್ತಿಗೆ ವಾಸ್ತವ ಬದುಕಿನಲ್ಲಾಗಲೀ ಭಾವಜಗತ್ತಿನಲ್ಲಾಗಲೀ ಅವಕಾಶಗಳು ನಿರ್ಬಂಧಿತವಾಗುತ್ತವೆ ಎಂಬುದೇ ಹೆಣ್ಣು ಬದುಕಿನ ಅನುಭವ. ಅವಳ ಬಹುತೇಕ ದುಃಖಗಳು ಈ ನೆಲೆಯವೇ ಆಗಿವೆ. ವಿವಾಹದಲ್ಲಾಗಲೀ ಅದರ ಹೊರತಾಗಲೀ ಹೆಣ್ಣು ತನ್ನ ಅಗತ್ಯದ ಕಾಮವನ್ನು ಅನುಭವಿಸುವುದಿರಲಿ, ಕಲ್ಪಿಸುವುದೂ ಕೂಡ ಸಾಧ್ಯವಾಗುವುದಿಲ್ಲ. ಶೀಲಸಂಹಿತೆಯ ಗೆರೆಗಳು ಹೆಣ್ಣಿನ ಪಾಲಿಗೆ ತುಂಬಾ ಕಟ್ಟುನಿಟ್ಟಾಗಿವೆ. ಹೆಣ್ಣಿನ ಕಾಮವು ಎಂದೂ ಅವಳ ಸ್ವಂತದ್ದಲ್ಲ. ಏನಿದ್ದರೂ ಗಂಡಿನ ಅನುಭೋಗಕ್ಕಾಗಿಯೇ ಬಳಕೆಗೊಳ್ಳುವಂತದ್ದು. ಈ ನಿಷ್ಠುರ ಸಾಮಾಜಿಕ ನಿಯಮವನ್ನು ಪ್ರಶ್ನಿಸುವ ಒಂದು ಸಣ್ಣ ಅವಕಾಶವೂ ಹೆಣ್ಣಿಗೆ ದೊರೆಯುವುದಿಲ್ಲ. ಅವಳು ಅವಿವಾಹಿತಳಿರಬಹುದು, ವೇಶ್ಯೆಯೇ ಇರಬಹುದು. ಕೊನೆಗೆ ಆಕೆ ಅಪ್ರಾಪ್ತ ಬಾಲಕಿಯೋ : ವೃದ್ದೆಯೋ, ಹುಚ್ಚಳೋ, ಬೆಪ್ಪಳೋ ಅಂಗವಿಕಲಳೋ ಏನೂ ಆಗಿರಬಹುದು. ಇವಳ ಲೈಂಗಿಕತೆಯ ಮೇಲೆ ದಾಳಿ ಮಾಡುವ ಸಾಮಾಜಿಕ ಅಧಿಕಾರ ಗಂಡಿಗೆ ತೀರಾ ಸಹಜವೆಂಬಂತೆ ಪ್ರಾಪ್ತವಾಗಿ ಬಿಡುತ್ತದೆ. ಇದು ಅಪರಾಧ ಎಂದು ಗಟ್ಟಿಯಾಗಿ ಹೇಳುವ ಅವಕಾಶವೇನೂ ಹೆಣ್ಣಿಗೆ ಸುಲಭವಾಗಿ ದೊರೆಯುವುದಿಲ್ಲ"*[೨]

ಮಾಲತಿಗೆ ಆಕಸ್ಮಿಕವಾಗಿ ಒದಗಿ ಬಂದ ಪ್ರೀತಿಯ ಸಿಂಚನ 'ಜಾತಿ' 'ಪ್ರತಿಷ್ಠೆ'ಯ ಒಳಗೆ ಆರಿ ಹೋಗುತ್ತದೆ. ಇದಕ್ಕಾಗಿ ಆತ್ಮಹತ್ಯೆ ಮಾಡಿಕೊಳ್ಳುವ ಪ್ರಫುಲ್ಲ ಪರಿಸ್ಥಿತಿಯ ಕೈಗೊಂಬೆಯಾಗುತ್ತಾನೆ. ಆದರೆ ಮಾಲತಿ ದಮನಿತ ಬದುಕಿಗೆ ಬೆನ್ನು ಹಾಕುತ್ತಾಳೆ. ಅಷ್ಟೇ ಅಲ್ಲ ಸಾಮಾಜಿಕ ಒತ್ತಡ ಮಾಲತಿಯ ದುರಂತ ಬದುಕಿಗೆ ಕಾರಣವಾಗುವುದನ್ನು ಗಮನಿಸಬಹುದು.

> *"ಸುಧಾರಣಾ ಪರ ಕಾದಂಬರಿಗಳಲ್ಲಿ ಕಾರಂತರ 'ಕನ್ಯಾಬಲಿ' ತೀಕ್ಷ್ಣವಾಗಿ ಚುರುಕು ಮುಟ್ಟಿಸುತ್ತ ವಿಧವಾ ಸಮಸ್ಯೆಯನ್ನು ಅದು ಕೇವಲ ವೈಯಕ್ತಿಕ ಸಮಸ್ಯೆ ಅಲ್ಲ. ಸಾಮಾಜಿಕ ಸಮಸ್ಯೆಯೂ ಹೌದೆಂಬ ನೆಲೆಯಲ್ಲಿ ವಿಶ್ಲೇಷಿಸಿದ್ದು ಪುರುಷ ಪ್ರಧಾನ ಸಮಾಜದ ದ್ವಿಮುಖ ನೀತಿಯನ್ನು ವಿಮರ್ಶಿಸಿದ್ದು ವಿಶೇಷವಾಗಿದೆ"*[೩]

ಕಾದಂಬರಿ ಆ ದಿನಗಳಲ್ಲಿ ಪ್ರಚಲಿತವಿದ್ದ ಕಂದಾಚಾರಗಳಿಗೆ ಬಲಿಯಾಗುವ ಸಮಾಜದ ಚಿತ್ರಣದೊಂದಿಗೆ ಅದರ ಮೂಲ ಸಮಸ್ಯೆಗಳನ್ನು ತೆರೆದಿಡುತ್ತದೆ. ಪ್ರೀತಿಸಿದ ಯುವಕ

---

೨. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ – (ಸಂ) ಹೆಚ್.ಎಸ್. ಶ್ರೀಮತಿ – ಕನ್ನಡ ವಿ.ವಿ. ಹಂಪಿ. ಪ್ರಸಾರಾಂಗ – ೨೦೦೬. ಪು. ೩೦

೩. ಇದು ಮಾನುಷಿಯ ಓದು–ಮಹೇಶ್ವರಿ ಯು.–ಶಿವರಾಮ ಕಾರಂತ ಅಧ್ಯಯನ ಕೇಂದ್ರ ಪುತ್ತೂರು ೨೦೦೧–ಪು.–೧೬೩

ಪ್ರಫುಲ್ಲ ವಿವಾಹವಾಗದಿರುವುದು, ಮಾಲತಿಯನ್ನು ಸ್ವಚ್ಛಂದದಲ್ಲಿ ವೇಶ್ಯಾವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುವುದರ ಹಿಂದೆ ಆ ಕಾಲದ ವ್ಯವಸ್ಥೆ ನಿಂತಿದೆ. ಮಾಲತಿಯ ವೈಯಕ್ತಿಕ ದೌರ್ಬಲ್ಯಕ್ಕಿಂತಲೂ 'ಹಸಿವು', 'ಸೇಡು' ಅವಳನ್ನು ವೇಶ್ಯಾ ಬದುಕಿಗೆ ದೂಡಿವೆ. ತನ್ನ ಬಾಲ್ಯವಿವಾಹವನ್ನು ಕುರಿತು ವಿರೋಧಿಸುವ ಮಾಲತಿ

> *"ಆಗ ನನಗೆ ಪ್ರೇಮವೇ ಏನೆಂದು ತಿಳಿದಿರಲಿಲ್ಲ ಹೀಗಿರಲು ಅವನು ನನ್ನ ಪತಿಯೆಂಬ ಕಲ್ಪನೆಯು ಹೇಗಾಗಬೇಕು? ಅಂಥ ಒಂದು ಅಪರಿಚಿತ ವ್ಯಕ್ತಿಯ ಮರಣದಿಂದ ನಾನು ವಿಧವೆಯಾಗುತ್ತೇನೆಯೆ?"*[1]

ಎಂದು ಪ್ರಶ್ನಿಸುವ ಮಾಲತಿ ಮುಂದೆ ತನ್ನನ್ನೆ ಬಲಿಕೊಟ್ಟುಕೊಳ್ಳುವುದನ್ನು ಕಾದಂಬರಿ ಅನಾವರಣಗೊಳಿಸುತ್ತದೆ. ಬಾಲವಿಧವೆಯರನ್ನು ದಂಡಿಸಿದಾಗ ಉಂಟಾಗುವ ಸಾಮಾಜಿಕ ಅಸ್ವಸ್ಥತೆಯ ಪರಿಣಾಮವನ್ನು ಪ್ರತಿನಿಧಿಸುವ ಮಾಲತಿ ದುರಂತ ನಾಯಕಿಯಾಗುತ್ತಾಳೆ. ಅಣ್ಣ ಮಹೇಶನೊಂದಿಗೆ ತನ್ನ ವೇಶ್ಯಾ ಬದುಕಿನ ವಿವರ ನೀಡುತ್ತಾ ತಾನು ಸಾಯದೆ ಬದುಕಿರುವುದು ಒಂದೇ ಆಸೆಗಾಗಿ ಎನ್ನುತ್ತಾ

> *"ತನ್ನನ್ನು ಕಂಡಾದರೂ ಹಿರಿಯರು ತಮ್ಮ ಬಾಲವಿಧವಾ ಕನ್ಯೆಯರ ಮೇಲೆ ಕನಿಕರ ತೋರಲಿ"*[2]

ಎಂದು ಹೇಳುವ ಮಾಲತಿಯ ಕ್ರಾಂತಿಕಾರಿ ನಿಲುವು 'ವಿಧವಾ ಮೌಲ್ಯ', 'ಬಾಲ್ಯ ವಿವಾಹ' ವಿರೋಧಿಯಾಗಿ ಮೂಡಿಬಂದಿದೆ. ಕಾದಂಬರಿ ಬಾಲವಿಧವೆಯರಿಗೆ ಹೇರುವ 'ಸಾಂಪ್ರದಾಯಿಕ ಮೌಲ್ಯಗಳು' 'ಸಾಮಾಜಿಕ ಅನಿಷ್ಟಗಳಾಗಿ' ಮಹಿಳೆಯ ಬದುಕನ್ನು ನಾಶಮಾಡುವುದನ್ನು ವಿಶ್ಲೇಷಿಸುತ್ತದೆ.

> *"ಕಾರಂತರ ಆರಂಭದ ಕಾದಂಬರಿ 'ಕನ್ಯಾಬಲಿ'ಯಲ್ಲಿ ಸಮಾಜದರ್ಶನ ಹಾಗೂ ಅದರ ವೈಪರೀತ್ಯಗಳನ್ನು ನಿರ್ವಹಿಸಿಕೊಳ್ಳಬೇಕಾದ ಕಾಳಜಿಯನ್ನು ಮುಂದಿಟ್ಟ ಅನುಭವವಾಗಿರುತ್ತದೆ"*[3]

ಸರಸ್ವತಿ ಬಾಯಿ ರಾಜವಾಡೆಯವರ – ಅವಳ ಉದ್ಧಾರ ಕೃತಿ 'ಕನ್ಯಾಬಲಿ'ಯ ಮಾಲತಿಯ ದುರಂತ ಕತೆಯ ಇನ್ನೊಂದು ಮುಖವನ್ನು ತೆರೆದಿಡುತ್ತದೆ. ಪತಿತೆಯೊಬ್ಬಳು ತನ್ನ ಭಾವನಿಂದ ಗರ್ಭಿಣಿಯಾಗಿ ವಿಧವಾಶ್ರಮ ಸೇರಿ ನಿರಾಂತಕವಾದ ಬದುಕು ಕಟ್ಟಿಕೊಳ್ಳುವ ಕನಸು ಕಾಣುತ್ತಾಳೆ. ವಿಧವಾಶ್ರಮದವರು ಹಣಕ್ಕೆ ಮಾರಾಟ ಮಾಡಿದಾಗ ಶ್ರೀಮಂತನ ವಶವಾಗುತ್ತಾಳೆ. ಬದುಕು ಕಟ್ಟಿಕೊಳ್ಳಲಾಗದ ವಿಧವೆ ವೇಶ್ಯಾಬದುಕನ್ನು ಅಪ್ಪಿಕೊಳ್ಳುವ ರೀತಿ ಅಮಾನವೀಯವಾದುದು. 'ಕನ್ಯಾಬಲಿ'ಯ ಮಾಲತಿ ವೇಶ್ಯಾ ಬದುಕನ್ನು ಆಯ್ಕೆಮಾಡಿ

---

೧. ಕನ್ಯಾಬಲಿ–ಶಿವರಾಮಕಾರಂತ–ಐ.ಬಿ.ಹೆಚ್. ಪ್ರಕಾಶನ – ಬೆಂಗಳೂರು – ೧೯೭೪. ಪು. ೧೫

೨. ಅದೇ ಪು – ಪು. ೪೬

೩. ಶಿವರಾಮಕಾರಂತರ ಕಾದಂಬರಿಗಳಲ್ಲಿ ಸ್ತ್ರೀ – ಡಾ ಸುನೀತಾ ಎಂ. ಶೆಟ್ಟಿ – ಕನ್ನಡ ವಿಭಾಗ–ಮುಂಬಯಿ–೨೦೦೦ ಪು. ೨೧೯

ಕೊಳ್ಳುವುದು ಮತ್ತು 'ಅವಳ ಉದ್ಧಾರ'ದ ಪತಿತೆ ವೇಶ್ಯಾ ವೃತ್ತಿಗೆ ತಳ್ಳಲ್ಪಡುವುದರ ಹಿಂದೆ ಇರುವ ಸಾಮಾಜಿಕ ವ್ಯವಸ್ಥೆ ಕ್ರೂರವಾದುದೆಂದು ಗ್ರಹಿಸಬಹುದು.

### ೯. ಕರ್ಮಸಿದ್ಧಾಂತದ ಹಿನ್ನೆಲೆಯಲ್ಲಿ ವೃದ್ಧ ವಿಧವೆಯರು

ಶಿವರಾಮ ಕಾರಂತರ 'ಅಳಿದ ಮೇಲೆ' ಕಾದಂಬರಿಯಲ್ಲಿ ಪಾರೋತಿ ಎಂಬತ್ತೈದು ವರ್ಷದ ವಿಧವೆ ಹಾಗೂ ಇದೇ ಕಾದಂಬರಿಯಲ್ಲಿ ಬರುವ ವಿಧವೆ ಮೂಕಾಂಬು. ಪಾರೋತಿ ಕಾದಂಬರಿಯ ಮುಖ್ಯ ಪಾತ್ರವಾಗಿರುವ ಯಶವಂತನ ಸಾಕುತಾಯಿ. ಮೂಕಾಂಬು ಶಂಬುವಿನ ಅತ್ತೆ. ಈ ಇಬ್ಬರೂ ವಿಧವೆಯರು ಬಾಲವಿಧವೆಯರಾಗಿ ತುಂಬು ಜೀವನವನ್ನು ಅನುಭವಿಸಿದವರು ಪಾರೋತಿಗೆ ಮಕ್ಕಳಿಲ್ಲದಿರುವಾಗ 'ಲೋಕದ ಮಕ್ಕಳೆಲ್ಲ ತನ್ನವರೇ' ಎನ್ನುವ ಮಾತೃತ್ವದ ಪರಿಕಲ್ಪನೆ ವಿಶೇಷವಾದುದು. ಮೂಕಾಂಬು ಎಂಟುವರ್ಷದವಳಿರುವಾಗಲೇ ವಿಧವೆಯಾಗುತ್ತಾಳೆ. ಅವಳನ್ನು ನಿರೂಪಕರೊಂದಿಗೆ ಶಂಬು ಹೀಗೆ ವಿವರಿಸುತ್ತಾನೆ.

> *"ನಮ್ಮ ಅತ್ತೆಯ ಮಾಂಗಲ್ಯ ಹೋದದ್ದು ಮದುವೆಯಾದ ಎಂಟು ದಿನಗಳಲ್ಲೇ ಅವರೇ ಅನ್ನುತ್ತಿದ್ದರು, ಆಗ ನನಗೆ ಎಂಟು ವರ್ಷಪ್ರಾಯ ಎಂದು ಹಿಂದಿನ ಕಾಲದಲ್ಲಿ 'ಅಷ್ಟವರ್ಷ ಭವತೇ ಕನ್ಯಾ' ಎಂದರೆ ಅಷ್ಟೇ ವರ್ಷಕ್ಕೆ ಮದುವೆ ಮಾಡುತ್ತಿದ್ದರಲ್ಲವೆ ಎಂದು. ಅವನ ಶ್ಲೋಕ ನನ್ನಲ್ಲಿ ನಗುವನ್ನು ಹುಟ್ಟಿಸಿತು. ಸಂಸ್ಕೃತದ ಅಷ್ಟ ಕನ್ನಡದ ಅಷ್ಟೆ ಆಗಿ ನಗುವನ್ನೇ ತಂದಿತು. ಎನ್ನುತ್ತಾ ಮುಂದುವರಿದು "ತಾವು ತುಂಬಾ ಸಂಕಷ್ಟದ ಬಾಳನ್ನೇ ಅನುಭವಿಸಿರಬೇಕು. ನಿಮಗೆ ಎಂಟುವರ್ಷ ಆಗ ಎಂಬತ್ತೈದು ಈಗ". ಎಂದೆ. ಅದಕ್ಕಲ್ಲ ಮಗು ಅದು ಬ್ರಹ್ಮ ಬರೆದ ವಿಧಿ. "ನಿನಗೆ ಕುಂಕುಮದ ಯೋಗ ಇಂದೆ ಹೋಗಲಿ ಎಂದು ಹಿಂದಣ ಜನ್ಮದಲ್ಲಿ ಮಾಡಿದ ಯಾವ ಪಾಪಕ್ಕೋ ದೇವರು ಆಶಿಕ್ಷೆಯನ್ನೇ ವಿಧಿಸಿದ"*[೧]

ಎನ್ನುತ್ತ ತನ್ನ ವೈಧವ್ಯಕ್ಕೆ ಕರ್ಮಸಿದ್ಧಾಂತವನ್ನು ಆರೋಪಿಸಿಕೊಳ್ಳುತ್ತಾಳೆ. ಮುಂದುವರಿದು ತನ್ನ ಸಂಸಾರದ ಪೂರ್ವಾಪರಗಳನ್ನು ವಿವರಿಸುತ್ತಾಳೆ. ಯಶವಂತನ ತಂದೆ ನನ್ನ ತಂದೆ ಅಣ್ಣ ತಮ್ಮ ದಾಯಾದಿ ಮಾತ್ಸರ್ಯದಿಂದ ಸಂಸಾರ ನುಚ್ಚುನೂರಾಯಿತು. ಯಶವಂತನ ತಾಯಿ ತೀರಿಕೊಂಡಾಗ ನಮ್ಮ ಕುಟುಂಬದವಳಲ್ಲದ ಪಾರೋತಿ ಯಶವಂತನ ಸಾಕುತಾಯಿಯಾಗಿ ಸೇರಿಕೊಂಡವಳು ಅವಳೂ ನನ್ನಂತೆ 'ಕುಂಕುಮ ಭಾಗ್ಯ' ಇಲ್ಲದವಳು ಎಂದು ಪಾರೋತಿಯನ್ನು ಪರಿಚಯಿಸುತ್ತಾಳೆ. ಇಬ್ಬರೂ ವಿಧವೆಯರು ಸಮಾನ ವಯಸ್ಸಿನವರಾಗಿದ್ದು ಸಮಾನ ದುಃಖಿಗಳೂ ಆಗಿದ್ದಾರೆ. ಆದರೆ ಪಾರೋತಿಗೆ ಆ ಕುಟುಂಬದಲ್ಲಿ ಯಾವ ಹಕ್ಕೂ ಇಲ್ಲದಿದ್ದರೂ ಯಶವಂತನಿಂದಾಗಿ 'ಪ್ರೀತಿ' ಮತ್ತು 'ಹಕ್ಕ'ನ್ನು ಪಡೆಯುತ್ತಾಳೆ. ನಿರೂಪಕರು ಪಾರೋತಿಯನ್ನು ಹೀಗೆ ಪರಿಚಯಿಸುತ್ತಾರೆ.

---

೧. ಅಳಿದ ಮೇಲೆ – ಶಿವರಾಮಕಾರಂತ – ಪು. ೮೪–೮೫

*"ಈ ಮುದುಕಿ ಮೂಕಾಂಬುವಿನಂತಲ್ಲ, ಹಡೆದು ಗೊತ್ತಿಲ್ಲದ ಹೆಣ್ಣಾದರೂ, ಹಡೆಯುವುದಕ್ಕಾಗಿ ಹುಟ್ಟಿದ ಹೆಣ್ಣು, ತನ್ನ ಕೂಸಿಲ್ಲದಾಗ ತಮ್ಮ ಬಳಗದ ಇನ್ನೊಂದು ಕೂಸನ್ನು ತನ್ನದೇ ಎಂಬ ಮೋಹದಿಂದ ತಾನೇ ಸಾಕಿ ಬೆಳೆಸುವಷ್ಟು ಮಮತೆ ಉಳ್ಳವಳು. ಅಂತಾ ಕೆಲಸ ಮಾಡಲು ಭಾಗ್ಯ ಪಡೆದ ಪಾರ್ವತಿಯ ಜೀವನದಲ್ಲಿ ಅವಳು ತಾದಾತ್ಮ್ಯ ಪಡೆದಂತೆ ಕಾಣುತ್ತದೆ. ಯಶವಂತ ಮರೆಯಾದರೂ ಅವನ ಪಾರ್ವತಿ ಬದುಕಿದ್ದಾಳೆ. ಹಿರಿಯರ ಶಾಪದ ದಳ್ಳುರಿಯ ದೂರದ ದಂಡೆಯಲ್ಲಿ ನಿಂತಿದ್ದಾಳೆ."*[೧]

ಯಶವಂತನ ಬಾಳಿಗೆ ಆಸರೆಯಾಗಿ ತನ್ನ ಬಾಳನ್ನು ಅನುಭವಿಸಿದ ಪಾರೋತಿ ತುಂಬುಬಾಳಿನಲ್ಲಿ ತ್ಯಾಗಮಯಿಯಾಗಿ, ತಾಯಿಯಾಗಿ, ಸಹನಾಮಯಿಯಾಗಿ ಕಾಣುತ್ತಾಳೆ. ಪಾರೋತಿ ಮೂಕಾಂಬು ಇಬ್ಬರೂ ವೃದ್ಧ ವಿಧವೆಯರು ಬ್ರಾಹ್ಮಣ ಸಮುದಾಯದ 'ವಿಧವಾ ಮೌಲ್ಯ'ಗಳಿಗೆ ಬದ್ಧರಾಗಿ ಬದುಕುತ್ತಾರೆ. ಯಶವಂತನ ಸಾವಿನ ನಂತರ ಆತನ ಹಣದ ಮೇಲೂ ಆಸೆಯನ್ನು ಕಳೆದುಕೊಂಡು, ನಿರ್ಲಿಪ್ತವಾಗುತ್ತಾಳೆ. ಇಬ್ಬರೂ ವಿಧವೆಯರು ಕಷ್ಟಗಳಿಗೆ ಪೂರ್ವಜನ್ಮವನ್ನು ಆರೋಪಿಸುತ್ತಾ ಯಾವ ಅತಿಯಾದ ಉದ್ವೇಗಕ್ಕೂ ಒಳಗಾಗದೆ ಬದುಕುವುದು ಆ ಕಾಲಕ್ಕೆ ತೀರ ಅಗತ್ಯವೂ ಆಗಿತ್ತೆಂದು ಊಹಿಸಬಹುದು. ಶತಮಾನಗಳಿಂದ ಮಹಿಳೆಯನ್ನು 'ವೈಧವ್ಯ'ಕ್ಕೆ ಹೊಂದಿಕೊಳ್ಳುವಂತೆ ನೋಡಿಕೊಂಡಿದ್ದರ ಪರಿಣಾಮ ಆ ಕಾಲದ ವಿಧವೆಯರ ಬದುಕಿನ ಹಿನ್ನೆಲೆಗಿದೆ. ಅನಕ್ಷರಸ್ಥ ಪರಾವಲಂಬಿ ವಿಧವಾ ಮಹಿಳೆ ವ್ಯವಸ್ಥೆಯನ್ನು ವಿರೋಧಿಸುವ ಪ್ರಶ್ನೆಯೇ ಇಲ್ಲ. ತಾನು ಬದುಕುತ್ತಿರುವ ಪ್ರಪಂಚಕ್ಕಿಂತ ಭಿನ್ನವಾದ ಪ್ರಪಂಚವೊಂದರ ಕಲ್ಪನೆಯೂ ಇಲ್ಲದ ವಾತಾವರಣದಲ್ಲಿ ಬದುಕಿದ 'ಅಳಿದ ಮೇಲೆ' ಕಾದಂಬರಿಯ ಮೂಕಾಂಬು, ಪಾರೋತಿಯರ ದೀರ್ಘವಾದ ವಿಧವಾ ಜೀವನ 'ತಪಸ್ವಿ ಜೀವನ' ಎಂದೇ ಪರಿಗಣಿಸಬಹುದು. ಧಾರ್ಮಿಕ ನೆಲೆಯಿಂದ ಬಂದ ಮೌಲ್ಯಗಳು ಮಹಿಳೆಯರ ಬದುಕನ್ನು ಎಲ್ಲಾ ಹಂತಗಳಲ್ಲೂ ಅಧೀನವಾಗಿರಿಸಿ ಆಕೆಯ ಸ್ವತಂತ್ರ ಜೀವನವನ್ನು ನಿರಾಕರಿಸಿದುವು. ಪುರುಷಾರ್ಥದ ಸಾಧನೆಗಾಗಿ, 'ತ್ಯಾಗ', 'ಸೇವೆ' 'ಸಹಿಷ್ಣುತೆ'ಗಳಿಂದ ಪುರುಷನನ್ನು ಆಶ್ರಯಿಸಿ ಬದುಕುವುದೇ ಮಹಿಳೆಯ ಬದುಕಿನ ಗುರಿ ಎಂದು ಸಾರಿದವು ಇವು ವಿಧವೆಯ ತುಂಬು ಜೀವನದ ಧ್ಯೇಯಗಳಾಗಿ ಶಾಶ್ವತವಾದವು.

ಕಾರಂತರ'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ರಾಮೈತಾಳರ ತಂಗಿ ಸರಸೋತಿ ಬಾಲವಿಧವೆಯಾಗಿ ಅಣ್ಣನ ಮನೆ ಸೇರಿದವಳು. ಅಣ್ಣನ ಮನೆಯ ಕೆಲಸಕಾರ್ಯಗಳ ಜವಾಬ್ದಾರಿ ಹೊತ್ತ ಸರಸೋತಿ ಅತ್ಯಂತ ಪ್ರಾಮಾಣಿಕವಾದ ಕರ್ತವ್ಯ ನಿರ್ವಹಣೆಯಿಂದ ಗಮನ ಸೆಳೆಯುವ ಪಾತ್ರವಾಗಿ ಬಿಂಬಿತವಾಗುತ್ತಾಳೆ. ಮಕ್ಕಳಿಲ್ಲದ

---

೧. ಅಳಿದ ಮೇಲೆ – ಶಿವರಾಮಕಾರಂತ – ಪು. ೮೭–೮೮

ರಾಮೈತಾಳರ ಹೆಂಡತಿ ಪಾರೋತಿಯೊಂದಿಗೆ ಕುಟುಂಬದ ಎಲ್ಲಾ ಸಮಸ್ಯೆಗಳಿಗೂ ಹೆದರದೆ ಬದುಕುತ್ತಾಳೆ. ಪಾರೋತಿಯ 'ಬಂಜೆತನ'ಕ್ಕಾಗಿ ತನ್ನ 'ವೈಧವ್ಯ'ದ ದುಃಖ ಮರೆತು ಮರುಗುತ್ತಾಳೆ. ರಾಮೈತಾಳರು ಎರಡನೇ ಮದುವೆಯ ತೀರ್ಮಾನ ತೆಗೆದುಕೊಂಡಾಗ ಪಾರೋತಿಗೆ ಭವಿಷ್ಯದ ಭರವಸೆ ನೀಡಿ ಹೆಗಲೆಣೆಯಾಗಿ ನಿಂತವಳು. ಧೈರ್ಯ ಮತ್ತು ಸ್ವಾಭಿಮಾನದಿಂದ ಶ್ರಮಜೀವಿಯಾಗಿ ದೀರ್ಘಬಾಳನ್ನು ಅನುಭವಿಸುತ್ತಾಳೆ. ಸರಸೋತಿ ಪಾರೋತಿಯನ್ನು ಪರಸ್ಪರ ಅಗಲಿ ಬದುಕಲಾರದ ಅನುಬಂಧವನ್ನು ಹೊಂದಿದ್ದವರು. ಸರಸೋತಿಯಿಂದ ಅಬೇಧ್ಯವಾದ ಪ್ರೀತಿಯನ್ನು ಪಾರೋತಿ ಹೊಂದಿರುವುದು ಕಾದಂಬರಿ ಮನಗಾಣಿಸುತ್ತದೆ.

ಬಾಲವಿಧವೆಯಾದ ಸರಸೋತಿ ಕಾದಂಬರಿಯಲ್ಲಿ ಎಲ್ಲೂ 'ಅಮಂಗಳ' 'ಕೀಳು' ಎಂಬ ಭಾವನೆಯಿಂದ ಚಿತ್ರಣಗೊಳ್ಳುವುದಿಲ್ಲ. ಬದಲಾಗಿ ವಿಧವೆಯರು ಮಾನವೀಯ ಮೌಲ್ಯಗಳಿಂದ ಪರಿಶುದ್ಧವಾದ ಜೀವನಕಟ್ಟಿಕೊಳ್ಳಲು ಸಮರ್ಥರು ಎಂಬ ಸಂಗತಿ ಕಾದಂಬರಿಯಲ್ಲಿ ಇದೆ. ಚಾಣಾಕ್ಷತನದ ಸರಸೋತಿ 'ಈ ಸಾರಿ ಫಸಲು ಬಹಳ ಕಡಿಮೆ' ಎಂದು ಸುಳ್ಳಾಡುವ ರಾಮೈತಾಳರನ್ನು ತನ್ನ ಚಾತುರ್ಯದಿಂದ ಕಂಡು ಹಿಡಿದು ತಲೆ ತಗ್ಗಿಸುವಂತೆ ಮಾಡುತ್ತಾಳೆ. ಆಕೆಯ ಕಾಯಕ ನಿಷ್ಠೆ, ಪ್ರಾಮಾಣಿಕತನ ಅವಳಿಗೆ ಆತ್ಮವಿಶ್ವಾಸ ತುಂಬುತ್ತವೆ. ರಾಮೈತಾಳರು ಎರಡನೆ ಮದುವೆಯ ವಿಚಾರ ಸರಸೋತಿಯಿಂದ ಮುಚ್ಚಿಟ್ಟಾಗ ತನ್ನ ತಣ್ಣನೆಯ ಪ್ರತಿಕ್ರಿಯೆಯಿಂದ ಮಣಿಸುವುದು ಅವಳ ಬುದ್ಧಿವಂತಿಕೆಗೆ ಸಾಕ್ಷಿಯಾಗುತ್ತದೆ. ಮದುವೆಯ ಎಲ್ಲಾ ಕೆಲಸಗಳನ್ನೂ ಅಚ್ಚುಕಟ್ಟಾಗಿ ನಿರ್ವಹಿಸಿ ತನ್ನ ಗಂಡನ ಮನೆಗೆ ಮರಳುವುದಾಗಿ ನಿರ್ಧಾರ ಮಾಡುವ ಸರಸೋತಿ ಸ್ವಾಭಿಮಾನದ ಗಟ್ಟಿಗಿತ್ತಿಯಾಗಿ ಕಾದಂಬರಿಯಲ್ಲಿ ಚಿತ್ರಿತಳಾಗಿದ್ದಾಳೆ ಎಂದು ನಂಬಬಹುದು. ಅಷ್ಟೇ ಅಲ್ಲ ಶ್ರಮಜೀವಿಯಾದ ಸರಸೋತಿಯನ್ನು ಕಾಯಕ ನಿಷ್ಠೆಯ ಮಹಾತಪಸ್ವಿ ಎಂದು ಮನಗಾಣಿಸುತ್ತಾರೆ.

> *"ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಬಾಲವಿಧವೆಯರಾಗಿ ನಲುಗಿದ ಸ್ತ್ರೀಯರಿಗೆ ಕಾರಂತರ ಕಾದಂಬರಿಗಳಲ್ಲಿ ಸಾಮಾಜಿಕ ನ್ಯಾಯ ದೊರಕಿಸುವುದರೊಂದಿಗೆ ಸಾಂತ್ವನ ಹೇಳುವ ರೀತಿಯಲ್ಲಿ ಚಿತ್ರಿಸುತ್ತಾರೆ. ಇಂತಹ ಪಾತ್ರಗಳಿಗೆ ಜೀವನದಲ್ಲಿ ಜಿಗುಪ್ಸೆಯಾಗಲಿ, ನಿರ್ಲಿಪ್ತತೆಯಾಗಲಿ ಇಲ್ಲದೆ ಸ್ವಾವಲಂಬಿಯಾಗಿ ಕ್ರಿಯಾಶೀಲರಾಗಿ ಬದುಕುವುದು ಒಗ್ಗಿಹೋಗಿದೆ ಎಂದು ಹೇಳುತ್ತಾರೆ. ಪಾರೋತಿ ಸರಸೋತಿಯರು ಅಷ್ಟೇನು ಸಹಾನುಭೂತಿ ಪರವಲ್ಲದ ಪ್ರಕೃತಿಯೊಂದಿಗಿನ ಬದುಕಿನ ಹೋರಾಟದಲ್ಲಿ ಪಾಲ್ಗೊಳ್ಳುತ್ತಾರೆ. ಇದೊಂದು ವಿಶೇಷವೆಂದು ಅನಿಸದಷ್ಟು ಅವರಿಗೆ ಹೋರಾಟ ರಕ್ತಗತವಾಗಿಬಿಟ್ಟಿದೆ. ಪೂರ್ವಜನ್ಮಕರ್ಮದಂತೆ ಅನಿವಾರ್ಯವಾಗಿದೆ. ಸಹಜವಾಗಿದೆ.*

*ಅವರ ನಡುವೆ ಆಗಾಗ ವಿರಸ ತಲೆದೋರಿದರೂ ಈ ಹೋರಾಟದ ಗುಂಗು ಅವರನ್ನು ಭದ್ರವಾಗಿ ಒಂದೆಡೆ ಕೂಡಿಸಿ ಹಿಡಿದಿಡುತ್ತದೆ. ಈ ಹೋರಾಟದ ಉತ್ಕಟತೆಯಲ್ಲಿಯೇ ಅವರ ಬದುಕಿನ ಇನ್ನುಳಿದ ದುಃಖವನ್ನು ನುಂಗಿ ಜೀವನಕ್ಕೆ ಒಂದು ಅರ್ಥಕೊಡುತ್ತದೆ"*[೧]

ಸರಸೋತಿಯ ಬದುಕು ಪ್ರಕೃತಿತಾದಾತ್ಮ್ಯದೊಂದಿಗೆ ತೌರಿನಲ್ಲಿ ನವಚೈತನ್ಯದೊಂದಿಗೆ ಅರಳುವುದನ್ನು ಗಮನಿಸಬಹುದು. ಆಕೆಯ ಬಾಳಿನ ಒಂಟಿತನವನ್ನು ಹೋಗಲಾಡಿಸಿ ಒಟ್ಟು ಕುಟುಂಬದ ಸವಿಯನ್ನು ಅನುಭವಿಸುತ್ತಾಳೆ. ಅವಳ ಕಾಯಕನಿಷ್ಟೆಗೆ ತಕ್ಕ ಗೌರವ ಸಿಗುವುದೂ ಬಾಳಿನ ಮೆರಗು ಎಂದು ಭಾವಿಸಬಹುದು.

**೧೦. ವಿಧವೆ-ವೈಚಾರಿಕ ನೆಲೆಯಲ್ಲಿ**

ಕಾರಂತರ 'ಮೂಕಜ್ಜಿಯ ಕನಸು' ಕೃತಿಯ ಮೂಕಜ್ಜಿ ಸಾಮಾಜಿಕ ಬದುಕಿಗೆ ಸಂಪೂರ್ಣ ವಿಮುಖಳಾಗಿ ಮೂಕಿಯಾಗಿಯೇ ಉಳಿಯುತ್ತಾಳೆ. ರೂಢಿಗತ ಸಂಪ್ರದಾಯಕ್ಕೆ ಹೊಂದಿಕೊಂಡು ವಿಧವೆಯಾಗಿ ಬಾಳಿದ ಮೂಕಜ್ಜಿ ಭಾರತೀಯ ಪರಂಪರೆಯಲ್ಲಿ ಶೋಷಣೆಯ ಪ್ರತೀಕವಾಗಿದ್ದಾಳೆ. ತನ್ನ ಬಾಲ್ಯವಿವಾಹವನ್ನು ವಿವರಿಸುವ ಮೂಕಜ್ಜಿ 'ಅನಿಷ್ಟ ಪದ್ಧತಿ'ಗಳನ್ನು ತನ್ನ ಹರಿತವಾದ ಮಾತುಗಳಿಂದ ವಿರೋಧಿಸುತ್ತಾಳೆ. ಬಾಲವಿಧವೆಯಾಗಿ ಕೇಶಮುಂಡನ ಮಾಡಿಸಿಕೊಂಡು ತೌರನ್ನು ಸೇರಿದ ಮೂಕಜ್ಜಿ ಒಟ್ಟು ಕುಟುಂಬದ ಅನುಭವಗಳಿಗೆ ತೆರೆದುಕೊಳ್ಳುತ್ತಾಳೆ. ಆದರೂ ವೈದಿಕ ಸಂಪ್ರದಾಯದಿಂದ ಹೊರಬರಲಾಗುವುದಿಲ್ಲ. ತನ್ನಷ್ಟಕ್ಕೆ ಮಾತನಾಡುತ್ತಿದ್ದ ಮೂಕಾಂಬಿಕೆಗೆ ಉಪನಯನವಾಗದೆ ತೀರಿಕೊಂಡ ಯಜ್ಞನಾರಾಯಣನ ಪ್ರೇತ ಹಿಡಿದಿದೆ ಎಂದು ಹುಣಸೇ ಅಡರಿನಿಂದ ಹೊಡೆಸುವುದು ಆ ಕಾಲದ ಮೂಢನಂಬಿಕೆಗೆ ಸಾಕ್ಷಿಯಾಗಿದೆ. ಮುಂದೆ 'ಮೂಕಾಂಬಿಕೆ' ಹೆಸರಿಗೆ ತಕ್ಕಂತೆ 'ಮೂಕಿ'ಯಾಗಿಯೇ ಮುಂದುವರಿದು ಅಜ್ಜಿಯಾದಾಗ 'ಮೂಕಜ್ಜಿ'ಯಾಗಿ ಅನ್ವರ್ಥಕ ನಾಮದಿಂದ ಕರೆಸಿಕೊಳ್ಳುವುದು ವ್ಯವಸ್ಥೆಯ ದುರಂತ ಎನಿಸುತ್ತದೆ. ಈ ಪರಿಸ್ಥಿತಿಯಲ್ಲಿ ಮೂಕಜ್ಜಿ ತನ್ನ ಅಂತರ್ ದೃಷ್ಟಿಯಿಂದ ಮಾನವ ಜೀವನದ ವಿಕಾಸವನ್ನು ಅರಿತು ವೈಚಾರಿಕತೆಯನ್ನು ರೂಪಿಸಿಕೊಳ್ಳಲು ಸಾಧ್ಯವಾಯಿತು.

ಪ್ರಾರಂಭದಲ್ಲಿ ಅವಗಣನೆಗೆ ಒಳಗಾದ ಮೂಕಜ್ಜಿ ತನ್ನ ಅಗಾಧವಾದ ಜ್ಞಾನದಿಂದ ವೈಚಾರಿಕ ಮನೋಧರ್ಮದಿಂದ ಬೆಳೆದು ನಿಲ್ಲುತ್ತಾಳೆ.

*"ಮೂಕಜ್ಜಿಯ ಪಾತ್ರದ ಸುತ್ತ ವಿವರಿಸಲಾಗದ ಒಂದು ಬಗೆಯ ನಿಗೂಢತೆಯ ಅತಿ ಮಾನುಷದ ವಾತಾವರಣ ಹುಟ್ಟಿಕೊಂಡಿದೆ. ಆಕೆ ಬಾಲವಿಧವೆ. ಆರಂಭದಿಂದಲೂ ಅಭಿವ್ಯಕ್ತಿ ಕಾಣದ ಹತ್ತಿಕ್ಕಿದ ಲೈಂಗಿಕ ಕಾಮನೆಗಳ ಕಾರಣದಿಂದಾಗಿಯೇ ಏನೋ*

೧. ಸಮಗ್ರ ವಿಮರ್ಶೆ – ಗಿರಡ್ಡಿ ಗೋವಿಂದರಾಜ – ಕರ್ನಾಟಕ ಬುಕ್ ಏಜೆನ್ಸಿ –ಬೆಂಗಳೂರು– ೨೦೦೧. ಪು. ೫೨.

*ಜಗತ್ತಿನ ಸೃಷ್ಟಿಕ್ರಿಯೆಯ ರಹಸ್ಯದ ಬಗೆಗೆ, ಅದರಲ್ಲಿ ಲೈಂಗಿಕ ಆಕರ್ಷಣೆಯ ಮಹತ್ವದ ಬಗೆಗೆ ಅವಳಿಗೆ ಅತಿಸೂಕ್ಷ್ಮವೆನ್ನಬಹುದಾದ ಅರಿವಿದೆ. ಅದರ ಜೊತೆಗೆ ಸೃಷ್ಟಿಶಕ್ತಿಯ ಸಂಕೇತವಾದ ಹಿಂಡುಗಾನ ಅಮ್ಮನ ಬಗೆಗಿರುವ ಅವಳ ಭಾವನೆಗಳ ಆರಾಧನೆಯ ಸ್ವರೂಪ ಪಡೆಯುತ್ತವೆ*[೧]

ಮೂಕಜ್ಜಿ ಪಡೆದ ಜ್ಞಾನ, ಜೀವವಿರೋಧಿ ನಿಲುವುಗಳನ್ನು ವಿರೋಧಿಸುತ್ತದೆ. ಕಾದಂಬರಿಕಾರರು ಮೂಕಜ್ಜಿಯನ್ನು ಇತಿಹಾಸ ತಜ್ಞೆಯಾಗಿ, ಸಂಸ್ಕೃತಿಯ ನಿರೂಪಕಿಯಾಗಿ, ಚಿತ್ರಿಸುವುದರೊಂದಿಗೆ ಸಮಾಜಮುಖಿಯಾದ ಅವಳ ಚಿಂತನೆಗಳನ್ನು ಮನಗಾಣಿಸುತ್ತಾರೆ.

ಕಾರಂತರ ಕೃತಿಗಳಲ್ಲಿ ವೈಧವ್ಯದ ಪ್ರತಿನಿಧೀಕರಣವನ್ನು ಗಮನಿಸುವಾಗ ಅವರ ಮೊದಲ ಕೃತಿ 'ಕನ್ಯಾಬಲಿ' ಸ್ವಾತಂತ್ರ್ಯಪೂರ್ವದ ಕಾಲಘಟ್ಟದಲ್ಲಿ 'ಬಾಲವಿಧವಾ' ಜೀವನವನ್ನು ಪ್ರಶ್ನಿಸುತ್ತದೆ. ಬಾಲವಿಧವೆಯೊಬ್ಬಳಿಗೆ ಮರುವಿವಾಹವಾಗುವುದು ನಿಷೇಧವಾಗಿ ತನ್ನೊಳಗಿನ ಜೀವಕಾಮವನ್ನು ಹತ್ತಿಕ್ಕಲಾರದೆ, ವಿಧವಾ ಮೌಲ್ಯಗಳನ್ನು ಒಪ್ಪಿಕೊಳ್ಳದೆ ವೇಶ್ಯಾವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ. ಇದರ ಹಿಂದೆ ಕ್ರೂರ ವ್ಯವಸ್ಥೆಯ ಒತ್ತಡವಿರುವುದು ಕಣ್ಣೆದುಗಿರುವ ಸತ್ಯವಾಗಿದೆ. ಆದರೆ ಮಾಲತಿ ತನ್ನ ವೈಯಕ್ತಿಕ ದೌರ್ಬಲ್ಯಕ್ಕೆ ಅತಿಯಾದ ಪ್ರಾಶಸ್ತ್ಯ ನೀಡುವುದನ್ನು ಕಾದಂಬರಿ ತೆರೆದಿಡುತ್ತದೆ. ಬದಲಾಗುವ ಸಾಮಾಜಿಕ ಮೌಲ್ಯಗಳು ಎಲ್ಲಾ ಕಾಲಮಾನದಲ್ಲಿ ವಿಧವಾ ಜೀವನಕ್ಕೆ ಅಭದ್ರತೆಯನ್ನು ನೀಡುತ್ತಾ ಬಂದಿವೆ. ಪುರುಷ ಸಮಾಜ ಹೇರಿರುವ ಸಾಮಾಜಿಕ ಮೌಲ್ಯಗಳೇ ನಿರಂತರವಾಗಿ ಅನಿವಾರ್ಯವಾಗಿ ಒಪ್ಪಿ ಬದುಕುವ ಮಾದರಿಗಳು ವಿಧವೆಯ ಮುಂದಿವೆ. 'ಕನ್ಯಾಬಲಿ'ಯ ಮಾಲತಿ ವೇಶ್ಯೆಯಾಗಿ ಪರಿವರ್ತನೆಯಾಗುವುದು ಸುಖದ ಬದುಕಿಗಾಗಿ ಅಲ್ಲ. ಬಾಲವಿಧವೆಯರನ್ನು ದಂಡಿಸುವ ವ್ಯವಸ್ಥೆಗೆ ವಿರುದ್ಧವಾಗಿ ಎನ್ನುವ ಅಂಶ ಮುಖ್ಯವಾಗುತ್ತದೆ.

ಆದರೆ ಕಾರಂತರ 'ಮರಳಿ ಮಣ್ಣಿಗೆ', 'ಅಳಿದ ಮೇಲೆ' ಮತ್ತು 'ಮೂಕಜ್ಜಿಯ ಕನಸು'ಗಳು ಕಾದಂಬರಿಯಲ್ಲಿ ಚಿತ್ರಣಗೊಂಡ ಬಾಲವಿಧವೆಯರು ತುಂಬುಜೀವನದ ಸಾಂಪ್ರದಾಯಕ ಮೌಲ್ಯಗಳನ್ನು ಒಪ್ಪಿ ಬದುಕುವವರು. ಅವರ ಬಾಳಿನ ಕಷ್ಟಗಳು ಅವರ ಬದುಕನ್ನು ಗಟ್ಟಿಗೊಳಿಸುತ್ತವೆ. ವ್ಯವಸ್ಥೆಯನ್ನು ವಿರೋಧಿಸಿ ಬದುಕುವ ಪ್ರಶ್ನೆಯೇ ಇಲ್ಲ. ಅವರಿಗೆ ಆಶ್ರಯ ನೀಡಿದ ಕುಟುಂಬಗಳು ಅವರ ಶ್ರಮದ ಫಲವನ್ನು ಅನುಭವಿಸುತ್ತವೆ. ಕರ್ಮಸಿದ್ಧಾಂತದ ನೆಲೆಯಲ್ಲಿ ಬದುಕುವ ಪಾರೋತಿ, ಮೂಕಾಂಬು, ಸರಸೋತಿ, ಮೂಕಜ್ಜಿ ತಪಸ್ವಿನಿಯರಾಗಿ ಬಿಂಬಿತರಾಗಿದ್ದಾರೆ. ಬದಲಾಗುತ್ತಿದ್ದ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಸಂದರ್ಭಗಳು ಅವರ ಬಾಳಿನಲ್ಲಿ ತಲ್ಲಣಗಳಿಗೆ ಅವಕಾಶ ನೀಡದಿರುವುದೂ ಕಾರಂತರ ಕೃತಿಗಳಲ್ಲಿ ಗಮನಾರ್ಹವಾದುದು.

---

೧. ಸಮಗ್ರ ವಿಮರ್ಶೆ – ಗಿರಡ್ಡಿ ಗೋವಿಂದರಾಜ – ಕರ್ನಾಟಕ ಬುಕ್ ಏಜೆನ್ಸಿ –ಬೆಂಗಳೂರು– ೨೦೦೧. ಪು. ೭೧.

ಕುವೆಂಪುರವರ ಕಾದಂಬರಿಗಳಲ್ಲಿ ಬರುವ ನಾಗತ್ತೆ, ನಾಗಕ್ಕ, ಕೆಳಜಾತಿಯ ಕಾಡಿ, ಮೂವರೂ ವಿಧವೆಯರು. ವಿರುದ್ಧ ಪರಿಸ್ಥಿತಿಯ ಎದುರು ಹೆಣ್ಣಾಗಿ ತಾವೇನು ಮಾಡಲು ಸಾಧ್ಯ ಎಂದು ಅಸಹಾಯಕತೆಯನ್ನೆ ನಂಬಿ ಬದುಕುತ್ತಾರೆ. ಕುಟುಂಬದ ಆಶ್ರಯವಿಲ್ಲದ ಇವರು ಸ್ವತಂತ್ರವಾಗಿ ಬದುಕಬೇಕೆಂಬ ಸ್ವಾಭಿಮಾನ, ಛಲ, ಪರಿಶ್ರಮದ ಬುದ್ಧಿಯಿಲ್ಲದವರೆಂದು ಹೇಳಬಹುದು. ನಾಗತ್ತೆ ಸುಖದ ಬದುಕಿಗಾಗಿ ಸೊಸೆ ನಾಗಕ್ಕನನ್ನು ಶ್ರೀಮಂತ ವಿಧುರನಿಗೆ ಮದುವೆ ಮಾಡಿಸಲು ಹವಣಿಸುವವಳಾಗಿ ಕಾಣುತ್ತಾಳೆ. ದುಡಿಮೆಗಿಂತ ಶ್ರೀಮಂತರನ್ನು ಓಲೈಸುವುದರಿಂದ ಬದುಕು ನಿರಾಯಾಸವಾಗಿರುವುದೆಂದು ನಂಬಿದವರು. ನಾಗತ್ತೆ ನಾಗಕ್ಕನ ಬದುಕನ್ನು ಅಧೀನದಲ್ಲಿರಿಸಿಕೊಂಡವಳು. ಆರ್ಥಿಕ ಪರಾವಂಬಿತನಕ್ಕಾಗಿ ತಮ್ಮ ಹೆಣ್ಣು ತನವನ್ನು ಲೈಂಗಿಕ ಶೋಷಣೆಗೆ ಒಡ್ಡುವುದನ್ನು ಈ ಪಾತ್ರಗಳಿಂದ ಗುರುತಿಸಬಹುದು. ಆದರೆ ಕಾರಂತರ ಕಾದಂಬರಿಗಳಲ್ಲಿ ಬರುವ ವಿಧವೆಯರು ಕರ್ಮಸಿದ್ಧಾಂತದ ಹಿನ್ನೆಲೆಯಲ್ಲಿ ವಿಧವಾ ಮೌಲ್ಯಗಳಿಗೆ ತಮ್ಮನ್ನು ಒಪ್ಪಿಸಿಕೊಂಡು ಬದುಕುವವರು. ಶ್ರಮಜೀವಿಗಳಾಗಿ ತುಂಬುಬಾಳಿನ ತಪಸ್ವಿನಿಯರಂತೆ ಸಾಮಾಜಿಕ ಸಂಘರ್ಷಕ್ಕೆಡೆ ಮಾಡಿಕೊಡದಂತೆ ಬದುಕುವುದನ್ನು ವಿಶೇಷವಾಗಿ ಕಾದಂಬರಿಗಳು ಮನಗಾಣಿಸುತ್ತವೆ.

ಕಾರಂತರ ಕಾದಂಬರಿಗಳಲ್ಲಿ ವಿಧವೆಯರು ಉನ್ನತ ಜಾತಿವರ್ಗದವರು. ತಮ್ಮ ಲೈಂಗಿಕ ಪಾವಿತ್ರ್ಯದ ಗೆರೆ ದಾಟದವರು. ಕುವೆಂಪು ಕಾದಂಬರಿಗಳಲ್ಲಿ ಚಿತ್ರಣಗೊಳ್ಳುವ ವಿಧವೆಯರು ಜಾತಿಪಿರಮಿಡ್ಡಿನಲ್ಲಿ ಅತ್ಯಂತ ಕೆಳಗಿನವರಾಗಿದ್ದಾರೆ. ಇವರು ಲೈಂಗಿಕ ಬಲಿಪಶುಗಳಾಗಿ ಮೇಲ್ಜಾತಿ ವರ್ಗದವರಿಗೆ ವಸ್ತುವಾಗುವ ಸಾಧ್ಯತೆಗಳನ್ನು ಗಮನಿಸಬಹುದು. ಅವರು ಬ್ರಾಹ್ಮಣ ವಿಧವೆಯರ ರೀತಿಯ ಕಷ್ಟಗಳನ್ನು ಎದುರಿಸಬೇಕಿಲ್ಲ. ಕೆಳವರ್ಗಜಾತಿಯಲ್ಲಿ ರೂಢಿಯಲ್ಲಿರುವ 'ಕೂಡಿಕೆ' ಸವಲತ್ತಾಗುವ ಸಾಧ್ಯತೆಗಳನ್ನು ಅಲ್ಲಗಳೆಯುಂತಿಲ್ಲವಾದರೂ ಶೋಷಣೆಯ ವಸ್ತುವಾಗುವ ಸಾಧ್ಯತೆಗಳೂ ಇವೆ ಎಂದು ಲೇಖಕರು ತಮ್ಮ ಕೃತಿಗಳಲ್ಲಿ ಚರ್ಚಿಸುತ್ತಾರೆ. ಬ್ರಾಹ್ಮಣ ಸಮಾಜದ ವಿಧವೆ ಸಂಪ್ರದಾಯ ಸಮಾಜದ ಅನ್ಯಾಯಗಳನ್ನು ವಿರೋಧಿಸಲಾರದೆ ದುರಂತಕ್ಕೆ ತಳ್ಳಲ್ಪಡುತ್ತಾಳೆ. ಕೆಳಜಾತಿವರ್ಗದ ವಿಧವೆ ಸಾಮಾಜಿಕ ಅನ್ಯಾಯವನ್ನು ಪ್ರಶ್ನಿಸಿ ಪಾರಾಗುವುದು ಕಷ್ಟ ಸಾಧ್ಯವಾದರೂ ಆಕೆ ನೈತಿಕ ಮೌಲ್ಯದಿಂದ ಬಚಾವಾಗುವ ಮಾರ್ಗವನ್ನು ಕಂಡುಕೊಳ್ಳುವ ರೀತಿಯನ್ನು ಕಾದಂಬರಿಗಳು ಚರ್ಚಿಸುತ್ತವೆ.

೧೧. <u>ಪಾರಂಪರಿಕ ಸಮಸ್ಯೆಗಳ ಪಲ್ಲಟ</u>

ಸ್ವಾತಂತ್ರ್ಯ ಪೂರ್ವದ ಕನ್ನಡ ಕಥನ ಸಾಹಿತ್ಯದ ವಸ್ತುವಿನ್ಯಾಸ ಬದಲಾದ ಸಮಾಜಕ್ಕೆ ತಕ್ಕಹಾಗೆ ಚಿತ್ರಣಗೊಂಡಿವೆ. ಚಾರಿತ್ರಿಕವಾಗಿಯೂ ಮಹಿಳೆಯ ಬದುಕಿನಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಹಲವು ದಶಕಗಳಿಂದ ದೇಶದ ಸಾಮಾಜಿಕ,

ಆರ್ಥಿಕ, ಧಾರ್ಮಿಕ ಪರಿಸ್ಥಿತಿಯಲ್ಲಾದ ಬದಲಾವಣೆಗಳಿಂದ ವಿಧವೆಯರ ಜೀವನದಲ್ಲಿ ಮತ್ತು ಸಮಾಜ ವಿಧವೆಯರನ್ನು ನೋಡುವ ದೃಷ್ಟಿಕೋನದಲ್ಲಿ ಅನೇಕ ಬದಲಾವಣೆಗಳಾಗಿವೆ. ತ್ರಿವೇಣಿಯವರು ಹೊಸಎಚ್ಚರದಲ್ಲಿ ಬರೆಯುತ್ತಾರೆ. ಇವರು ಮುಖ್ಯವಾಗಿ ಮಧ್ಯಮ, ಕೆಳಮಧ್ಯಮ ವರ್ಗದ ಹೆಣ್ಣುಮಕ್ಕಳ ಸಾಂಸಾರಿಕ ಸಮಸ್ಯೆಗಳ ನಾನಾ ಮಜಲುಗಳನ್ನು ಕಥಾಕೇಂದ್ರವಾಗಿರಿಸಿಕೊಳ್ಳುತ್ತಾರೆ. ಮಹಿಳೆಯ ಸಮಸ್ಯೆಗಳು ಅವರ ಕಥಾವಸ್ತುಗಳಾಗುತ್ತವೆ. ಆದರೆ ಹೆಣ್ಣನ್ನು ಸಾಮಾಜಿಕ ಹಿನ್ನೆಲೆಯಲ್ಲಿಟ್ಟು ಅವಳನ್ನು ಗ್ರಹಿಸುವುದಕ್ಕಿಂತ ಹೆಚ್ಚಾಗಿ ಆಕೆಯ ಮಾನಸಿಕ ಲೋಕಕ್ಕೆ ದಾಳಿ ಇಡುತ್ತಾರೆ.

'ದೂರದ ಬೆಟ್ಟ' ಕಾದಂಬರಿಯ ಸುನಂದ ಕಾಲೇಜಿಗೆ ಹೋಗುತ್ತಿರುವಾಗಲೇ ವೈವಾಹಿಕ ಬದುಕಿಗೆ ಕಾಲಿಡುತ್ತಾಳೆ. ಕೆಲವು ದಿನಗಳು ಗಂಡನೊಂದಿಗೆ ಕಾಲಕಳೆಯುವ ಸುನಂದಾ ಗಂಡನನ್ನು ಉನ್ನತ ವ್ಯಾಸಂಗಕ್ಕಾಗಿ ಬೆಂಗಳೂರಿಗೆ ಕಳುಹಿಸಿ ತೌರಿನಲ್ಲೆ ಉಳಿಯುತ್ತಾಳೆ. ಪತಿಯ ಕಾಯಿಲೆ ಪ್ರಯುಕ್ತ ಅವನ ಶುಶ್ರೂಷೆಗೆ ತೆರಳಿದ ಸುನಂದ ವಿಧವೆಯಾಗಿ ತೌರನ್ನು ಸೇರುತ್ತಾಳೆ. ಹದಿನೈದು ವರ್ಷಕ್ಕೆ ವಿಧೆಯಾಗುವ ಸುನಂದಳ ಭವಿಷ್ಯದ ದಾರಿ ಮುಚ್ಚಿಹೋಗುತ್ತದೆ. ಮತ್ತೆ ಕಾಲೇಜು ಸೇರಿ ಕಲಿಕೆಯಲ್ಲಿ ಬದುಕಿನ ಕಹಿಯನ್ನು ಮರೆಯುವ ಪ್ರಯತ್ನ ಮಾಡುತ್ತಾಳೆ. ತನ್ನ ತೌರಿನವರಿಗೆ ಸುನಂದೆಯ ಚಿಂತೆ ಕಾಡುತ್ತದೆ. ಅಣ್ಣ ಸೀತಾರಾಮ ಸುನಂದೆಗೆ 'ಮರುವಿವಾಹ' ಮಾಡುವ ಸಲುವಾಗಿ ವಕೀಲ ಶ್ರೀಧರನನ್ನು ಸುನಂದೆಗೆ ಪರಿಚಯಿಸುತ್ತಾನೆ. ಪರಿಚಯ ಪ್ರೀತಿಯಾಗಿ ಮರುವಿವಾಹವಾಗುವವರೆಗೂ ಮುಂದುವರಿಯುತ್ತದೆ. 'ಮರುವಿವಾಹ' ಸುನಂದಳಿಗೆ ಮಾನಸಿಕ ಸಂಘರ್ಷವನ್ನುಂಟು ಮಾಡುತ್ತದೆ. ಜಾಗೃತ ಮನಸ್ಸಿಗೆ ಎರಡನೇ ವಿವಾಹ ತಪ್ಪಲ್ಲ ಎನಿಸಿದರೆ, ಅವಳ ಒಳಮನಸ್ಸಿಗೆ ತಪ್ಪು ಎಂದು 'ಮರುವಿವಾಹ'ವನ್ನು ತಿರಸ್ಕರಿಸುತ್ತದೆ. ವೈಯಕ್ತಿಕ ನೆಲೆಯಲ್ಲಿ ಸರಿ ಎನಿಸುವ 'ಮರುವಿವಾಹ' ಸಾಮಾಜಿಕ ನೆಲೆಯಲ್ಲಿ ತಪ್ಪು ಎನಿಸುವುದರ ಹಿಂದೆ ಆ ಕಾಲದ ಸಾಮಾಜಿಕ ಕಟ್ಟುಪಾಡುಗಳು ಹಿನ್ನೆಲೆಯಾಗುತ್ತವೆ.

ಸುನಂದಳ ಮನಸ್ಸಿನ ಗೊಂದಲಕ್ಕೆ ವಿಧವೆಯಾದ ಆಕೆಯ ಅತ್ತೆ ವೆಂಕತ್ತೆಯ ವಿಧವಾಚರಣೆ ಮುಖ್ಯವಾಗುತ್ತದೆ. ಇದರಿಂದ ಮರುವಿವಾಹ ಪಾಪಪ್ರಜ್ಞೆಯಾಗಿ ಕಾಡುತ್ತಿತ್ತು. ಆದರೆ ಸುನಂದೆಯ ವಿದ್ಯಾವಂತ ಪ್ರಜ್ಞೆಗೆ 'ಮರುವಿವಾಹ' ಸಹಜವಾದುದೆನಿಸಿ ದ್ವಂದ್ವದಲ್ಲಿ ಸಿಲುಕುತ್ತಾಳೆ. ಸಂಪ್ರದಾಯದ ಮೌಲ್ಯದೊಳಗೆ ಬಂಧಿಯಾದ ಸುನಂದಾಳ ದ್ವಂದ್ವದ ನಿಲುವು ಕನಸಿನ ಮೂಲಕ ವ್ಯಕ್ತವಾಗುತ್ತದೆ. ಆಕೆ ಕಂಡ ಕನಸನ್ನು ಕುರಿತು ಸೈಕಾಲಜಿ ಪ್ರೊಫೆಸರ್ ರಂಗನಾಥನ್ ಹೀಗೆ ವಿವರಿಸುತ್ತಾರೆ.

*"ಆತ್ಮಹತ್ಯೆಯ ಯೋಚನೆ ಯಾಕೆ ಬಂದಿದೆ ಎಂದರೆ ನಿನಗೆ ಏನು ಮಾಡಬೇಕೋ ತೋಚದಾಗಿದೆ. ಎಳೆ ವಯಸ್ಸಿನಲ್ಲಿ ಬೇರೂರಿದ ಭಾವನೆಗಳಿಗೂ ವಿದ್ಯಾವತಿಯಾದ*

*ಮೇಲೆ ಬಂದ ಆಧುನಿಕ ಮನೋಭಾವಕ್ಕೂ ಘರ್ಷಣೆ ನಡೆಯುತ್ತಿದೆ. ನಿನ್ನ ಮನಸ್ಸು ಎರಡಾಗಿ ಒಡೆದಿದೆ. ಆದರೆ ಅದನ್ನು ನೀನು ಗುರುತಿಸಿಲ್ಲ. ವೆಂಕತ್ತೆಯ ಮಡಿಲಿನಲ್ಲಿ ಬೆಳೆದು ಸೀತೆ, ಸಾವಿತ್ರಿ. ನಳಚರಿತ್ರೆ, ಅಹಲ್ಯೆ, ಲೋಪಾಮುದ್ರೆಯರ ಕಥೆಕೇಳಿ ಪತಿವ್ರತೆಯ ಧರ್ಮ ಮಹಿಮೆ ಇವುಗಳಿಗೆ ಹಿರಿದಾದ ಸ್ಥಾನವನ್ನು ಕೊಟ್ಟಿರುವ ಸುನಂದಳೊಂದು ಕಡೆ, ವಿದ್ಯಾವತಿಯಾಗಿ ಹಿಂದಿನ ರೀತಿ ನೀತಿಗಳನ್ನು ತಪ್ಪೆಂದು ತಿಳಿದು ವಿಧವಾವಿವಾಹ ಸರಿಯೆಂದು ಸಾಧಿಸುತ್ತಿರುವ ನವೀನ ಕಾಲದ ಸುನಂದ ಮತ್ತೊಂದು ಕಡೆ_ ಇವರಿಬ್ಬರ ನಡುವೆ ಸಿಕ್ಕ ನೀನು ಬಳಲುತ್ತಿರುವೆ. ನಿನ್ನ ಜಾಗೃತ ಮನಸ್ಸು ಹಳೆಯ ಭಾವನೆಗಳನ್ನು ಮೂಲೆಗೊತ್ತಿದೆ. ವೆಂಕತ್ತೆ ನಿನ್ನ ಹೃದಯದಲ್ಲಿ ಬಿತ್ತಿದ ಪತಿವ್ರತಾಧರ್ಮದ ಬೀಜ ನಿನ್ನ ಅರಿವಿಲ್ಲದೆ ಹೆಮ್ಮರವಾಗಿ ಬೆಳೆದಿದೆ. ಆದರೆ ಅದನ್ನು ನೀನು ಗುರಿತಿಸಿಲ್ಲ. ನಿನ್ನ ಅರಿವಿಲ್ಲದಂತೆ ಅಂತರಂಗದಲ್ಲಿ ಸುಪ್ತಮನಸ್ಸಿನಲ್ಲಿ ಆ ಮನೋಭಾವನೆಗಳು ಆಕ್ರಮಿಸಿಕೊಂಡಿವೆ."*[೧]

ಮನಶ್ಶಾಸ್ತ್ರಜ್ಞರು ಸುನಂದೆಯ ಮನಸ್ಸಿನ ಘರ್ಷಣೆಯ ಬಗ್ಗೆ ಬೆಳಕು ಚಲ್ಲುತ್ತಾರೆ. 'ವಿಧವಾ ವಿವಾಹ' ಒಪ್ಪದ ಸಮಾಜ ಒಂದೆಡೆಯಾದರೆ, ಬಾಲವಿಧವೆಯಾಗಿ ವಿದ್ಯಾವಂತೆಯಾಗಿ ಆಸೆಗಳನ್ನು ಅದುಮಿಟ್ಟುಕೊಳ್ಳಲಾಗದೆ ತೊಳಲಾಡುವ ಸುನಂದಳ ಬದುಕು ಇನ್ನೊಂದೆಡೆ. ಇವೆರಡರ ನಡುವೆ ಹೊಯ್ದಾಡುವ ಸುನಂದ 'ಮರುವಿವಾಹ' ಬೇಕು ಅಥವಾ ಬೇಡ ಎನ್ನುವ ನಿರ್ಧಾರಕ್ಕೆ ಬರಲೇಬೇಕಾದ ಅನಿವಾರ್ಯತೆ ಸೃಷ್ಟಿಯಾಗುತ್ತದೆ. ಸಾಂಪ್ರದಾಯಿಕ ಮೌಲ್ಯಗಳನ್ನು ವಿರೋಧಿಸಲಾಗದ. ವೆಂಕತ್ತೆಯ ಆಚರಣೆಗಳು. ಆಧುನಿಕತೆಯ ವಿಚಾರಗಳಿಗೆ ಮುಖಾಮುಖಿಯಾಗುತ್ತವೆ. ಸುನಂದ ಪಡೆದ ಹೊಸ ಎಚ್ಚರ ಶ್ರೀಧರನಂತಹ ಸುಸಂಸ್ಕೃತ ವಿದ್ಯಾವಂತನೊಂದಿಗೆ ಬದುಕು ಕಟ್ಟಿಕೊಳ್ಳುವ ಹಂಬಲವನ್ನು ಮೂಡಿಸುತ್ತದೆ. ಈ ರೀತಿಯ ದ್ವಂದ್ವ ಸುನಂದಳನ್ನು ಸಾಂದರ್ಭಿಕವಾಗಿ ಕರ್ಮಸಿದ್ಧಾಂತದ ಹಿನ್ನೆಲೆಗೆ ತಳ್ಳುವ ಸಾಧ್ಯತೆಯನ್ನು ಮರೆಮಾಚುವಂತಿಲ್ಲ.

ಸುನಂದ ಮೊದಲ ಪತಿ ಶೇಖರನ ನೆನಪನ್ನು ಮರೆಮಾಡಲು ಅವನ ಭಾವಚಿತ್ರ, ಮದುವೆ ಉಂಗುರಗಳನ್ನು ಬಾವಿಗೆ ಹಾಕುವುದರೊಂದಿಗೆ ತನ್ನಲ್ಲಿರುವ ಅಪರಾಧಿತನದಿಂದ ಹೊರಬರಲು ಪ್ರಯತ್ನಿಸುತ್ತಾಳೆ. ಆದರೆ ಸುಪ್ತಮನಸ್ಸಿಗೆ 'ಮರುವಿವಾಹ' ಅಪರಾಧವಾಗಿ ಕಂಡರೆ, ಅವಳ ಜಾಗೃತ ಮನಸ್ಸಿಗೆ ಅಪರಾಧವಾಗಿ ಕಾಣುವುದಿಲ್ಲ. ಈ ಎರಡರ ಹೊಯ್ದಾಟದಲ್ಲಿ ಹೊಸಬದುಕು ಕಟ್ಟಿಕೊಳ್ಳಲು ದಾರಿ ಹುಡುಕುತ್ತದೆ. 'ಮರುಮದುವೆ' ಪಾಪವಲ್ಲ . ಸಮಾಜವಾಗಲಿ, ಜನತೆಯಾಗಲಿ, ವಿಧವೆಯಾಗಿಯೇ ಉಳಿಯಬೇಕೆಂಬ ಕಟ್ಟುಪಾಡುಗಳನ್ನು ವಿಧಿಸುವುದು ಅನ್ಯಾಯ ಎಂದು ಮನೋವಿಜ್ಞಾನಿ ರಂಗನಾಥಯ್ಯನವರು ಸ್ಪಷ್ಟಪಡಿಸುತ್ತಾರೆ. ಆ ಕಾಲಕ್ಕಾಗಲೇ

೧. ದೂರದ ಬೆಟ್ಟ – ತ್ರಿವೇಣಿ – ವಿಷ್ಣು ಪ್ರಕಾಶನ – ಮೈಸೂರು ೨೦೦೪ – ಪು. ೧೮೧

ಸಮಾಜ ಸುಧಾರಕರು ವಿಧವಾ ಮರುವಿವಾಹಕ್ಕಾಗಿ ಸಮಾಜವನ್ನು ಸಜ್ಜುಗೊಳಿಸುತ್ತಿದ್ದರು. ಹಾಗಾಗಿ 'ವಿಧವಾವಿವಾಹ'ವನ್ನು ಕರ್ಮಸಿದ್ಧಾಂತದ ಹಿನ್ನೆಲೆಯಲ್ಲಿ ನೋಡದೆ ಬದಲಾದ ಸಮಾಜಕ್ಕೆ ತಕ್ಕಹಾಗೆ ಸಜ್ಜಾಗಬೇಕಾದ ಎಚ್ಚರಿಕೆಯನ್ನು ಲೇಖಕಿ ಮುಂದಿಡುತ್ತಾರೆ. ಹಾಗೂ ಸಾಮಾಜಿಕ ಬದಲಾವಣೆಗೆ ಆ ಕಾಲದ ಮಹಿಳೆ ಶಿಕ್ಷಣದಿಂದ ಸ್ಪಂದಿಸುತ್ತಿರುವುದನ್ನು ಅನಾವರಣಗೊಳಿಸುತ್ತಾರೆ. ಶಿಕ್ಷಣದಿಂದ ಪಡೆದ ನೂತನ ವಿಚಾರಧಾರೆಯು ಮಹಿಳೆಯ ಬದುಕಿನಲ್ಲಿ ಬದಲಾವಣೆಯನ್ನುಂಟು ಮಾಡುವಲ್ಲಿ ಪ್ರಧಾನ ಕಾರಣವಾಗಿತ್ತು. ಆದರೆ ಮಹಿಳೆಯ ಮೇಲಿದ್ದ ಸಂಪ್ರದಾಯ ಹಾಗೂ ಪಾರಂಪರಿಕ ವ್ಯವಸ್ಥೆಯ ಬಂಧನ ಸಡಿಲಗೊಳ್ಳಲಿಲ್ಲ.

ತ್ರಿವೇಣಿಯವರ 'ಹಣ್ಣೆಲೆ ಚಿಗುರಿದಾಗ' ಕೃತಿಯೂ ವಿಧವೆಯರ ಗಂಭೀರ ಸ್ಥಿತಿ ಮತ್ತು ಮನೋವೈಜ್ಞಾನಿಕ ಅಂಶವನ್ನು ಅರ್ಥಪೂರ್ಣವಾಗಿ ತೆರೆದಿಡುತ್ತದೆ. ಕಾದಂಬರಿಯ ನಾಯಕಿ ಮಾಲತಿ ಚಿಕ್ಕವಯಸ್ಸಿನಲ್ಲೇ ವಿಧವೆಯಾಗಿ ತೌರನ್ನು ಸೇರುತ್ತಾಳೆ. ಅವಳ ಸಹೋದರ ನಟಿಯೊಬ್ಬಳನ್ನು ಪ್ರೇಮಿಸಿ ಮದುವೆಯಾಗುವುದನ್ನು ತಂದೆ ವಿರೋಧಿಸಿದರೂ ಲೆಕ್ಕಿಸುವುದಿಲ್ಲ. ಮದುವೆಯಾಗಿ ಬೇರೆ ಹೋಗುತ್ತಾನೆ. ಆದರೆ ಮಾಲತಿಯ ತಂದೆ ಸಂಪ್ರದಾಯಸ್ಥರಾಗಿದ್ದು ಕಿರಿವಯಸ್ಸಿನಲ್ಲಿಯೇ ವಿಧುರನಾದವನನ್ನು ಪ್ರೇಮಿಸಿ ಮದುವೆ ನಿರ್ಧಾರ ಮಾಡುವುದನ್ನು ವಿರೋಧಿಸುತ್ತಾರೆ. ಮಹಿಳೆಯ ಪುನರ್ವಿವಾಹವನ್ನು ಮಾಲತಿಯ ತಂದೆ ವಿರೋಧಿಸುತ್ತಾರೆ. ಮಗಳಾದ ಮಾಲತಿ ಅಣ್ಣನಂತೆ ತಂದೆಯ ಭಾವನೆಗಳನ್ನು ವಿರೋಧಿಸಿ ಮದುವೆಯಾಗಲು ಇಚ್ಛಿಸದೆ ಅವರ ಭಾವನೆಗಳನ್ನು ಗೌರವಿಸುತ್ತಾಳೆ. ಅವಿವಾಹಿತಳಾಗಿಯೇ ಉಳಿಯಲು ನಿರ್ಧರಿಸುತ್ತಾಳೆ. ಮಗಳ ಈ ಅಭಿಪ್ರಾಯ ತ್ಯಾಗವಾಗಿ ಕಾಣುತ್ತದೆ. ಇದರಿಂದ ಎಚ್ಚೆತ್ತ ಮಾಲತಿಯ ತಂದೆ ತಮ್ಮ ಮನಸ್ಸನ್ನು ಬದಲಾಯಿಸಿ ಮಗಳ 'ಪುನರ್ವಿವಾಹ'ಕ್ಕೆ ಒಪ್ಪಿ ಆಶೀರ್ವಾದ ಮಾಡುತ್ತಾರೆ. ಮಗನ ಪ್ರೇಮವಿವಾಹವನ್ನು ವಿರೋಧಿಸಿದ ರಾಯರು ವಿಧವಾ ಮಗಳ ಪ್ರೀತಿಯನ್ನು ವಿರೋಧಿಸುತ್ತಾರೆ. ಇಲ್ಲಿ ಮಾಲತಿಯ ಆಯ್ಕೆ ಮುಖ್ಯವಾಗದೆ ಆ ಕುಟುಂಬದ ಸದಸ್ಯರ ಆಯ್ಕೆ ಬಹಳ ಮುಖ್ಯವಾಗುತ್ತದೆ. ಅವಳ ಮರುವಿವಾಹ ಅನುಕಂಪದ ನೆಲೆಯಲ್ಲಿ ಜರುಗುವುದೇ ಹೊರತು ಸಾಮಾಜಿಕ ಪಲ್ಲಟದ ನಿದರ್ಶನವಾಗುವುದಿಲ್ಲ.

ತ್ರಿವೇಣಿಯವರು 'ವಿಧವಾವಿವಾಹ'ವನ್ನು ತೀವ್ರವಾಗಿ ಬದಲಾಗುತ್ತಿರುವ ಸಾಮಾಜಿಕ ಪಲ್ಲಟಗಳ ನೆಲೆಯಲ್ಲಿ ಚರ್ಚಿಸುತ್ತಾರೆ. ಸಾಂಪ್ರದಾಯಿಕ ಮೌಲ್ಯಗಳೊಂದಿಗೆ ಆಧುನಿಕ ಬದುಕು ಸಂಘರ್ಷಕ್ಕಿಳಿಯುವುದು ಇವರ ಕೃತಿಗಳಲ್ಲಿ ಅನಾವರಣಗೊಂಡಿವೆ. 'ವಿವಾಹ' ಮತ್ತು ಆ ಮೂಲಕ ಹುಟ್ಟುವ ಸಮಸ್ಯೆಗಳನ್ನು ಇವರ ಕಾದಂಬರಿಗಳು ಚರ್ಚಿಸುವುದರಿಂದ ವಿಧವಾ ಸಮಸ್ಯೆ ಮತ್ತು 'ವಿಧವಾ ವಿವಾಹ'ಗಳು ಚರ್ಚೆಗೊಳಪಡುತ್ತವೆ. 'ಮರು ವಿವಾಹ'ದ ಆಯ್ಕೆಗಳನ್ನು ಗೊಂದಲದಿಂದಲೇ

ಎದುರಿಸುವ ಹಲವಾರು ಪಾತ್ರಗಳು ಅಭದ್ರತೆಯಿಂದ ಕೂಡಿದ್ದಾಗಿ ಚಿತ್ರಣಗೊಂಡಿವೆ. ತ್ರಿವೇಣಿಯವರು 'ವಿಧವೆ'ಯರನ್ನು ತಮ್ಮ ಕೃತಿಗಳಲ್ಲಿ ಬಲವಾದ ಸಂಘರ್ಷಕ್ಕೊಡ್ಡಿಕೊಳ್ಳುವುದನ್ನು ದಾಖಲಿಸುತ್ತಾರೆ. ಇವರ ಕಥೆಗಳಲ್ಲಿ ಎದುರಿಸಲು ಹೊರಟ ಸಮಸ್ಯೆಗಳು ಹೊಸ ಬಗೆಯದಾಗಿ ಕಾಣುತ್ತವೆ. ಹೊಸ ಸಮಸ್ಯೆಗಳನ್ನು ಮಾನವೀಯ ನೆಲಯಲ್ಲಿ ಸಹ್ಯವಾಗಿಸಲು ಯತ್ನಿಸಿದ್ದಾರೆ. ವಿರುದ್ಧ ನೆಲೆಯ ಪ್ರತಿಪಾದನೆಗೆ ಆ ಕಾಲದ ಲೇಖಕಿಯರೂ ಸಿದ್ದರಿರಲಿಲ್ಲ ಎಂದೂ ಊಹಿಸಬಹುದು. ಹಳೆಯ ಮತ್ತು ಹೊಸ ಮೌಲ್ಯಗಳೊಂದಿಗೆ ಸಂಘರ್ಷಕ್ಕೊಳಗಾಗುವ ಮಹಿಳೆ ಆಸ್ಫೋಟಕಾರಿ ಮನೋಭಿತ್ತಿಯನ್ನು ಪ್ರದರ್ಶಿಸುವುದು ಸಾಧ್ಯವಾಗುವುದಿಲ್ಲ. 'ವಿವಾಹ'ದ ಚೌಕಟ್ಟಿನೊಳಗೆ ತನ್ನ ನೈಸರ್ಗಿಕ ಆಸೆಗಳನ್ನು ಈಡೇರಿಸಿಕೊಳ್ಳಬೇಕಾದ ಸಂದರ್ಭಕ್ಕೆ ಹೊಂದಿಕೊಳ್ಳುವ, ಆಮೂಲಕ ಮೌನವಾಗುವ ವಿಧವಾ ಪಾತ್ರಗಳು ತ್ರಿವೇಣಿಯವರ ಕಾದಂಬರಿಗಳಲ್ಲಿ ಮುಖ್ಯವಾಗುತ್ತವೆ.

ತ್ರಿವೇಣಿ ಮತ್ತು ಎಂ.ಕೆ.ಇಂದಿರಾರವರು ಸಮಕಾಲೀನರು. ಇಬ್ಬರೂ ಲೇಖಕಿಯರು ಬದಲಾಗುತ್ತಿದ್ದ ಸಾಮಾಜಿಕ ಮೌಲ್ಯಗಳಿಗೆ, ಸಾಮಾಜಿಕ ಸಮಸ್ಯೆಗಳಿಗೆ ತಮ್ಮ ಬರಹವನ್ನು ಮೀಸಲಿಟ್ಟಿದ್ದಾರೆ. ಸ್ವಾತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಕಾಲಮಾನದ ಸುಮಾರು ನೂರೈವತ್ತು ವರ್ಷಗಳ ಅವಧಿಯ ಮಲೆನಾಡಿನ ಜೀವನ ಚಿತ್ರಣವನ್ನು ಬಿಂಬಿಸಿದ್ದಾರೆ. 'ವಿವಾಹ'ದ ನೆಲೆಯಲ್ಲಿ ಹುಟ್ಟಿಕೊಳ್ಳುವ ಪಾರಂಪರಿಕ ಸಮಸ್ಯೆಗಳು ಆಧುನಿಕ ಸಮಾಜದಲ್ಲಿ ಪಲ್ಲಟಗೊಂಡಿರುವುದನ್ನು ವಿಶ್ಲೇಷಿಸುತ್ತಾರೆ.

ಇಂದಿರಾರವರ 'ಹೆಣ್ಣಿನ ಆಕಾಂಕ್ಷೆ' ಕಾದಂಬರಿಯಲ್ಲಿ ಅನಂತಯ್ಯನವರ ಸೋದರಿ ಪಾತಮ್ಮನ ಹಾಗೂ ನಾಗುವಿನ ಪಾತ್ರಗಳು ಹೆಣೆದುಕೊಂಡಿವೆ. ಪೂರ್ಣ ಕಾದಂಬರಿಯಲ್ಲಿ ಮರಣಗಳ ಸರಮಾಲೆ ಹೃದಯ ಕಲಕಿಸುತ್ತವೆ. ಆದರೆ ಆ ಕುಟುಂಬದಲ್ಲಿ ಉಳಿದುಕೊಂಡ ಅನಂತಯ್ಯನವರ ಮೊಮ್ಮಗಳು ಲೋಲ ಆ ಮನೆಯ ಆಶಾಕಿರಣ ಆದರೆ ಈ ಕಾದಂಬರಿಯ ಮುಖ್ಯ ಪಾತ್ರಗಳೆಂದರೆ ವಿಧವೆಯರಾದ ನಾಗೂ ಹಾಗೂ ಪಾತಮ್ಮ. ನಾಗುವಿನ ಕರುಣಾಜನಕ ಬದುಕನ್ನು ಲೇಖಕಿ ಮನಮಿಡಿಯುವಂತೆ ಚಿತ್ರಿಸುತ್ತಾರೆ. ಕೇವಲ ನಾಲ್ಕು ವರ್ಷ ದಾಂಪತ್ಯ ಜೀವನ ನಡೆಸಿ ತಮ್ಮ ಹದಿನೆಂಟನೆಯ ವಯಸ್ಸಿಗೆ ವಿಧವೆಯಾದರು. ಅವಳ ಬಾಹ್ಯರೂಪವನ್ನು ವಿಕಾರ ಮಾಡಿ ಓರಗಿತ್ತಿಯ ಚಾಕರಿಗೆ ಮೀಸಲಾಗಿಸುತ್ತಾರೆ. ಆ ಮನೆಯಲ್ಲಿ ತನ್ನ ಭಾವನಿಂದ ಗರ್ಭಿಣಿಯಾಗುವ ನಾಗು ಗಂಡನ ಮನೆಯ ನೆಲೆ ಕಳೆದುಕೊಳ್ಳುತ್ತಾಳೆ. ನಾಲ್ಕು ತಿಂಗಳ ಗರ್ಭಿಣಿ ನಾಗು ತಾಯಿಮನೆಗೆ ಬಂದರೆ 'ಹೊಳೆಬಿದ್ದುಸಾಯಿ' ಎಂದು ತಾಯಿಯೇ ಹೊರಹಾಕುತ್ತಾಳೆ. ಹೊಳೆಯಲ್ಲಿ ಪ್ರಾಣ ಕಳೆದುಕೊಳ್ಳಲು ತೀರ್ಮಾನಿಸಿದ ವಿಷಯ ತಿಳಿದ ಅನಂತಯ್ಯನವರ ಪತ್ನಿ ಮೀನಾಕ್ಷಮ್ಮ ನಾಗುವಿಗೆ ಆಸರೆಯಾಗುತ್ತಾರೆ.

ತಮ್ಮ ಮನೆಯಲ್ಲೇ ಆಕೆಗೆ ಹುಟ್ಟಿದ ಹೆಣ್ಣು ಮಗುವನ್ನು ಸೂಲಗಿತ್ತಿ ಮರಿಯಮ್ಮನಿಗೆ ಸಾಕಲು ನೀಡಿ ಅವಳ ಬಾಣಂತನವನ್ನು ಮಾಡಿ ಮಾನವೀಯತೆಯನ್ನು ಮೆರೆಯುತ್ತಾರೆ.

ತನ್ನ ಹೊಟ್ಟೆಯ ಮಗಳನ್ನು ಪರರಿಗಿತ್ತು ಇಡೀ ಬದುಕನ್ನು ಅನಂತಯ್ಯನವರ ಸಂಸಾರದ ಸೇವೆಗೆ ಮೀಸಲಿಡುತ್ತಾಳೆ. ಸಮಾಜದಿಂದ ಬಹಿಷ್ಕೃತಳಾದ ನಾಗು ಜನ್ಮನೀಡಿದ ಮಗಳಿಂದಲೂ ಬೇರೆಯಾಗಿ ಬದುಕುವಾಗ ದುಃಖವನ್ನು ಒಡಲಲ್ಲಿಟ್ಟುಕೊಂಡು ಬದುಕುತ್ತಾಳೆ. ಸ್ವತಃ ತನ್ನ ಮಗಳು ಡಾಕ್ಟರಾಗಿ ತಾನಿದ್ದ ಊರಿಗೆ ಬಂದಾಗಲೂ ಮಗಳನ್ನು ಮಗಳೆಂದು ಬಹಿರಂಗಪಡಿಸದ ಅಸಹಾಯಕ ಸ್ಥಿತಿ ಎದುರಾಗುವುದು ಅವಳ ಬಾಳಿಗೆ ಸಮಾಜ ನೀಡಿದ ಕ್ರೌರ್ಯ.

ನಾಗುವಿನ ಕರುಣಾಜನಕ ಸ್ಥಿತಿಗೆ ಆಕೆಯ ಬದುಕಿನ ಹಿನ್ನೆಲೆ ಕಾರಣವಾಗಿದೆ.

> *"ಹನ್ನೆರಡು ವರ್ಷಗಳ ಹಿಂದಿನ ಮಾತು. ಪೂರಾದಡ್ಡಿ ಎನಿಸಿಕೊಂಡ ನಾಗು ಗಂಡನ ಜೊತೆ. ನಾಲ್ಕು ವರ್ಷ ಸಂಸಾರ ಮಾಡಲಿಲ್ಲ. ರೇಷ್ಮೆ ಕಾಯಿಲೆಯಲ್ಲಿ ಗಂಡ ಸತ್ತುಹೋದ, ಪೂರಾಗೊಡ್ಡು ಜನ. ಹದಿನೆಂಟು ವರ್ಷದ ನಾಗುವಿಗೆ ಮುಂಡನ ಮಾಡಿಸಿ ಕೆಂಪುಸೀರೆ ಉಡಿಸಿದರು. ಅದಕ್ಕಾಗಿ ದುಃಖಿಸಬೇಕೆಂಬ ವಿಷಯವೂ ಆಗ ನಾಗುವಿಗೆ ತಿಳಿದಿರಲಿಲ್ಲ. ಓರಗಿತ್ತಿ ದುರ್ಗಿಯ ಮನೆಯಲ್ಲಿ ಕತ್ತೆ ಚಾಕರಿಗೆ ಬಿದ್ದಳು ನಾಗು. ಅದೂ ಅವಳಿಗೆ ಕಷ್ಟವೆನಿಸಲಿಲ್ಲ. ಕತ್ತೆಯಂತೆ ದುಡಿದು ಎಮ್ಮೆಯಂತೆ ತಿಂದು, ಕೋಣನಂತೆ ನಿದ್ರಿಸುವಳು. ಓರಗಿತ್ತಿಯ ಬೈಗುಳೆಲ್ಲಾ ಇವಳಿಗೆ ಪುಷ್ಪಾರ್ಚನೆ"*[1]

ನಾಗುವಿನ ಬದುಕಿಗೆ 'ವೈಧವ್ಯ' ತಂದ ದುರಂತ ಅವಳ 'ತಾಯ್ತನ'ದ ಸುಖವನ್ನೂ ಕಿತ್ತುಕೊಳ್ಳುತ್ತದೆ. ವೈದ್ಯೆಯಾಗುವ ಮಗಳನ್ನು ಮಗಳೆಂದು ಒಪ್ಪಿಕೊಳ್ಳಲಾಗದೆ, 'ತಾಯಿ' ಎಂಬ ಹೆಮ್ಮೆಯನ್ನು ತೋರಿಸಿಕೊಳ್ಳಲಾಗದೆ ಬಳಲುವ ನಾಗುವನ್ನು ಗುಲಾಮಗಿರಿಗೆ ತಳ್ಳುವ ವ್ಯವಸ್ಥೆಯ ದುರಂತ ಮಹಿಳೆ ತಾನಿರುವ ವ್ಯವಸ್ಥೆಯನ್ನೇ ಸುಖ ಎಂದು ಒಪ್ಪಿಕೊಳ್ಳುವುದಕ್ಕೆ ಸಾಕ್ಷಿಯಾಗುತ್ತದೆ. ಗಂಡನನ್ನು ಕಳೆದುಕೊಂಡ ಮಹಿಳೆ ಬಾಳಿನ ಸರ್ವಸ್ವವನ್ನು ಕಳೆದುಕೊಳ್ಳುವ ಸ್ಥಿತಿ ತಲುಪಿರುವುದು ಈ ಕಾಲಕ್ಕೂ ಅನ್ವಯಿಸುತ್ತದೆ. ಎಲ್ಲಾ ಕಳೆದುಕೊಂಡು ದಾಸ್ಯಕ್ಕೊಡ್ಡಿಕೊಂಡ ನಾಗುವಿಗೆ ಸಾಮಾಜಿಕ ಅಂತಸ್ತುಗಳ ಬಗ್ಗೆ ಯಾವ ಬದ್ಧತೆಗಳು ಎದುರಾಗದಿರುವುದನ್ನು ಲೇಖಕಿ ವಿವರಿಸುತ್ತಾರೆ.

ಪಾತಮ್ಮನವರು ತಮ್ಮ ಒಂಬತ್ತನೆಯ ವಯಸ್ಸಿಗೆ ವಿಧವೆಯಾಗಿ ವಿಧವಾ ಮೌಲ್ಯಗಳನ್ನು ಪಾಲಿಸುತ್ತ ಅಣ್ಣ ಅನಂತಯ್ಯನವರ ಆಶ್ರಯಕ್ಕೆ ಸೇರುತ್ತಾರೆ. ಅವರು ಪಾಲಿಸಿಕೊಂಡು ಬಂದ ಪವಿತ್ರ ಬದುಕು, ಜೀವನಶ್ರದ್ಧೆ ಅವರ ಮಾನವೀಯತೆಗೆ ಸಾಕ್ಷಿಯಾಗಿ ನಿಲ್ಲುತ್ತವೆ. ಸತತ ಅರವತ್ತು ವರ್ಷಗಳ ಕಾಲ ತಪಸ್ವಿ ಬಾಳ್ವೆಯನ್ನು

---

೧. **ಹೆಣ್ಣಿನ ಆಕಾಂಕ್ಷೆ – ಎಂ.ಕೆ. ಇಂದಿರಾ – ಇಂದಿರಾ ಪ್ರಕಾಶನ – ಬೆಂಗಳೂರು – ೨೦೦೪ – ಪು. ೨೩**

ನಡೆಸಿದ ಪಾತಮ್ಮನನ್ನು ಲೇಖಕಿ ಅತ್ಯಂತ ಆಧರದಿಂದ ಚಿತ್ರಿಸುತ್ತಾರೆ. ಮುಂದೆ ಎಂ.ಕೆ.ಇಂದಿರಾರವರು ಬರೆದ 'ಫಣಿಯಮ್ಮ' ಕಾದಂಬರಿಯ ಫಣಿಯಮ್ಮ ಪಾತಮ್ಮನ ಮುಂದುವರಿದ ಪಾತ್ರವಾಗಿ ಕಾಣಿಸಿಕೊಂಡಿದ್ದಾರೆ ಎಂದು ಭಾವಿಸಬಹುದು.

ಒಂದೇ ಸೂರಿನಡಿ ಜೀವಿಸುವ ನಿಸ್ವಾರ್ಥ ಸೇವೆಯ ವಿಧವೆಯರು ನಾಗೂ ಮತ್ತು ಪಾತಮ್ಮ. 'ವಿವಾಹ'ದ ಮೂಲಕವೇ ಬದುಕು ಕಟ್ಟಿಕೊಳ್ಳಬೇಕಾದ ಅನಿವಾರ್ಯ ಸಾಮಾಜಿಕ ಸಂದರ್ಭದಲ್ಲಿ ನಾಗು ದುರಂತಕ್ಕೆ ಗುರಿಯಾಗುತ್ತಾಳೆ. ಸಾಮಾಜಿಕ ಒತ್ತಡಗಳು ನಾಗುವನ್ನು ಆತ್ಮಹತ್ಯೆಗೆ ತಳ್ಳುವ ಸ್ಥಿತಿಯಿಂದ ಮೇಲೆತ್ತುವ ಮೀನಾಕ್ಷಮ್ಮ ಮಾನವೀಯತೆಯ ಪ್ರತೀಕವಾಗುತ್ತಾರೆ. ಕ್ರೂರ ಸಾಮಾಜಿಕ ಮೌಲ್ಯಗಳನ್ನು ನವಿರಾಗಿ ತಿರಸ್ಕರಿಸುವ ಮೀನಾಕ್ಷಮ್ಮನ 'ಔದಾರ್ಯ' ಜೀವವಿರೋಧಿ ನೀತಿಯನ್ನು ಖಂಡಿಸುವುದು ಕಾದಂಬರಿಯಲ್ಲಿ ಅನಾವರಣಗೊಂಡಿದೆ. ಆ ಕಾಲಕ್ಕೆ ವಿಧವೆಯರು ಸಾಮಾಜಿಕ ಒತ್ತಡಗಳಿಗೊಳಗಾಗಿ, ವಿಧವಾಚರಣೆಯನ್ನು ಮೀರಿ ಬದುಕುವ ಸ್ಥಿತಿ ಮೇಲ್ಜಾತಿಗಳಲ್ಲಿ ತೀರ ಸಾಮಾನ್ಯವಾಗಿತ್ತು. ಆಯ್ಕೆಯ ಅವಕಾಶಗಳಿಲ್ಲದ ವಿಧವೆಯರು ಹೀನಾಯವಾಗಿ ಮರಣ ಹೊಂದುವುದರಲ್ಲಿ ಪುರುಷ ಪ್ರಾಬಲ್ಯದ ಹಿನ್ನೆಲೆಯಿದೆ. ನಾಗುವಿನ ಅಸಹಾಯಕ ಅವಮಾನದ ಬದುಕನ್ನು 'ಹೆಣ್ಣಿನ ಆಕಾಂಕ್ಷೆಯಲ್ಲಿ ತೆರೆದಿಡುತ್ತ ವಿಧವಾ ಮೌಲ್ಯಗಳಿಗೆ ಹೊಂದಿಕೊಂಡು ತಪಸ್ವಿಯಾಗಿ ಬದುಕಿದ ಪಾತಮ್ಮನ ಬದುಕನ್ನು ನಾಗುವಿಗೆ ಮುಖಾಮುಖಿಯಾಗಿಸುತ್ತಾರೆ. ನಾಗುವಿನ ಹೀನಾಯ ಸ್ಥಿತಿಯನ್ನು ಚಿತ್ರಿಸುವುದರೊಂದಿಗೆ ಪುರುಷನ ಸ್ವೇಚ್ಛಾಚಾರಕ್ಕೆ ಯಾವ ಕಟ್ಟಳೆಯನ್ನು ವಿಧಿಸದಿರುವುದು ಬಯಲಾಗುತ್ತದೆ.

ಇಂದಿರಾರವರ 'ಸದಾನಂದ' ಕಾದಂಬರಿಯೂ ಬಾಲ್ಯವಿವಾಹ, ವಿಧವಾ ವಿವಾಹ ಕುರಿತು ಜಿಜ್ಞಾಸೆ ನಡೆಸುತ್ತವೆ. ಕಾದಂಬರಿಯ ನಾಯಕಿ ಕಮಲ ಸೋದರಮಾವ ನಾಗಭೂಷಣನೊಂದಿಗೆ ಮದುವೆಯಾಗಿ ತನ್ನ ಹದಿನೈದನೆ ವರ್ಷಕ್ಕೆ ವಿಧವೆಯಾಗುತ್ತಾಳೆ. ಮನೆಯವರಿಗೆ ಕಮಲಳ ವೈಧವ್ಯ ದುಃಖದಲ್ಲಿ ಅದ್ದಿಸುತ್ತದೆ. ತಂದೆ ತಾಯಿ ತಮ್ಮ ಕಮಲಳ ಮರುವಿವಾಹ ಕುರಿತು ಯೋಚಿಸುವುದರಿಂದ ಪ್ರಗತಿಪರರಾಗಿ ಕಾಣುತ್ತಾರೆ. ಕಮಲಳನ್ನು ಮರುಮದುವೆಗೆ ಒಪ್ಪಿಸುತ್ತಾರೆ. ವೈಚಾರಿಕ ಮನಸ್ಸಿನ ಸದಾನಂದನಿಗೆ 'ಮರುಮದುವೆ' ಸಮಸ್ಯೆಯೆ ಅಲ್ಲವಾದ್ದರಿಂದ ಕಮಲಳನ್ನು ಮದುವೆಯಾಗಲು ಒಪ್ಪುತ್ತಾನೆ.

> *"ಈ ಕಾದಂಬರಿಯಲ್ಲಿ ಸದಾನಂದನೆ ಬುದ್ಧಿಪೂರ್ವಕವಾಗಿ ಕ್ರಾಂತಿಯ ವಾತಾವರಣವನ್ನು ನಿರ್ಮಿಸುತ್ತಾನೆ. ಸ್ಮಾರ್ತತಂದೆ, ಹವ್ಯಕತಾಯಿ ಪಿತ್ರಾರ್ಜಿತ ಸಂಪತ್ತು ಮೆರುಗಿನ ರೂಪ ಆರೋಗ್ಯಗಳಿದ್ದರೂ ಕಳೆದ ಹೆಂಡತಿಯ ಸ್ಮರಣೆ ನಿಷ್ಪನಾದ ವಿಧುರ, ಮೂವತ್ತೆರಡನೆಯ ವಯಸ್ಸಿಗೆ ಅನುಭವ ಜನ್ಯ ತತ್ವಜ್ಞಾನ ಮಾತಿಲ್ಲದ ಸಮಾಜಸೇವೆ ಜನಪ್ರಿಯ ಕಾದಂಬರಿಕಾರ, ಪ್ರಾಮಾಣಿಕತೆ ಮತ್ತು*

*ಧೈರ್ಯ ಸ್ವರೂಪದ ಆದರ್ಶಪ್ರಾಯ ಬರಲಿಕ್ಕುಂಟೋ ಎಂದು ಸಹಜಶೈಲಿಯಿಂದ ಜೀವಂತವಾಗಿದ್ದಾನೆ*[೧]

ಈ ಕಾದಂಬರಿ ಸದಾನಂದನ ಪಾತ್ರವನ್ನು ವಿಧವಾ ವಿವಾಹದ ಸಮಸ್ಯೆಯ ಪರಿಹಾರಕ್ಕಾಗಿಯೇ ಸೃಷ್ಟಿಸಿದಂತೆ ನಿರೂಪಿತವಾಗಿದೆ. ಇಲ್ಲಿ ಬಾಲವಿಧವೆ ಕಮಲಳ ಅಂತರಂಗದ ತಾಕಲಾಟಗಳ ಸ್ಪಷ್ಟ ಚಿತ್ರಣವೂ ಮೂಡಿದೆ. ಲೇಖಕಿ ಬಾಲವಿಧವೆ ಕಮಲಳ ಅಂತರಂಗವನ್ನು ಬಿಂಬಿಸುತ್ತಾರೆ. ಕಮಲಳ ಮದುವೆಗೆ ರಾಜು ರಾಮಣ್ಣನವರನ್ನು ಒಪ್ಪಿಸುವ ಸಂದರ್ಭದಲ್ಲಿ ಮೂಡಿದ ದ್ವಂದ್ವವನ್ನು ಹೇಳುತ್ತಾರೆ. "ಅಕ್ಕನಿಗೊಂದು ಮದುವೆ ಮಾಡ್ಬೇಕಪ್ಪ !" ಎಂದಾಗ ರಾಮಣ್ಣನವರು ವಿಚಲಿತರಾದಾಗ ರಾಜು ಹೀಗೆ ಹೇಳುತ್ತಾನೆ.

*"ಇದಕ್ಕೆ ನಾನಿನ್ಹೇಳ್ತಪ್ಪ ಬರೀ ಉಂಡು ತಿಂದು ನಿದ್ದೆಮಾಡೋದೇ ಒಂದು ಜೀವನಾಂತ ಅಂದ್ರೆ ಒಂದು ಕಾಡು ಮರಕ್ಕೂ ನಮಗೂ ಏನೂ ವ್ಯತ್ಯಾಸಾನೇಯಿಲ್ಲವ ನಾವೆಲ್ಲ ಮದ್ವೆಮಾಡ್ಕಂಡು ಲೋಲಾಪ್ತಿಪಡೋದು. ಅವಳೊಬ್ಳು ಸಂನ್ಯಾಸಿ ಹಾಗಿರೋದಂದ್ರೆ ನಂಗಂತೂ ತುಂಬಾ ಬೇಜಾರಪ್ಪ. ಗಂಡಸರಿಗಾದ್ರೆ ಇಷ್ಟುಹೊತ್ತಿಗೆ ಮೂರುಮದ್ವೆ ಆಗಿರ್‍ತಿತ್ತು"*[೨]

ರಾಜು ತನ್ನ ನಿರ್ಧಾರವನ್ನು ಸಮರ್ಥವಾಗಿ ಮುಂದಿಡುತ್ತಾನೆ. ಲೇಖಕಿ ವಿಧವೆಯರನ್ನು ಕುರಿತ ಅನಾದರವನ್ನು ಸಾಮಾಜಿಕ ಹಿನ್ನೆಲೆಯಲ್ಲಿ ಚರ್ಚಿಸುತ್ತಾರೆ. ಮಹಿಳೆಯನ್ನು ಕುರಿತು ಸಮಾಜದ ಪಕ್ಷಪಾತ ಧೋರಣೆಯನ್ನು ಪ್ರಶ್ನಿಸಿದ್ದಾರೆ. ಆದರೆ ರಾಮಣ್ಣನವರು ಹಳೆಯ ಮತ್ತು ಹೊಸ ಮೌಲ್ಯಗಳ ಸಂಘರ್ಷದಲ್ಲಿ ಸಿಲುಕುತ್ತಾರೆ. ಸದಾನಂದ ನಂತಹ ವಿದ್ಯಾವಂತ ಸಹೃದಯಿ ಪಾತ್ರ ಚಿತ್ರಣದಿಂದ ಕಾದಂಬರಿಯಲ್ಲಿ ಬರುವ ವಿಧವಾ ಸಮಸ್ಯೆಗೆ ಸರಳ ಮಾರ್ಗವನ್ನು ಸೂಚಿಸುವ ಲೇಖಕಿ ಎಲ್ಲಾ ಪಾತ್ರಗಳಲ್ಲೂ ಜೀವನ ಶ್ರದ್ಧೆಯನ್ನು ಮನಗಾಣಿಸಿದ್ದಾರೆ. ಇದರಿಂದಲೇ ಬದುಕು ಸುಗಮವಾಗುವುದನ್ನು ನಿರಾಕರಿಸುವಂತಿಲ್ಲ.

ಸದಾನಂದ ಕಾದಂಬರಿಯ ಮುಂದುವರಿದ ಭಾಗವಾಗಿ 'ಮಧುವನ'ವನ್ನು ಅವಲೋಕಿಸಬಹುದು. ಸದಾನಂದ ವಿಶಾಲ ಹೃದಯದ ವ್ಯಕ್ತಿ. ಅವನು ಕಮಲೆಯನ್ನು ಮರುಮದುವೆಯಾಗಿ ಸಮಾಜವನ್ನೆದುರಿಸುವುದು ಕಾದಂಬರಿಯಲ್ಲಿ ವಿಶೇಷವಾಗಿದೆ. ಸಂಪ್ರದಾಯದ ಧೂಳನ್ನು ಕೊಡವಿಕೊಂಡು ಕುಟುಂಬದ ಸದಸ್ಯರೆಲ್ಲರೂ ಮಾನವೀಯತೆಯಿಂದ ವಿಧವೆಯ ಬಾಳನ್ನು ಪರಿಪೂರ್ಣಗೊಳಿಸುವುದನ್ನು ಎರಡೂ ಕಾದಂಬರಿಗಳು ತೆರೆದಿಡುತ್ತವೆ.

'ಮಧುವನ' ಕಾದಂಬರಿ ಸದಾನಂದ ಮತ್ತು ಕಮಲಳ ಮಧುರ ದಾಂಪತ್ಯದಿಂದ ಪ್ರಾರಂಭವಾಗಿ ಪುಟ್ಟ ಮಗು 'ಮಧುರ'ಳು ಜನಿಸುತ್ತಾಳೆ.

---

೧. ಉದ್ಧೃತ : ಎಂ.ಕೆ.ಇಂದಿರಾ ಸಮಗ್ರ ಅಧ್ಯಯನ – ಮಂದಾಕಿನಿ ಪುರೋಹಿತ ೧೯೯೧ – ಪು. ೨೨೦

೨. ಸದಾನಂದ – ಎಂ.ಕೆ. ಇಂದಿರಾ – ಮನೋಹರ ಗ್ರಂಥಮಾಲೆ– ಧಾರವಾಡ – ೧೯೬೫ – ಪು ೨೪೪–೨೪೫

ಕಾದಂಬರಿಯ ನಾಯಕ ಸದಾನಂದನನ್ನು ಧೀರೋದಾತ್ತ ನಾಯಕನನ್ನಾಗಿ ಚಿತ್ರಿಸುತ್ತಾರೆ. ಅವರ ಅಗಾಧ ಪತ್ನಿಪ್ರೇಮ, ಕಲಾವಿಧ, ಮಾತೃಪ್ರೇಮ, ಸಂಗೀತಗಾರ, ಕಾದಂಬರಿಕಾರ, ಬಡವರ ಬಂಧು ಇತ್ಯಾದಿ ಆದರ್ಶ ಗುಣಗಳನ್ನು ಪರಿಚಯಿಸುತ್ತಾರೆ. ಸದಾನಂದನೇ ಕಮಲಳನ್ನು ಮದುವೆಯಾದ ಉದ್ದೇಶವನ್ನು ತಿಳಿಸುವಂತೆ

> *"ಆಳವಾದ ಮಡುವಿನಲ್ಲಿ ಮುಳುಗಿ ಪಾಚಿಕಟ್ಟಿ ಹೋಗಿದ್ದ ಒಂದು ಅಡ್ಡಾದಿಡ್ಡಿಯಾಗಿದ್ದ ಅಮೃತಶಿಲೆಯನ್ನು ಮೇಲೆ ತಂದು ಅದನ್ನು ಶುಭ್ರಗೊಳಿಸಿ ಒಂದು ಸುಂದರ ರಮಣೀಯ ದೇವಿಯ ವಿಗ್ರಹವನ್ನು ಮಾಡುವ ಸಂಕಲ್ಪ"*[೧]

ಎಂದು ಹೇಳುವುದರೊಂದಿಗೆ ತನ್ನ ಉದಾತ್ತ ಭಾವನೆಗಳನ್ನು ಹೊರಹಾಕುತ್ತಾನೆ. ಮುಂದುವರಿದು ತನ್ನ ತಾಯಿ ಜಲಜಾಕ್ಷಮ್ಮನವರೊಂದಿಗೆ ಹೀಗೆ ಹೇಳುತ್ತಾನೆ. ಹದಿನೈದು ವರ್ಷಗಳಿಂದ ಕತ್ತಲೆ ಕೋಣೆ ಉಪ್ಪಿನಕಾಯಿ ಮಾಡಿಟ್ಟಿದ್ದರು. ಅವಳನ್ನು ನಾನು ಮದುವೆಯಾದದ್ದು ನನಗೆ ಹೆಂಡತಿ ಬೇಕು, ಮತ್ತು ನಿನಗೆ ಮೊಮ್ಮಕ್ಕಳನ್ನು ಹೆತ್ತು ಕೊಡಲೆಂದು ಅಲ್ಲ. 'ಒಂದು ಒಳ್ಳೆಯ ಜೀವ ಕೊಳೆತು ಹೋಗ್ತದಲ್ಲ' ಅಂತ ಎಂದು ತನ್ನ 'ಮರುವಿವಾಹ'ವನ್ನು ವಿಶ್ಲೇಷಿಸುತ್ತಾನೆ. ಈ ಕಾದಂಬರಿಯ ಸದಾನಂದನ 'ವಿಧವಾವಿವಾಹ' ಅಸಹಜ ಎನಿಸಿದರೂ ಆ ಕಾಲಕ್ಕೆ ಪುರುಷ ಸಮಾಜದ ಧೋರಣೆ ವಿಧವೆಯರನ್ನು ನೋಡುವಾಗ ಬದಲಾಗಬೇಕು ಎಂಬುದೇ ಲೇಖಕಿಯ ಇಂಗಿತವಾಗಿತ್ತು ಎಂದು ಕಾದಂಬರಿಗಳು ಸ್ಪಷ್ಟಪಡಿಸುತ್ತವೆ. 'ದೂರದ ಬೆಟ್ಟ' ಕಾದಂಬರಿಯಲ್ಲಿ ಸುನಂದೆಯ ಮರುಮದುವೆಗೆ ಕುಟುಂಬದ ಮತ್ತು ಹೊರಗಿನವರ ಪ್ರೋತ್ಸಾಹವಿದ್ದರೂ ಅವಳ ಅಂತರಂಗವೇ ತಡೆಯೊಡ್ಡುತ್ತದೆ. ಆದರೆ 'ಸದಾನಂದ' ಕಾದಂಬರಿಯ ಕಮಲೆಯ ಆಯ್ಕೆ ಮತ್ತು ನಿರ್ಧಾರಗಳು ಗೌಣವಾಗಿದೆ. ಬಹುಶಃ ಸದಾನಂದನ ಮರುಮದುವೆಯ 'ಚಿಂತನೆ' ಸಮಸ್ಯೆಗಳಿಗೆ ಪರಿಹಾರವಾಗಿದೆ, ಎಂದು ಭಾವಿಸಬಹುದು. ಆಕಾಲದ 'ತ್ರಿವೇಣಿ' – 'ಇಂದಿರಾ' ಇವರ ಕೃತಿಗಳು ಸಂಕ್ರಮಣಕಾಲದ ನಮ್ಮ ಸಮಾಜದ ಒಂದು ಅಗತ್ಯವನ್ನು ಪೂರೈಸುವ ದಿಕ್ಕಿನಲ್ಲಿ ದುಡಿದಿವೆ. ಕಾಲಬದಲಾದಂತೆ ಸಮಾಜ ಬದಲಾಗುವುದನ್ನು, ಸಂಪ್ರದಾಯದ ಕುರುಡು ನಂಬಿಕೆಗಳು ಮಾಯವಾಗಿ ವೈಚಾರಿಕತೆ ನೆಲೆಗೊಳ್ಳುವುದನ್ನು ಎಂ.ಕೆ.ಇಂದಿರಾರವರ ಕಾದಂಬರಿಗಳು ಬಿಂಬಿಸುತ್ತವೆ.

೧೯೭೬ರಲ್ಲಿ ಪ್ರಕಟಗೊಂಡ 'ಫಣಿಯಮ್ಮ' ಇಂದಿರಾರವರ ಮಹತ್ವದ ಕಾದಂಬರಿಯಾಗಿದೆ. ಫಣಿಯಮ್ಮನವರು ಇಂದಿರಾರವರ ಅಜ್ಜನ ತಂಗಿ. ಸುಮಾರು ನೂರೈವತ್ತು ವರ್ಷಗಳ ಹಿಂದಿನ ಸಾಮಾಜಿಕ ಜೀವನವನ್ನು ದಟ್ಟವಾಗಿ ಚಿತ್ರಿಸುತ್ತದೆ. ಒಂಭತ್ತು ವರ್ಷಕ್ಕೆ ವಿಧವೆಯಾದ ಫಣಿಯಮ್ಮ ನೂರಹನ್ನೆರಡು ವರ್ಷಗಳ ಅಜ್ಞಾನ ಅಂಧಕಾರ ತುಂಬಿದ ಸಮಾಜವನ್ನು ಸಹಿಸಿಕೊಳ್ಳುತ್ತ ವಿರೋಧಿಸುತ್ತ ತಪಸ್ವಿ

---

೧. **ಮಧುವನ – ಎಂ.ಕೆ. ಇಂದಿರಾ – ಹೇಮಂತ ಸಾಹಿತ್ಯ – ಬೆಂಗಳೂರು – ೧೯೭೬ – ಪು. ೩೨**

ಜೀವನವನ್ನು ಕಳೆಯುತ್ತಾಳೆ. ಕಾದಂಬರಿಯಲ್ಲಿ ಬರುವ ಕೆಲವು ಸನ್ನಿವೇಶಗಳು ಪೂರ್ಣ ಸ್ವಕಪೋಲ ಕಲ್ಪಿತವಲ್ಲ ಎಂದು ಇಂದಿರಾವರೆ (ನನ್ನಿಂಗಿತದಲ್ಲಿ) ಹೇಳಿಕೊಳ್ಳುತ್ತಾರೆ.

ಅಂದಿನ ಸಂಪ್ರದಾಯದಂತೆ ಫಣಿಯಮ್ಮನ ಮದುವೆ ಒಂಬತ್ತನೆ ವಯಸ್ಸಿಗೆ ಮೇಳಿಗೆ ನೀಲಕಂಠ ಭಟ್ಟರ ಹದಿನೈದುವರ್ಷದ ನಂಜುಂಡನೊಡನೆ ನಡೆಯುತ್ತದೆ. ತೀರ್ಥಹಳ್ಳಿ ಎಳ್ಳಮವಾಸ್ಯೆಯ ಜಾತ್ರೆಯಂದು ಫಣಿಯಮ್ಮನ ಜಡೆಬಂಗಾರದ ಸಮೇತ ಕತ್ತರಿಸಿ ಕಳ್ಳನ ಪಾಲಾಗುತ್ತದೆ. ಈ ಘಟನೆ ನಡೆದ ಎರಡು ತಿಂಗಳಿಗೇ ಪತಿ ನಂಜುಂಡ ಹಾವು ಕಡಿದು ಸಾಯುತ್ತಾನೆ. ನಂತರದ ದಿನಗಳಲ್ಲಿ ಮಡಿ, ವ್ರತಾಚರಣೆಯೊಂದಿಗೆ ಪರೋಪಕಾರಿಯಾಗಿ ಬಾಳುತ್ತಾಳೆ. ಸಮಾಜದ ಕುರುಡು ಸಂಪ್ರದಾಯಗಳು ಬಾಲವಿಧವೆಯರನ್ನು ನಡೆಸಿಕೊಂಡ ಕ್ರಮಗಳು ಕಾದಂಬರಿಯಲ್ಲಿ ಅನಾವರಣಗೊಂಡಿದೆ. ಪ್ರಾರಂಭದಲ್ಲಿ ಬ್ರಾಹ್ಮಣ ಸಮುದಾಯದ ವಿಧವಾ ಮಹಿಳೆಯರನ್ನು ಮಠ-ಮಾನ್ಯಗಳು ನಡೆಸಿಕೊಳ್ಳುತ್ತಿದ್ದುದನ್ನು ನಿರ್ದಾಕ್ಷಿಣ್ಯವಾಗಿ ಟೀಕಿಸುತ್ತಾರೆ.

> *"ಆಗಿನ ಕಾಲದಲ್ಲಿ ಬಲವಾಗಿ ಬೇರೂರಿದ್ದಂದರೆ ವಿಪರೀತ ಮಡಿವಂತಿಕೆ ಅದರ ಜೊತೆಗೆ ಸಂಪ್ರದಾಯಶಾಸ್ತ್ರ ಮತ್ತು ಹೆಚ್ಚಿನದೆಂದರೆ ಕೂಪ ಮಂಡೂಕತ್ವ ಆಗ ಶ್ರೀ ಶ್ರೀ ಶ್ರೀ ನರಸಿಂಹ ಭಾರತಿ ಸ್ವಾಮಿಗಳು ಪಟ್ಟಕ್ಕೆ ಬಂದಕಾಲ ಮಾತು ಎತ್ತಿದರೆ ಬಹಿಷ್ಕಾರ : ಯಾವಳಾದರು ಬಾಲವಿಧವೆ ಬಸಿರಾದಳೆಂದರೆ ಮುಗಿಯಿತು. ಆಕೆಯನ್ನು ಬಸಿರು ಮಾಡಿದವರೆ ಶೃಂಗೇರಿಗೆ ಹೋಗಿ ಆಕೆಯ ಬಗ್ಗೆ ಸ್ವಾಮಿಗಳಲ್ಲಿ ದೂರು ಹೇಳಿ ಆಕೆಯನ್ನು ಜಾತಿಯಿಂದ ಹೊರಗೆ ಹಾಕಿಸಿ ಬರುತ್ತಿದ್ದರು. ಸ್ವಾಮಿಗಳಾದರೂ ಹೇಳಿಕೇಳಿ ಸನ್ಯಾಸಿ ಸದಾ ಈ ವ್ಯಭಿಚಾರದ ಪುರಾಣ ಕೇಳುವುದು ತಮ್ಮ ಬ್ರಹ್ಮಚರ್ಯಕ್ಕೆ ಕುಂದು ಎಂದು ತಿಳಿದವರು. ಅವರು ಕೇಳಿ ಕೈಸನ್ನೆಯಿಂದಲೇ ಅದನ್ನು ಮಠದ ಧರ್ಮಾಧಿಕಾರಿಗಳಿಗೆ ವಹಿಸಿಬಿಡುತ್ತಿದ್ದರು. ಕೇಳಬೇಕೆ ತೋಳನಿಗೆ ಕುರಿಕಾಯಲು ಬಿಟ್ಟಂತೆ*[೧]

ಹೀಗೆ ಲೇಖಕಿ ಧರ್ಮಶಾಸ್ತ್ರ, ಕುರುಡು ಸಂಪ್ರದಾಯವನ್ನು ನಂಬಿದ್ದ ಮಠಮಾನ್ಯಗಳ ಧೋರಣೆ ಸಮಾಜ ವಿರೋಧಿಯಾದದ್ದು ಎಂದು ಬಿಂಬಿಸುತ್ತಾರೆ. ಫಣಿಯಮ್ಮ ಆ ಕಾಲದ ಕ್ರೂರ ಸಂಪ್ರದಾಯಗಳಿಗೆ ಬಲಿಯಾಗುವ ಸನ್ನಿವೇಶ ಅತ್ಯಂತ ದಾರುಣವಾಗಿ ಕಾದಂಬರಿ ತೆರೆದಿಡುತ್ತದೆ.

### ೧೨. ಮರುವಿವಾಹ – ಕ್ರಾಂತಿಕಾರಿ ನೆಲೆಯಲ್ಲಿ

ನಾಲ್ಕು ವರ್ಷಗಳನ್ನು ಕತ್ತಲೆ ಕೋಣೆಯಲ್ಲಿ ಕಳೆದ ಫಣಿಯಮ್ಮ ಮೈನೆರೆದ ನಾಲ್ಕನೆಯ ದಿನವೇ ಮನೆಯ ಹೆಂಗಸರೆಲ್ಲ ಬೆಳಗಿನ ಜಾವಕ್ಕೆ ನಾಪಿತನನ್ನು ಹಲಸಿನ

---

೧. ಫಣಿಯಮ್ಮ – ಎಂ.ಕೆ.ಇಂದಿರಾ – ಇಂದಿರಾ ಪ್ರಕಾಶನ ಬೆಂಗಳೂರು – ೧೯೬೫–೨೦೦೪ – ಪು. ೬

ಮರದ ಕೆಳಗೆ ಕೂರಿಸಿ ಸ್ವಲ್ಪ ಉದ್ದವಾಗಿ ಬೆಳೆದಿದ್ದ ಫಣಿಯಮ್ಮನ ಕೂದಲನ್ನು ದಯೆ ದಾಕ್ಷಿಣ್ಯವಿಲ್ಲದೆ ಕರಕರನೆ ಕತ್ತರಿಸಿ ನುಣ್ಣಗೆ ಬೋಳಿಸಿದರು. ಫಣಿಯಮ್ಮ ಕುರಿಯಂತೆ ತಲೆ ಬಗ್ಗಿಸಿ ಕುಳಿತು ಅಳುತ್ತಿದ್ದಳು. ಫಣಿಯಮ್ಮ ಬಾಹ್ಯರೂಪವನ್ನು ಕಳೆದುಕೊಂಡು ಅಂದಿನ ವಿಧವಾ ಮೌಲ್ಯಗಳಿಗೆ ಹೊಂದಿಕೊಳ್ಳಲು ತಯಾರಾದಳು. ಕಾದಂಬರಿಯ ಮುಂದಿನ ಭಾಗದಲ್ಲಿ ಗುಡ್ಡೇಪಾಲು ಸೀತಾರಾಮನ ಮಗಳು ದಾಕ್ಷಾಯಿಣಿ ವಿಧವೆಯಾದಾಗ ಮರುಕಳಿಸುತ್ತದೆ. ದಾಕ್ಷಾಯಿಣಿಯ ಗಂಡ ಸಾಯುವಾಗ ಅವಳಿಗೆ ಹದಿನಾರು ವರ್ಷ. ಫಣಿಯಮ್ಮ ವಿಧವೆಯಾದಾಗ ಅನುಸರಿಸಿದ ವಿಧವಾ ತತ್ವಗಳನ್ನೇ ಪಾಲಿಸಬೇಕಾದ ಸ್ಥಿತಿ ದಾಕ್ಷಾಯಿಣಿಗೂ ಬರುತ್ತದೆ. ಅವಳು ವಿಧವೆಯಾದ ಹತ್ತನೆಯ ದಿನ ಊರ ಹಿರಿಯರು ಮನೆಯ ಮುದುಕ ಮುದುಕಿಯರೆಲ್ಲ ಮಡಿಹಿಡಿಸಬೇಕೆಂದು ಹಠ ಹಿಡಿಯುವುದು ಆ ಕಾಲದ ಸಾಂಪ್ರದಾಯಿಕ ಸಮಾಜದ ಅನಿಷ್ಟ ಪದ್ಧತಿಗಳು ಜೀವಂತವಾಗಿದ್ದು ವಿಧವೆಯರಿಗೆ ಶಾಪವಾಗಿರುವುದರ ಸಂಕೇತವಾಗುತ್ತದೆ. ಆದರೆ, ಸಮಾಜದಲ್ಲಿ ಬೇರುಬಿಟ್ಟ ಸಾಂಪ್ರದಾಯಿಕ ಮೌಲ್ಯಗಳನ್ನು ವಿರೋಧಿಸಲಾಗದ ಫಣಿಯಮ್ಮ ದಾಕ್ಷಾಯಿಣಿಯ ಮೂಲಕ ವಿರೋಧಿಸುತ್ತಾರೆ. ಒಪ್ಪಿತಮೌಲ್ಯಗಳಿಗೆ ಶರಣಾದ ವಿಧವೆಯರಲ್ಲಿ ಅಂತಸ್ಥವಾಗಿದ್ದ ವಿರೋಧ ದಾಕ್ಷಾಯಿಣಿ ಪಾತ್ರದ ಮೂಲಕ ಸ್ಫೋಟವಾಗುವುದು ಕಾದಂಬರಿಯ ವಿಶೇಷ. ದಾಕ್ಷಾಯಿಣಿ ನಿರ್ದಾಕ್ಷಿಣ್ಯವಾಗಿ ಸಂಪ್ರದಾಯದ ಕಟ್ಟುಪಾಡುಗಳನ್ನು ಹೀಗೆ ವಿರೋಧಿಸುತ್ತಾಳೆ.

> *"ನಾನಂತೂ ಮಡಿ ಮಾಡಿಸ್ಕಳ್ಳೂದಿಲ್ಲ ಹಾಂಗೆ ಬಲವಂತ ಮಾಡಿ ಮಾಡಿದ್ರೂ ನಾನು ಅವರ ಮನೀಗೆ ಹೋಗೂದಿಲ್ಲ"*[1]

ಎಂದು ವಿರೋಧಿಸಿದರೂ ಅಲ್ಲಿಗೆ ಬಂದ ಭಟ್ಟಯ್ಯನವರು

> *"ಸೀತಾರಾಮ, ಎಂತದಯ್ಯ ನಿನ್ನ ಮಗಳ ಹಟ, ಇದೇ ಮನೆಗೆ ಪಿರಿಸೊಸೆ. ಪ್ರಾಯದ ಹುಡುಗಿ ಊರೋರ ಕಣ್ಣು ತಾಕೂಹಂಗದೆ. ಮಡಿಮಾಡ್ಸಿ ಒಂದ್ವರ್ಷನಾರ ಮನೆ ಒಳಗೆ ಮುಚ್ಚಿಟ್ರೆ ಮುಂದೆ ಹ್ಯಂಗಾರ ಸುಧಾರಿಸಬೋದು. ನಮ್ಮಜ್ಜಿ ಫಣಿಯಮ್ಮ ನೋಡಿ, ನಾನು ಹುಟ್ಟೋಕೆ ಮುಂಚೆನೇ ಅವರು ಹಿಂಗೆ ಆದಾರೆ. ಕೈ ಎತ್ತಿ ಮುಗೀಬೇಕು. ಒಂಬತ್ತು ವರ್ಷಕ್ಕೆ ಗಂಡನ್ನ ಕಳಕೊಂಡು ಹದಿಮೂರು ವರ್ಷಕ್ಕೆ ಮಡಿ ಹಿಡಿದು ಅಷ್ಟು ವರ್ಷದಿಂದ ಶಬರಿ ಹಂಗದಾರೆ"*[2]

ಎಂದು ಫಣಿಯಮ್ಮನನ್ನು ಸಮರ್ಥಿಸುತ್ತ, ಇದ್ದ ವ್ಯವಸ್ಥೆಯನ್ನೇ ವೈಭವೀಕರಿಸುವುದರ ಬಗ್ಗೆ ಭಟ್ಟಯ್ಯನ ಆಸಕ್ತಿ ಇದೆ. ಪುರೋಹಿತ ಶಾಹಿ ತರ್ಕವನ್ನು ಪ್ರತಿನಿಧಿಸುವ ಭಟ್ಟಯ್ಯ ವ್ಯವಸ್ಥೆಯಲ್ಲಿ ಅಂತಸ್ಥವಾಗಿದ್ದ ನಿಯಮಗಳು ಅವು ಎಷ್ಟೇ ಅವೈಚಾರಿಕವಾಗಿದ್ದರೂ ಎಲ್ಲಾ ಕಾಲಕ್ಕೂ ತನ್ನ ಬೇರುಗಳನ್ನು ಹರಡಿಕೊಂಡಿರುವುದಕ್ಕೆ ಸಂಕೇತವಾಗುತ್ತಾರೆ. ಫಣಿಯಮ್ಮ ಕಾಲಕ್ಕೆ ತಕ್ಕಂತೆ ಬದಲಾಗುವ ಮಾನವೀಯ ಮೌಲ್ಯಗಳಿಗೆ ತುಡಿಯುವ ಚೈತನ್ಯವಾಗಿ ಕಾಣುತ್ತಾಳೆ.

---

೧. **ಫಣಿಯಮ್ಮ** – ಎಂ.ಕೆ.ಇಂದಿರಾ – ಇಂದಿರಾ ಪ್ರಕಾಶನ ಬೆಂಗಳೂರು – ೨೦೦೪ – ಪು. ೮೭

೨. ಅದೇ ಪು – ಪು ೮೧

*"ಅಯ್ಯೋ ಭಟ್ಟಯ್ಯನೋರೆ, ನಮ್ಮ ಕಾಲದ ಮಾತ ಯಾತಕ್ಕೆ ಹೇಳ್ತೀರಿ ? ನಂಗಂತೂ ಗಂಡನ ಮಕ ನೋಡಿದ್ದೂ ನೆನಪಿಲ್ಲ. ನಾ ಹುಟ್ಟಿದ್ದೇ ಹಿಂಗೇನೇ ಅನ್ನಿಸಿಬಿಟ್ಟಿದೆ. ಆಗ್ಯೂ ಇಗ್ಯೂ ಕಾಲ ಯಾಪಾಟಿ ಬದಲಾಗ್ಯದೆ ಚಂದಾಗಿ ಉಂಡು ತಿಂದು ಮಾಡೋ ಹುಡುಗಿ ಇದು. ಈ ಪ್ರಾಯಕ್ಕೆ ಅದಕ್ಕೆ ಮಡಿ ಹಿಡಿಸಿದ್ರೆ ಅದರ ಕೈಲಿ ಆದೀತಾ ಅಂತಿನಿ"*[1]

ಫಣಿಯಮ್ಮ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿಯುವ ಮಾತನಾಡುವಾಗ ಅವಳು ಬದಲಾದ ಕಾಲಕ್ಕೆ ಬದಲಾಗುವ ಮೌಲ್ಯಗಳಿಗೆ ಒತ್ತು ನೀಡಬೇಕಾದ ಅಗತ್ಯವನ್ನು ಮನಗಾಣಿಸುತ್ತಾಳೆ. ಆದರೂ ದಾಕ್ಷಾಯಿಣಿ ಕತ್ತಲೆ ಕೋಣೆಯಲ್ಲಿ ಕೂರುವಂತಾಗುತ್ತದೆ. ಮಹಿಳೆಯನ್ನು ಪುರುಷ, ತನ್ನ ಅಧೀನದಲ್ಲಿಟ್ಟುಕೊಳ್ಳಲು ಶ್ರಮಿಸುವುದಕ್ಕೆ ಫಣಿಯಮ್ಮ ದಾಕ್ಷಾಯಿಣಿ ನಿದರ್ಶನವಾಗುತ್ತಾರೆ. ಆದರೆ ಕತ್ತಲೆ ಕೋಣೆಯಲ್ಲಿ ನಿಂತು 'ಅಬ್ಬರ' ಹಾಕಿ ವಿಧಿಯಿಲ್ಲದೆ ವ್ಯವಸ್ಥೆಗೆ ತಲೆಕೊಟ್ಟುದರ ಅರ್ಥವಾದುದು ಎರಡು ವರ್ಷಗಳ ನಂತರ ತನ್ನ ಮೈದುನನಿಂದಲೇ ಬಸಿರಾದಾಗ ತೌರಿಗೆ ಅಟ್ಟುವ ಪ್ರಯತ್ನದಲ್ಲಿದ್ದಾಗ ದಾಕ್ಷಾಯಿಣಿ ತನ್ನ ಅತ್ತೆಗೆ ತಿರುಗಿ ಬೀಳುತ್ತಾಳೆ.

*"ನಿಮ್ಮ ಮಗನೇ ಬಸಿರು ತುಂಬಿದವನು. ನಾ ಯಾಕೆ ತೌರಿಗೆ ಹೋಗ್ಲಿ. ನೀವೇ ಬಾಣಂತನ ಮಾಡಿ. ಆ ಮಗನ ಬದ್ಲಿಗೆ ಈ ಮಗ ಇಷ್ಟೇ ಸೈಯಲ್ಲ"*[2]

ಎಂದು ಅದುವರೆಗಿನ ಬಲತ್ಕಾರಗಳಿಂದ ಹೊರಬಂದು ವಿರೋಧಿಸುತ್ತಾಳೆ. ಬ್ರಾಹ್ಮಣ ಸಮುದಾಯದವರು ಜಾತಿಭ್ರಷ್ಟಳನ್ನಾಗಿ ಮಾಡುವ ವಿಚಾರಕ್ಕೆ ಎದುರಾಗಿ ನಿಲ್ಲುತ್ತಾಳೆ. ಒಂದು ವೇಳೆ ಜಾತಿಯಿಂದ ಬಹಿಷ್ಕಾರ ಹಾಕಿದರೆ ಎಲ್ಲರನ್ನು ಮನೆಯಿಂದ ಹೊರಹಾಕಿ ನಾನೊಬ್ಬೆ ಇರುತ್ತೇನೆ. ಇನ್ನೂ ಹಿಂಸಿಸಿದರೆ ಹೊಲೆಯರನ್ನೇ ಮನೆಯೊಳಗೆ ಸೇರಿಸುತ್ತೇನೆ ಎಂದು ಇಡೀ ವ್ಯವಸ್ಥೆಯನ್ನೇ ಪ್ರತಿಭಟಿಸಿ ನಿಲ್ಲುವ ನಿರ್ಧಾರ ಮಾಡುತ್ತಾಳೆ. ದಾಕ್ಷಾಯಿಣಿ ಬಂಡಾಯ ಪ್ರವೃತ್ತಿಯ ಸಂಕೇತವಾಗುತ್ತಾಳೆ. ಮಹಿಳಾ ಸಮುದಾಯದ 'ಧ್ವನಿ'ಯಾಗುತ್ತಾಳೆ. ಈ ವಿಚಾರಕ್ಕೆ ಪ್ರತಿಕ್ರಿಯಿಸಿದ ಖಂಡಿತವಾದಿಗಳಾಗಿದ್ದ ಕಿಟ್ಟಪ್ಪನವರು ಕಾಲಕ್ಕೆ ತಕ್ಕಹಾಗೆ ಬದಲಾಗುವ ಸಾಮಾಜಿಕ ಮೌಲ್ಯಗಳ ಬದಲಾಗಬೇಕಾದ ಅಗತ್ಯವನ್ನು ಒತ್ತಿ ಹೇಳುತ್ತಾರೆ. ಇದು ಕಾದಂಬರಿಯಲ್ಲಿ ಬಹಳ ಮುಖ್ಯ ವಿಷಯವಾಗಿ ತೆರೆದುಕೊಂಡಿದೆ.

ಫಣಿಯಮ್ಮನ ತುಂಬು ಯೌವನದಲ್ಲಿ ಲೈಂಗಿಕ ಆಸಕ್ತಿಯನ್ನು ನಿರಾಕರಿಸಲು ಅವಳಲ್ಲಿದ್ದ 'ವಿವಾಹ' ಮತ್ತು ಅದರಿಂದ ಮಾತ್ರ ಸಾಧ್ಯವಾಗುವ 'ಲೈಂಗಿಕ ಅನುಭವ' ಎನ್ನುವ ಎಚ್ಚರವಾಗಿರಬಹುದು. ಅವಳ ತುಂಬು ತಾರುಣ್ಯದ ಇಪ್ಪತ್ತ ಮೂರನೆಯ ವಯಸ್ಸಿನಲ್ಲಿ ತುಂಗೆ ದನ ಗಬ್ಬಾಗದೇ ಇರುವುದಕ್ಕೆ ನಂಜೇಗೌಡನ ಹೋರಿ ಕೂಡಿಸಬೇಕೆಂದು ಮಾತಾಡಿಕೊಳ್ಳುತ್ತಿದ್ದುದು ಕೇಳಿದರೂ ಗಮನ ಹರಿಸುವುದಿಲ್ಲ.

---

೧. ಫಣಿಯಮ್ಮ – ಎಂ.ಕೆ.ಇಂದಿರಾ – ಇಂದಿರಾ ಪ್ರಕಾಶನ ಬೆಂಗಳೂರು – ೨೦೦೪ – ಪು. ೮೧
೨. ಅದೇ ಪು – ಪು ೮೫

ಹಾಗೂ ಅವಳ ನಲವತ್ತನೆಯ ವಯಸ್ಸಿನಲ್ಲಿ ನಟ್ಟ-ನಡುರಾತ್ರಿ ಗಂಡು-ಹೆಣ್ಣು ಜೋಡಿ ಕೂಡಿದ್ದನ್ನು ಕಂಡೂ ಕಾಣದಂತಿರುತ್ತಾಳೆ. ಅವಳ ಇಡೀ ಆಯುಷ್ಯದಲ್ಲಿ ಲೈಂಗಿಕ ಆಸಕ್ತಿ ಮೂಡದಿರುವುದು ಹಾಗೂ ಅವಳು ನಿರ್ಲಿಪ್ತವಾಗಿ ನೋಡುವ ಪೂರ್ಣಜೀವನ ಪವಿತ್ರ ಆತ್ಮದ ಸಂಕೇತವಾಗಿ ಕಾಣುತ್ತಾಳೆ. ದಾಕ್ಷಾಯಿಣಿ ಬಸಿರಾದಾಗ ಸಂಭವಿಸುವ ಸಾಮಾಜಿಕ ವಿಪ್ಲವಕ್ಕೆ ಫಣಿಯಮ್ಮ ತೋರುವ ಪ್ರತಿಕ್ರಿಯೆ ಅತ್ಯಂತ ಮಹತ್ವದ್ದಾಗಿದೆ.

ಹಸಲರ ಬೈರನ ಮಗಳು ಸಿಂಕಿ ಹಾಗೂ ತಿಪ್ಪಾ ಜೋಯಿಸರ ಸೊಸೆ 'ಪುಟ್ಟಿ' ಇವರ ಹೆರಿಗೆಯ ಸಂದರ್ಭದಲ್ಲಿ ಫಣಿಯಮ್ಮನ ಮಾನವೀಯ ಅಂತಃಕರಣ ಮನನೀಯವಾದುದು. ಹದಿನೈದು ವರ್ಷದ ಸಿಂಕಿ ಹೆರಿಗೆಯ ನೋವಿನಿಂದ ನರಳುತ್ತಿದ್ದಾಗ ನಡುರಾತ್ರಿಯಲ್ಲಿ ಮನೆಯವರ ಆಕ್ಷೇಪಗಳಿಗೆ ಕಿವಿಕೊಡದೆ ಬೈರನ ಹಿಂದೆ ಹೋಗುವ ಫಣಿಯಮ್ಮ ಮಾನವೀಯತೆಗೆ ಸಾಕ್ಷಿಯಾಗುತ್ತಾಳೆ. ಕೆಳಜಾತಿಯವರ ಮನೆಗೆ ಹೋಗುವುದು ಸಂಪ್ರದಾಯ ವಿರೋಧವಾಗಿದ್ದರಿಂದ ಬ್ರಾಹ್ಮಣ ಜಾತಿಯವರ ನಿಂದೆಗೆ ಒಳಗಾಗಬೇಕಾಗುತ್ತದೆ. ಈ ವಿಷಯಕ್ಕೆ ಕೇಶವಶರ್ಮರವರು ಹೀಗೆ ಪ್ರತಿಕ್ರಿಯಿಸುತ್ತಾರೆ.

> *"ಈ ಫಣಿಯಮ್ಮನನ್ನು ನೋಡಿದರೆ ಸಾಂಪ್ರದಾಯಿಕ ಸಮಾಜದ ಆದರ್ಶಸ್ತ್ರೀ ಎಂದು ಅನಿಸುವುದಿಲ್ಲ. ಸಾಂಪ್ರಾದಾಯಿಕ ಸಮಾಜದಲ್ಲಿ ಮೇಲ್ಜಾತಿಯ ಹೆಣ್ಣು ಮಕ್ಕಳು ಹೆರಿಗೆ ಮಾಡಿಸಲು ಹೋಗುವುದಿಲ್ಲ. ಹಾಗೆಯೇ ಕೆಳಜಾತಿಯವರನ್ನು ಮುಟ್ಟುವುದಿಲ್ಲ ಕೆಳಜಾತಿಯವರ ಮನೆಗೆ ಹೋಗಿ ಹೆರಿಗೆ ಮಾಡಿಸುವುದಂತೂ ಕಲ್ಪನೆಗೆ ಎಟುಕದ ಸಂಗತಿ. ಬ್ರಾಹ್ಮಣ ಜಾತಿಯ ಚೌಕಟ್ಟನ್ನು ಮೀರುವುದೇ ಕಷ್ಟ. ಯಾಕೆಂದರೆ ಸ್ಥಾನ ಕಳೆದುಕೊಳ್ಳುವ ಭಯವಿರುತ್ತದೆ. ಶ್ರೇಣೀಕೃತವಾದ ಜಾತಿವ್ಯವಸ್ಥೆಯಲ್ಲಿ ಬ್ರಾಹ್ಮಣ ಜಾತಿಗೆ ಭ್ರಷ್ಟಗೊಳ್ಳುವ ಭಯ ಇರುತ್ತದೆ. ಎಂ.ಕೆ. ಇಂದಿರಾರವರು ಹೇಳುವ ಫಣಿಯಮ್ಮನ ಚಿತ್ರಣವನ್ನು ಸುಳ್ಳೆಂದು ಸಾಬೀತು ಪಡಿಸಲು ಸಾಧ್ಯವಿಲ್ಲ. ಅದಕ್ಕೊಂದು ಉದ್ದೇಶವಿದೆ. ಪ್ರತಿಭಟನೆಯ ಅಂತರ್ಗತವಾದ ಮನೋಭಾವವಿದೆ."*[೧]

ಫಣಿಯಮ್ಮ ಸಾಂಪ್ರದಾಯಿಕ ಸಮಾಜದಲ್ಲಿ ವಿಧವಾಮೌಲ್ಯಗಳ ಪರಿಪಾಲನೆಯಿಂದ ಸಾಕಷ್ಟುನೊಂದಿದ್ದು ಬಂಡಾಯವನ್ನು ಆಂತರ್ಯದಲ್ಲಿ ಬಚ್ಚಿಟ್ಟುಕೊಂಡಿದ್ದಾಳೆ. ಪರಾವಲಂಬಿತನ ಆಕಾಲದ ವಿಧವೆಯರ ಬಾಳಿನ ತೊಡಕಾಗಿತ್ತು. ಗಾಣದೆತ್ತಿನಂತೆ ದುಡಿಯುವ ವಿಧವೆ ಪರಾಧೀನೆ. ಪುರಾಣದ ಕಥೆಯನ್ನು ನೇಯುವ ಪುರುಷ ಸಮಾಜ ಮಹಿಳೆಯನ್ನು ಅವೈಚಾರಿಕತೆ, ಅವೈಜ್ಞಾನಿಕವಾಗಿ ಚಿತ್ರಿಸಿರುವುದನ್ನು ಲೇಖಕಿ ಫಣಿಯಮ್ಮನ ಮೂಲಕ ಪ್ರಶ್ನಿಸುತ್ತಾರೆ. ಮತ್ತು ಹೆಣ್ಣಿನ 'ಶೀಲ' ಮತ್ತು 'ಪಾವಿತ್ರ್ಯತೆ' ಎಂಬುದು ಪ್ರಾಣಕ್ಕಿಂತಲೂ ಮಿಗಿಲಾದುದು. ಎಂದು ಪುರಾಣ ಕಾಲದಿಂದಲೂ

---

೧. ಅತ್ತಿಮಬ್ಬೆ ಮತ್ತು ಸಮಕಾಲೀನ ಸ್ತ್ರೀ ಸಂಸ್ಕೃತಿ-ಕೇಶವ ಶರ್ಮ- ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ - ಬೆಂಗಳೂರು - ೧೯೯೮ - ಪು. ೮೮

ರೂಢಿಯಲ್ಲಿತ್ತೆಂದು ಜನಮನದಲ್ಲಿ ನೆಲೆಯಾಗಿಸಿರುವುದನ್ನು ಫಣಿಯಮ್ಮನ ಮೂಲಕ ಲೇಖಕಿ ಪ್ರಶ್ನಿಸುತ್ತಾರೆ. ವಿಜಯಾದಬ್ಬೆಯವರು ಹೀಗೆ ಹೇಳುತ್ತಾರೆ.

*"ಅಧೀನವಾಗಿಸುವಿಕೆಯ ಉದ್ದೇಶದಿಂದ ಹೆಂಗಸಿನ ಲೈಂಗಿಕ ಜೀವನದ ಮೇಲಿನ ನಿಯಂತ್ರಣಕ್ಕೆ ಅಗತ್ಯವಾಗಿ ಪಾವಿತ್ರ್ಯತೆಯ ಮಾದರಿಯನ್ನು ಹೆಂಗಸಿಗೆ ಕೊಡಲಾಗಿದೆ. ಪಾತಿವ್ರತ್ಯದ ಕಠಿಣ ಪರೀಕ್ಷೆಯನ್ನೇ ಸೀತೆಯ ಸಂಕೇತದಲ್ಲಿ ರೂಢಿಸಲಾಗಿದೆ. ಹೆಂಗಸಿನ ಈ ಸಂಕೇತದ ಸದಾ ಎಚ್ಚರದ ಗಂಟೆಯಾಗಿರಬೇಕೆಂದು ಸಂಸ್ಕೃತಿಯ ಅಪೇಕ್ಷೆ. ತಪ್ಪು ಮಾಡದ ಆ ಸೀತೆಯೇ ಆ ದುರಂತಕ್ಕೆ ಒಳಗಾದಳೆಂದು ತೋರುವುದರ ಹಿಂದೆ ಇರುವ ಬೆದರಿಕೆಯಲ್ಲಿ ಆಳವಾಗಿ ಹೆಂಗಸಿನ ಪ್ರಜ್ಞೆಯಲ್ಲಿ ಊರುವ ಉದ್ದೇಶ ಈ ಸಂಕೇತದ್ದು."*[೧]

ಅಹಲ್ಯೆ ಮಾಡದಿರುವ ತಪ್ಪಿಗೆ ಕಲ್ಲಾಗುವುದು ಆ ವ್ಯವಸ್ಥೆಯ ಕ್ರೂರನೀತಿಯನ್ನು ಎತ್ತಿ ಹಿಡಿಯುತ್ತದೆ. ಫಣಿಯಮ್ಮನ ಕೇಶಮುಂಡನವನ್ನು ವಿರೋಧಿಸುವ ಲೇಖಕಿ ಸುಬ್ಬನ ಡಾಂಭಿಕತೆಯನ್ನು ಪುರುಷನ 'ಅನುಕೂಲಶಾಸ್ತ್ರ'ಗಳನ್ನು ಟೀಕಿಸುತ್ತಾರೆ. ಆದರೂ ಫಣಿಯಮ್ಮನ ಹುಡುಕಾಟ ನಿರಂತರವಾದುದು. ಫಣಿಯಮ್ಮ ತನ್ನ ನೈಸರ್ಗಿಕ ಆಸೆಗಳನ್ನು ವೈಯಕ್ತಿಕ ದೌರ್ಬಲ್ಯಗಳನ್ನು ಮೆಟ್ಟಿನಿಂತು ನಿರ್ಲಿಪ್ತ ಸ್ವಭಾವವನ್ನು ರೂಢಿಸಿಕೊಳ್ಳುತ್ತಾಳೆ. ಅವಳಿಗಾದ ಸಾಮಾಜಿಕ ಅನ್ಯಾಯಕ್ಕಾಗಿ ಎಂದೂ ಯೋಚಿಸದೆ 'ತ್ಯಾಗಿ'ಯಾಗಿ ತಪಸ್ವಿನಿಯಾಗಿ ಬಾಳುವುದನ್ನು ಕಾದಂಬರಿ ವ್ಯಕ್ತಪಡಿಸುತ್ತದೆ.

*"ಫಣಿಯಮ್ಮ ಅಂದಿನ ಕಾಲದಲ್ಲಿ ಎಲ್ಲರಿಗಿಂತ ಭಿನ್ನಳಾಗಿ ಕಂಡವಳು. ಅಂದಿನ ವ್ಯವಸ್ಥೆಗೆ ಮುಗ್ಧಳಾಗಿ ತನ್ನನ್ನು ಒಪ್ಪಿಸಿಕೊಂಡರೂ ಹೊಸಗಾಳಿಗೆ ತನ್ನನ್ನೊಡ್ಡಿಕೊಂಡಳು. ಸರ್ವರಿಗೂ ಬೇಕಾದ ಪವಿತ್ರ ಆತ್ಮದ ಸಂಕೇತವಾಗಿ ನಿಲ್ಲುತ್ತಾಳೆ. ಸಂಸ್ಕೃತಿಯ ಸ್ವರೂಪವಾಗಿ ನಿಲ್ಲುತ್ತಾಳೆ"*[೨]

ಒಟ್ಟಿನಲ್ಲಿ ನಮ್ಮ ಸಮಾಜದ ಸಾಮಾಜಿಕ ಮೌಲ್ಯಗಳ ಅಸಮಾನತೆ, ಕ್ರೌರ್ಯವನ್ನು ಬಿಡಿಸಿ ಹೇಳುವ ಕ್ರಿಯೆ ಕಾದಂಬರಿಯಲ್ಲಿ ನೇರವಾಗಿದೆ. ಫಣಿಯಮ್ಮ ಆಂತರ್ಯದಲ್ಲಿ ಬಂಡಾಯಗಾರ್ತಿಯಾಗಿ ಬಾಹ್ಯದಲ್ಲಿ ತಪಸ್ವಿಯಾಗಿ ನೂರಹನ್ನೆರಡು ವರ್ಷಗಳನ್ನು ಕಳೆಯುವುದು ಮಹತ್ವದ ಸಂಗತಿಯಾಗಿ ಕಾದಂಬರಿ ಬಿಂಬಿಸಿದೆ. ಸಮಾಜದ ಗಂಭೀರ ಸಮಸ್ಯೆಯಾದ 'ವೈಧವ್ಯ'ದ ಬೇರನ್ನೇ ಸಮರ್ಥವಾಗಿ ಚರ್ಚಿಸುವ ಕೃತಿ ಫಣಿಯಮ್ಮ. ವೈಧವ್ಯದ ನೆಲೆಯಿಂದ ನಡೆಯುವ ಸ್ತ್ರೀ ಶೋಷಣೆಯ ಹಲವು ವಿನ್ಯಾಸಗಳು ತೆರೆದುಕೊಳ್ಳುತ್ತವೆ.

'ವೈಯ್ಯಾರಿ' ಕಥೆಯ ಕೇಂದ್ರ ಪಾತ್ರ ಲಲಿತೆ. ಇವಳು ಬಾಲವಿಧವೆ. ತಾಯಿಯನ್ನು ಕಳೆದುಕೊಂಡು ಸಂಸಾರದ ಜವಾಬ್ದಾರಿಯನ್ನು ಚಿಕ್ಕಂದಿನಲ್ಲೇ ನಿರ್ವಹಿಸುತ್ತಾಳೆ. ವಿಧವೆ ಆ ಕಾಲದ ವಿಧವಾತತ್ವಗಳಿಗೆ ಬದ್ಧಳಾಗಿರುವಂತೆ ಲಲಿತೆಯ

೧. ಕನ್ನಡ ವಿಮರ್ಶೆಯ ಮಾರ್ಗ-(ಪ್ರಸಂ) ಅರವಿಂದ ಮಾಲಗತ್ತಿ-ಪು. ೧೪೫

೨. ಎಂ.ಕೆ.ಇಂದಿರಾ ಸಮಗ್ರ ಅಧ್ಯಯನ - ಮಂದಾಕಿನಿ ಪುರೋಹಿತ - ಹೇಮಂತ ಸಾಹತ್ಯ -ಬೆಂಗಳೂರು-೧೯೯೧ ಪು. ೩೪೬

ಬದುಕು ಹೊಂದಿಕೊಳ್ಳುತ್ತದೆ. ತಂಗಿ ರುಕ್ಮಿಣಿಗೆ ವರಾನ್ವೇಷಣೆ ನಡೆಯುತ್ತಿದ್ದು, ಅದರ ಜವಾಬ್ದಾರಿಯೂ ಇವಳ ಹೆಗಲಿಗೇ ಬೀಳುತ್ತದೆ. ರುಕ್ಮಿಣಿಯನ್ನು ನೋಡಲು ಬರುವ ರಾಮಸ್ವಾಮಿ ಮೈಸೂರಿನಿಂದ ಅರಕಲಗೂಡಿನ ಮಾರ್ಗವಾಗಿ ಹಳ್ಳಿಗೆ ಹೋಗುವಾಗ ನದಿಪಾತ್ರದಲ್ಲಿ ಪಾತ್ರೆ ತೊಳೆಯುತ್ತಿದ್ದ ಲಲಿತೆ ಕಾಣುವುದು ಆಕಸ್ಮಿಕ. ರಾಮಸ್ವಾಮಿ ಹೋಗಬೇಕಾಗಿದ್ದ ರಂಗಾಚಾರ್ಯರ ಮನೆಗೆ ಮಗಳು ಲಲಿತೆಯೊಂದಿಗೆ ಮನೆತಲುಪುತ್ತಾನೆ. ರುಕ್ಮಿಣಿ ನೋಡಲು ಬಂದವರೆಲ್ಲ ಲಲಿತೆಯನ್ನು ನೋಡಿ ಇಷ್ಟಪಟ್ಟು ವಾಪಾಸಾಗುತ್ತಿದ್ದರು. ಆದರೆ ರಾಮಸ್ವಾಮಿ ರುಕ್ಮಿಣಿಯನ್ನು ನೋಡಲು ಬಂದು ಲಲಿತೆಯ ಪೂರ್ವಾಪರ ತಿಳಿದೂ 'ವಿಧವಾ ವಿವಾಹ'ವಾಗಲು ಒಪ್ಪುತ್ತಾನೆ. ಮದುವೆಯೂ ನಡೆದು ಹೋಗುತ್ತದೆ. ನಂತರದ ದಿನಗಳಲ್ಲಿ ತಂಗಿಯರ ವಿವಾಹವೂ ಸುಸೂತ್ರವಾಗಿ ನಡೆಯುವುದನ್ನು ಕಥೆ ವಿವರಿಸುತ್ತದೆ. ಆದರೆ ಆ ಊರಿನ ಮುತ್ತೈದೆಯರಿಂದ ಲಲಿತೆ 'ವೈಯ್ಯಾರಿ' ಎಂಬ ಹೆಸರಿಗೆ ಪಾತ್ರಳಾಗುತ್ತಾಳೆ. ಕೊನೆಗೂ ಲಲಿತೆ 'ವೈಯ್ಯಾರಿ'ಯಾಗಿಯೇ ಉಳಿಯುತ್ತಾಳೆ.

ಬಾಲವಿಧವೆ ಲಲಿತೆಗೆ ಮರುವಿವಾಹವಾಗಲು ಅವಳ ಸಹಜ ಸೌಂದರ್ಯ ಕಾರಣವಾಗುತ್ತದೆ. ಆದರೂ ಆ ಕಾಲಘಟ್ಟದಲ್ಲಿ 'ಮರುವಿವಾಹ' ನಡೆಯುವುದು ಅಷ್ಟೇನು ಸುಲಭದ ವಿಚಾರವಾಗಿರಲಿಲ್ಲ. ಅಸ್ವೀಕೃತವಾದ 'ವಿಧವಾ ವಿವಾಹ' ನೆರವೇರಲು ಎರಡೂ ಕುಟುಂಬದವರ ವಿರೋಧವಿದ್ದರೂ ರಾಮಸ್ವಾಮಿ ವಿವಾಹವಾಗಲು ಮುಂದೆ ಬರಲು ಅವನು ಕಲಿತ ವಿದ್ಯೆ ಮತ್ತು ಉದ್ಯೋಗ ಕಾರಣವಾಗುತ್ತವೆ. ಪರಂಪರಾಗತವಾಗಿ ಬಂದ ಸಂಪ್ರದಾಯದ ಮೌಲ್ಯಗಳು ಪಾಲನೆಯಾಗದೆ ಸಂಪ್ರದಾಯವಾದಿಗಳ ಕಣ್ಣು ಕುಕ್ಕುವುದು ಸಹಜವಾಗಿದೆ. ಇವರ ವಿರೋಧಕ್ಕೆ ಗುರಿಯಾಗುವ ಲಲಿತೆಯನ್ನು ನೋಯಿಸುತ್ತಾರೆ.

> *"ಕೊನೆಗೂ ವೃದ್ಧ ಮುತ್ತೈದೆಯರು, 'ಎಲಾ ವೈಯ್ಯಾರಿ, ಬಲೆ ಎಸೆದದ್ದಕ್ಕೆ ಕೊನೆಗೂ ಒಂದು ಮೀನನ್ನು ಹಿಡಿದೇ ಹಿಡಿದಳು', ಎಂದರು. ಪುರೋಹಿತರು ಇದರಿಂದ ಊರು ಹಾಳಾಗುತ್ತದೆ ಎಂದರು. ಶಾನುಭೋಗರು ಅಯ್ಯೋ ಬಿಡಿ ಸ್ವಾಮಿ ಈ ಊರು ಇವತ್ತಿನದಲ್ಲ. ಹಾಳಾಗೋಕೆ ಹಿಂದೆ ಎಷ್ಟು ನಡೆಯಿತೋ ಮುಂದೆ ಎಷ್ಟು ನಡೀಬೇಕೋ ಎಂದರು"*[೧]

ಬಾಲವಿಧವೆಯರ ಮರುವಿವಾಹವನ್ನು ವಿರೋಧಿಸುವ ಸಂಪ್ರದಾಯ ಸಮಾಜ ಅವಳ ಕಾಮದ ಅಭಿವ್ಯಕ್ತಿಗೆ ವಾಸ್ತವ ಬದುಕಿನಲ್ಲಾಗಲೀ, ಭಾವನಾ ಜಗತ್ತಿನಲ್ಲಾಗಲಿ ನಿರ್ಬಂಧಿಸುತ್ತವೆ. ವಿವಾಹದಲ್ಲೂ ಅವಳು ತನ್ನ ಅಗತ್ಯದ ಕಾಮವನ್ನು ಅನುಭವಿಸಲು ಬಿಡದಿರುವುದು ಸಂಪ್ರದಾಯ ಸಮಾಜದ ಕಠೋರ ನೀತಿಗೆ ಸಾಕ್ಷಿಯಾಗುತ್ತದೆ. ವಿಧವೆಯ ಮರುವಿವಾಹವನ್ನು ಕೆಟ್ಟ ಸಂಪ್ರದಾಯಗಳ ನೆಲೆಯಲ್ಲೇ ಚರ್ಚಿಸುತ್ತವೆ. ಆದರೆ ಆ ವೇಳೆಗಾಗಲೇ ವಿದ್ಯಾವಂತ ಉದ್ಯೋಗಸ್ಥ ಯುವಕರು ಬಾಲವಿಧವೆಯರನ್ನು

೧. ವೈಯಾರಿ–ಗೊರೂರು ರಾಮಸ್ವಾಮಿ ಐಯ್ಯಂಗಾರರು–ಐ.ಬಿ.ಹೆಚ್.ಪ್ರಕಾಶನ–ಬೆಂಗಳೂರು–೨೦೦೪–ಪು.೨೬೦

ವಿವಾಹವಾಗುವ ಹಟಕ್ಕೆ ಬಿದ್ದವರಂತೆ ವರ್ತಿಸುವುದು ಕೃತಿಯಲ್ಲಿ ಗಮನಾರ್ಹವಾದುದಾಗಿದೆ. ಲಲಿತೆಯ ಬಾಳು ಮರುವಿವಾಹದಲ್ಲಿ ಸುಖ ಹೊಂದಲು ಕುಟುಂಬಗೊಳಗಿನ ಹಿತವಾದ ವಾತಾವರಣವೂ ಕಾರಣವಾಗುತ್ತದೆ. ಗುಲ್ವಾಡಿಯವರ 'ಇಂದಿರಾಬಾಯಿ' ಕಾದಂಬರಿಯ 'ಇಂದಿರಾ' ವಿದ್ಯಾವಂತ ಉದ್ಯೋಗಿಯನ್ನು ಮರುಮದುವೆಯಾಗುವುದನ್ನು ಗಮನಿಸಬಹುದು. ಆ ಕಾಲಘಟ್ಟ ವಿಧವಾ ಮರುವಿವಾಹವನ್ನು ಸ್ವೀಕರಿಸುವುದು ಕಷ್ಟವಾದರೂ ಶಿಕ್ಷಣದ ಕ್ರಾಂತಿ ಬದುಕನ್ನು ಹೊಸಎಚ್ಚರದಿಂದ ನೋಡಲು ಅನುವುಮಾಡಿಕೊಡುವುದನ್ನು ಮುಖ್ಯವಾಗಿ ಗಮನಿಸಬಹುದಾಗಿದೆ. ಈ ಕಥನ ಸಾಹಿತ್ಯಗಳು ಎಲ್ಲೂ ಮಹಿಳೆಯ ಆಯ್ಕೆಗಳನ್ನು ಬೆಂಬಲಿಸುವುದಿಲ್ಲ. ಪುರುಷನ ಆಯ್ಕೆಯಲ್ಲಿ ಮಿಂಚುವ ಸುಧಾರಣೆಗಳು ಪ್ರತಿಬಿಂಬಿಸುತ್ತವೆ. ಆದರೆ ಕುಟುಂಬ ಮತ್ತು ಸಮಾಜ ವಿಧವೆಯರನ್ನು ನಿಯಂತ್ರಿಸ ಹೊರಟಾಗ ಒಂದು ವ್ಯವಸ್ಥಿತವಾದ ನೆಲೆಕಾಣದೆ ನಲುಗುವುದೂ ಸಾಮಾಜಿಕ ದುರಂತ. ವಿಧವೆಯರನ್ನು ಮಾನವೀಯ ನೆಲೆಯಲ್ಲೂ ಕಾಣಲಾಗದ ವ್ಯವಸ್ಥೆ ಕ್ರೂರವಾಗಿ ಕಾಣುವುದೇ ಹೆಚ್ಚು.

೧೪. <u>ಅಸಮಾನ ನೆಲೆಯಲ್ಲಿ ವೈಧವ್ಯ</u>

ಬಾಲವಿಧವೆಯ ದೀರ್ಘವಾದ ಶೋಷಿತ ಬದುಕಿನೊಂದಿಗೆ ಕೊನೆಯಾದ ಅನಂತಮೂರ್ತಿಯವರ 'ಘಟಾಶ್ರಾದ್ಧ' ಕಥೆಯಲ್ಲಿ ಬರುವ ಮುಖ್ಯ ಪಾತ್ರ ಯಮುನಾ. ತಂದೆ ಶೇಷಗಿರಿ ಉಡುಪರ ಹೆಂಡತಿ ತೀರಿಕೊಂಡ ನಂತರ ಯಮುನಾ ತೌರಿನಲ್ಲೇ ವಾಸ್ತವ್ಯ ಹೂಡುತ್ತಾಳೆ. ಬ್ರಾಹ್ಮಣ ಸಮುದಾಯದ ಸಂಪ್ರದಾಯದ ಕಟ್ಟುಪಾಡುಗಳಿಗೆ ಬದ್ಧಳಾಗಿದ್ದ ಯಮುನಾಗೆ ದೇಹ ಬಯಕೆಯನ್ನು ಹತ್ತಿಕ್ಕುವುದು ಕಷ್ಟವಾಗುತ್ತದೆ. ಬ್ರಹ್ಮರಾಕ್ಷಸನ ರೂಪದಲ್ಲಿ ಮನೆ ಸುತ್ತಸುತ್ತುವ ಪುರುಷನ ಸುಳಿವು ಸಿಕ್ಕ ಅವರ ಮನೆಯಲ್ಲಿ ಓದಲು ಇದ್ದ ಮಕ್ಕಳು ಮತ್ತು ಪಕ್ಕದಮನೆ ಗೋದಾವರಮ್ಮ ಮಡಿ ಹೆಂಗಸು ಯಮುನಾಳನ್ನು ಕುತೂಹಲದಿಂದ ನೋಡುತ್ತಾರೆ. ಇವರೆಲ್ಲರ ನೋಟದ ಅರಿವು ಇದ್ದ ಯಮುನಾ ಆ ಮನೆಯ ಬಾಲಕನಿಗೆ ಎಚ್ಚರಿಕೆ ನೀಡುತ್ತಾಳೆ. ಆದರೆ ಇದು ಅವಳ ಸಮಸ್ಯೆಗೆ ಪರಿಹಾರವಲ್ಲ. ಯಮುನಾ ಆ ಪರಿಸರದಲ್ಲಿ ಮುಚ್ಚಿಡಲಾರದ ತೊಂದರೆಗೆ ಸಿಲುಕಿಕೊಳ್ಳುತ್ತಾಳೆ. ತಾನು ಅನುಭವಿಸುತ್ತಿರುವ ಯಾತನೆ ಸ್ವಯಂಕೃತ ಅಪರಾಧ ಎನಿಸಿ ತಾನು ಗರ್ಭಿಣಿ ಎಂದು ತಿಳಿದು ಗರ್ಭಪಾತ ಮಾಡಿಸಿಕೊಳ್ಳುತ್ತಾಳೆ. ಇದರಿಂದ ಸಿಟ್ಟಿಗೆದ್ದ ಬ್ರಾಹ್ಮಣ ಸಮುದಾಯದವರು 'ಘಟಾಶ್ರಾದ್ಧ' ಮಾಡಿ ಜಾತಿಯಿಂದ ಹೊರಹಾಕುತ್ತಾರೆ. ಆದರೆ ಯಮುನಾಳ ತಂದೆ ಉಡುಪರು ಮನೆಕೆಲಸಕ್ಕೆಂದು ಹಸೆಮಣೆ ಏರುವುದು ಕಥೆಯ ವಿಶೇಷವಾಗಿದೆ.

ಯಮುನಾ ಆ ಊರಿನ ಶಾಲೆಯ ಶಿಕ್ಷಕನೊಂದಿಗೆ ಅನೈತಿಕ ಸಂಬಂಧವಿಟ್ಟುಕೊಳ್ಳುವುದು ಇದರಿಂದಾಗಿ ಗರ್ಭಪಾತ ಮಾಡಿಸಿಕೊಳ್ಳುವುದು

ವ್ಯವಸ್ಥೆಯ ರೂಢಿಗತ ಮೌಲ್ಯಗಳ ಹಿನ್ನೆಲೆಯಲ್ಲಿ ಬಾಲವಿಧವೆಯನ್ನು ನೈತಿಕ ಚೌಕಟ್ಟನ್ನು ಮೀರುವಂತೆ ಮಾಡಿವೆ. ತಾನು ಅನುಭವಿಸುವ ಯಾತನೆ ಸ್ವಯಂಕೃತ ಅಪರಾಧ ಎಂದುಕೊಳ್ಳುವ ಯಮುನಾಳಿಗೆ ವ್ಯವಸ್ಥೆಯನ್ನು ಎದುರಿಸುವ ಯಾವ ಶಕ್ತಿಯೂ ಇಲ್ಲ. ವೈದಿಕ ಸಂಪ್ರದಾಯದ ನಿಯಮದಂತೆ 'ಘಟಾಶ್ರಾದ್ಧ 'ಕ್ಕೊಳಗಾಗುವ ಯಮುನಾ ಅನುಭವಿಸಲೇಬೇಕಾದ ಶಿಕ್ಷೆ.ಯಮುನಾಳ ಹೀನಾಯ ಸ್ಥಿತಿಗೆ ಕಾರಣನಾದ ಪುರುಷ ಎಲ್ಲೂ ಮುನ್ನೆಲೆಗೆ ಬರದೆ ಮಾಯವಾಗುತ್ತಾನೆ. ಅಷ್ಟೂ ಹಿಂಸೆ ಯಮುನಾಳಿಗೆ ಹೊರೆಯಾಗಿ ಬದುಕು ದುರಂತಕ್ಕೆಡೆಯಾಗುವುದು ಸಮಾಜದ ದ್ವಂದ್ವ ನೀತಿ. ಈ ನೀತಿಗೆ ಎದುರಾಗದೆ ಎಷ್ಟೋ ಬಾಲವಿಧವೆಯರು ವೈದಿಕ ಸಂಪ್ರದಾಯದ ಕಠಿಣ ನೀತಿಯಲ್ಲಿ ನಲುಗಿಹೋಗಿರುವುದನ್ನು ಲೇಖಕರು ಅನಾವರಣಗೊಳಿಸುತ್ತಿದ್ದಾರೆ.

ಉಡುಪರಂತಹ ವಯಸ್ಸಾದ ಪುರುಷನು ಎಳೆವಯಸ್ಸಿನ ಹುಡುಗಿಯನ್ನು ಮರುವಿವಾಹವಾಗುವುದು. ಬಾಲವಿಧವೆ ಯಮುನಾಳಿಗೆ ಯೌವನದಲ್ಲಿದ್ದರೂ ಮರುವಿವಾಹವಾಗುವಂತಿಲ್ಲ ಎನ್ನುವ ನೀತಿ ಸಮಾಜದ ದ್ವಿಸ್ತರ ನೀತಿಯನ್ನು ಎತ್ತಿಹಿಡಿಯುತ್ತಿದೆ. ಯಮುನಾಳಿಗೆ ಸ್ವತಃ ತಂದೆಯೇ 'ಘಟಾಶ್ರಾದ್ಧ' ಮಾಡಿ ಜಾತಿಯಿಂದ ಹೊರಹಾಕುವುದು ಅಮಾನವೀಯವಾಗಿ ಕಾಣುತ್ತಿದೆ. ನಿರೂಪಕರು ಉಡುಪರ ಮರುವಿವಾಹವನ್ನು ಹೀಗೆ ವಿಶ್ಲೇಷಿಸುತ್ತಾರೆ.

> *"ಯಮುನಕ್ಕನ ಜೀವವಿದ್ದಂತೆ ಶ್ರಾದ್ಧ ಮಾಡಿ ಜಾತಿಯಿಂದ ಹೊರಹಾಕಿದ ಸುದ್ಧಿ ಬಂದಾಗ ಅಪ್ಪಯ್ಯ ಅಮ್ಮ ಉಡುಪರು ಎಷ್ಟು ಒಳ್ಳೆಯವರೆಂದು ಹೊಗಳಿ ಯಮುನಕ್ಕನನ್ನು ನೀತಿಗೆಟ್ಟವಳೆಂದು ಬೈದರು. ಇನ್ನೊಂದು ದಿನ ಉಡುಪರಿಗೆ ಮದುವೆ ಎಂದು ನಮಗೆ ಅಕ್ಷತೆ ಬಂತು. ಅಪ್ಪಯ್ಯನಿಗಿಂತ ಮುದುಕರಾದ ಉಡುಪರು ಒಂದು ಪುಟ್ಟ ಹುಡುಗಿಯ ಜೊತೆ ಹಸೆಮಣೆಯ ಮೇಲೆ ಕೂತು ಆರತಿ ಎತ್ತಿಸಿಕೊಳ್ಳುತ್ತಾರೆಂದು ಯೋಚಿಸಿ ನಾನು 'ಥತ್'ಎಂದೆ. ಅಪ್ಪಯ್ಯ ನನಗೆ ಯಾಕೋ ಎಂದರು. ಇವಳು ನೀತಿಗೆಟ್ಟ ಮೇಲೆ ಉಡುಪರಿಗೆ ಸಂಸಾರ ನಡೆಯೋದು ಬೇಡವೇ ಬೇಯಿಸಿ ಹಾಕಲೊಂದು ಜನಬೇಡವೇ ? ಅಂತೂ ಕಾಲಕೆಟ್ಟಿತು ಎಂದು ಅಮ್ಮ ಹೇಳಿದಳು"*[೧]

ಕೊನೆಗೂ ಉಡುಪರು ಹೆಚ್ಚು 'ಮರ್ಯಾದಸ್ಥರು' ಯಮುನಾ 'ನೀತಿಗೆಟ್ಟವಳು' ಎಂದು ಬಿಂಬಿಸುವ ಸಾಮಾಜಿಕ ನೀತಿ ಯಮುನಾಳ ಬಾಳನ್ನು ಕತ್ತಲೆಗೆ ನೂಕುತ್ತದೆ. ಬಾಲವಿಧವೆಯರು ಅನುಸರಿಸುವ ವಿಧವಾ ತತ್ವಗಳು ಕ್ರೂರವಾಗಿದ್ದು, ಮೀರಿದಾಗ ಬ್ರಾಹ್ಮಣ ಸಮಾಜ ಹೇರುವ ನಿರ್ಬಂಧಗಳು ಜೀವವಿರೋಧಿಯಾಗಿರುವುದನ್ನೂ ಕಥೆಗಾರರು ಅನಾವರಣಗೊಳಿಸುತ್ತಿದ್ದಾರೆ.

'ವೈಧವ್ಯ' ಮಹಿಳೆಗೆ ಸೀಮಿತಗೊಂಡು ವಿಧವಾ ಮೌಲ್ಯಗಳನ್ನು ಏಕಮನಸ್ಸಿನಿಂದ ಒಪ್ಪಿಕೊಂಡಿರುವುದನ್ನು ಕಥನ ಸಾಹಿತ್ಯ ತೆರೆದಿಡುತ್ತವೆ. ಆರ್ಥಿಕವಾಗಿ

---

೧. **ಘಟಾಶ್ರಾದ್ಧ – ಅನಂತಮೂರ್ತಿ ಯು.ಆರ್. – ಮೊದಲ ಓದು – ಅಕ್ಷರ ಪ್ರಕಾಶನ ಹೆಗ್ಗೋಡು – ಪುಟ ೪೨**

ಪರಾವಲಂಬಿಯಾದ 'ವಿಧವೆ' ಸದಾ ಕುಟುಂಬದಲ್ಲಿ ನಿಷ್ಠೆಯಿಂದ ಬದುಕುತ್ತಾಳೆ. ಕುಟುಂಬದ ಹೊರಗೆ ಮತ್ತು ಒಳಗೆ ಲೈಂಗಿಕ ಶೋಷಣೆಗೆ ಒಳಗಾಗುತ್ತಾಳೆ. ಹಲವರು ಬದುಕುಕಟ್ಟಿಕೊಳ್ಳಲಾಗದೆ ಆತ್ಮಹತ್ಯೆಗೆ ಶರಣಾಗುತ್ತಾರೆ. ಅನೇಕ ದೌರ್ಬಲ್ಯಗಳಿಂದ ಕಠಿಣ ಸಮಸ್ಯೆಗಳನ್ನು ಎದುರುಹಾಕಿಕೊಳ್ಳುವ ವಿಧವೆಯರು ಆಂತರಿಕ ಬಿಕ್ಕಟ್ಟುಗಳಿಂದ ಹೊರಬರಲಾಗದೆ ನರಳುವುದು ವ್ಯವಸ್ಥೆಯಲ್ಲಿ ಸಾಮಾನ್ಯವಾಗಿರುವುದನ್ನು ಈ ಕೃತಿ ಅಭಿವ್ಯಕ್ತಿಸುತ್ತದೆ.

೧೪. ನಗರಜೀವನದೊಳಗಿನ ವಿಧವಾ ಬದುಕು

ಶೇಷಮ್ಮ ಕಾದಂಬರಿಯ ಮುಖ್ಯಪಾತ್ರ ಮಧ್ಯಮ ವರ್ಗದ ಗೌರವಾನ್ವಿತ ಕುಟುಂಬದವಳು. ಹತ್ತು ವರ್ಷದವಳಿರುವಾಗಲೇ ಮಾದಾವರದ ರಂಗಪ್ಪನೊಂದಿಗೆ ವಿವಾಹವಾಗಿ ಸಂಸಾರದ ಜವಾಬ್ದಾರಿ ಹೊರುತ್ತಾಳೆ. ತೀರಾಸ್ಥಿತಿವಂತರದಲ್ಲದ ಗಂಡನ ಮನೆಯಲ್ಲಿ ಬಡತನದ ಅನುಭವೂ ಆಗುತ್ತದೆ. ಇಬ್ಬರು ಗಂಡುಮಕ್ಕಳ ತಾಯಿ ಶೇಷಮ್ಮ ನೆರೆಹೊರೆಯೊಂದಿಗೆ ಪ್ರೀತಿಯಿಂದ ಬಾಳುತ್ತಾಳೆ. ಪರಸ್ತ್ರೀ ಮೋಹಿತನಾದ ಪತಿ ಗುಪ್ತರೋಗದಿಂದ ಅಸುನೀಗಿದಾಗ ಇಬ್ಬರು ಮಕ್ಕಳೊಂದಿಗೆ ತೌರನ್ನೇ ಸೇರಬೇಕಾಯಿತು. ತೌರಿನಲ್ಲಿ ನೆಲಸಿದ ಶೇಷಮ್ಮ ಸರಿಹೊಂದದೆ ಮಕ್ಕಳ ಭವಿಷ್ಯದ ಕನಸು ಹೊತ್ತು ಬೆಂಗಳೂರು ನಗರ ಸೇರುತ್ತಾಳೆ. ಬೆಂಗಳೂರು ನಗರ ಶೇಷಮ್ಮನಿಗೆ ಅನೇಕ ಸಮಸ್ಯೆ ಮತ್ತು ಸವಾಲುಗಳನ್ನೊಡ್ಡುತ್ತದೆ.

ಅವಳು ಬಯಸಿದಂತೆ ಸಣ್ಣ ಉದ್ಯೋಗಕ್ಕೆ ತೊಂದರೆಯಾಗಲಿಲ್ಲ. ದಿವಾನ್‌ಸೂರಪ್ಪನವರ ಸಹಕಾರದಿಂದ ದೇವಸ್ಥಾನದ ಕೆಲಸಕ್ಕೆ ಸೇರಿದ ಶೇಷಮ್ಮ ಆ ಮನೆಯವರ ವಿಶ್ವಾಸ ಗಳಿಸುತ್ತಾರೆ. ಆದರೆ ಮಧ್ಯ ವಯಸ್ಸಿನ ಶೇಷಮ್ಮ ಅವರಿವರ ಕಣ್ಣಿಗೆ ಬೀಳುತ್ತಾಳೆ. ದಿವಾನ್ ಸೂರಪ್ಪನವರ ಮನೆಗೆ ಆಗಾಗ ಬರುತ್ತಿದ್ದ ಬ್ಯಾರಿಸ್ಟರ್ ಅಯ್ಯ ಎಂಬ ಪ್ರಸಿದ್ದ ವಕೀಲರು ಶೇಷಮ್ಮನವರನ್ನು ಮರುವಿವಾಹವಾಗುವ ಪ್ರಸ್ತಾಪವೆತ್ತುವುದು ಆ ಸಮಾಜದ ವಿರೋಧಕ್ಕೆ ಕಾರಣವಾಗುತ್ತದೆ. ಈ ವಿಷಯ ಸೂರಪ್ಪನವರ ಪತ್ನಿಯ ಕಿವಿಗೆ ಬಿದ್ದಾಗ ಅವರು ಪ್ರತಿಕ್ರಿಯಿಸುವುದು ಹೀಗೆ.

> *"ನೋಡಿದೆಯಾ ಈ ಮುಂಡೇ ಮಗ ಎಂದೂ ಬರದೇ ಇದ್ದವನು ಹತ್ತು ಸಲ ಈ ಮನೆಗೆ ಬಂದಾಗ ಏನಿರಬಹುದು ಸಂಗತಿ ಎಂತ ನನಗೆ ಭಯ ಆಯಿತು. ಈಗ ತಿಳಿಯಿತು ಇವನ ಸಂಚು. ದಿಕ್ಕಿಲ್ಲದ ಹೆಂಗಸು ಆಸೆ ತೋರಿಸಿ ಬಳಸೋಣ ಅಂತ ಯೋಚಿಸಿದ್ದಾನೆ. ಈ ಜಾತಿಕೆಟ್ಟವರು ಎಲ್ಲರೂ ಹೀಗೇನೆ"*[೧]

ಸೂರಪ್ಪನವರ ಪತ್ನಿಯ ಸಂಪ್ರದಾಯ ಬದ್ಧ ಮಾತುಗಳು ಕಾದಂಬರಿಯಲ್ಲಿ ಸಂಪ್ರದಾಯದ ಕಟ್ಟುಪಾಡುಗಳಿಗೆ ವಿರೋಧಿಯಾದವರನ್ನು ಕೀಳಾಗಿ ಕಾಣುವುದಕ್ಕೆ ನಿದರ್ಶನವಾಗಿವೆ. ಬ್ಯಾರಿಸ್ಟರ್ ಅಯ್ಯ ಅವರು ಲಂಡನ್‌ನಲ್ಲಿ ವಿದ್ಯಾಭ್ಯಾಸ ಮಾಡಿ

೧. ಶೇಷಮ್ಮ – ಮಾಸ್ತಿ – ಪ್ರಗತಿ ಪ್ರಕಾಶನ – ಬೆಂಗಳೂರು – ೧೯೮೯ – ಪು. ೧೧೦

ಬಂದ ಬುದ್ಧಿವಂತ ಬ್ರಾಹ್ಮಣರು ಸಮುದ್ರಯಾನ ಮಾಡಿಬಂದ ಅಯ್ಯ ಅವರನ್ನು ಅವರ ಸಮುದಾಯದವರು ಸಂಪ್ರದಾಯವಿರೋಧಿ ಎಂದು ಜಾತಿಯಿಂದ ಹೊರಹಾಕುವ ಆಲೋಚನೆಯಲ್ಲಿದ್ದಾಗ ಕಿರುಕುಳದಿಂದ ಪಾರಾಗಲು ಕ್ರಿಸ್ಚಿಯನ್ನರಾಗಿ ಮತಾಂತರವಾಗಿದ್ದರು. ಹೆಂಡತಿಯನ್ನು ಕಳೆದುಕೊಂಡು ಒಂದು ಚಿಕ್ಕ ಹೆಣ್ಣು ಮಗುವಿನೊಂದಿಗೆ ಸಂಸಾರ ಸಾಗಿಸಲು ಬ್ರಾಹ್ಮಣ ಹೆಂಗಸನ್ನೇ ಮದುವೆಯಾಗುವ ಆಲೋಚನೆಯಲ್ಲಿದ್ದರು. ಶೇಷಮ್ಮನನ್ನೇ ಆಯ್ಕೆಮಾಡುವುದರ ಹಿಂದೆ ಸಂಸಾರ ನಿರ್ವಹಣೆ ಮುಖ್ಯವಾಗಿದೆ. ಆದರೆ ಶೇಷಮ್ಮ ಆ ಕಾಲದಲ್ಲಿ ಮರುವಿವಾಹದ ಯೋಚನೆ ಮಾಡುವ ಸ್ಥಿತಿಯಲ್ಲಿರಲಿಲ್ಲ. ವಿಧವಾ ವಿವಾಹದ ಆಯ್ಕೆಯೂ ಅವಳ ಮುಂದಿರಲಿಲ್ಲ. ಸೂರಪ್ಪನವರ ಪತ್ನಿ ಅಯ್ಯ ವಕೀಲರನ್ನು ತಮ್ಮ ಮನೆಗೆ ಬಾರದಿರುವಂತೆ ತಾಕೀತು ಮಾಡುವಾಗ ಶೇಷಮ್ಮ ನೊಂದು ಹೀಗೆ ಹೇಳುತ್ತಾಳೆ.

> *"ನನಗಾಗಿ ನೀವು ಅವರೊಂದಿಗೆ ವಿರೋಧ ಕಟ್ಟಿಕೊಳ್ಳಬೇಡಿ, ನಾನು ಜಾತಿಬಿಟ್ಟು ಇವರನ್ನು ಮದುವೆಯಾಗಿ ಸುಖಪಡೋ ವಯಸ್ಸಿನ ಹೆಂಗಸೇ ? ಹೆತ್ತ ಎರಡು ಮಕ್ಕಳಿವೆ. ಅವಕ್ಕೆ ಅಂತ ಬಾಳಬೇಕಾಗಿದೆ, ಇಲ್ಲದಿದ್ದರೆ ನೀರೋ ನೇಣೋ ಆಗಿ ಮುಗಿಯಬಹುದಿತ್ತು."*[೧]

ಶೇಷಮ್ಮನಿಗೆ ಸಮಾಜದ ಧಾರ್ಮಿಕ ಕಟ್ಟುಪಾಡುಗಳನ್ನು ಮೀರುವ ಯಾವ ಹಕ್ಕು ಇಲ್ಲ. ಶೇಷಮ್ಮ ಮರುವಿವಾಹವಾಗಲು ಸಾಧ್ಯವಿಲ್ಲ ಎಂದು ಕಾದಂಬರಿ ವಿವರಿಸುತ್ತಿದೆ. ಬ್ಯಾರಿಸ್ಟರ್ ಅಯ್ಯ ಅವರಿಗೆ ಅವಕಾಶವಿದೆ ಆದರೆ ಅವರು ಹಿಂದೂಧರ್ಮ ವಿರೋಧಿಯಾಗಿ ಜಾತಿಬ್ರಷ್ಟರಾದವರು ಮತಾಂತರ ಹೊಂದಿದವರು. ಬ್ರಾಹ್ಮಣ ಜಾತಿಯ ಶೇಷಮ್ಮನನ್ನು ವಿವಾಹವಾಗುವ ಅರ್ಹತೆ ಇಲ್ಲ. ಸಂಪ್ರದಾಯಗಳನ್ನು ವಿಧಿಸುವುದು ಸಮಾಜದ ಜವಾಬ್ದಾರಿ ಎಂದು ಸ್ಪಷ್ಟವಾಗುತ್ತದೆ. 'ಮರುವಿವಾಹ' ಸಾಧ್ಯವಾಗದ ಕಾಲದಲ್ಲಿ ಶೇಷಮ್ಮ ಎರಡು ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಎಷ್ಟೋ ಕಷ್ಟಗಳಿಂದ ಬದುಕನ್ನು ನಿರ್ವಹಿಸುತ್ತಾಳೆ. ಸಾವು, ಸಂಸಾರ ಅವಳ ಮುಂದಿರುವ ಆಯ್ಕೆಗಳು. ಬಹುತೇಕ ಮಹಿಳೆಯರ ಮುಂದಿರುವ ಅವಿಶ್ವಾಸ ಶೇಷಮ್ಮನಲ್ಲಿಲ್ಲ. ಅವಳ ಶಕ್ತಿಸಾಧ್ಯತೆಗಳ ಬಗ್ಗೆ ನಂಬಿಕೆ ಇದೆ. ಛಲದಿಂದ ಹೋರಾಡುವ ಆತ್ಮವಿಶ್ವಾಸವಿದೆ. ವಿಧವೆಯಾಗಿಯೇ ಉಳಿಯುವುದರ ಹಿಂದೆ ಶತಮಾನಗಳಿಂದ ಹೆಣ್ಣನ್ನು ವೈಧವ್ಯಕ್ಕೆ ಹೊಂದಿಕೊಳ್ಳುವಂತೆ ನೋಡಿಕೊಂಡಿದ್ದರ ಪರಿಣಾಮ ಎಂದು ಭಾವಿಸಬಹುದು. ಬಹಳ ಸಂದರ್ಭಗಳಲ್ಲಿ ಶೇಷಮ್ಮ ತನ್ನ ಬಡತನವನ್ನು ಹಳಿದಿದ್ದಿದೆ. "ಹುರಿಹಿಟ್ಟನ್ನು ಕದ್ದು ಒಯ್ಯುತ್ತಿದ್ದೀರಾ ? ಎಂದು ಕೇಳಿದ ತಂಗಮ್ಮನ ಮೇಲೆ ಕೋಪ ಬರುವುದಕ್ಕಿಂತ ಹೆಚ್ಚಾಗಿ ತನ್ನ ಬಡತನದ ಮೇಲೆ ಕೋಪ ಬರುತ್ತದೆ.

> "ಶೇಷಮ್ಮನವರಿಗೆ ಈ ಸಣ್ಣ ಸಂಗತಿಯಿಂದ ಬಹು ದುಃಖವಾಯಿತು. ಎಷ್ಟು ಸರಿಯಾಗಿ ನಡೆಸಿಕೊಂಡರೂ ಎಷ್ಟು ಎಚ್ಚರದಿಂದಿದ್ದರೂ ಬಡತನಕ್ಕೆ ಇಂತ

---

೧. ಶೇಷಮ್ಮ – ಮಾಸ್ತಿ – ಪ್ರಗತಿ ಪ್ರಕಾಶನ – ಬೆಂಗಳೂರು – ೧೯೮೯ – ಪು. ೧೧೨

*ಅವಮಾನ ತಪ್ಪಿದ್ದಲ್ಲ. ಎಂದು ಅರಳಿಟ್ಟನ್ನು ಚರಂಡಿಯಲ್ಲಿ ಎಸೆಯುವ ಮನಸ್ಸಾದರೂ ಎಸೆಯದೆ ಮರು ಕ್ಷಣದಲ್ಲಿ ಛೇ ನನಗೆ ಇಂತ ಯೋಚನೆ ಯಾಕೆ ಬರುತ್ತದೆ ? ಯಾರೋ ಅವಮಾನ ಮಾಡಿದರೆ ಅರಳಿಟ್ಟನ್ನು ಎಸೆಯಬಹುದೆ? ಮಕ್ಕಳ ಅನ್ನವನ್ನು ಮೈನೊಂದು ಗಳಿಸುವುದಿಲ್ಲವೇ ? ಮನನೊಂದು ಗಳಿಸಿದರೆ ಏನು ತಪ್ಪು ಎಂದು ತಡೆದುಕೊಂಡರು."*[೧]

ಇಂತಹ ಸಂದರ್ಭಗಳಲ್ಲಿ ಸ್ವಾಭಿಮಾನಿಯಾದ ಶೇಷಮ್ಮ ಮುಂದೆಂದೂ ಇಂತಹ ದುಡುಕಿನ ನಿರ್ಧಾರ ತೆಗೆದುಕೊಳ್ಳದಂತೆ ಎಚ್ಚರ ವಹಿಸುತ್ತಾರೆ. ಮಕ್ಕಳ ಹೊಣೆಹೊತ್ತ ವಿಧವೆ ಎಂಥ ಸಂದರ್ಭಕ್ಕೂ ತಾಳ್ಮೆ, ವಿವೇಚನೆ ಮತ್ತು ಸಂಯಮವನ್ನು ಮರೆಯಲಾಗದು ಎಂಬ ಸಾಮಾಜಿಕ ಒತ್ತಡಕ್ಕೊಳಗಾಗುವುದನ್ನು ಕಾದಂಬರಿ ವಿವರಿಸುತ್ತದೆ. "ವಿಧವೆಯರು ತಮ್ಮನ್ನು ಕಾಡುವ ಮಾನಸಿಕ ಅತೃಪ್ತಿ ಕೊರಗುಗಳಿಂದ ಬೇರೆಯವರಿಗೆ ತೊಡರಾಗಬಾರದು" ಎನ್ನುವ ಮಾತನ್ನು ಶೇಷಮ್ಮನ ಪಾತ್ರದ ಮೂಲಕ ಒತ್ತಿ ಹೇಳುತ್ತಿದ್ದಾರೆನಿಸುತ್ತದೆ. ಶೇಷಮ್ಮನ ಬಗ್ಗೆ ಜಿ.ವೆಂಕಟಸುಬ್ಬಯ್ಯನವರು ಹೀಗೆ ಹೇಳುತ್ತಾರೆ.

*"ಎಲ್ಲಾ ಕಷ್ಟಗಳನ್ನು ಸಹಿಸಿಕೊಂಡು ಯಾರನ್ನು ಎದುರುಹಾಕಿಕೊಳ್ಳದೆ ಅಕ್ಕಪಕ್ಕದ ಮನೆಯವರಿಗೆ ಸಹಾಯಮಾಡಿ ಒಬ್ಬ ಶ್ರೇಷ್ಠರ ಮನೆಯಲ್ಲಿ ಎಲ್ಲರನ್ನು ಸಾಕಿ ಶೇಷಮ್ಮನಾಗಿ, ಶೇಷತ್ತೆಯಾಗಿ, ಶೇಷಜ್ಜಿಯಾಗಿ ಬೆಳೆಯುತ್ತಾಳೆ. ಅವಳ ಮಾತು ಎಲ್ಲರಿಗೂ ವೇದವಾಕ್ಯವಾಗುತ್ತದೆ. ಅಂತಹ ಮಟ್ಟಕ್ಕೆ ಬರುತ್ತಾಳೆ."*[೨]

ಅವಳ ಉದಾರ ವ್ಯಕ್ತಿತ್ವದ ಸಾತ್ವಿಕ ಬದುಕನ್ನು ಪರಿಚಯಿಸುತ್ತಾರೆ. ಶೇಷಮ್ಮನ 'ವಿಧವಾ ತತ್ವ'ಗಳನ್ನು ವಿರೋಧಿಸದೆ ಬಾಳನ್ನು ಸಂಘರ್ಷಕೊಡ್ಡಿಕೊಳ್ಳದೆ ಬದುಕುವ ರೀತಿ ಗುರುತರವಾದ ಜವಾಬ್ದಾರಿಯನ್ನು ಪ್ರತಿನಿಧಿಸುತ್ತದೆ. ಬಿ.ಎನ್.ಸುಮಿತ್ರಾಬಾಯಿ ಯವರು ಶೇಷಮ್ಮನ ಬಗ್ಗೆ ಪ್ರತಿಕ್ರಿಯಿಸುವುದು ಹೀಗೆ,

*"ಮಾಸ್ತಿಯವರ ಸ್ತ್ರೀ ಪಾತ್ರಗಳು ಗಂಡಸಿನ ನೆರಳಿನಾಸರೆ ತಪ್ಪಿದಾಗ ಈ ಹೆಂಗಸರಲ್ಲಿ ಪ್ರಬಲರಾದವರು ತಾವೇ 'ಗಂಡಸಿನಂತೆ' ಸಂಸಾರದ ನೊಗ ಹೊತ್ತು ಮಕ್ಕಳನ್ನು ಕುಟುಂಬವನ್ನು ಕಾಯುವ ಮಾತ್ರ ರೂಪಿಣಿಯಾಗಿ ಬೆಳೆಯುತ್ತಾರೆ."*[೩]

ಶೇಷಮ್ಮ ವಿಧವಾ ಬಾಳಿನಲ್ಲಿ ಇಬ್ಬರು ಮಕ್ಕಳನ್ನು ಧೈರ್ಯದಿಂದ ವಿದ್ಯಾವಂತರನ್ನಾಗಿಸಿ ಭವಿಷ್ಯ ರೂಪಿಸುವಲ್ಲಿ ಯಶಸ್ವಿಯಾಗುತ್ತಾಳೆ. ಕಷ್ಟಕ್ಕೆ ತಕ್ಕ ಪ್ರತಿಫಲ ದೊರೆಯುವುದನ್ನು ಕಾದಂಬರಿ ಕಾಣಿಸುತ್ತದೆ.

*"ಹೆಣ್ಣಿನಿಂದ ಸಾಂಪ್ರದಾಯಿಕ ಸಮಾಜ ನಿರೀಕ್ಷಿಸುವ ಅತಿ ಉದಾರವಾದ ವರ್ತನೆಯನ್ನು ಮಾಸ್ತಿಯವರೂ ಸ್ತ್ರೀಯರ ನಿಜವಾದ ಸತ್ವವೆಂದು ತೋರಿಸುವುದಕ್ಕೆ 'ಶೇಷಮ್ಮ' ನಂತಹ ಪಾತ್ರಗಳು ಸೂಚನೆ ನೀಡುತ್ತವೆ. ಪ್ರೀತಿಯ ತಂದೆ ತಾಯಿಯರ*

---

೧. ಶೇಷಮ್ಮ – ಮಾಸ್ತಿ ವೆಂಕಟೇಶ ಐಯ್ಯಂಗಾರ್– ಪ್ರಗತಿ ಪ್ರಕಾಶನ – ಬೆಂಗಳೂರು – ೧೯೮೯ – ಪು. ೧೧೦

೨. ಮಾಸ್ತಿ ಸಮಗ್ರ ಸಾಹಿತ್ಯ – (ಸಂ) ಮಾವಿನ ಕೆರೆ ರಂಗನಾಥನ್ ಸಂಪುಟ –೧– ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು – ೨೦೧೦– ಪು. ೪೬೭

೩. ಅದೇ ಪು. ಪು–೪೨೪

*ಸಾವು, ಮಮತೆಯ ಗೆಳತಿ ಅಚ್ಚಮ್ಮನ ಸಾವು ನಂಬಿಕೆದ್ರೋಹ ಬಗೆದ ಗಂಡನ ಸಾವು, ಅತ್ತೆಯ ಜಿಪುಣತನ ನೆರೆಯವರ ಚಾಡಿಕೋರತನ, ನಾದಿನಿಯ ಅಸಹನೆ ಎಲ್ಲವನ್ನೂ ಎದುರಿಸಿ ತನ್ನ ಮಕ್ಕಳ ಬದುಕನ್ನು ತಿದ್ದಿ ರೂಪಿಸಬೇಕೆಂಬ ಒಂದೇ ಧ್ಯೇಯ ಶೇಷಮ್ಮನ ಬದುಕನ್ನು ಕಾಯ್ದಿಟ್ಟ ಶಕ್ತಿಯಾಗಿದೆ. ಅವಳ ಸಹನಾ ಶಕ್ತಿ ಚಂದ್ರಮತಿಯಂತದ್ದೆಂದು, ಅವಳ ಪಾತಿವ್ರತ್ಯ ಸೀತೆಗೆ ಸಮನಾದದೆಂದು ಕೃತಿ ಚಿತ್ರಿಸುತ್ತದೆ."*[೧]

ಕಾದಂಬರಿ ಶೇಷಮ್ಮನನ್ನು 'ಸಾಧ್ವಿ"ಸಹನಶೀಲೆ' ಎಂದು ಹೇಳುವುದರಲ್ಲಿ ಯಶಸ್ವಿಯಾಗಿದೆ. ಕುಟುಂಬದಲ್ಲಿ ಹೆಣ್ಣಿನ ತ್ಯಾಗದ ಮಹತ್ವವನ್ನು ಲೇಖಕರು "ತನಗಾಗಿ ಬಾಳು ಎಂದರೆ ಜೀವ ಇನ್ನಷ್ಟು ಸಹಿಸುತ್ತದೆಯೋ ಇಲ್ಲವೋ ಹೇಳುವಂತಿಲ್ಲ. ಗಂಡನಿಗಾಗಿ ಮಗುವಿಗಾಗಿ ಎಂದರೆ ಹೆಣ್ಣು ಇಂಥ ಕಷ್ಟವನ್ನು ಇದಕ್ಕಿಂತ ಹೆಚ್ಚಿನ ಕಷ್ಟವನ್ನು ಲೆಕ್ಕಿಸದೆ ನಿರಾಯಾಸವಾಗಿ ಇಲ್ಲ. ಅಲ್ಲ ಆಯಾಸ ಪಟ್ಟುಕೊಂಡೇ ಸಹಿಸಿಕೊಂಡು ಬಿಡುತ್ತದೆ." ಎನ್ನುತ್ತಾರೆ. ಶೇಷಮ್ಮ ಹಲವು ಹತ್ತು ಸಮಸ್ಯೆಗಳ ನಡುವೆಯೂ ಜೀವನ ಪ್ರೀತಿಯನ್ನು ಸಂಕೇತಿಸುವ ಪಾತ್ರವಾಗಿ ಮೂಡಿಬಂದಿದೆ. ಶೇಷಮ್ಮನಿಗೆ ಮರುವಿವಾಹದ ಸಂದರ್ಭವೊದಗುವುದೂ ಅವಳ ಬದುಕಿನ ಹಿನ್ನೆಲೆಯಲ್ಲಿ ಅಸಮಂಜಸವಾದುದೆಂದು ಕಾದಂಬರಿ ವಿವರಿಸುತ್ತದೆ.. ಶೇಷಮ್ಮನವರಿಗಿಂತ ಮೊದಲೇ ಸಂಪ್ರದಾಯಸ್ಥ ಸೂರಪ್ಪನವರ ಕುಟುಂಬ ವಿಧವಾವಿವಾಹವನ್ನು ಸಾರಾಸಗಟಾಗಿ ತಳ್ಳಿಹಾಕುವುದು ಆ ಸಂಪ್ರದಾಯ ಸಮಾಜದ ನಿಲುವಿಗೆ ಸಂಬಂಧಿಸಿದ್ದು. ಮಾನವೀಯ ಸಂಬಂಧಗಳು ತೋರುವ ಅನುಕಂಪ ಅವಳ ಯಶಸ್ವಿ ಬಾಳಿನ ಹಿನ್ನೆಲೆಗಿದೆ. ಹಳ್ಳಿಯಿಂದ ನಗರಕ್ಕೆ ಬಂದ ಶೇಷಮ್ಮನಿಗೆ ಯಾವ ಸಂಬಂಧಿಕರೂ ಸಹಾಯ ಮಾಡುವವರಿಲ್ಲ. ಆದರೆ ಪರಿಚಿತರೆಲ್ಲ ಮಾನವೀಯ ಅಂತಃಕರಣವನ್ನು ಮಿಡಿಯುವವರೇ. ನಗರ ಬದುಕಿಗೆ ಹೊಂದಿಕೊಂಡ ಶೇಷಮ್ಮ ಸಂದಿಗ್ಧ ಪರಿಸ್ಥಿತಿಯಲ್ಲೂ ತನ್ನ ಕನಸು ನನಸಾಗಿಸಿಕೊಳ್ಳುವುದು ಅವಳಲಿದ್ದ ಆತ್ಮವಿಶ್ವಾಸವನ್ನು ಪರಿಚಯಿಸುತ್ತದೆ. ವೈಯಕ್ತಿಕ ನೋವು ಕೊರಗುಗಳನ್ನು ಜೀರ್ಣಿಸಿಕೊಳ್ಳುತ್ತಲೆ ಮಕ್ಕಳ ಭವಿಷ್ಯ ರೂಪಿಸುವುದರಲ್ಲಿ ಯಶಸ್ವಿಯಾಗುತ್ತಾಳೆ.

ಒಟ್ಟಿನಲ್ಲಿ ನವೋದಯ ಸಂದರ್ಭದ ಕೃತಿಕಾರರು ಕಥನ ಸಾಹಿತ್ಯವನ್ನು ಉದಾರವಾಗಿ ಸಾಂಸ್ಕೃತಿಕ ಸಂದರ್ಭದಲ್ಲಿ ವಿಧವೆಯರು ಎದುರಿಸಿದ ಪರಿಣಾಮಗಳನ್ನು ಅವರ ಬದುಕಿನ ಒಡಲಿನಿಂದಲೇ ಬಿಂಬಿಸುವ ಪ್ರಯತ್ನ ಮಾಡಿರುವುದು ಸ್ಪಷ್ಟವಾಗುತ್ತದೆ. ಕೆಲವು ಕೃತಿಗಳು 'ನಿರ್ಧಿಷ್ಟ ಸಮಸ್ಯೆ'ಯು ತೆರೆದಿಡುವ ಸಮಸ್ಯೆಗಳನ್ನು ಪಾರದರ್ಶಕವಾಗಿ ಗಮನಿಸಿ ಉತ್ತರವನ್ನು ಹುಡುಕುವ ಪ್ರಯತ್ನವನ್ನು ಮಾಡುತ್ತವೆ. ವಿಧವೆಯರು ಎದುರಿಸುವ ಸಾಂದರ್ಭಿಕ ಸನ್ನಿವೇಶಗಳ ಮೂಲಕ ಮಾನಸಿಕ ಮತ್ತು ದೈಹಿಕ ಒತ್ತಡಗಳನ್ನು ತುರ್ತುಗಳನ್ನು ಆಧಾರವಾಗಿಟ್ಟುಕೊಂಡು

೧. ಮಾಸ್ತಿ ಸಮಗ್ರ ಸಾಹಿತ್ಯ – (ಸಂ) ಮಾವಿನ ಕೆರೆ ರಂಗನಾಥನ್ ಸಂಪುಟ –೧– ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು – ೨೦೧೦– ಪು. ೪೨೮

ಚರ್ಚಿಸಲಾಗಿದೆ. ಪುರುಷ ನಿರ್ಧಾರಿತ ಸಮಾಜದ ವಿಧವಾ ಮೌಲ್ಯಗಳನ್ನು ಎದುರಿಸಿ ನಿಲ್ಲುವ ಗಟ್ಟಿ ವ್ಯಕ್ತಿತ್ವಗಳನ್ನು ಅಲುಗಿಸಲು ರೂಢಿನಿಯಮಗಳು ಹಲವು ಸಂದರ್ಭಗಳಲ್ಲಿ ಸೋಲುವುದನ್ನು ಚಿತ್ರಿಸುತ್ತವೆ. ಅನೇಕ ಕೃತಿಗಳಲ್ಲಿ ವಿಧವೆಯರು ಸಮಾಜವು ರೂಪಿಸಿದ ನಿಯಮಗಳನ್ನು ಪಾಲಿಸುವುದರಲ್ಲಿ ತಲ್ಲೀನರಾಗುತ್ತಾರೆ. ಸಮಾಜ ಕಟ್ಟಿಬೆಳೆಸಿರುವ 'ವಿಧವಾ ಮೌಲ್ಯ'ಗಳಲ್ಲಿ ಕೂದಲೆಳೆಯಷ್ಟು ಆಚೀಚೆ ಸರಿದರೂ ಅದು ವಿಧವೆಗೆ ತಂದೊಡ್ಡುವ ದುರ್ಭರ ಸನ್ನಿವೇಶಗಳನ್ನು ಕೆಲವು ಕಾದಂಬರಿಗಳು ಕಟ್ಟಿಕೊಡುತ್ತವೆ. ಆದರೆ, ಆಯಾಕಾಲಘಟ್ಟದ ವೈಚಾರಿಕ ನಿರ್ಣಯಗಳು ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಹಿತಾಸಕ್ತಿಗಳು ಮಹಿಳೆಯ ಬದುಕಿನ ಮೌಲ್ಯಗಳನ್ನು ನಿರ್ಧರಿಸುತ್ತವೆ. ಸಂಪ್ರದಾಯದ ಸಮಾಜಕ್ಕೆದುರಾದ ಆಧುನಿಕತೆ ಸಂಘರ್ಷಕ್ಕೆ ಗುರಿಮಾಡುವುದನ್ನು ಕಾದಂಬರಿ ತೆರೆದಿಡುತ್ತದೆ.

## ಅಧ್ಯಾಯ – ೬

# ನವೋದಯ ನಂತರದ ಕಥನ ಸಾಹಿತ್ಯದಲ್ಲಿ ವೈಧವ್ಯದ ಪರಿಕಲ್ಪನೆ

೧. ಅವಲಂಬನೆ–ಅಸ್ತಿತ್ವ

೨. ವಿವಾಹ ಬಾಹಿರ ಸಂಬಂಧದಲ್ಲಿ ವಿಧವೆ

೩. ಸ್ವಾರ್ಥಪರ ಪುರುಷ ಸಮಾಜದ ಚಿಂತನೆಗಳ ಹೇರುವಿಕೆ

೪. ಕಾಮಸಂಬಂಧಿ ಅಸಮಾನತೆಯ ನೆಲೆಯಲ್ಲಿ ವಿಧವೆ

೫. ಅನಾಥೆಯಾಗಿ ವಿಧವೆ

೬. ಜಾತಿಯ ನೆಲೆಯಲ್ಲಿ ಸಂಘರ್ಷಕ್ಕೊಳಗಾದ ವೈಧವ್ಯ

೭. ವಿಧವೆ–ಸ್ವಾತಂತ್ರ್ಯ–ಜವಾಬ್ದಾರಿ

೮. ಮಹಿಳಾ ಶಿಕ್ಷಣ – ವಿಧವಾ ಜೀವನ

೯. ಆಧುನಿಕ ನಗರ ಜೀವನದಲ್ಲಿ 'ವಿವಾಹ'–ಬಂಧನ–ಬಿಡುಗಡೆ

ಅಧ್ಯಾಯ ೬

## ನವೋದಯ ನಂತರದ ಕಥನ ಸಾಹಿತ್ಯದಲ್ಲಿ ವೈಧವ್ಯದ ಪರಿಕಲ್ಪನೆ

### ೧. ಅವಲಂಬನೆ – ಅಸ್ತಿತ್ವ

ಪುರುಷ ಮಹಿಳೆ ಎನ್ನುವ ಅಸಮಾನತೆ ಹಲವು ಶತಮಾನಗಳಿಂದ ಒಂದಲ್ಲ ಒಂದು ರೂಪದಲ್ಲಿ ಪ್ರಪಂಚದ ಬಹುತೇಕ ಸಮಾಜಗಳಲ್ಲಿ ಬೇರೂರಿದೆ. ವ್ಯಕ್ತಿ ಯಾವ ಲಿಂಗಿಯಾಗಿ ಹುಟ್ಟಿದ್ದಾನೆ ಎನ್ನುವುದರ ಮೇಲೆ ಸಮಾಜದಲ್ಲಿ ಹೆಣ್ಣು–ಗಂಡು ಎನ್ನುವ 'ಮೌಲ್ಯ' ಮತ್ತು 'ಸ್ಥಾನ' ನಿರ್ಣಯವಾಗುತ್ತದೆ. ಚರಿತ್ರೆಯಲ್ಲಿ ಮೊದಲು ದಾಸ್ಯಕ್ಕೊಳಗಾದವಳು ಮಹಿಳೆ. ಆದರೆ ೧೯ನೇ ಶತಮಾನದಿಂದೀಚೆಗೆ ಮಹಿಳೆಯ ದುಃಸ್ಥಿತಿಯನ್ನು ಕುರಿತ ಚಿಂತನೆಗಳು ನಡೆದಿವೆ. ಮಹಿಳೆಯ ಅನೇಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಸಾಮಾಜಿಕ, ರಾಜಕೀಯ ಚಳವಳಿಗಳು ಕೆಲಸಮಾಡಿವೆ. ಮಹಿಳಾ ಸಮಸ್ಯೆಯನ್ನೆ ಕೇಂದ್ರವಾಗುಳ್ಳ ಮಹಿಳಾ ಅಧ್ಯಯನಗಳು, ಬರವಣಿಗೆಗಳು ಬೆಳೆಯುತ್ತಿವೆ. ರೂಢಿಗತವಾಗಿರುವ ಲಿಂಗಾಧಾರಿತ ಕುರುಡುತನದ ನಿರ್ಮೂಲನಕ್ಕಾಗಿ ಜಾಗೃತಿ ಕಾರ್ಯಗಳು ನಡೆಯುತ್ತಿವೆ. ಇದರೊಂದಿಗೆ ಹುಟ್ಟಿಕೊಳ್ಳುವ ಸಮಸ್ಯೆ–ಸವಾಲುಗಳು ಕೂಡ ಬೆಳೆಯುತ್ತಿವೆ.

ಲಿಂಗಾಧಾರಿತ ಅಸಮಾನತೆ ಮಹಿಳೆಯ ಬೌದ್ಧಿಕತೆ, ಜೀವ, ದೇಹ ಯಾವುದಕ್ಕೂ ಮಹತ್ವ ನೀಡದೆ ಅವರ ಅಸ್ತಿತ್ವವನ್ನೆ ಹತ್ತಿಕ್ಕಿರುವುದೂ ಇತಿಹಾಸ. ಪುರುಷ ಹಿತ ಮತ್ತು ಚಿಂತನೆಗೆ ಆದ್ಯತೆ ಕೊಟ್ಟ ವ್ಯವಸ್ಥೆಯ ಮೌಲ್ಯಗಳನ್ನು ಮಹಿಳೆಯರು ಪುರುಷರು ಇಬ್ಬರೂ ರೂಢಿಸಿಕೊಂಡರು. ಹೊರ ಪ್ರಪಂಚಕ್ಕೆ ತೆರೆದುಕೊಳ್ಳಲಾಗದೆ, ಅವಲಂಬನೆ ಅನಿವಾರ್ಯವಾಗಿ ಬದುಕಿನ ಅಭದ್ರತೆಯಿಂದಾಗಿ ಪುರುಷನಿಗಿಂತ ಮಿಗಿಲಾಗಿ ಮಹಿಳೆಯೇ ರೂಢಿಸಿಕೊಂಡಿರುವ ಸಾಧ್ಯತೆಗಳಿವೆ. ಇದು ಮಹಿಳಾ ಬದುಕಿಗೆ ಅಸಮಂಜಸ ಎಂದು ತಿಳಿಯುವುದರೊಂದಿಗೆ ಪುರುಷ ಕೇಂದ್ರಿತ ಚಿಂತನೆಗಳಿಂದ ಬಿಡಿಸಿಕೊಳ್ಳಬೇಕಾದ ಸ್ಥಿತಿಯೂ ಇದೆ. ಹೀಗೆ ರೂಢಿಸಿಕೊಂಡ ಮೌಲ್ಯಗಳು ಮಹಿಳೆಯ ಇವತ್ತಿನ ಬದುಕಿನ ಮೇಲೆ ಬೀರುತ್ತಿರುವ ಪರಿಣಾಮಗಳ ಕುರಿತ ಅಧ್ಯಯನ ಮುಖ್ಯವಾಗುತ್ತದೆ. ಈ ನಿಟ್ಟಿನಲ್ಲಿ ಪ್ರಗತಿಶೀಲ ಬರಹಗಾರರ ಕಥನ ಸಾಹಿತ್ಯದ ಅಧ್ಯಯನ ಯೋಗ್ಯವೆನಿಸುತ್ತವೆ. ನಿರಂಜನರ 'ಬನಶಂಕರಿ' ಚದುರಂಗರ 'ವೈಶಾಖ' ವ್ಯಾಸರಾಯ ಬಲ್ಲಾಳರ 'ಉತ್ತರಾಯಣ' ಮುಂತಾದ ಕೃತಿಗಳನ್ನು ಅವಲೋಕಿಸಬಹುದು. ಇಂದಿನ ಮಹಿಳೆ ಅನುಸರಿಸುವ ಪುರುಷ ಪ್ರಧಾನ ಸಮಾಜದ ಮೌಲ್ಯಗಳನ್ನು ಪುರುಷರಿಗಿಂತ ಹೆಚ್ಚಾಗಿಯೇ ರೂಢಿಸಿಕೊಂಡ ಮಹಿಳೆ ಮಾನಸಿಕ ದೈಹಿಕ ಹಿಂಸೆಯನ್ನು ಸಹಿಸಿಕೊಳ್ಳುತ್ತಾಳೆ. ಹಲವು ಸಾರಿ ತನ್ನ ವೈಯಕ್ತಿಕ ದೌರ್ಬಲ್ಯಗಳಿಗೊಳಗಾಗಿ ನಲುಗುತ್ತಾಳೆ. ಬಹಳ ಸಂದರ್ಭಗಳಲ್ಲಿ ಪುರುಷ ಸಮಾಜದ ಧೋರಣೆಗಳು ಮಹಿಳೆಯ ಉನ್ನತಿಗೆ ತೊಡಕಾಗಿರುವುದನ್ನು ಪ್ರಗತಿಶೀಲ ಕೃತಿಗಳು

ಅನಾವರಣ ಮಾಡುತ್ತವೆ. ಉದಾರವಾದಿ ಧೋರಣೆಯ ಹಿನ್ನೆಲೆಯಲ್ಲಿ ಸ್ತ್ರೀಯರ ಸಮಸ್ಯೆಗಳಿಗೆ ಹಲವು ರೀತಿಯ ಉತ್ತರಗಳನ್ನು ಸೂಚಿಸುತ್ತವೆ. ಮಹಿಳೆಗೆ ಆತಂಕಕಾರಿಯಾಗಿರುವ ಬಾಲ್ಯವಿವಾಹ, ವಿಧವಾ ಸಮಸ್ಯೆಗಳು ಸುಧಾರಣೆಯಾಗಬೇಕಾಗಿರುವುದು ಈ ಕೃತಿಗಳ ಮುಖ್ಯ ಆಶಯವಾಗಿದೆ. ಹೆಣ್ಣಿಗೆ ತಾಯ್ತನದ ಹಕ್ಕೂ ಇಲ್ಲದಿರುವಾಗ ಕುಟುಂಬದ ಪೋಷಣೆಗೆ ಅದರ ಅಸ್ತಿತ್ವಕ್ಕಾಗಿ ಮಹಿಳೆಯನ್ನು ಬಯಸುವುದು ಅಸಮಾನತೆಯ ನೆಲೆಯದ್ದಾಗಿದೆ. ಇದನ್ನು ಕಥನ ಸಾಹಿತ್ಯ ಪ್ರಶ್ನಿಸುತ್ತದೆ. ಮಹಿಳೆಗೆ ಅವಳದೇ ಆದ ಬದುಕು ಕಟ್ಟಿಕೊಳ್ಳಲು ತೊಡಕಾಗಿರುವ ಸಾಮಾಜಿಕ ಮೌಲ್ಯಗಳನ್ನು ಪ್ರಗತಿಶೀಲ ಸಾಹಿತ್ಯ ಪ್ರಕಾರದಲ್ಲಿ ರಚನೆಯಾದ ಕೃತಿಗಳು ಚರ್ಚಿಸುತ್ತವೆ.

ನಿರಂಜನರ 'ಬನಶಂಕರಿ' ಕಾದಂಬರಿಯ ಕೇಂದ್ರ ಪಾತ್ರವಾದ ಬನಶಂಕರಿ ಬಾಲವಿಧವೆ. ಬನಶಂಕರಿ ವಿಧವೆಯಾಗುವುದೇ ಆಕಸ್ಮಿಕ. ಅಪಾರವಾದ ಕನಸುಗಳನ್ನು ಹೊತ್ತ ಬನಶಂಕರಿ ಅತ್ತೆ ಮಾವ ಮೈದುನರೊಂದಿಗೆ ಸಂಭ್ರಮದಿಂದ ಸೊಸೆಯಾಗಿ, ಮಗಳಾಗಿ ಮದುವೆಯಾದ ಕೆಲವೇ ದಿನಗಳು ಬಾಳಿದಳು. ವಿಧವೆಯಾದ ಕೆಲವು ದಿನಗಳಲ್ಲಿ ಅಣ್ಣನ ಮದುವೆಗೆಂದು ಬಂದವಳು ತೌರಿನಲ್ಲೇ ಉಳಿಯುವ ಸನ್ನಿವೇಶ ಒದಗಿ ಬರುತ್ತದೆ. ತಾಯಿ ತಂದೆಯನ್ನು ಕಳೆದುಕೊಂಡ ಬನಶಂಕರಿ ತನ್ನ ರಕ್ತಸಂಬಂಧಿ ಅಣ್ಣನ ಪ್ರೀತಿಯ ತಂಗಿಯಾಗಿದ್ದಳು. ದುರಾದೃಷ್ಟವಶಾತ್ ಮದುವೆ ಹಿಂದಿನ ರಾತ್ರಿ ಮದುಮಗನಾದ ಅಣ್ಣ ಹಾವು ಕಡಿದು ಮರಣ ಹೊಂದುತ್ತಾನೆ. ಇದ್ದೊಬ್ಬ ಅಣ್ಣನನ್ನು ಕಳೆದುಕೊಂಡ ಬನಶಂಕರಿ ಅನಾಥೆಯಾದಳು. ಈ ದುರಂತದಿಂದ ತತ್ತರಿಸಿದ ಬನಶಂಕರಿ ಅಣ್ಣನ ಶವಸಂಸ್ಕಾರ ಮಾಡಿ ಸ್ಮಶಾನದಿಂದ ವಾಪಾಸಾಗುವಾಗ ಅವಳ ಮಾವನನ್ನು ಕುರಿತು

> *"ಅಣ್ಣ ಇವತ್ತೇ ಸತ್ತದ್ದು ಒಳ್ಳೆಯದಾಯಿತು. ಅಲ್ವಾ ಮಾವ? ಇವತ್ತು ಸಾಯುವ ಬದಲು ಇನ್ನೆರಡು ದಿನಗಳ ಬಳಿಕ ಅಣ್ಣಸತ್ತಿದ್ದರೆ? ಆಗ ಈ ಸಾವು ಮತ್ತಷ್ಟು ಕ್ರೂರವಾಗಿರುತ್ತಿತ್ತು. ಅವನು ಕೈ ಹಿಡಿದು ತನ್ನ ಅತ್ತಿಗೆಯಾಗಿ ಬರಲಿದ್ದ ಹುಡುಗಿ......"*[1]

ಎನ್ನುವ ಮಾತುಗಳು ಬನಶಂಕರಿಯ ಬದುಕಿನ ಹಿನ್ನೆಲೆಯಿಂದ ಬಂದವು. ಬನಶಂಕರಿಯ ಬದುಕಿನಲ್ಲಿ ಬಂದ ಕರಾಳ ಛಾಯೆ ಜೀವನ ಜಿಗುಪ್ಸೆಯಾಗುವವರೆಗೆ ಬಿದ್ದಿತ್ತು. ಅಣ್ಣನ ಸಾವನ್ನೂ ಅರಗಿಸಿಕೊಳ್ಳುವ ಬನಶಂಕರಿ ಸಮಾಜವನ್ನೆದುರಿಸುವುದು ದೊಡ್ಡ ಸವಾಲಾಯಿತು. ತನ್ನ ಅಜ್ಜಿಯನ್ನು ಬಿಟ್ಟು ಬೇರೆಯಾರು ಇಲ್ಲದ ಬನಶಂಕರಿ ತನ್ನ ಊರು ಬಿಟ್ಟು ಅಜ್ಜಿಯೊಂದಿಗೆ ಬಾಳೆಮಣ್ಣೂರಿಗೆ ಬಂದು ಮಠದ ಕೆಲಸಕ್ಕೆ ನಿಲ್ಲುತ್ತಾಳೆ. ಬನಶಂಕರಿಯ ಪಕ್ಕದ ಮನೆಯ ಸುಂದರಮ್ಮ ಬನಶಂಕರಿಯ ಯೌವನ

---

೧. ಬನಶಂಕರಿ-ನಿರಂಜನ-ಡಿ.ವಿ.ಕೆ ಮೂರ್ತಿ, ಮೈಸೂರು – ೨೦೦೨-ಪು. ೪೧

ಸೌಂದರ್ಯವನ್ನು ಕಂಡು ಎಚ್ಚರಿಕೆಯ ಮಾತುಗಳನ್ನು ಹೇಳುತ್ತಾಳೆ. ಮಠದಲ್ಲಿ ವಿಧವೆ ಹೆಣ್ಣುಮಗಳು ಕೆಲಸಮಾಡುವುದರ ಹಿಂದೆ ಇರುವ ಅಪಾಯವನ್ನು ಮನಗಂಡು ಎಚ್ಚರಿಸುತ್ತಾಳೆ. ಸುಂದರಮ್ಮ ತನಗೆ ತಿಳಿದಿದ್ದ ಬಾಲವಿಧವೆ ಮಠದಲ್ಲಿ ಕೆಲಸಕ್ಕಿದ್ದು ದುರಂತಕ್ಕೀಡಾದ ರಹಸ್ಯದ ಕಥೆಯನ್ನು ಬನಶಂಕರಿಗೆ ಹೇಳಿ ಎಚ್ಚರಿಸುತ್ತಾಳೆ. ಬಾಲವಿಧವೆಯಾಗಿ ಕೇಶಮುಂಡನಕ್ಕೊಳಗಾದ ರಾಧೆ ಜೀವನಕ್ಕಾಗಿ ಊರಿನ ದೇವಸ್ಥಾನದ ಸೇವೆಗೆ ನಿಂತಿದ್ದಳು. ಹದಿನೆಂಟು ವರ್ಷದ ವಿಧವೆ ರಾಧೆ ಕೊನೆಗೂ ದೇವಸ್ಥಾನದ ಕೆರೆಯಲ್ಲಿ ಹೆಣವಾಗಿದ್ದಳು.

> *"ಆತ್ಮಹತ್ಯೆ ಭ್ರೂಣಹತ್ಯೆ ಎಂದು ಮಾತನಾಡಿಕೊಂಡರು ಅಷ್ಟೆ! ಮಂತ್ರೋಚ್ಚಾರಣೆ ದೇವಸ್ಥಾನವನ್ನು ಪವಿತ್ರಗೊಳಿಸಿತು ಅಷ್ಟೆ! ಈ ನೆನಪಿನಿಂದ ಕರುಳು ಕಿವುಚಿ ಬಂದಿತ್ತು ಸುಂದರಮ್ಮನಿಗೆ. ಒಡನಾಟದ ಆ ಸ್ನೇಹಿತೆಗೆ ಒದಗಿದ ದುರ್ಗತಿ...... ಅದರ ನೆನಪಾದಾಗಲೆಲ್ಲ ಮೈ ನಡುಗುತ್ತಿತ್ತು. ಈಗ ಈ ಬನಶಂಕರಿ........ ಕೂದಲು ಇಲ್ಲದೆ ವಿರೂಪವಾಗಿದ್ದ ರಾಧೆಯನ್ನೇ ಧರ್ಮರಕ್ಷಕರು ಬಿಟ್ಟಿರಲಿಲ್ಲ. ಸಕೇಶಿಯಾದ ಸುಂದರಿಯಾದ ಯುವತಿ ಬನಶಂಕರಿಯನ್ನು ಸುರಕ್ಷಿತವಾಗಿ ಅವರು ಇರಗೊಡುವುದುಂಟೆ ?"*[೧]

ಸುಂದರಮ್ಮನ ಈ ಆಲೋಚನೆ ಆ ಕಾಲಕ್ಕೆ ಸಮಂಜಸವಾದುದಾಗಿದೆ. ಅನಾಥ ಬಾಲವಿಧವೆಯರ ಬಾಳು ಅರಳುವ ಮುನ್ನ ಕಮರಿ ಹೋಗುವುದು ಸಾಮಾನ್ಯವಾಗಿತ್ತು. ರಾಧಾಳ ದುರಂತ ಕಥೆ 'ವಿಧವಾ ಮರುವಿವಾಹ'ವನ್ನು ಒತ್ತಿ ಹೇಳುತ್ತಿದೆ ಎನಿಸುತ್ತದೆ. ವಿದ್ಯಾವಂತೆಯಲ್ಲದ ಬನಶಂಕರಿಯ ಮುಂದೆ ಸುಂದರಮ್ಮ ರಾಮಶಾಸ್ತ್ರಿ ದಂಪತಿಗಳು ಬ್ರಷ್ಟ ವ್ಯವಸ್ಥೆಯನ್ನು ತೆರೆದಿಡುತ್ತಾರೆ. ಇದು ಅವರ ಸುಸಂಸ್ಕೃತ ಮನಸ್ಸನ್ನು ತೆರೆದು ತೋರಿಸುತ್ತದೆ.

ಬಾಳೆಮಣ್ಣೂರಿನ ಮಠದವರ ಕೆಟ್ಟ ನೋಟವನ್ನು ಹತ್ತಿಕ್ಕುವುದು ಅಜ್ಜಿ ಇರುವಷ್ಟು ಕಾಲ ಸಾಧ್ಯವಾಗುತ್ತದೆ. ಅಜ್ಜಿಯ ಕಾಲಾನಂತರ "ತಾನಿನ್ನು ಬಯಸಿದವರೆಲ್ಲ ಕೈಯೊಡ್ಡುವ ಕಳಿತ ಫಲವೇ ಹಾಗಾದರೆ ?" ಎಂದು ಸಂಕಟಪಡುತ್ತಾಳೆ. ಸುಂದರಮ್ಮನ ಸಂಪರ್ಕದಿಂದ ಪುಸ್ತಕ ಓದುವ ಅಭ್ಯಾಸದಿಂದ ಸಮಾಜವನ್ನರಿಯುವ ಪ್ರಯತ್ನ ಮಾಡುತ್ತಾಳೆ. ಲೇಖಕರು ಸ್ತ್ರೀ ಶಿಕ್ಷಣದ ಮಹತ್ವವನ್ನು ಹೇಳುತ್ತಾ 'ವಿಧವಾ ವಿವಾಹ'ದ ಅಗತ್ಯವನ್ನು ಅತ್ಯಂತ ಕಾಳಜಿಯಿಂದ ಕಾದಂಬರಿಯಲ್ಲಿ ಹೇಳುತ್ತಿದ್ದಾರೆ ಎನ್ನುವುದು ಮುಖ್ಯವಾಗುತ್ತದೆ. ಶಿಕ್ಷಣವನ್ನು ಬಲ್ಲ ಬನಶಂಕರಿ ಮರುವಿವಾಹಕ್ಕೆ ಸಜ್ಜಾಗುವುದು ಕೃತಿಯ ಮಹತ್ವದ ಎಚ್ಚರಿಕೆ ಎಂದು ಭಾವಿಸಬಹುದು. ಕಾದಂಬರಿಕಾರರ ಎದುರಿಗೆ ಧಾರ್ಮಿಕ ನಿರ್ಬಂಧಗಳನ್ನು ಪಾಲಿಸುತ್ತ ಮೌಢ್ಯ ಅಜ್ಞಾನ ಅವಿದ್ಯೆಗಳಿಂದ ತೊಳಲುವ ಸ್ತ್ರೀ ಸಮುದಾಯವೇ ಇತ್ತು.

---

೧. ಬನಶಂಕರಿ-ನಿರಂಜನ-ಡಿ.ವಿ.ಕೆ ಮೂರ್ತಿ, ಮೈಸೂರು – ೨೦೦೨-ಪು. ೬೪

ಇದಕ್ಕೆ ಪರಿಹಾರವೇನು ಎನ್ನುವ ಚಿಂತನೆಯಿಂದಲೇ ಕಾದಂಬರಿ ರೂಪುಗೊಂಡಿರುವುದು ವಿಶೇಷ ಸಂಗತಿ. ಅಗಲಿದ ಗಂಡ ಮತ್ತು ಅಣ್ಣನ ನೆನಪು ಕಾಡುವಾಗ ಮುದುಡುವ ಬನಶಂಕರಿಯ ಮನಸ್ಸು ಅಜ್ಜಿಯ ಮಮತೆಯ ಮಾತು ಕೇಳಿದಾಗ ಚೇತರಿಸಿಕೊಳ್ಳುತ್ತಿತ್ತು.

*"ಚೇತರಿಸಿಕೊಂಡಾಗಲೆಲ್ಲ ಬದುಕಿನ ಆಹ್ವಾನ ಸ್ವೀಕರಿಸುತ್ತಿದ್ದ ಅಮ್ಮಿ ಇನ್ನೊಂದು ಜೀವದ ಸ್ನೇಹಕ್ಕಾಗಿ ಹಂಬಲಿಸುತ್ತಿದ್ದಳು"*[೧]

ಲೇಖಕರು ಈ ಮಾತುಗಳಿಂದ ಬನಶಂಕರಿಯ ವೈಧವ್ಯದ ಸಮಸ್ಯೆಗೆ ಪರಿಹಾರ ಸೂಚಿಸುವುದು ಗಮನಾರ್ಹವಾದ ಅಂಶ. ಇದಕ್ಕೆ ಪೂರಕವಾಗಿ ಸುಂದರಮ್ಮ ಬನಶಂಕರಿಗೆ ಮರುವಿವಾಹಮಾಡಿಸುವ ಪ್ರಯತ್ನದಲ್ಲಿದ್ದಾರೆ. ಬನಶಂಕರಿಯನ್ನು ಮರುವಿವಾಹಕ್ಕೆ ಸಜ್ಜಾಗಿಸುವ ಮಾತುಗಳು ಗಮನಾರ್ಹವಾದವು.

*"ಇನ್ನೊಂದು ಮದುವೆ ಪಾಪವಲ್ಲ ಬನೂ...... ಖಂಡಿತಾ ಪಾಪವಲ್ಲ. ಧರ್ಮ ಶಾಸ್ತ್ರದ ಹೆಸರಲ್ಲಿ ನಿನಗೆ ಹಿಂಸೆ ಕೊಡುವುದಿದೆಯಲ್ಲ ಅದು ಪಾಪ. ನಾವೆಲ್ರೂ ದೇವರ ಮಕ್ಕಳೇ ಅಲ್ವ ? ಹಾಗಾದರೆ ನಾವೆಲ್ರೂ ಸುಖವಾಗಿದ್ರೆ ಆತನಿಗೆ ತೃಪ್ತಿತಾನೆ ? ...... ನಿಂಗೆ ತಿಳೀದು ಬನೂ......ನಮ್ಮವ್ರು ಎಷ್ಟೋ ಪುಸ್ತಕ ಓದಿದಾರೆ, ಬೆಂಗಳೂರು-ಮೈಸೂರು ಸಂಚಾರ ಮಾಡಿದ್ದಾರೆ. ಒಳ್ಳೊಳ್ಳೆ ವಿದ್ವಾಂಸರ ಜೊತೇಲಿ ಮಾತ್ನಾಡಿದಾರೆ ಅವರೇನಂತಾರೆ ಗೊತ್ತಾ ಇನ್ನೊಂದು ಮದುವೆ ಪಾಪ ಅಲ್ಲ ಅಂತ, ಗಂಡು ಎರಡನೇ ಮೂರನೇ ಮದ್ವೆ ಮಾಡಿಕೊಳ್ಳುವಾಗ ಹೆಂಗಸು ವಿಧವೆ ಮತ್ತೊಮ್ಮೆ ಮದುವೆಯಾಗೋದು ಪಾಪವಲ್ಲ"*[೨]

ಕರ್ಮ ಸಿದ್ಧಾಂತದ ಹಿನ್ನೆಲೆಯಲ್ಲಿ ಮರುಮದುವೆ ತಿರಸ್ಕರಿಸಬಹುದಾದ ಬನಶಂಕರಿಯ ಮನೋಬಿತ್ತಿಯಲ್ಲಿ ವಿಧವಾವಿವಾಹದ ಶ್ರೇಷ್ಠತೆಯನ್ನು ತುಂಬಿಸುವ ಸುಂದರಮ್ಮ ವೈಚಾರಿಕ ನೆಲೆಯಲ್ಲಿ ಮಾತನಾಡುತ್ತಾಳೆ. ಸುಂದರಮ್ಮನ ಮಾತುಗಳಿಂದ ದುಃಖಿತಳಾದರೂ ಬಿಡದೆ ಬನಶಂಕರಿಯನ್ನು ಉದ್ದೇಶಿಸಿ ಹೀಗೆ ನುಡಿಯುತ್ತಾಳೆ.

*"ನಿಂಗೆ ತಿಳೀದು ಬನೂ...... ಕಾಲ ಬದಲಾಗಿದೆ ಈಗ ...... ಹಿಂದೆ ಗಂಡ ಸತ್ತರೆ ಹೆಂಡ್ತೀನೂ ಜತೇಲಿ ಚಿತೆ ಏರ್ತಿದ್ಲು, ಇಷ್ಟವಿರಲಿ ಇಲ್ಲದಿರಲಿ, ಸಹಗಮನ ಮಾಡಿ ತಾನೂ ಬೂದಿಯಾಗ್ತಿದ್ಲು. ಈಗ ಹಾಗೆ ಮಾಡ್ತಾರೇನು ? ಈಗ ಅದರ ಬದ್ಲು, ಹೆಣ್ಣಿನ ತಲೆಬೋಳಿಸಿ ಕುರೂಪಿಯಾದ ಗೊಂಬೆ ಮಾಡಿ ಕೂರ್ಸೋದು ಈ ಜನಕು ಬೇಕು ! ನಮ್ಮವರು ಹೇಳ್ತಾ ಇದ್ರು ಎಲ್ಲೋ ಅಲ್ಲಿ ಇಲ್ಲಿ ವಿಧವೆಯರ ವಿವಾಹ ಆಗಿದೆಯಂತೆ. ಅಂಥವ್ರಿಗೆ ಬಹಿಷ್ಕಾರ ಹಾಕ್ಬೇಕೂಂತ ಕೆಲವರು ಹಠತೊಟ್ರೂನೂ ಆ ವಿಷಯದಲ್ಲಿ ಬಹಿಷ್ಕಾರ ಹಾಕೂಕೆ ಶಾಸ್ತ್ರದಲ್ಲಿ ಸಾಕಷ್ಟು ಆಧಾರ ಇಲ್ಲಾಂತ ಸ್ವಾಮಿಗಳು ಸುಮ್ನಾದ್ರಂತೆ ...... ಗೊತ್ತಾ ಈ ವಿಷಯಾ"*[೩]

---

೧. ಬನಶಂಕರಿ-ನಿರಂಜನ-ಡಿ.ವಿ.ಕೆ ಮೂರ್ತಿ, ಮೈಸೂರು – ೨೦೦೨-ಪು. ೬೦
೨. ಅದೇ ಪು- ಪು -೭೧
೩. ಅದೇ ಪು- ಪು -೭೨

ಈ ಮಾತುಗಳು ಬನಶಂಕರಿಯ ಕರ್ಮಸಿದ್ದಾಂತದ ಹಿನ್ನೆಲೆಯಲ್ಲಿ ಮರುವಿವಾಹವನ್ನು ತಿರಸ್ಕರಿಸುವ ಮನೋಭೂಮಿಕೆಯಿಂದ ದೂರ ಉಳಿಯುವಂತೆ ಪುಷ್ಟೀಕರಿಸುತ್ತವೆ. ಆ ಕಾಲಕ್ಕೆ ವಿಧವಾ ಮರುವಿವಾಹ ಪಾಪಪ್ರಜ್ಞೆಯಾಗಿ ಕಾಡುತ್ತಿದ್ದು ಶೀಲ, ತ್ಯಾಗ, ಸಹಿಷ್ಣುತೆಗಳೆ 'ವಿಧವಾ ಮೌಲ್ಯ'ವಾಗಿದ್ದವು. ಇದರಿಂದ ಹೊರಬರಲು ತಕ್ಕ ವಾತಾವರಣ ಇರಲಿಲ್ಲ. ಸಮಾಜ ವಿಧವೆಗೆ ಹೊರಿಸಿದ್ದ ನೈತಿಕ ವಿಧಿ-ನಿಷೇಧಗಳು ಮುಖ್ಯವಾಗಿದ್ದವು. ಸುಂದರಮ್ಮ ಬನಶಂಕರಿಗೆ ಮರುವಿವಾಹಕ್ಕೆ ಸಜ್ಜಾಗಿಸುವುದನ್ನು ಗಮನಿಸುವಾಗ ನಿರಂಜನರು ಮಹಿಳಾ ಸಮಸ್ಯೆಗಳನ್ನು ಮಹಿಳಾ ಪಾತ್ರಗಳೇ ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತವೆ ಎಂದು ಕಾದಂಬರಿಯಲ್ಲಿ ವ್ಯಕ್ತಪಡಿಸುತ್ತಾರೆ. 'ಒಬ್ಬಳು ಹೆಣ್ಣಿನ ನೋವು ಇನ್ನೊಬ್ಬ ಹೆಣ್ಣಿನ ಮಾನವೀಯತೆಯನ್ನು ಅರಳಿಸುವಲ್ಲಿ ಯಶಸ್ವಿಯಾಗುತ್ತವೆ' ಎಂಬ ಮಾತು ಅನ್ವಯಿಸುತ್ತದೆ.

**೨. <u>ವಿವಾಹ ಬಾಹಿರ ಸಂಬಂಧದಲ್ಲಿ ವಿಧವೆ</u>**

ಬನಶಂಕರಿಯ ಬಾಳಿಗೆ ಪ್ರವೇಶಿಸುವ ನಾರಾಯಣರಾಯರು ಕುಟುಂಬಸ್ಥರು, ಗೌರವಸ್ಥರು ಮತ್ತು ಮುಖ್ಯವಾಗಿ ಮಠದ ಪಾರುಪತ್ತೆಗಾರರು ಬನಶಂಕರಿಯ ಅಜ್ಜಿಯ ಮರಣದ ಸಂದರ್ಭದಲ್ಲಿ ಸಹಾಯಾರ್ಥವಾಗಿ ಕಾಣಿಸಿಕೊಳ್ಳುವ ನಾರಾಯಣರಾಯರು ಬನಶಂಕರಿಯನ್ನು ಮೋಹಿಸಿದ್ದರು. ಸಹಾಯ ಮಾಡುವ ನೆಪದಲ್ಲಿ ಬನಶಂಕರಿಯ ಬಾಳಿಗೆ ಪ್ರವೇಶಿಸುವ ನಾರಾಯಣರಾಯರನ್ನು ಕುರಿತು ಲೇಖಕರು ಹೀಗೆ ಹೇಳುತ್ತಾರೆ.

> *"ನಾರಾಯಣರಾಯರ ವಾತ್ಸಲ್ಯದಲ್ಲಿ ಅಮ್ಮಿಗೆ ಅರ್ಥವಾಗದೇ ಇದ್ದ ಸ್ವಾರ್ಥವಿತ್ತು ಅವರು ವಿಷಯಲಂಪಟರಾಗಿರಲಿಲ್ಲ. ಆದರೆ ರಸಿಕರಾಗಿದ್ದರು. ನಲವತ್ತು ವಯಸ್ಸಿನ ಆ ಪಾರುಪತ್ಯಗಾರರಿಗೆ ನಾಲ್ವರು ಮಕ್ಕಳಿದ್ದರು. ಅವರನ್ನು ಹೊತ್ತುಹೆತ್ತುದಲ್ಲದೆ ಎರಡು ಸಾರಿ ಬಸಿರುಕೂಡ ಕಳೆದಿದ್ದ ಅವರ ಹೆಂಡತಿ ತಕ್ಕಮಟ್ಟಿಗೆ ಸುಂದರಿಯೇ ಮನೆಯಲ್ಲಿ ಇಷ್ಟು ದೊಡ್ಡ ಸಂಸಾರವಿದ್ದರೂ ನಾರಾಯಣರಾಯರ ಗಮನ ಅತ್ತಿತ್ತ ಸುತ್ತಾಡದೆ ಇರುತ್ತಿರಲಿಲ್ಲ. ಅದು ಅವರ ದೇಹಕ್ಕೆ ಅಂಟಿಕೊಂಡಿದ್ದ ದೌರ್ಬಲ್ಯ. ಆದರೂ ಅವರು ಸಂಯಮದ ಜೀವನ ನಡೆಸುತ್ತಿದ್ದರು. ತಾವೂ ಮಾನವಂತರಾಗಿ ಸರ್ವಮಾನ್ಯರಾಗಿ ಇರಬೇಕೆಂಬುದು ಅವರ ಬಯಕೆಯಾಗಿತ್ತು"[೧].*

ನಾರಾಯಣರಾಯರು ನೇರವಾಗಿ ಬನಶಂಕರಿಯನ್ನು ತಮ್ಮ ಬಲೆಗೆ ಬೀಳಿಸಿಕೊಳ್ಳುವುದರಲ್ಲೂ ಅಪಾಯವಿತ್ತು. ಅದೇ ಸಂದರ್ಭದಲ್ಲಿ ಮಠದವರು ರಾಮಶಾಸ್ತ್ರಿಯನ್ನು ಅನುಮಾನಿಸಿ ಬನಶಂಕರಿಯನ್ನು ಪೀಡಿಸುತ್ತಿದ್ದರು. ಈ ಸಂದರ್ಭವನ್ನು ನಾರಾಯಣರಾಯರು ಚೆನ್ನಾಗಿಯೇ ಬಳಸಿಕೊಳ್ಳುತ್ತಾರೆ. ಆ ಕಾಲದ ಪುರುಷ ಕೇಂದ್ರಿತ ವ್ಯವಸ್ಥೆ ಪುರುಷನಿಗೆ ಬಹುಪತ್ನಿತ್ವಕ್ಕೆ ಅನಧಿಕೃತವಾಗಿ ಪರವಾನಗಿ ನೀಡಿತ್ತು. ಒಬ್ಬ ಪುರುಷ ಅಧಿಕಾರ ಮತ್ತು ಹಣದ ಬಲದಿಂದ

---

೧. ಬನಶಂಕರಿ-ನಿರಂಜನ-ಡಿ.ವಿ.ಕೆ ಮೂರ್ತಿ, ಮೈಸೂರು – ೨೦೦೨-ಪು. ೯೦

ಎಷ್ಟಾದರೂ ಮಹಿಳೆಯರನ್ನು ತನ್ನ ಲೈಂಗಿಕ ಅಪೇಕ್ಷೆಗಾಗಿ ಬಳಸಿಕೊಳ್ಳುವುದು ಅಷ್ಟೇನೂ ದೊಡ್ಡ ವಿಷಯವಾಗಿರಲಿಲ್ಲ. ನಾರಾಯಣರಾಯರಿಗೆ ಬನಶಂಕರಿಯನ್ನು (ಅಮ್ಮಿ) ಒಲಿಸಿಕೊಳ್ಳುವುದು ಕಷ್ಟವಾಗಲಿಲ್ಲ. ಅನಾಥೆಯಾದ ವಿಧವೆ ಯಾರ ಆಶ್ರಯಕ್ಕೆ ಹೋದರೂ ಅಲ್ಲಿ ಗೊಂದಲ ಸೃಷ್ಟಿಯಾಗುವುದು ಸಾಮಾನ್ಯವಾದದ್ದಾಗಿತ್ತು. ಅಮ್ಮಿ ಬದುಕಲು ಯಾರನ್ನಾದರೂ ಆಶ್ರಯಿಸಲೇಬೇಕಾಯಿತು. ಪ್ರೀತಿಯಿಂದ ಮಾತನಾಡಿ ಗೌರವದಿಂದ ಕಾಣುತ್ತಿದ್ದ ನಾರಾಯಣರಾಯರ ಬಲೆಗೆ ಬೀಳುವುದು ಆಶ್ಚರ್ಯವೆನಿಸುವುದಿಲ್ಲ. ನಾರಾಯಣರಾಯರು ಬನಶಂಕರಿಯನ್ನು ಮೆಚ್ಚಿಕೊಂಡ ವಿಚಾರ ಬಹಳ ದಿನಗಳು ಮುಚ್ಚಿಡಲು ಸಾಧ್ಯವಾಗಲಿಲ್ಲ. ಸುಂದರಮ್ಮನ ಪತಿ ರಾಮಶಾಸ್ತ್ರಿ ಪತ್ನಿಯೊಂದಿಗೆ ಹೀಗೆ ವಿಶ್ಲೇಷಿಸುತ್ತಾರೆ.

"ಸ್ವಲ್ಪ ರಸಿಕಾಂತಿಟ್ಕೊ – ಒಂದು ರೀತೀಲಿ ಒಳ್ಳೇವ್ನೆ, ಅಲ್ದೆ ಎರಡು ಮೂರು ಹೆಂಡ್ತೀರ್ನ ಕಟ್ಕೊಳ್ಳೋವ್ರಿಗೇನೂ ಬರಗಾಲ್ವೆ ಈ ಕಾಲ್ದಲ್ಲೀ" ಎಂದು ಅವರ ಸಂಬಂಧವನ್ನು ಸಮರ್ಥಿಸುತ್ತಾರೆ. ಆದರೆ ಸುಂದರಮ್ಮನ ಗ್ರಹಿಕೆಯೇ ಬೇರೆ. ನಾರಾಯಣರಾಯರು ಮದುವೆಯಾಗುವುದಿಲ್ಲ. 'ಇಟ್ಕೊಳ್ತಾರೆ' ಎಂದು ಭಾವಿಸುತ್ತಾಳೆ. ಆ ಕಾಲದ 'ವಿವಾಹ' 'ಕುಟುಂಬ'ಗಳ ಒಳಗೇ ಬದುಕು ಕಟ್ಟಿಕೊಳ್ಳಬೇಕಾದ ಅನಿವಾರ್ಯತೆ ಇದ್ದು ವಿವಾಹ ಬಾಹಿರ ಸಂಬಂಧವನ್ನು ಸಮಾಜ ಮಾನ್ಯಮಾಡದೆ ಅವಹೇಳನಕ್ಕೆ ಗುರಿಯಾಗುವ ಬನಶಂಕರಿಯ ಬದುಕಿನ ಬಗೆಗೆ ಸುಂದರಮ್ಮನಿಗೆ ಆತಂಕವಿದೆ. ಮಹಿಳೆಯ ಬದುಕಿನ ಎಲ್ಲಾ ಅಂಶಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡಿದ್ದ ಪುರುಷ ಪ್ರಧಾನ ವ್ಯವಸ್ಥೆಯನ್ನು ಮಹಿಳೆ ಮೀರಿದ್ದೇ ಆದರೆ ಅತೀವ ನೋವು ಸಂಕಟಗಳಿಗೆ ಗುರಿಯಾಗುತ್ತಿದ್ದಳು. ಆದರೆ ಸಾಮಾಜಿಕ ಮೌಲ್ಯಗಳು ವಿಧವೆಯರನ್ನು ಶಾಪದಂತೆ ಕಾಡಿರುವುದನ್ನು ಲೇಖಕರು ಅನಾವರಣಗೊಳಿಸುತ್ತಾರೆ. 'ವಿವಾಹ' 'ಕುಟುಂಬ' ಎಂಬ ಸಾಮಾಜಿಕ ಸಂಸ್ಥೆಗಳು ಕಟ್ಟುಪಾಡುಗಳಿಗೊಳಗಾದ ಮಹಿಳೆಯ ಲೈಂಗಿಕ ಬದುಕನ್ನು ನಿರ್ಧಿಷ್ಟ ಪುರುಷನೊಂದಿಗೆ ಬಂದಿಸಿತು. ಇದರಿಂದ ಹೊರತಾದ ಪುರುಷ ಸಂಬಂಧಕ್ಕೊಳಗಾದ ಮಹಿಳೆ ಸಾಮಾಜಿಕ ನಿಂದೆಗೆ ಒಳಗಾಗಿ ನೀತಿಬಾಹಿರಳಾಗಿ ಬದುಕಬೇಕಾಗಿತ್ತು. ಇಂತಹ ಅಸಂಬದ್ಧ ನೀತಿಯಿಂದ ಬನಶಂಕರಿಯನ್ನು ಹೊರತರುವ ಪ್ರಯತ್ನವನ್ನು ಸುಂದರಮ್ಮ ಮಾಡುತ್ತಾಳೆ. ಇದು ಅವಳ ಉದಾರ ನೀತಿಯ ಅಂತಃಕರಣಕ್ಕೆ ಸಾಕ್ಷಿಯಾಗುತ್ತದೆ. ಬಾಳೆಮಣ್ಣೂರಿನ ಮಠದವರು ರಾಮಶಾಸ್ತ್ರಿಯನ್ನು ಅನುಮಾನದಿಂದ ನೋಡುತ್ತಿರುವುದನ್ನು ನಾರಾಯಣರಾಯರು ಸದುಪಯೋಗ ಪಡಿಸಿಕೊಳ್ಳುತ್ತಾರೆ. ಆದರೆ ಸುಂದರಮ್ಮ ರಾಮಶಾಸ್ತ್ರಿ ದಂಪತಿಗಳಿಗೆ ಬನಶಂಕರಿಯ ಬಾಳು ಸುಂದರವಾಗಿ ಅರಳುವುದು ಮುಖ್ಯವಾಗುತ್ತದೆ. ಅವಳ ಬದುಕಿನ ಬಗ್ಗೆ ದೀರ್ಘಚರ್ಚೆ ಮಾಡುವ ದಂಪತಿಗಳು ಬಾಲವಿಧವೆಯ ಸುಂದರ ಬದುಕಿಗೆಬೇಕಾದ ಎಲ್ಲಾ ನಿರ್ಧಾರಗಳನ್ನು ಬಹಳ

ತಾಳ್ಮೆಯಿಂದ ತೆಗೆದುಕೊಳ್ಳುತ್ತಾರೆ. ಇದನ್ನು ಕಾದಂಬರಿಕಾರರು ಮಾನವೀಯ ನೆಲೆಯಲ್ಲಿ ಚಿತ್ರಿಸಿದ್ದಾರೆ. ನಾರಾಯಣರಾಯರು ಬನಶಂಕರಿಯನ್ನು ಇಟ್ಟುಕೊಳ್ಳುವ ನಿರ್ಧಾರ ತೆಗೆದುಕೊಳ್ಳುವುದು ತುಂಬಾ ಕಠಿಣವಾದುದು. ಈ ನಿರ್ಧಾರ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬಲಿಷ್ಠರಾದವರಿಗೆ ಮಾತ್ರ ಸಾಧ್ಯವಾದುದಾಗಿತ್ತು. ಇವರು ಮುಂದಿನ ಸವಾಲುಗಳಿಗೆ ಸಿದ್ಧರಾಗುತ್ತಾರೆ. ಇಲ್ಲಿ ಬನಶಂಕರಿಯ ಯಾವ ನಿರ್ಧಾರಗಳೂ, ಆಯ್ಕೆಗಳು ಮುಖ್ಯವಲ್ಲ. ನಾರಾಯಣರಾಯರ ನಿರ್ಧಾರ ಸಮಾಜ ಒಪ್ಪಿತವಲ್ಲದಿದ್ದರೂ ಪುರುಷ ಸಮಾಜದ ಮಾನ್ಯತೆ ಅಲಿಖಿತವಾದುದಾಗಿದೆ. ಆದರೆ ವಿವಾಹಿತರಾದ ನಾರಾಯಣರಾಯರು ಬನಶಂಕರಿಯ ಸಂಬಂಧಕ್ಕೆ ಅಡ್ಡಿಯಾದಾಗ ಮೌನವಾಗುತ್ತಾರೆ. ಆದರೆ ನಾರಾಯಣರಾಯರ ಪತ್ನಿ ಬನಶಂಕರಿಯ ವಿರುದ್ಧ ನಿಂತಾಗ ಇಡೀ ವ್ಯವಸ್ಥೆಯೂ ಬನಶಂಕರಿಯನ್ನು ವಿರೋಧಿಸುತ್ತದೆ. ಇಂತಹ ಸಂದರ್ಭದಲ್ಲಿ ಅವಿವಾಹಿತ ಸಂಬಂಧದಿಂದ ಪುರುಷನಿಗಿಂತ ಮಹಿಳೆಯರು ಹೆಚ್ಚು ದುಃಖಕ್ಕೊಳಗಾಗುತ್ತಾರೆ. ಸಮಾಜ ಮಹಿಳೆಯರನ್ನು ಎಂದಿಗೂ ಕ್ಷಮಿಸುವುದಿಲ್ಲ ಎನ್ನುವ ಸತ್ಯ ಎಲ್ಲರಿಗೂ ತಿಳಿದಿರುವುದೇ ಆಗಿದೆ.

ನಾರಾಯಣರಾಯರು ಸಮಾಜವನ್ನು ಎದುರು ಹಾಕಿಕೊಳ್ಳದೆ ಮೌನಿಯಾಗಿ ಅವರ ಸಮಯ ಸಾಧಕ ತನವನ್ನು ಪ್ರದರ್ಶಿಸುತ್ತಾರೆ. ಸಮಾಜ ಹೆಣ್ಣಿಗೆ ಒಂದು ನೀತಿ ಗಂಡಿಗೇ ಒಂದು ನೀತಿಯನ್ನು ಆರೋಪಿಸಿ ಶಿಕ್ಷಿಸುವುದು ದ್ವಿಸ್ತರ ನೀತಿಯಾಗಿ ಕಾದಂಬರಿ ಪ್ರಸ್ತುತ ಪಡಿಸಿದೆ. ಬನಶಂಕರಿಗೆ ಸಕಲ ಸೌಕರ್ಯಗಳನ್ನು ಒದಗಿಸಬಹುದಾದ ರಾಯರು ತಮ್ಮ ಅಪೇಕ್ಷೆಯನ್ನೇ ಮೆರೆಯುತ್ತಾರೆ. ರಾಯರಿಗೆ ಬನಶಂಕರಿಯ ದೇಹದ ಬಯಕೆ ತೀವ್ರವಾಗಿದ್ದುದರಿಂದ ವ್ಯವಸ್ಥೆಯನ್ನು ಮೌನವಾಗಿ ಎದುರಿಸುತ್ತಾರೆ.

೩. <u>**ಸ್ವಾರ್ಥಪರ ಪುರುಷ ಸಮಾಜದ ಚಿಂತನೆಗಳ ಹೇರುವಿಕೆ**</u>

ಬನಶಂಕರಿಗೆ ಸಕಲ ಸೌಕರ್ಯಗಳನ್ನು ಒದಗಿಸಬಹುದಾದ ರಾಯರು ಆಕೆಯಲ್ಲಿ ಮಕ್ಕಳಾಗುವುದನ್ನು ನಿರಾಕರಿಸುವುದು ಅವರ ಸ್ವಾರ್ಥಪರ ಧೋರಣೆಯನ್ನು ತೆರೆದಿಡುತ್ತದೆ. ಸಾಮಾಜಿಕವಾಗಿ ತೆರೆದುಕೊಳ್ಳಲಾಗದ ಬನಶಂಕರಿ 'ಘಟಾಶ್ರಾದ್ಧ' ತಪ್ಪಿದರೆ ಊರಿನಿಂದಲೇ ಬಹಿಷ್ಕಾರಕ್ಕೊಳಗಾಗುವುದು ವ್ಯವಸ್ಥೆಯ ಕ್ರೂರತೆಯನ್ನು ಪ್ರತಿನಿಧಿಸುತ್ತದೆ. ಇಬ್ಬರು ಮಕ್ಕಳೊಂದಿಗೆ ಬಹಿಷ್ಕೃತಳಾಗುವ ಭಯದಿಂದ ದೂರದ ಊರಿಗೆ ಬದುಕುವ ಆಸೆಯಿಂದ ತೆರಳುವುದು ಮಾನವೀಯ ಸಂವೇದನೆಯನ್ನು ಕಳೆದುಕೊಂಡ ಸಮಾಜವನ್ನು ಕಣ್ಣೆದುರಿಗೆ ನಿಲ್ಲಿಸುತ್ತದೆ. ರಾಯರಿಗೆ ಶಿಕ್ಷೆ ನೀಡದದೆ ಬನಶಂಕರಿಯ ಹೀನ ಸ್ಥಿತಿಗೆ ಕಾರಣವಾಗುವ ದ್ವಿಸ್ತರ ನೀತಿ ಹೇಯವಾಗಿ ಕಾಣುತ್ತದೆ. ರಾಯರಿಗೆ ಯಾವುದೇ ಶಿಕ್ಷೆ ನೀಡದೆ ಪುರುಷನ ಪ್ರತಿಷ್ಠೆ ಎಂದು ಭಾವಿಸುವ, ಕೊಳೆತು

ನಾರುವ ಸಾಮಾಜಿಕ ಮೌಲ್ಯಗಳು ಕ್ರೂರವಾಗಿ ಕಾಣುತ್ತವೆ. ಬನಶಂಕರಿ ಮಕ್ಕಳೊಂದಿಗೆ ಬಹಿಷ್ಕೃತಳಾಗುವಾಗ ರಾಯರು ಪ್ರೀತಿಯ ಕಾವನ್ನು ಕಳೆದುಕೊಂಡಿರುತ್ತಾರೆ. ರಾಯರನ್ನು ರಕ್ಷಿಸುವ ಬ್ರಾಹ್ಮಣ ಸಮುದಾಯ ಸಮಾಜದಲ್ಲಿ ನಡೆಯುವ ಕಾಮಸಂಬಂಧಿ ನ್ಯಾಯಗಳು ಅಸಮಾನತೆಯಿಂದ ಕೂಡಿವೆ ಎಂದು ನಿರೂಪಿಸುತ್ತವೆ. ಇಂತಹ ಅಸಮಾನವಾದ ನ್ಯಾಯ ಮಾನವನಿಂದ ನಿರ್ಮಿತವಾದವು. ಜಾತಿ ವರ್ಗಗಳಿಗೆ ಅನುಸಾರವಾಗಿ ನ್ಯಾಯತೀರ್ಮಾನವಾಗುವುದು ಯಾವುದೋ ಒಂದು ಸಮುದಾಯದವರ ಹಿತ ರಕ್ಷಣೆಯನ್ನು ಕಾಪಾಡುತ್ತಿರುತ್ತವೆ. ಸಕೇಶಿಯಾಗಿ ಬೇರೆ ಊರನ್ನು ಸೇರುವ ಬನಶಂಕರಿಗೆ ಮಕ್ಕಳನ್ನು ಸಾಕುವ ಛಲವಿದೆ. ಇನ್ನು ಇಪ್ಪತ್ತೆಂಟರ ಹರಯದ ಅವಳಲ್ಲಿ ದೇಹಬಯಕೆ ಇಂಗಿ ಮಕ್ಕಳ ಉಜ್ವಲ ಭವಿಷ್ಯದ ಬಯಕೆ ಇದೆ.

> *"ಏನೋ ಆಸೆ ಅಮ್ಮಿಗೆ ಒಂದಲ್ಲ ಒಂದು ದಿನ ತಮ್ಮ ಬಡತನ ನೀಗಬೇಕು ಯಾವುದರ ಕೊರತೆಯೂ ಇಲ್ಲದೆ ಸಮೃದ್ಧವಾಗಿ ಮಕ್ಕಳು ಬಾಳಬೇಕು. ಎಲ್ಲರ ಗೌರವಕ್ಕೆ ಅವರು ಪಾತ್ರರಾಗಬೇಕು. ವಿಧವೆಯ ಮಕ್ಕಳು ತಂದೆ ಇಲ್ಲದವರು ಅನ್ನಾನ್ನಗತಿಕರು ಎನಿಸಿಕೊಳ್ಳಬಾರದು ತಾನು ಬದುಕಿನಲ್ಲಿ ಅನುಭವಿಸದ ಸುಖ ಅವರು ಅನುಭವಿಸಬೇಕು"*[೧]

ಎಂತಹ ಪ್ರೀತಿ, ಎಂತಹ ಕನಸುಗಳು ಆ ಪುಟ್ಟ ಹೃದಯದಲ್ಲಿ ! ಇಂತಹ ಹೃದಯದಲ್ಲಿ ನಾರಾಯಣರಾಯರ ಬಗ್ಗೆ ದ್ವೇಷ ಮೂಡುವುದಿರಲಿ ಇಡೀ ವ್ಯವಸ್ಥೆಯನ್ನೇ ಕ್ಷಮಿಸುವ ಔದಾರ್ಯವಿದೆ. ಹಾಸನಕ್ಕೆ ಬಂದ ಅನೇಕ ದಿನಗಳ ನಂತರ ಬನಶಂಕರಿ ರಾಮಶಾಸ್ತ್ರಿಯೊಂದಿಗೆ "ಬಹಿಷ್ಕಾರ ಹಾಕಬೇಕಾದ್ದು ಧರ್ಮ ಅಲ್ವೇ ? ಅಣ್ಣ ? ಸುಮ್ನೆ ಇದ್ರೆ ನಾಳೆ ದಿನ ಸಮಾಜವೇ ಕೆಟ್ಹೋಗಲ್ವೇ" ಎನ್ನುತ್ತಾಳೆ. ಬನಶಂಕರಿ ಇದಕ್ಕಿಂತ ಭಿನ್ನವಾಗಿ ಯೋಚಿಸಲು ಸಾಧ್ಯವಿಲ್ಲ ಎನಿಸುತ್ತದೆ. ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳೇ ತುಂಬಿರುವ ಕೌಟುಂಬಿಕ ವ್ಯವಸ್ಥೆಯಿಂದ ಬದುಕಿಬಂದ ಮಹಿಳೆಯ ಆಲೋಚನೆಗಳು ಅವೇ ಮೌಲ್ಯಗಳನ್ನು ಪೋಷಿಸುತ್ತ ಸಾಗುತ್ತವೆ.

ಹಾಸನದಿಂದ ಬೆಂಗಳೂರಿಗೆ ಬಂದು ಜೀವನ ಸಾಗಿಸುತ್ತಿದ್ದ ಬನಶಂಕರಿಯನ್ನು ಜನ ಸಕೇಶಿಯಾದ್ದರಿಂದ ಪ್ರಶ್ನಿಸದೆ ಬಿಡಲಿಲ್ಲ. ಹಳ್ಳಿಯವರಿಗಿಂತ ಪಟ್ಟಣದವರೇ ಬೇರೆಯವರ ಬಗ್ಗೆ ಆಡಿಕೊಳ್ಳುವುದರಲ್ಲಿ ಒಂದು ಕೈ ಮೇಲು ಎನ್ನುವುದನ್ನು ತೋರಿಸಿಕೊಟ್ಟಿದ್ದರು. "ಸದಾ ಆತ್ಮರಕ್ಷಣೆಯ ಮುಖವಾಡ ಧರಿಸಿ ಅಭ್ಯಾಸವಾಗಿದ್ದ ಅಮ್ಮಿ ತನ್ನ ಮಕ್ಕಳ ರಕ್ಷಕಳಾಗಿ ಎಚ್ಚರದಿಂದ ಮಾತನಾಡಿದಳು, ಎಚ್ಚರದಿಂದ ನಡೆದಳು". ಬದುಕು ಕಲಿಸಿದ ಪಾಠ ಯಾರಿಗೂ ಭಯಪಡುವಂತಿರಲಿಲ್ಲ. ನಾರಾಯಣರಾಯರ ಮರಣ ಅವಳನ್ನು ದಂಗುಬಡಿಸಿತು. ತಾನು ಮತ್ತೆ ವಿಧವೆಯಾದದ್ದಕ್ಕಾಗಿ ಯಾತನೆಯನ್ನು ಅನುಭವಿಸಿದಳು.

---

೧. ಬನಶಂಕರಿ-ನಿರಂಜನ-ಡಿ.ವಿ.ಕೆ ಮೂರ್ತಿ, ಮೈಸೂರು - ೨೦೦೨-ಪು. ೧೫೫

*"ಅಂತೂ ಅವರು ತೀರಿಕೊಂಡರು, ಮುತ್ತೈದೆ ಸಾವಿಗಿಂತ ಮಿಗಿಲಾದ ಭಾಗ್ಯವಿಲ್ಲ ಹೆಂಗಸಿಗೆ, ಆದರೆ ತಾನು ಪಾಪಿ, ಎರಡು ಸಾರಿ ತಾನು ವಿಧವೆ ಎರಡು ಸಾರಿ"*[೧]

ಇಂತಹ ಶೋಕದಿಂದ ತಿರುಪತಿಯಲ್ಲಿ ಕೇಶಮುಂಡನ ಮಾಡಿಸಿಕೊಂಡು ಪ್ರಾಯಶ್ಚಿತ್ತ ಮಾಡಿಕೊಳ್ಳುವ ಬನಶಂಕರಿ ಸಂಪ್ರದಾಯ ಸಮಾಜದಲ್ಲಿ ಹೆದರಿ ಬದುಕುವುದನ್ನು ಕಾದಂಬರಿ ಅನಾವರಣ ಮಾಡುತ್ತದೆ. ಬನಶಂಕರಿಯ ಮಗ ಅವಳ ಕೇಶಮುಂಡನವನ್ನು ವಿರೋಧಿಸುತ್ತ ವ್ಯವಸ್ಥೆಯನ್ನು ನಿಂದಿಸುತ್ತಾನೆ.

*"ಒಬ್ಬ ಪುಟ್ಟ ಹುಡುಗನ್ನ ಕೈಹಿಡಿದ ಕೂಡ್ಲೆ ನೀನು ವಿಧವೆಯಾದ್ದಕ್ಕೆ ಪ್ರಾಯಶ್ಚಿತ್ತ, ಒಲಿಸ್ಕೊಂಡ ನಾರಾಯಣರಾಯರು ನಾಲ್ಕು ಜನಕ್ಕೆ ಹೆದರಿ ನಿನ್ನ ಕೈಬಿಟ್ಟಿದ್ದಕ್ಕೆ ಪ್ರಾಯಶ್ಚಿತ್ತ, ಕೆಟ್ಟ ಜನ ನಿನಗೆ ಸಾವಿರ ಮಾತಂದು ಸಾವಿರ ಹಿಂಸೆ ಕೊಟ್ಟಿದ್ದಕ್ಕೆ ಪ್ರಾಯಶ್ಚಿತ್ತ ಅಲ್ವೆ ?"*[೨]

ಬನಶಂಕರಿ 'ಮರುಮದುವೆ'ಗೆ ಒಳಗಾಗದೆ 'ವಿವಾಹಬಾಹಿರ' ಸಂಬಂಧದೊಳಗೆ ಬದುಕು ಕಟ್ಟಿಕೊಂಡಿದ್ದರ ಮಹತ್ವದ ಸಂಗತಿಯನ್ನು ಕಾದಂಬರಿಕಾರರು ವಿಶ್ಲೇಷಿಸುತ್ತಾರೆ. ಭ್ರಷ್ಟ ಸಂಪ್ರದಾಯಗಳನ್ನು ನಾರಾಯಣರಾಯರಿಗೇ ವಿರೋಧಿಸಲಾಗದಿರುವುದು ಬನಶಂಕರಿ ವಿರೋಧಿಸಿ ನಿಲ್ಲುವುದು ಅಸಾಧ್ಯವಾದುದೆಂದೆ ಬನಶಂಕರಿ 'ವಿವಾಹ''ಕುಟುಂಬ'ದಿಂದ ಹೊರತಾಗಿ ಬದುಕುವುದು ನೀತಿಬಾಹಿರವಾಗಿ ಕಾಣುವುದಿಲ್ಲ. ಮಕ್ಕಳೊಂದಿಗೆ ಬಾಳೆಮಣ್ಣೂರಿನಿಂದ ಹಾಸನಕ್ಕೆ ಗಡೀಪಾರಾಗುವ ಬನಶಂಕರಿ ತನ್ನ ಸಂಸಾರ ನಿರ್ವಹಣೆಗಾಗಿ, ಆತ್ಮರಕ್ಷಣೆಗಾಗಿ ಹಾಕಿಕೊಂಡ ಮುಖವಾಡಕ್ಕೆ ಆ ಸಮಾಜದ ಕೆಟ್ಟ ಸಂಪ್ರದಾಯಗಳು ಕಾರಣವಾಗುತ್ತವೆ. ನಿಜದ ಬದುಕನ್ನು ಮರೆಮಾಚಿ ಸ್ವಾತಂತ್ರ್ಯವಿಲ್ಲದೆ ಮಾನಸಿಕ ಕ್ಷೋಭೆಯಿಂದ ಮಕ್ಕಳ ಪಾಲನೆ ಮಾಡುವ ಬನಶಂಕರಿ ಸಂಪ್ರದಾಯ ಸಮಾಜದ ಮೌಲ್ಯಗಳ ಪಾಲನೆಯನ್ನೂ ಮಾಡುತ್ತಾಳೆ. ಬನಶಂಕರಿ ವ್ಯವಸ್ಥೆಯ ಅಪೇಕ್ಷೆಯನ್ನು ಮೀರಲು ಸಾಧ್ಯವಾಗದೆ ವಿರೋಧಿಸಲೂ ಆಗದೆ ತನ್ನ ವ್ಯಕ್ತಿತ್ವಕ್ಕೆ ಬೆಲೆಯೇ ಇಲ್ಲದಂತೆ ಬದುಕುವುದನ್ನು ಕಾದಂಬರಿ ಚಿತ್ರಿಸುತ್ತದೆ. ಪರಾವಲಂಬಿಯಾಗಿದ್ದು ಬನಶಂಕರಿ ಸ್ವತಂತ್ರವಾಗಿ ಬದುಕಬಲ್ಲಳು ಎನ್ನುವುದನ್ನೂ ಕಾದಂಬರಿ ಹೇಳುತ್ತದೆ. ಆದರೂ ಅನಾಥ ಮಹಿಳೆಯ ಸಾಮಾಜಿಕ ಬದುಕಿಗೆ ಆಸರೆಯಾಗಿ ನಿಲ್ಲುವ ಪುರುಷ ಶಕ್ತಿಯನ್ನು ಲೇಖಕರು ಎದುರು ನಿಲ್ಲಿಸುತ್ತಾರೆ. ಸಾಮಾಜಿಕವಾಗಿ ಸ್ವತಂತ್ರ ಬದುಕು ಕಟ್ಟಿಕೊಳ್ಳಲಾಗದ ಬನಶಂಕರಿ ವೈಯಕ್ತಿಕ ಬದುಕಿನಲ್ಲಿ ನೈಸರ್ಗಿಕ ಆಸೆಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗಿದೆ. ತನ್ನ ಬದುಕಿಗೆ ಲಭಿಸದ ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಕ್ಕಾಗಿ ಕೀಳರಿಮೆ ಬೆಳೆಸಿಕೊಂಡು ಇದರಿಂದಾಗಿ ಪುರುಷರ ಪ್ರಾಧಾನ್ಯತೆಯನ್ನು ಮನಗಂಡಿದ್ದಾಳೆ. ವಿವಾಹಬಾಹಿರ ಸಂಬಂಧವಾದರೂ ಎರಡು ಮಕ್ಕಳನ್ನು

---

೧. ಬನಶಂಕರಿ–ನಿರಂಜನ–ಡಿ.ವಿ.ಕೆ ಮೂರ್ತಿ, ಮೈಸೂರು – ೨೦೦೨–ಪು. ೧೯೩

೨. ಅದೇ ಪು– ಪು – ೧೯೬

ದಯಪಾಲಿಸಿ ತಾಯ್ತನದ ಹಂಬಲವನ್ನು ಈಡೇರಿಸಿದ ನಾರಾಯಣ ರಾಯರನ್ನು ಎಂದೆಂದೂ ಕೃತಜ್ಞತೆಯಿಂದ ಸ್ಮರಿಸುತ್ತಾಳೆ. ಎಷ್ಟೋ ಮಹಿಳೆಯರ ಅಪೇಕ್ಷೆಗಳು 'ವಿವಾಹ'ದ ಅಡಿಯಲ್ಲಿ ಕಮರಿ ಹೋಗುವುದು ವ್ಯವಸ್ಥೆಯ ದುರಂತ. ಅವಳ ಪರಿಪೂರ್ಣ ಬದುಕಿಗೆ 'ವಿವಾಹ'ವನ್ನೇ ಹಿನ್ನೆಲೆಯಾಗಿಟ್ಟು ಚರ್ಚಿಸುವ ಸಂಪ್ರದಾಯ ಸಮಾಜದಲ್ಲಿ ಆಗಬೇಕಾದ ಬದಲಾವಣೆಯನ್ನು ಕುರಿತು ಕಾದಂಬರಿ ಚರ್ಚಿಸುತ್ತಿದೆ ಎಂದು ಭಾವಿಸಬಹುದು.

೪. <u>ಕಾಮಸಂಬಂಧಿ ಅಸಾಮಾನತೆಯ ನೆಲೆಯಲ್ಲಿ ವಿಧವೆ</u>

ದರುಮನಳ್ಳಿಯ ದಲಿತ ಮತ್ತು ವೈದಿಕ ಜೀವನ ಪೂರ್ಣ ತೆರೆದುಕೊಳ್ಳುವ ಕಾದಂಬರಿ ಚದುರಂಗರ 'ವೈಶಾಖ'. ಬ್ರಾಹ್ಮಣ ಸಮುದಾಯದ ನಿರಂಕುಶ ಪ್ರಭುತ್ವದ ಸಂಪ್ರದಾಯಬದ್ಧ ಜೀವನ ಶೈಲಿ ಅನಾವರಣಗೊಳ್ಳುತ್ತದೆ. ಬಾಲವಿಧವೆ ರುಕ್ಮಿಣಿ ವೈಧವ್ಯದ ತತ್ವಗಳಿಗೆ ಬದ್ಧಳಾಗಿ ಬದುಕುವಾಗ ಪ್ರಕೃತಿ ಸಹಜ ಕಾಮನೆಗಳಿಗೆ ಒಳಗಾಗುವ ಹಾಗೂ ಇದರಿಂದ ದುರಂತಕ್ಕೊಳಗಾಗುವ ಚಿತ್ರಣ ಕಾದಂಬರಿ ತೆರೆದಿಡುತ್ತದೆ. ಬಾಲವಿಧವೆಯರ ವಯೋಸಹಜ ಕಾಮನೆಗಳು ಪುರುಷ ಸಮಾಜದ ಬಲತ್ಕಾರದೊಂದಿಗೆ ಸೋಲುವುದನ್ನು ಕಾದಂಬರಿಯಲ್ಲಿ ಗಮನಿಸಬಹುದು. ಇಂತಹ ಸಂದರ್ಭಗಳಲ್ಲೆಲ್ಲ ವಿಧವೆಯರು ಅನುಭವಿಸುವ ನೋವು ಮನೋವೇದನೆ, ಅಸಹಾಯಕತೆಗಳು ದುರಂತದಲ್ಲಿ ಕೊನೆಯಾಗುತ್ತವೆ. ಅನೇಕ ಸಂದರ್ಭಗಳಲ್ಲಿ ವಿಧವಾ ಮಹಿಳೆಯರು ಬ್ರಾಹ್ಮಣ ಸಮುದಾಯದವರ ಕಟ್ಟುಪಾಡುಗಳ ದೌರ್ಜನ್ಯಕ್ಕೊಳಗಾಗಿ ನಾಶವಾಗಿದ್ದಾರೆ. ವಿಧವೆ ಅಪ್ಪಿತಪ್ಪಿ ಬಸಿರಾದರೆ, ಆಕೆಯನ್ನು ಜಾತಿಯಿಂದ ಹೊರಹಾಕುವುದು 'ಘಟಾಶ್ರಾದ್ಧ' ಮಾಡುವುದು ತಲೆಬೋಳಿಸಿ ಕತ್ತೆಯ ಮೇಲೆ ಕೂರಿಸಿ ಮೆರವಣಿಗೆ ಮಾಡುವುದು ಮೊದಲಾದ ಅಮಾನವೀಯ ಕೃತ್ಯಗಳಿಗೊಳಗಾಗುತ್ತಿದ್ದಳು. ವೈಧವ್ಯ ಶಾಪವಾಗಿ ಪರಿಣಮಿಸಿದ್ದ ಆ ಕಾಲದ 'ಜೀವವಿರೋಧಿ' ನೀತಿ ಮನಃಕಲಕುವಂತಿದೆ. ಈ ಕಾದಂಬರಿ ಬ್ರಾಹ್ಮಣ ಸಮುದಾಯದ ಕ್ರೌರ್ಯಗಳನ್ನು ವಿಶೇಷವಾಗಿ ತೆರೆದಿಡುತ್ತದೆ.

ದರುಮನಳ್ಳಿಯ ಕೃಷ್ಣಶಾಸ್ತ್ರಿಗಳ ಮಗ ತೀರಿಕೊಂಡು ವಿಧವೆಯಾದ ರುಕ್ಮಿಣಿ ಮಾವನೊಂದಿಗೆ ಆ ಮನೆಯಲ್ಲಿ ವಾಸ್ತವ್ಯ ಹೂಡುವುದೇ ಇಡೀ ಕಾದಂಬರಿಯ ಮುಂದುವರಿಕೆಗೆ ಕಾರಣವಾಗುತ್ತದೆ. ರಕ್ಮಿಣಿಯ ಕೇಶಮುಂಡನವನ್ನು ತೀವ್ರವಾಗಿ ವಿರೋಧಿಸುವ ಕೃಷ್ಣಶಾಸ್ತ್ರಿಗಳು ಕೇಶಮುಂಡನಗೊಳ್ಳುವ ಬಾಲವಿಧವೆಯರನ್ನು ಕುರಿತು ಹೀಗೆ ಹೇಳುತ್ತಾರೆ.

> *"ಎಲ್ಲರ ಮನೇಲೂ ಇದೇಗೋಳು, ಈ ಶಾಪದಿಂದ ನಮ್ಮ ಸಮಾಜಕ್ಕೆ ಎಂದು ಮುಕ್ತಿ ದೊರೆಯುತ್ತೊ ಆ ಪರಮಾತ್ಮನಿಗೆ ಗೊತ್ತು" – ಒಂದೊಂದು ಮಾತನ್ನು ಹೃದಯದಲ್ಲಿ ತುಂಬಿದ್ದ ಅನುಕಂಪದಲ್ಲಿ ಅದ್ದಿಅದ್ದಿ ತೆಗೆದಂತೆ ಶಾಸ್ತ್ರಿಗಳು*

*ಆಡಿದ್ದರು. ಆ ಸನ್ನಿವೇಶದಿಂದಾಗಿ ರುಕ್ಮಿಣಿಯ ಮನದಲ್ಲಿ ತನ್ನ ಕಥೆಯೇ ಮತ್ತೊಮ್ಮೆ ಮರುಕಳಿಸಿದಂತಾಯಿತು. ತನ್ನ ಪತಿ ದೈವಾಧೀನರಾದಾಗ ಸುಶೀಲತ್ತೆಯ ಜೊತೆಗೆ ದರುಮನಳ್ಳಿಯ ಇಡೀ ಬ್ರಾಹ್ಮಣ ಸಮುದಾಯ ತನ್ನ ತಲೆಬೋಳಿಸಬೇಕೆಂದು ಕಟ್ಟುಗ್ರ ಆಗ್ರಹ ವ್ಯಕ್ತಪಡಿಸಿದಾಗ ಮಾವನವರು ಬಂಡೆಯಂತೆ ಅಚಲವಾಗಿ ನಿಂತು ಅವರೆಲ್ಲರನ್ನು ಏಕಾಂಗಿಯಾಗಿ ವಿರೋಧಿಸಿದ್ದರು. ಈ ಎಳೆಪ್ರಾಯದ ತರುಣಿಯ ಮಂಡೆ ಬೋಳಿಸಿ ವಿರೂಪಗೊಳಿಸಲು ನಾನೆಂದೂ ಒಪ್ಪಲಾರೆ ಎಂದು ಖಚಿತವಾಗಿ ನುಡಿದಿದ್ದರು"*[೧]

ಇದನ್ನು ಒಪ್ಪದ ಕೇಶವಯ್ಯ ಅತಿಯಾಗಿ ಆರ್ಭಟಿಸಿ "ನಿಮಗೆ ಬಹಿಷ್ಕಾರ ಹಾಕಬೇಕಾಗುತ್ತದೆ" ಎನ್ನುವುದರೊಂದಿಗೆ ಇಡೀ ಬ್ರಾಹ್ಮಣ ಸಮುದಾಯದವರು ಗುಡುಗಿದ್ದರು.

"ಬಹಿಷ್ಕಾರ ಹಾಕ್ತಿರೇನ್ರಯ್ಯ, ಹೋಗಿ ಹಾಕ್ಕೊಳ್ಳಿ ಎಂದು ದೃಢವಾಗಿ ಹೇಳಿ ವಿರೋಧಿಸಿದ್ದರು. ಆದರೆ ಶಾಸ್ತ್ರಿಗಳ ತಂಗಿ ಸುಶೀಲತ್ತೆ ಕೇಶಮುಂಡನಕ್ಕೆ ಒತ್ತಾಯಿಸುತ್ತಾ

*"ಆಚಾರ ಬಹು ಪ್ರಾಚೀನ ಕಾಲದಿಂದ್ಲು ನಡೆದು ಬಂದ ಪದ್ಧತಿ. ಅದಕ್ಕೆ ವಿರೋಧವಾಗಿ ಹೋಗಬಾರದು ಕಿಟ್ಟಣ್ಣ ಅದರಲ್ಲೂ ಈ ಸಣ್ಣ ವಿಷಯಕ್ಕೆ ಇಡೀ ಸಮಾಜವನ್ನೇ ಮೈಮೇಲೆ ಹಾಕಿಕೊಳ್ಳುವುದರಲ್ಲಿ ಯಾವ ಜಾಣತನವಿದೆ ? ...... ನೀನೆ ಹೇಳು ......" ಹೀಗೆ ಇನ್ನೂ ಏನೇನೋ ಗಳಹುವುದರಲ್ಲಿದ್ದ ಸುಶೀಲತ್ತೆಗೆ, "ಸುಶೀ ನೀನು ಮಾತಾಡಬಾರ್ದು ಸುಮ್ಮನಿರು" ಎಂದು ಕಠಿಣವಾಗೇ ಹೇಳಿದರು"*[೨]

ಹೀಗೆ ಕೇಶಮುಂಡನವನ್ನು ವಿರೋಧಿಸುವ ಶಾಸ್ತ್ರಿಗಳ ಕುಟುಂಬವನ್ನು ಬ್ರಾಹ್ಮಣ ಸಮುದಾಯದವರು ಅವರ ಒಳ್ಳೆಯದು ಕೆಟ್ಟದ್ದೂ ಯಾವುದಕ್ಕೂ ಪ್ರವೇಶ ನೀಡಲಿಲ್ಲ. ಇವರ ಮನೆಗೂ ಬರುವುದಕ್ಕೆ ನಿಷೇಧ ಹೇರಿದ್ದರು. ಇದರ ಕೆಟ್ಟ ಪರಿಣಾಮ ರುಕ್ಮಿಣಿಗೆ ಬೀರತೊಡಗಿತು. ಸುಶೀಲತ್ತೆಯ ಕುಹಕದ ಮಾತುಗಳು ನಿಂದೆಗಳು ಅತಿಯಾದವು. ವಿಧವೆಯಾದ ರುಕ್ಮಿಣಿ ಆಡಿಕೊಳ್ಳುವ ಶೋಷಿಸುವ ಸುಶೀಲತ್ತೆಯ ವಶವಾದಳು. ರಾತ್ರಿ ಮಲಗಿ ನಿದ್ರಿಸುವ ರುಕ್ಮಿಣಿಯ ತಲೆಕೂದಲನ್ನು ಕತ್ತರಿಸಲು ಮುಂದಾದ ಸುಶೀಲಳು ರುಕ್ಮಿಣಿಯ ಬಾಳಿಗೆ ಮುಳ್ಳಾಗುತ್ತಾಳೆ. ಇದನ್ನು ಅರಿತ ಶಾಸ್ತ್ರಿಗಳು ರುಕ್ಮಿಣಿಯನ್ನು ತೌರಿಗೆ ಕಳುಹಿಸಿ ಸ್ವಲ್ಪ ನಿರಾಳವಾಗುತ್ತಾರೆ. ಕೆಲವು ಕಾಲ ತೌರಿನಲ್ಲಿದ್ದ ರುಕ್ಮಿಣಿ ಹಲವಾರು ಸಮಸ್ಯೆಗಳನ್ನು ಎದುರಿಸುವುದು ಅನಾಥೆಯಾಗಿ ತೌರಿಗೆ ಹೋದ ರುಕ್ಮಿಣಿಯ ಬದುಕಿನ ಭಾಗವೇ ಆಗಿ ಚಿತ್ರಣಗೊಂಡಿದೆ. ಗಂಡನನ್ನು ಕಳೆದುಕೊಂಡ ಹದಿನೈದನೇ ದಿನಕ್ಕೆ ತನ್ನ ಪ್ರಾಣ ಕಳೆದುಕೊಳ್ಳಲು ಬಾವಿಗೆ ಹಾರಿ ಆತ್ಮಹತ್ಯೆಗೆ ಯತ್ನಿಸಿದ ರುಕ್ಮಿಣಿಯನ್ನು ಬದುಕಿಸಿದ್ದವನು ಲಕ್ಕ. ಆ ನೆನಪು ಮರುಕಳಿಸಿ ಬದುಕು ಬಂದ ಕಡೆಗೆ ದಾರಿಸಾಗಬೇಕಾದದ್ದನ್ನು ರುಕ್ಮಿಣಿ ನೆನೆಸಿಕೊಂಡು ಮುಂದಿನ ಬದುಕಿನ ದಾರಿ ಕಂಡುಕೊಳ್ಳುವಂತಾಗುತ್ತದೆ.

---

೧. ವೈಶಾಖ – ಚದುರಂಗ – ನವ್ವಾಲೆ ಪ್ರಕಾಶನ ಮೈಸೂರು – ೧೯೯೩. ಪು. ೪೪–೪೫

೨. ಅದೇ ಪು– ಪು – ೪೫

೫. <u>ಅನಾಥೆಯಾಗಿ ವಿಧವೆ</u>

ಮಾವನ ಮನೆಯಲ್ಲಿ ಒಂಟಿಯಾಗಿದ್ದ ಸಮಯದಲ್ಲೆಲ್ಲ ರುಕ್ಮಿಣಿ ಕೆಲವಾರು ಮನೆಗಳಿಗೆ ಹೋಗಿ ಬೇಸರ ನೀಗಿಸಿಕೊಳ್ಳುತ್ತಿದ್ದಳು. ಅವುಗಳಲ್ಲಿ ಕೇಶವಯ್ಯನವರ ಮನೆಯೂ ಒಂದು. ಕೇಶವಯ್ಯನವರ ಮನೆಯಲ್ಲಿ ಪಗಡೆ ಆಡುತ್ತಿದ್ದ ಕೇಶವಯ್ಯ ಮತ್ತು ಅವರ ಪತ್ನಿ ಸೀತಾಲಕ್ಷ್ಮಿಯೊಂದಿಗೆ ರುಕ್ಮಿಣಿಯೂ ಆಡುತ್ತಿದ್ದಳು. ಒಮ್ಮೆ ಮೋಸದಿಂದ ರುಕ್ಮಿಣಿಯ ಕಾಯಿಗಳನ್ನು ಹಣ್ಣು ಮಾಡುತ್ತಿದ್ದ ಕೈಚಳಕವನ್ನು ಪಕ್ಕದ ಮನೆಯ ಲಕ್ಷಮ್ಮ ನೋಡಿ ಎಚ್ಚರಿಸುತ್ತಾರೆ. ಇದರಿಂದ ಕೋಪಗೊಂಡ ಕೇಶವಯ್ಯರ ಪತ್ನಿ ಸೀತಾಲಕ್ಷ್ಮಿ ಆಟಬಿಟ್ಟು ಒಳನಡೆದರೆ, ರುಕ್ಮಿಣಿಗೆ ಬೇಸರವಾಗುತ್ತದೆ. ಆದರೆ ಕೇಶವಯ್ಯ ರುಕ್ಮಿಣಿಗೆ ಮಹಾಭಾರತದಂತಹ ಸಂದರ್ಭದಲ್ಲೇ ಕೃಷ್ಣನ ಮೋಸ ಹೇಗೆ ಕೆಲಸ ಮಾಡಿತ್ತು ಎಂದು ಹೇಳುವುದರೊಂದಿಗೆ ರುಕ್ಮಿಣಿಯನ್ನು ಸಮಾಧಾನ ಪಡಿಸುತ್ತಾನೆ. ಆದರೆ ಕುಪಿತಗೊಂಡ ರುಕ್ಮಿಣಿ ಮುಂದೆ ಆಟಕ್ಕೆ ತೆರೆ ಎಳೆಯುತ್ತಾಳೆ. ಅಲ್ಲಿ ಅನುಮಾನ ಬಿತ್ತಿದ ಲಕ್ಷಮ್ಮ ರುಕ್ಮಿಣಿಯ ಹತ್ತಿರ ಅವಲಕ್ಕಿ ತೆಗೆದುಕೊಂಡು ಕೇಶವಯ್ಯನ ಮೇಲೆ ಚಾಡಿಯನ್ನು ಬಿತ್ತಿ ಹೋಗುತ್ತಾಳೆ. "ನೆರಮನೆಯ ಹೆಂಗಸಿಗೆ ನೆಗೆದು ಮುತ್ತು ಕೊಡುವ ಜಾತಿ ! ನಾನು ಹೀಗೆ ಹೇಳಿದೆ ಎಂದು ಬೇಸರ ಪಟ್ಟುಕೊಬೇಡಮ್ಮ" ಎಂದು ಹೊರಟು ಹೋಗುವಾಗ ರುಕ್ಮಿಣಿ ಬೆಳ್ಳಿ ಲೋಟದಲ್ಲಿ ಹಾಲು ಕುಡಿಯುವುದನ್ನು ನೋಡಿ ಲಕ್ಷಮ್ಮ "ಹಾಲು ಕುಡಿಯಬೇಡವೆ ರುಕ್ಕು ಹಾದರ ಮಾಡುವ ಹಾಗಾಗುತ್ತೆ" ಎನ್ನುತ್ತಾರೆ. ರುಕ್ಮಿಣಿಯನ್ನು ಚುಚ್ಚುಮಾತುಗಳಿಂದ ಎಚ್ಚರಿಸುತ್ತಾ, ಅನುಮಾನಿಸುತ್ತ ನೆರೆಹೊರೆಯವರು ಕಾಡಿಸುತ್ತಾರೆ. ಇವ್ಯಾವುದು ಅವಳ ಬದುಕುವ ನಿರ್ಧಾರವನ್ನು ದುರ್ಬಲಗೊಳಿಸಲು ಅಸಮರ್ಥವಾಗುತ್ತವೆ. "ಲಕ್ಷಮ್ಮ ಆಗಾಗ ಮುಸುಕು ಹಾಕಿದ ಮಾತುಗಳಲ್ಲಿ ಸೂಕ್ಷ್ಮವಾಗಿ ರುಕ್ಮಿಣಿಯನ್ನು ಚುಚ್ಚುತ್ತಲೇ ಇದ್ದಳು" ಮೊದಮೊದಲು ಲಕ್ಷಮ್ಮನ ಮಾತಿನ ಮರ್ಮ ಅರಿಯದ ರುಕ್ಮಿಣಿ ಸ್ವಲ್ಪ ದಿನಗಳಲ್ಲೇ ಮಾತಿನ ಜಾಡುಹಿಡಿದು ಅರ್ಥೈಸಿಕೊಂಡಳು. ಅಲ್ಲಿ ಇಲ್ಲಿ ಹರಿದಾಡಿದ ಮಾತುಗಳು ರುಕ್ಮಿಣಿಯ ಕಿವಿಗೂ ಬಿದ್ದುವು.

> *"ಗಂಡಸು ಹೆಂಗಸು ಇಬ್ಬರೇ ಒಂದೇ ಜಾಗದಲ್ಲಿ ಹಗಲು ರಾತ್ರಿ ವಾಸಮಾಡಬಹುದೆ ? ಸಾಕ್ಷಾತ್ ಬ್ರಹ್ಮದೇವ ತಾನೇ ಸೃಷ್ಟಿಸಿದ ಮಗಳು ಶಾರದೆಯಲ್ಲೇ ಮೋಹಗೊಳ್ಳಲಿಲ್ಲವೆ ? ಎಂಬ ತರ್ಕವಾಗಿ ಆರಂಭವಾದದ್ದು ಕೃಷ್ಣಶಾಸ್ತ್ರಿಗಳು ಪ್ರಾಯದ ಹೆಣ್ಣು ರುಕ್ಮಿಣಿ ಒಟ್ಟಿಗಿರುವಾಗ ಎಲ್ಲವೂ ಮುಗಿದೇ ಹೋಗಿರಬೇಕು ಎನ್ನುವ ಹಂತವನ್ನೂ ಮುಟ್ಟಿತು. ಮೊಸರು ಕಡೆಯುತ್ತ ರುಕ್ಮಿಣಿಯು "ನನ್ನ ಮಾವಯ್ಯ ದೇವರಂತ ಮನುಷ್ಯ ಒಂದು ದಿನವೂ ಸಹ ನನ್ನನ್ನು ಕಣ್ಣೆತ್ತಿ ನೋಡಲ್ಲ. ಇಂಥ ಪುಣ್ಯಾತ್ಮರ ಚಾರಿತ್ರ್ಯ ವಧೆ ಮಾಡಲಿಕ್ಕೂ ಜನ ಹೇಸಲ್ಲವಲ್ಲ ?........" ವ್ಯಸನ ಪಡುತ್ತ, ಕಡೆಯುವ ಮಂತಿಗೆ ನೀರು ಚಲ್ಲಿ*

*ತೊಳೆದು ಬೆಣ್ಣೆಯನ್ನು ಒಂದು ಕಡೆಯಿಂದ ಸುತ್ತಲೂ ಬಳಿದು ಉಂಡೆ ಮಾಡುತ್ತ, "ಅಯ್ಯೋ ಇದರಲ್ಲೇನು ವಿಶೇಷ ? – ಅಂಥ ಮಹಾಪತಿವ್ರತೆ ಸೀತಾದೇವಿಯ ಬಗ್ಗೆಯೇ ಕೇವಲ ಅಗಸನೊಬ್ಬ ಜರಿದು ಕುತ್ಸಿತ ಟೀಕೆ ಮಾಡಲಿಲ್ಲವೆ ?......ನೆಕ್ಕುವ ನಾಯಿಗೆ ಲಿಂಗವೇನು ? ಪಾಣಿ ಬಟ್ಟಲೇನು ? ಎಂದು ಸಿಡಿಮಿಡಿಗೊಂಡವಳು. ಒಲೆಯ ಮೇಲೆ ಕುದಿಯುವ ತುಪ್ಪವನ್ನು ಉಕ್ಕದಂತೆ ಸೌಟಾಡಿಸುತ್ತ ಅವಳ ಮನಸ್ಸು ಬಿದ್ದು ಕುದಿಯಿತು"*[೧]

ಇಂತಹ ಚಿಂತೆ ಕುಟ್ಟುವ ಕೊಟ್ಟಣವಾಗಿ ರುಕ್ಮಿಣಿಯನ್ನು ಕಾಡಿತ್ತು. ರಾತ್ರಿ ನಿದ್ರೆಯಲ್ಲೂ ಒದ್ದಾಡಿ ನಿದ್ರೆ ಹತ್ತುವಾಗ ಹೆಜ್ಜೆ ಸಪ್ಪಳ ಅವಳಿಗೆ ವಿಸ್ಮಯವನ್ನುಂಟು ಮಾಡುತ್ತದೆ. ಇದಕ್ಕೂ ಒಂದು ಪರಿಹಾರ ಕಂಡುಕೊಳ್ಳುತ್ತಾಳೆ. ಮಾವಯ್ಯನನ್ನು ಗಮನಿಸಿದಾಗ ಯಾವ ಉತ್ತರವೂ ಸಿಗಲಿಲ್ಲ ಅನುಮಾನ ದಟ್ಟವಾಗುತ್ತ ಸಾಗಿ ಇಡೀ ದಿನ ಅವಳನ್ನು ತೊಳಲಾಡಿಸಿತು. ಕೊನೆಗೂ ಅವಳಿಗೆ ಬಂದ ಆಲೋಚನೆ ತನ್ನ ಮಲಗುವ ಕೋಣೆಗೆ ಬರುವ ವ್ಯಕ್ತಿಯನ್ನು ಪತ್ತೆ ಹಚ್ಚಲೇಬೇಕೆಂದು. ಇದಕ್ಕಾಗಿ ಒಲೆಯ ಬೂದಿಯನ್ನು ತಂದು ತಾನು ಮಲಗುವ ಕೋಣೆಯ ಬಾಗಿಲಿನ ಮುಂದುಗಡೆ ಅಗಲವಾಗಿ ಅದನ್ನು ಹರಡಿ ಮಲಗಿದಳು. ನಿದ್ರೆಗೆ ಜಾರಿದ ರುಕ್ಮಿಣಿಗೆ ಬೆಳಗಿನಲ್ಲಿ ಕಂಡ ಹೆಜ್ಜೆ ಗುರುತುಗಳು ನಂಬಲಸಾಧ್ಯವಾದದ್ದನ್ನು ನಂಬಿಸುತ್ತಿತ್ತು. ಮಾವಯ್ಯ ಮಲಗಿರುವಲ್ಲಿಗೆ ಹೆಜ್ಜೆ ಗುರುತು ಸಾಗಿ ನಂತರ ಇಲ್ಲವಾಗಿ ಕೊನೆಗೆ ಅವರು ಹೊದ್ದ ಶಾಲು ಬೂದಿಮಯವಾಗಿದ್ದುದನ್ನು ಗಮನಿಸಿದ ರುಕ್ಮಿಣಿ ತಡೆಯಲಾರದ ಬೆರಗಿನಿಂದ ಕುಸಿದು ಹೋದಳು.

*"ಸುರಕ್ಷಿತವಾಗಿ ತಾನು ಕುಳಿತು ಸಾಗುತ್ತಿದ್ದ ಹರಿಗೋಲು ಥಟ್ಟನೆ ಮಗುಚಿ ದಂತಾಗಿ ಹೊಳೆಯ ನೀರಿಗೆ ಬಿದ್ದು ಉಸಿರು ಕಟ್ಟಿ ಕೈಕಾಲು ಬಡಿಯುತ್ತಿರುವ ಅನುಭವ ನೀರಿನ ಸಳಕು ಮುಳುಗಿಸಿ ಮೇಲೆತ್ತಿ ತೇಲಿಸಿ ಸೆಳೆದುದೊಯ್ಯುತ್ತ ರಾಮನಾಥಪುರದ ಗೋವುಗಲ್ಲಿನ ಗರ್ಭದ ಕತ್ತಲೆಗೆ ನೂಕಿ ಅಲ್ಲಿ ಹೊಳೆಯ ನೀರು ಎತ್ತಿ ಎತ್ತಿ ಕುಕ್ಕಿ ಕುಕ್ಕಿ ಕಡೆಗೊಮ್ಮೆ ಆಚೆಗೆ ಹಬ್ಬಿದಂತಾಗಿ ದಡಕ್ಕೆ ಬಂದು ಬಿದ್ದಿದ್ದಳು."*[೨]

ಕಾದಂಬರಿಯ ಈ ಮಾತುಗಳು ರುಕ್ಮಿಣಿಯ ಬಾಳನೌಕೆ ಹಠಾತ್ತನೆ ಮುಳುಗಿ ಹೋಗುವುದನ್ನು ಸಂಕೇತಿಸುತ್ತವೆ. ಅವಳಿಗರಿವಾಗದಂತೆ ಅವಳ ಮಾವನ ಅದುಮಿಟ್ಟ ಸಂಯಮ ಕೊಚ್ಚಿ ನುಗ್ಗಿರುವುದು ಕಾದಂಬರಿಯಲ್ಲಿ ಅನಾವರಣಗೊಳ್ಳುತ್ತದೆ.

*"ಬಿಚ್ಚಿ ಹೋದ ಕಚ್ಚೆಯನ್ನು ಸರಿಪಡಿಸಿಕೊಳ್ಳುತ್ತ ರುಕ್ಮಿಣಿಯ ಕೋಣೆಯಿಂದ ಹೊರನಡೆದ ಕೃಷ್ಣಶಾಸ್ತ್ರಿಗಳು ಬಿಚ್ಚಿಹೋದ ತಮ್ಮ ಸಂಯಮದ ಗಂಟನ್ನು ಮತ್ತೊಮ್ಮೆ ಸರಿಪಡಿಸುವ ಯತ್ನದಲ್ಲೇ ಇಡೀ ರಾತ್ರಿಯನ್ನು ಕಳೆದರು. "ನಾನು ಎಂಥ ಪಾಪ ಮಾಡಿದೆ, ಎಂಥ ಪಾಪ ಮಾಡಿದೆ" – ಎಂದು ಹಲುಬುತ್ತ ಕಣ್ಣೀರಿಟ್ಟರು."*[೩]

೧. ವೈಶಾಖ – ಚದುರಂಗ – ನವ್ಯಾಲೆ ಪ್ರಕಾಶನ ಮೈಸೂರು – ೧೯೯೩. ಪು. ೧೦೯–೧೧೦
೨. ಅದೇ ಪು– ಪು – ೧೧೨–೧೧೩
೩. ಅದೇ ಪು– ಪು – ೧೧೨–೧೧೩

ಶಾಸ್ತ್ರಿಗಳು ಸಂಯಮ ಕಳೆದುಕೊಂಡದ್ದಕ್ಕಾಗಿ ಪಶ್ಚಾತ್ತಾಪ ಪಟ್ಟರು. ತಮ್ಮನ್ನು ತಾವು ನಿಂದಿಸಿಕೊಂಡರು. ಆದರೆ ರುಕ್ಮಿಣಿಯ ಬಾಳಿನಲ್ಲಿ ಏನು ನಡೆಯಬಾರದಾಗಿತ್ತು ಅದು ನಡೆದು ಹೋಗಿತ್ತು. ನಿಷ್ಪಾಪಿ ಮುಗ್ಧ ರುಕ್ಮಿಣಿಗೆ ಬದುಕುವ ಭವಿಷ್ಯದ ದಾರಿ ಮುಚ್ಚಿ ಹೋದವು. ಶಾಸ್ತ್ರಿಗಳು ಪಶ್ಚಾತ್ತಾಪದ ಉರಿಯಲ್ಲಿ ಬೆಂದು ಹೋದರು.

> *"ಛೇ, ಛೇ, ಛೇ ಇಷ್ಟು ದಿನಗಳ ನನ್ನ ಸಂಯಮದ ಪುಣ್ಯವನ್ನು ಕೇವಲ ಕ್ಷಣಗಳ ಲಾಲಸೆಗೆ ಕ್ಷಯ ಮಾಡಿದೆನಲ್ಲ ? ಎಂಥ ಅವಿವೇಕ ? ...... ಅಯ್ಯೋ ಒಟ್ಟಿನಲ್ಲಿ ದೈವ ಕೈ ಕೊಟ್ಟಿತು. ಅದರಿಂದಲೇ ಮನಸ್ಸು ಕೈಕೊಟ್ಟಿತು. ಹೆಂಡತಿ ಸತ್ತ ದಿನವೇ ನನ್ನ ಕಾಮವು ಸತ್ತು ಹೋಯಿತು ಎಂದು ನಾನು ಅತಿಶಯವಾಗಿ ಮೋಹಿಸಿದ್ದ ಆ ಪಾರ್ಥಿವ ಶರೀರವನ್ನು ಕಟ್ಟಿಗೆಯೊಟ್ಟಿ ಸ್ಮಶಾನದಲ್ಲಿ ಸುಟ್ಟದಿನವೇ ತನ್ನಲ್ಲಿ ತುಂಬಿದ್ದ ಕಾಮವನ್ನೂ ಸುಟ್ಟೆನೆಂದು ಭ್ರಮಿಸಿದ್ದೆನಲ್ಲ ? ಶವಸುಟ್ಟರೂ ಕಾಮದೇವ ಅನಂಗನಾದನೆಂದು ಪುರಾಣಗಳು ಸಾರುತ್ತವೆ. ನಾನು ಆ ದಿನವೇ ನನ್ನ ವಿಷಯಾಸಕ್ತಿಗಳನ್ನೆಲ್ಲ ಸುಟ್ಟೆನೆಂದು ವಿಜೃಂಭಿಸಿದ್ದು ಹುಸಿಯಾಯಿತಲ್ಲ ! ಇನ್ನು ಯಾವುದಕ್ಕಾಗಿ ಅಹಂಕಾರ ಪಡಬೇಕು ? ಎಂದುಕೊಳ್ಳುತ್ತಿರುವಂತೆಯೇ ಇನ್ನು ಯಾತಕ್ಕಾಗಿಯಾದರೂ ನಾನು ಬದುಕಬೇಕು ಎಂಬ ಭಾವನೆಯೂ ಸುಳಿದು ಹೋಯಿತು"*[೧]

ಎಂದೆಲ್ಲ ಪಶ್ಚಾತ್ತಾಪ ಪಡುತ್ತ ಮರಣಹೊಂದಿದ ಪತ್ನಿಯನ್ನು ಸ್ಮರಿಸುತ್ತಾರೆ. ಆದರೆ 'ವಿವಾಹ'ದ ಚೌಕಟ್ಟಿನೊಳಗೆ ಅನುಭವಿಸುವ ಲೈಂಗಿಕತೆಗೆ ಸಮಾಜದ ಪರವಾನಗಿ ಇರುವುದನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು. ಭಾರತೀಯ ಸಮಾಜದ 'ವಿವಾಹ' ಸಂಸ್ಥೆ ಹುಟ್ಟುಹಾಕಿದ್ದ ಸಾಮಾಜಿಕ ಮೌಲ್ಯಗಳು ಇಂತಹ ಸಂದರ್ಭಗಳಲ್ಲಿ ವಿಜೃಂಭಿಸುವುದನ್ನು ಕಾದಂಬರಿಕಾರರು ಹೇಳುತ್ತಿದ್ದಾರೆ. ಮಡದಿಯಿಂದ ಪಡೆದ ಸೇವೆಯೊಂದಿಗೆ ತನಗೆ ಬಂದ ಕಾಲರಾ ರೋಗ ಗುಣಪಡಿಸಿ ತಾನೇ ಕಾಲರಾಕ್ಕೆ ತುತ್ತಾಗುವ ದುರಂತವನ್ನು ನೆನೆದು ದುಃಖಿಸುತ್ತಾರೆ. "ನೀನಿದ್ದಿದ್ದರೆ ಹೀಗಾಗುತ್ತಿತ್ತೆ ? ಧರ್ಮದ ಬೇಲಿಯಾಗಿ ನೀನು ಇಂಥ ಅವಿವೇಕದಿಂದ ನನ್ನನ್ನು ರಕ್ಷಿಸುತ್ತಿದ್ದೆಯಲ್ಲವೆ ?" ಎನ್ನುತ್ತಾರೆ. ಹೆಂಡತಿಯ ತಂಗಿ ಶಕುವಿನ ವಾಸ್ತವ್ಯದ ಅಪಾಯ ಅರಿತು ಆಕೆಯನ್ನು ಊರಿಗೆ ವಾಪಾಸು ಕಳುಹಿಸಿದ ವಿಷಯ ನೆನಪಿಸಿಕೊಳ್ಳುವ ಶಾಸ್ತ್ರಿಗಳು ಹೆಂಡತಿಯನ್ನು ಪ್ರಶಂಶಿಸುತ್ತಾರೆ. "ನಾಗೂ ಇಂದು ನೀನು ಬದುಕಿದ್ದಲ್ಲಿ ನಿಶ್ಚಯವಾಗಿಯೂ ಈ ಪತನದಿಂದ ನನ್ನನ್ನು ಪಾರು ಮಾಡುತ್ತಿದ್ದೆ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ" ಎನ್ನುತ್ತ ಮಗನ ಶವಸಂಸ್ಕಾರ ಮಾಡಿದ್ದ ಜಾಗದಲ್ಲಿ ಅತ್ತು ತನ್ನ ಅಪಕೃತ್ಯಕ್ಕೆ ತಮ್ಮನ್ನೆ ಶಪಿಸಿಕೊಂಡು ಪಶ್ಚಾತ್ತಾಪ ಪಡುತ್ತಾರೆ.

---

೧. ವೈಶಾಖ – ಚದುರಂಗ – ನವ್ಯಾಲೆ ಪ್ರಕಾಶನ ಮೈಸೂರು – ೧೯೬೩. ಪು. ೧೧೨–೧೧೩

ಹೀಗೆ ತಮ್ಮ ಪಾಪಕೃತ್ಯಕ್ಕೆ ಶಪಿಸಿಕೊಂಡು ಪರಿತಪಿಸುವ ಶಾಸ್ತ್ರಿಗಳು ಅಪರಾಧಿಯ ಸ್ಥಾನದಿಂದ ದೂರನಿಲ್ಲುತ್ತಾರೆ. ಕಾದಂಬರಿ ಶಾಸ್ತ್ರಿಗಳ ಪಶ್ಚಾತ್ತಾಪಕ್ಕೆ ಅಭಿವ್ಯಕ್ತಿ ನೀಡುತ್ತದೆ. ರುಕ್ಮಿಣಿಯ ಪರಿಸ್ಥಿತಿಗೆ ಧ್ವನಿಯೇ ಇಲ್ಲವಾಗಿಸುತ್ತದೆ. ತಾನೇ ಅಪರಾಧಿ ಎಂದು ಹೇಳಿಕೊಳ್ಳಲಾರದೆ ಒದ್ದಾಡುವ ಶಾಸ್ತ್ರಿಗಳು ಅನುಕಂಪಗಿಟ್ಟಿಸಿಕೊಳ್ಳಬಹುದಾದರೆ ಯಾವ ತಪ್ಪಿನ ಅರಿವೂ ಇಲ್ಲದ ರುಕ್ಮಿಣಿಗೆ ಕಾದಂಬರಿಯಲ್ಲಿ ಅಭಿವ್ಯಕ್ತಿ ಇಲ್ಲ. ಮುಂದಿನ ದಿನಗಳಲ್ಲಿ ಶಾಸ್ತ್ರಿಗಳು ದೇಹದಂಡಿಸುತ್ತ ಸಂಯಮದ ಬದುಕಿನ ಮಾರ್ಗ ಹಿಡಿದರು ಎಂದು ನಿರೂಪಿಸುವ ಕಾದಂಬರಿ ರುಕ್ಮಿಣಿಯ ಮುಗ್ಧ ಬದುಕಿನ ದುರಂತವನ್ನು ತೆರೆದಿಡುತ್ತದೆ. ಹಗಲು ಹೇಗೋ ಕೆಲಸದಲ್ಲಿ ಕಳೆಯುವಳು ರಾತ್ರಿಯಾಗುತ್ತಿದ್ದಂತೆ ಒಳಗಿನ ತಳಮಳ ಹೆಚ್ಚಾಗುವುದು.

> *"ಅನೇಕ ದಿನಗಳಿಂದ ಮೂಲೆಗೆ ಒರಗಿಸಿದ ತಂಬೂರಿಯನ್ನು ಯಾರೋ ಕೈಗೆತ್ತಿ ಶ್ರುತಿ ಮಾಡಿ ಬಿಗಿದ ತಂತಿಯನ್ನೊಮ್ಮೆ ಮೀಟಿ ಹೋದಂತಾಗಿತ್ತು. ರುಕ್ಮಿಣಿಯ ಸ್ಥಿತಿ ! ಮೀಟಿ ಹೋದ ಮೇಲೂ ತಂಬೂರಿಯಿಂದ ಝೇಂಕಾರ ನಾದ ಬಹುಕಾಲ ಹೊರಹೊಮ್ಮುತ್ತಲೇ ಇರುವಂತೆ ಶಾಸ್ತ್ರಿಗಳು ಎಲ್ಲೋ ಆಳದಲ್ಲಿ ಅಡಗಿ ಸೊರಗಿ ಮಲಗಿದ್ದ ಅವಳ ಬಯಕೆಗಳನ್ನು ಒಮ್ಮೆ ಮಾತ್ರ ಕೆದಕಿ ಆ ಬಳಿಕ ವಿಶ್ವಾಮಿತ್ರನಂತೆ ತಮ್ಮ ಸಂಯಮದ ಚಿಪ್ಪಿನೊಳಗೆ ಮುದುಡಿದ್ದರು"*[೧]

ಆದರೆ, ರುಕ್ಮಿಣಿಯ ಸ್ಥಿತಿಯೇ ಬೇರೆಯಾಗಿತ್ತು. ಅವಳಿಗರಿವಿಲ್ಲದಂತೆ ಅವಳೊಳಗೇ ಪಲ್ಲವಿಸಿದ ಬಯಕೆ ಅದಮ್ಯವಾಗಿ ಬೆಳೆದು ಹೆಮ್ಮರವಾಗಿತ್ತು. ಗಂಡನೊಂದಿಗಿನ ಸುಖದ ನೆನಪುಗಳು ಮತ್ತೆ ಅವಳ ಅಂತರಂಗವನ್ನು ಮುತ್ತಿಕೊಂಡು ಕಾಡಲು ಉಪಕ್ರಮಿಸಿದವು. ಹೀಗಿರುವಾಗ ಭೀಮನಹಳ್ಳಿಯ ಅಕ್ಕ ಪಾರ್ವತಿಯ ಮಗಳ ಆರತಕ್ಷತೆಯ ಆಮಂತ್ರಣ ಅವಳಲ್ಲಿ ಹುರುಪು ತಂದವು. ಶಾಸ್ತ್ರಿಗಳು ಸಮ್ಮತಿಸಿದರು. ಸಾಮಾನ್ಯವಾಗಿ ಗಾಡಿಕಟ್ಟಿಕೊಂಡು ಪ್ರಯಾಣ ಮಾಡಿಸುವುದು ಲಕ್ಕನ ಕೆಲಸವಾದ್ದರಿಂದ ಲಕ್ಕನೇ ಪ್ರಯಾಣದ ಕಾರ್ಯಕ್ಕೆ ಮುಂದಾಗುತ್ತಾನೆ. ಪ್ರಯಾಣದ ಹಾದಿ ದುರ್ಗಮವಾದ ಕಾಡು ಜೊತೆಗೆ ಸಣ್ಣದಾಗಿ ಸುರಿಯುವ ಮಳೆ ಮಧ್ಯೆ ಮಧ್ಯೆ ಆರ್ಭಟಿಸು ಗುಡುಗಿನೊಂದಿಗೆ ಮಿಂಚು. ಕೆರಳಿದ ಮನಸ್ಸಿನ ರುಕ್ಮಿಣಿಗೆ ತನ್ನ ಉನ್ಮಾದ ಬಯಕೆಗಳನ್ನು ತಣಿಸಿಕೊಳ್ಳಲು ಅನುಕೂಲಕರವಾದ ವಾತಾವರಣ. ಇವ್ಯಾವುದರ ಗೊಡವೆಯೇ ಇಲ್ಲದೆ ಯಜಮಾನಿ ಎಂದು ಗೌರವಿಸುವ ಲಕ್ಕ ರುಕ್ಮಿಣಿಯ ದೇಹಬಯಕೆಯ ಉಪಶಮನಕ್ಕೆ ಎರಗಲೇ ಬೇಕಾದ ಸಂದರ್ಭ ಜೋರಾಗಿ ಅಪ್ಪಳಿಸಿದ ಸಿಡಿಲು. ಮಳೆ ಹೊಯ್ದು ತಣ್ಣಗಾದ ಭೂಮಿಯಂತೆ ದೇಹಬಯಕೆಯನ್ನು ಶಮನ ಮಾಡಿಕೊಂಡ ರುಕ್ಮಿಣಿ ಕಾಳ್ಗಿಚ್ಚು ಆರುವಂತೆ ಆರಿ ತಣ್ಣಗಾದಳು.

---

೧. ವೈಶಾಖ – ಚದುರಂಗ – ನವ್ಯಾಲೆ ಪ್ರಕಾಶನ ಮೈಸೂರು – ೧೯೬೩. ಪು. ೧೨೩–೧೨೪

## ೬. ಜಾತಿಯ ನೆಲೆಯಲ್ಲಿ ಸಂಘರ್ಷಕ್ಕೊಳಗಾದ 'ವೈಧವ್ಯ'

ರುಕ್ಮಿಣಿ ದರುಮನಳ್ಳಿಗೆ ವಾಪಾಸ್ಸಾದ ಮೇಲೆ ಹಳೆಬದುಕಿಗೆ ಮನಸ್ಸು ಹೊಂದಿಕೊಂಡರೂ ಹೊಟ್ಟೆಯೊಳಗಿನ ದಿಗಿಲು ಏರುತ್ತಲೇ ಇತ್ತು. ತಾನು ಗರ್ಭಿಣಿ ಎನ್ನುವ ಸತ್ಯ ತಿಳಿಯಿತು. ಇವಳ ಕಷ್ಟವನ್ನು ಕೇಳುವ ಮನಸ್ಥಿತಿಯವರು ಯಾರು ಇಲ್ಲದ್ದರಿಂದ ಲಕ್ಕನೊಂದಿಗೆ ಹೇಳಿಕೊಳ್ಳುತ್ತಾಳೆ. ಇದನ್ನು ಲಕ್ಷಮ್ಮ ಕೇಳಿಸಿಕೊಂಡರು. ಅದೇ ದಿನ ರಾತ್ರಿ ಶಾಸ್ತ್ರಿಗಳಿಗೆ ವೆಂಕಣ್ಣ ಜೋಯಿಸರಿಂದ ಕರೆಬಂತು.

> *"ಶಾಸ್ತ್ರಿಗಳೆ ನಾವು ನಿಮಗೆ ಮೊದಲೆ ಹೇಳಿದೀವಿ-ಗಂಡನನ್ನು ಕಳೆದುಕೊಂಡ ಒಡನೆಯೆ ರುಕ್ಮಿಣಿಗೆ ಕೇಶಮುಂಡನ ಮಾಡಿಸಿ ಎಂದು ಆದರೆ ಆಗ ನೀವು ನಮ್ಮ ಹಿತವಚನಕ್ಕೆ ಕುರುಡು ಕಾಸಿನ ಕಿಮ್ಮತ್ತನೂ ನೀಡಲಿಲ್ಲ. ಇದರಿಂದ ನಮ್ಮ ದರುಮನಳ್ಳಿಯ ಇಡೀ ಬ್ರಾಹ್ಮಣ ಸಮಾಜವನ್ನೇ ಇದಿರು ಹಾಕಿ ಕೊಂಡಿರಿ. ನಾವೇನೋ ಸಾಂಪ್ರದಾಯಿಕವಾಗಿ ನಿಮಗೆ ಬಹಿಷ್ಕಾರ ಹಾಕಿದ್ರೂನೂವೆ ಒಳಗಡೆ ನಮಗೆಲ್ಲರಿಗೂ ನಿಮ್ಮ ಸುಸಂಸ್ಕೃತ ನಡೆನುಡಿಯ ಬಗ್ಗೆ, ದೈವಭಕ್ತಿಯ ಬಗ್ಗೆ ತೋಟದ ಕಾಯಕದಲ್ಲಿ ನೀವು ನಿಮ್ಮನ್ನೇ ಸಮರ್ಪಣಭಾವದಿಂದ ತೊಡಗಿಸಿಕೊಳ್ಳುವ ಕಾರ್ಯದಕ್ಷತೆಯ ಬಗ್ಗೆ ಅಪಾರ ಗೌರವ ಇದ್ದುದರಿಂದ ನಿಮ್ಮ ಶಠತ್ವವನ್ನೆಲ್ಲ ಮರೆತು ಪುನಹ ಎಂದಿನಂತೆ ನಮ್ಮ ನಿಮ್ಮಲ್ಲಿ ಏನೂ ಆಗಲೇ ಇಲ್ಲವೇನೋ ಎನ್ನುವ ಹಾಗೆ ನಡೆದುಕೊಳ್ಳುತ್ತ ಬಂದಿದೀವಿ ಆದರೆ ಈಗ......"[೧]*

ಈ ಮಾತುಗಳು ಶಾಸ್ತ್ರಿಗಳನ್ನು ದಿಗ್ಭ್ರಮೆಗೊಳಿಸಿತು. ಈ ರಹಸ್ಯ ಬಯಲಾದದ್ದನ್ನು ಕುರಿತು ದೀರ್ಘವಾಗಿಯೇ ಚಿಂತಿಸುತ್ತಾರೆ. ಮತ್ತೆ ಮುಂದುವರಿದು ವೆಂಕಣ್ಣ ಜೋಯಿಸರು

> *"ಇಡೀ ನಮ್ಮ ಬ್ರಾಹ್ಮಣ ಕುಲಕ್ಕೆ ಅವಮಾನ ಎಲ್ಲ ಬಿಟ್ಟು ಆ ಹೊಲೆಯ ಲಕ್ಕನ ಸಂಬಂಧ ಬೆಳೆಸಿ ಗರ್ಭಿಣಿಯಾಗಿದ್ದಾಳಲ್ಲ. ಇದಕ್ಕಿನ್ನ ಹೇಯವಾದ ಕೃತ್ಯ ಇನ್ನೊಂದಿದೆಯೇ ?......... ನೀವು ನಾವೆಲ್ಲರೂ ಹೇಳಿದಾಗಲೇ ಅವಳ ತಲೆಬೋಳಿಸಿ ವಿರೂಪಗೊಳಿಸಿದ್ದರೆ, ನಮ್ಮ ಬ್ರಾಹ್ಮಣ ಸಮಾಜ ಈಗ ಇಂಥ ವಿಕೃತ ಪರಿಸ್ಥಿತಿಯನ್ನು ಎದುರಿಸಬೇಕಾಗಿತ್ತೆ ?........ ಯಾವಾಗಲೂ ನಿಮ್ಮದು ಹಟ. ನಿಮ್ಮ ಹಟಮಾರಿತನದಿಂದಲೇ ಈ ಘೋರ ಅನರ್ಥ ಸಂಭವಿಸಿದೆ"[೨].*

ಎನ್ನುವಾಗ ವಿಧವೆ ಲಕ್ಷಮ್ಮ ಅಲ್ಲಿಗೆ ಬಂದು "ಎಚ್ಚರ ಕಿಟ್ಟಣ್ಣ, ಆಗಬಾರದ್ದು ಆಗಿ ಹೋಗಿದೆ. ಈಗ ಬಸುರು ಕಳೆಯೋ ಔಷಧಿ ತರಲು ಲಕ್ಕನ್ನ ಹುಣಸೂರಿಗೆ ಓಡಿಸಿದ್ದಾಳೆ. ನಿಮ್ಮ ರುಕ್ಮಿಣಿ !" ಎಂದು ಎಚ್ಚರಿಕೆ ಕೊಡುತ್ತಾಳೆ. ರುಕ್ಮಿಣಿಗೂ ಈ ಮಾತುಗಳು ಕೇಳಿದುವು. ಮಾವ ಶಾಸ್ತ್ರಿಗಳು ರುಕ್ಮಿಣಿಯನ್ನು ಕುರಿತು "ತುಂಬಾ ಅನ್ಯಾಯ ಮಾಡಿದೆ ...... ಲಕ್ಕನಿಂದ ಔಷಧಿ ತಗೋಬಾರ್ದು ಒಂದು ಪಾಪ ಅಳಿಸಲಿಕ್ಕೆ ಹೋಗಿ "...... ಎಂದು ನುಂಗಿಕೊಂಡರು"- ಇದರಿಂದ ರುಕ್ಮಿಣಿಗೆ ಹೊರಬರಲು ಇದ್ದ

---

೧. ವೈಶಾಖ – ಚದುರಂಗ – ನವ್ವಾಲೆ ಪ್ರಕಾಶನ ಮೈಸೂರು – ೧೯೯೩. ಪು. ೧೩೭

೨. ಅದೇ ಪು- ಪು-೧೩೮

ಇದೊಂದು ಹೊರದಾರಿಯೂ ಮುಚ್ಚಿ ಹೋಯಿತು. ಅವಳ ಆಲೋಚನೆ 'ತಾಯ್ತನ'ದ ಕಡೆಗೆ ಹೊರಳಿ ಪ್ರತಿಹೆಣ್ಣು ಬಯಸುವ 'ತಾಯ್ತನ'ಕ್ಕೆ ಕಾರಣವಾದ ಗರ್ಭ ಯಾರಿಗೂ ಬೇಡವಾಗಿ ಕೊನೆಗೆ ತನಗೂ ಬೇಡವಾಗುವುದರ ಕಡೆಗೆ ಸಾಗುತ್ತದೆ. ಈಗ

> *"ಈ ಕ್ರೂರ ಸ್ಥಿತಿಗೆ ಯಾರನ್ನು ದೂಷಿಸಬೇಕು ?– ಮಾವನವರ ಸಂಯಮರಾಹಿತ್ಯದತ್ತ ಬೆರಳುಮಾಡಿ ತೋರಬಹುದಾದರೂ ಲಕ್ಕನ ವಿಷಯದಲ್ಲಿ ನಾನೆಷ್ಟು ಸಂಯಮಿಯಾಗಿದ್ದೆ. ಒಟ್ಟಿನಲ್ಲಿ ಎಲ್ಲವೂ ಗೋಜಲು ಕಗ್ಗಂಟು........"*[೧]

ರುಕ್ಮಿಣಿ ವ್ಯವಸ್ಥೆಯನ್ನು ಮೀರಿ ಬದುಕಲು ಹೊರಟಾಗ ಅವಳ ಆಯ್ಕೆ ಅವಳನ್ನು ಅತಂತ್ರ ಸ್ಥಿತಿಗೆ ತಳ್ಳುತ್ತದೆ. ಎಂದು ಕಾದಂಬರಿ ಚಿತ್ರಿಸ ಹೊರಟಂತಿದೆ. ಅವಳ ಮೇಲೆ ಪುರುಷ ಸಮಾಜ ಹೇರುವ ಕಟ್ಟುಪಾಡುಗಳು ಒಪ್ಪಿ ಬದುಕುವುದನ್ನು ನಿರ್ದೇಶಿಸುತ್ತವೆ. ಹುಣಸೂರಿನಿಂದ ಔಷಧಿ ತರುವ ಲಕ್ಕನಿಗೆ ಕೇಶವಯ್ಯ ಶಾಸ್ತ್ರಿಗಳ ಮನೆಗೆ ಹೋಗದಂತೆ ತಡೆಯುತ್ತಾರೆ. ಶಾಸ್ತ್ರಿಗಳು ಔಷಧಿ ಚಲ್ಲಿಸುತ್ತಾರೆ. ಗರಿಷ್ಠ ಮಟ್ಟದಲ್ಲಿ ಶೋಷಣೆಗೆ ಗುರಿಯಾದ ವ್ಯಕ್ತಿ ಲಕ್ಕನಿಗೆ ಆ ಊರಿನ ಬ್ರಾಹ್ಮಣರೆಲ್ಲ ಒಡೆಯರೆ. ಅವರ ನಿರ್ದೇಶನದಂತೆ ಪಂಚಾಯ್ತಿಗೂ ಹೋಗಬೇಕಾಗುತ್ತದೆ. ರುಕ್ಮಿಣಿಯ ಪರಿಸ್ಥಿತಿಯನ್ನು ಗೇಲಿಮಾಡುವವರಲ್ಲಿ ವಿಧವೆಯರೂ ಹೆಚ್ಚಿನವರಾಗಿದ್ದಾರೆ. ವಿಧವಾ ತತ್ವಗಳಿಗೆ ಬದ್ಧರಾಗಿರುವುದೇ ಸರಿಯಾದ ಬದುಕು ಎಂದು ಒಪ್ಪಿ ಬದುಕಿ ಬಂದಿದ್ದಾರೆ. ಕೇಶಮುಂಡನಕ್ಕೊಳಗಾಗದೆ ಲಕ್ಕನಿಂದ ಗರ್ಭಧರಿಸಿದ್ದಾಳೆ ಎನ್ನುವ ಸುದ್ದಿ ಅತ್ಯಂತ ಹೀನಾಯವಾದ ಸುದ್ದಿಯಾಗಿ ವಿಧವೆಯರು ರುಕ್ಮಿಣಿಯನ್ನು ದೂಷಿಸುವುದನ್ನು ಅಂದಿನ ಸಾಮಾಜಿಕ ಮೌಲ್ಯಗಳ ಪ್ರಭಾವದ ಹಿನ್ನೆಲೆಯಲ್ಲಿ ಚರ್ಚಿಸಬಹುದು. ಆ ಸ್ಥಿತಿಯಲ್ಲಿ ಶಾಸ್ತ್ರಿಗಳು ರುಕ್ಮಿಣಿಗೆ ತೋರಿದ ಅನುಕಂಪ ಮಾನವೀಯತೆ ದರುಮನಳ್ಳಿಯವರಿಗೆಲ್ಲ ನುಂಗಲಾರದ ತುತ್ತಾಗಿ ಪರಿಣಮಿಸಿತ್ತು. ಮಾವ ಸೊಸೆಯರ ವೈಯಕ್ತಿಕ ದೌರ್ಬಲ್ಯ ಮೇಲುಗೈ ಸಾಧಿಸಿ ಆಳವಾದ ಬಾವಿಗೆ ತಳ್ಳಿರುವುದು ಅವರ ಬದುಕಿನ ದುರಂತವೇ ಸರಿ. ತಾನು ಯಾರಿಂದ ಗರ್ಭಿಣಿಯಾಗಿದ್ದೇನೆ ? ಎನ್ನುವ ಗೊಂದಲ ಒಂದೆಡೆಯಾದರೆ, ತಾನು ಮಾಡಿದ ಅಪರಾಧ ಅಕ್ಷಮ್ಯ ಎಂದು ಭಾವಿಸುವ ರುಕ್ಮಿಣಿ ಬಿಡಿಸಲಾಗದ ಗೋಜಲುಗಳಿಗೆ ಸಿಲುಕುತ್ತಾಳೆ.

ಲಕ್ಕ ತನ್ನ ಬಗ್ಗೆ ಯೋಚಿಸುವುದಕ್ಕಿಂತ ರುಕ್ಮಿಣವ್ವನ ಬಗ್ಗೆ ಹೆಚ್ಚು ಯೋಚಿಸುತ್ತಾನೆ. ತಾಯಿ, ತಂಗಿ, ತಂದೆ ಅವನನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುತ್ತಾರೆ. ಇವರಿಗೆ 'ಜಾತಿ' ಸಮಸ್ಯೆ ಬಹುವಾಗಿ ಕಾಡುವ ವಿಷಯವಾಗುತ್ತದೆ. ಪಂಚಾಯ್ತಿ ಕಟ್ಟೆಯಲ್ಲಿ ಯಜಮಾನ ಬುಳ್ಳಪ್ಪ ಆಕ್ಷೇಪಣೆ ಎತ್ತಿದ. ರುಕ್ಮಿಣಮ್ಮನೂವೆ ಕರೆಸಿ ಎಂದು, ಆದರೆ ಕೇಶವಯ್ಯ ಅದನ್ನು ವಿರೋಧಿಸುತ್ತಾನೆ. ಬಹುಶಃ ಬ್ರಾಹ್ಮಣ ಸಮುದಾಯದ ಮಹಿಳೆಯರು ಪಂಚಾಯ್ತಿಕಟ್ಟೆಗೆ ಬರುವುದು ಇಷ್ಟವಿಲ್ಲದ

---

೧. ವೈಶಾಖ – ಚದುರಂಗ – ನವ್ಯಾಲೆ ಪ್ರಕಾಶನ ಮೈಸೂರು – ೧೯೯೩. ಪು. ೧೪೦

ವಿಚಾರವಾಗಿತ್ತು. ಲಕ್ಕನೇ ಸಮಯ ಸಾಧಿಸಿ ರುಕ್ಮಿಣಿಯನ್ನು ಕೆಡಿಸಿದ್ದಾನೆ ಎಂದು ಏಕಮುಖ ನ್ಯಾಯವನ್ನು ಮುಂದಿಡುತ್ತಾರೆ. ನಂಜೇಗೌಡ ರುಕ್ಮಿಣಿಯನ್ನು ಪಂಚಾಯ್ತಿಗೆ ಕರೆಸಲೇಬೇಕು ಎಂದಾಗ ಅವರ ಬಾಯಿ ಮುಚ್ಚಿಸುವ ಕೇಶವಯ್ಯ

> *"ನಾನು ಮೊದಲೇ ಹೇಳಲಿಲ್ಲವೆ ?..... ರುಕ್ಮಿಣಿಯ ನ್ಯಾಯ ಫೈನಲ್ ಮಾಡೋರು ನಾವು ......... ಬ್ರಾಹ್ಮಣಕೇರಿಯ ಯಜಮಾನರು. ಆ ಮಾತು ಹಂಗಿರಲಿ, ಈಗ ಲಕ್ಕನ್ನೇ ಕೇಳಿ ಶ್ಯಾನುಭೋಗರೆ ಏನು ನಡೀತು ಅಂತ ?" ಎಂದು ವಾದದ ದಿಕ್ಕನ್ನೇ ಬದಲಿಸಿದ"*[1].

ಪಂಚಾಯ್ತಿ ಕಟ್ಟೆಯಲ್ಲಿ ತೀರ್ಮಾನವಾದ ನಂತರ ರುಕ್ಮಿಣಿಗೆ ಮತ್ತೆ ಬ್ರಾಹ್ಮಣ ಸಮುದಾಯದವರು ಶಿಕ್ಷೆ ವಿಧಿಸುವುದು ಅಮಾನವೀಯತೆಯ ಪರಮಾವಧಿಯಾಗಿ ಕಾಣಿಸುತ್ತದೆ. ಜಾತಿಯಿಂದ ಬಹಿಷ್ಕಾರ ಹಾಕಿ, ತಲೆಬೋಳಿಸಿ ಕತ್ತೆಯ ಮೇಲೆ ಕೂರಿಸಿ ಮೆರವಣಿಗೆ ಮಾಡುವುದು ಜೀವಂತ ಇರುವಾಗಲೇ 'ಘಟಾಶ್ರಾದ್ಧ' ಮಾಡುವುದು ಮುಂತಾದ ಅಲಿಖಿತ ಶಾಸನ ಅವರ ಇಚ್ಛಾನುಸಾರ ನೆರವೇರುವುದನ್ನು ಕಾದಂಬರಿ ತೆರೆದಿಡುತ್ತದೆ. ಬಲತ್ಕಾರವಾಗಿ ಲಕ್ಕನನ್ನು ತಪ್ಪಿತಸ್ಥ ಎಂದು ಒಪ್ಪಿಸುವ ಪಂಚಾಯ್ತಿಯವರು ಕೃಷ್ಣಶಾಸ್ತ್ರಿಗಳನ್ನು ಬಚಾವು ಮಾಡುತ್ತಾರೆ. ಲಕ್ಕನಿಂದ ಏನೇನೋ ಕೇಳಬಯಸುವ ಪಂಚಾಯ್ತಿದಾರರು ಬಾಯಿ ಬಿಡಿಸಲು ಹೊಡೆಯುವಾಗ ಶಾಸ್ತ್ರಿಗಳಿಗೆ ತಡೆಯಲಾಗದೆ ಚಾವಡಿಗೆ ಬರುತ್ತಾರೆ. ಅತ್ತ ಚಾವಡಿಯ ಮುಂದೆ ಪಾಂಡವರ ಕಂಬಕ್ಕೆ ಮಾರಿಗುಡಿ ಅಣ್ಣದೀರು ಬಿಗಿದಿರುವರು. ನಂಜೇಗೌಡ ರುದ್ರನ ಕಡೆಗೆ ಎಸೆದ ಬೆತ್ತ ರುದ್ರನನ್ನು ಲಕ್ಕನಿಗೆ ಹೊಡೆಯಲು ನಿರ್ದೇಶಿಸಿತ್ತು. ಪಂಚಾಯ್ತಿ ಕಟ್ಟೆಯಲ್ಲಿ ಸೇರಿದ ಜನರ ನಡುವೆ ಇದ್ದ ಬುಂಡಮ್ಮ, ದ್ಯಾವಾಜಿ ಪಂಚಾಯ್ತಿ ಮಾಡುವವರನ್ನು ಅತ್ಯಂತ ತಾತ್ಸಾರದಿಂದ ಕಾಣುತ್ತಾರೆ. "ಇಲ್ಲಿ ಸೇರಿರೋರು ಗುಬ್ಬಳಗಳು ಕನ್ರವ್ವ, ಸೋ ಅಂದ್ರೆ ಸೋ ಬಾನೆ ಅನ್ನಾ ಜನ" ಎನ್ನುವ ಬುಂಡವ್ವನಿಗೆ ಅವರ ನ್ಯಾಯತೀರ್ಮಾನದ ಬಗ್ಗೆ ಅನುಮಾನವಿದೆ. ಇವಳ ಮಾತಿಗೆ ಪ್ರತಿಕ್ರಿಯಿಸುವ ದ್ಯಾವಾಜಿ ಈ ನ್ಯಾಯಪಂಚಾಯ್ತಿಯ ಯಜಮಾನರ ವರ್ಗಬೇಧ ನೀತಿಯನ್ನು ಕಂಡಿಸುತ್ತಾಳೆ. ಕುಂಡಿಮಾದಿ ಹೆಣ್ಣು ಸಾವಂತ್ರಿಯನ್ನು ಅನೈತಿಕವಾಗಿ ಲೈಂಗಿಕ ಕ್ರಿಯೆಗೆ ಬಳಸಿಕೊಂಡ ಕೆಂಗಣ್ಣಪ್ಪನ ಮೇಲೆ ಪಂಚಾಯ್ತಿಯನ್ನು ತಿರಸ್ಕರಿಸಿ ಗಂಡಸಿನ ಲೈಂಗಿಕತೆಯನ್ನು ಸಮರ್ಥಿಸುವಾಗ ನಂಜೇಗೌಡನ ಹೇಳಿಕೆ ಹೀಗಿತ್ತು ಎನ್ನುತ್ತಾಳೆ.

> *"ಹೋಗಮ್ಮಿ, ಇದಾವ ದೊಡ್ಡ ಸಂಗ್ತೀಂತ ತಂದಿದ್ದೀಯೆ ...... ಗಂಡಸ್ಗೆ ಯಾವ ಕಟ್ಟು ? ದನ ಒಂಟಿ ಸಿಕ್ತಾಗ ಅದರ ಮ್ಯಾಲೆ ಅತ್ತು ಬ್ಯಾಡಾಂತ ಹೋರ್ಯಾ ಅದ್ಯಾರು ತಾನೆ ತಡೆಯಕ್ಕಾದಾತು ? ಅಂದಿದ್ನಲ್ಲ ! ...... ಇವುರಿಗೊಂದು ನ್ಯಾಯ ನಮಗೊಂದು ನ್ಯಾಯವ ?"*[2]

---

೧. ವೈಶಾಖ – ಚದುರಂಗ – ನವ್ಯಾಲೆ ಪ್ರಕಾಶನ ಮೈಸೂರು – ೧೯೯೩. ಪು. ೧೮೨

೨. ಅದೇ ಪು – ಪು–೧೭೭

ಹೀಗೆ ಶ್ರೀಮಂತರ ನ್ಯಾಯದ ಬಗ್ಗೆ ಅನುಮಾನ ವ್ಯಕ್ತಪಡಿಸುವುದನ್ನು ಮತ್ತು ಲಿಂಗ ಸಂಬಂಧಿ ವರ್ಗ ಸಂಬಂಧಿ ನ್ಯಾಯ ತೀರ್ಮಾನವನ್ನು ಒಳಗೊಳಗೇ ವಿರೋಧಿಸುವುದನ್ನು ಕಾದಂಬರಿ ತೆರೆದಿಡುತ್ತದೆ. ಹಟಾತ್ ಪಂಚಾಯಿತಿ ಕಟ್ಟೆಗೆ ಪ್ರವೇಶ ಮಾಡಿದ ಕೃಷ್ಣಶಾಸ್ತ್ರಿಗಳು "ಲಕ್ಕ ನಿರಪರಾಧಿ.........ಶಿಕ್ಷೆಯಾಗಬೇಕಾದದ್ದು ನನಗೆ" ಎಂದು ನುಡಿದರೂ ಶಾಸ್ತ್ರಿಗಳ ಬಾಯಿ ಮುಚ್ಚಿಸುವ ಪಂಚಾಯ್ತಿಯವರು ಸತ್ಯ ಮುಚ್ಚಿಡುವ ಪ್ರಯತ್ನ ಮಾಡುತ್ತಾರೆ.

> *"ನೀವು ನನಗೆ ಭ್ರಮಣೆ ಅನ್ನಿ, ಅವಿವೇಕಿ ಅನ್ನಿ, ನಾನು ನುಡಿದಿರೋದು ಸತ್ಯ ಸಂಗತಿ. ನೀವು ನಂಬಲೇಬೇಕು...... ಆ ನಿರಪರಾಧಿಯನ್ನು ಸುಳ್ಳು ಆಪಾದನೆಯಿಂದ ಮುಕ್ತಗೊಳಿಸಲೇಬೇಕು. ಹಾಗೆ ಮಾಡಿದಾಗಲೆ, ನನ್ನದೆಯ ಮೇಲಿನ ಭಾರವನ್ನು ಇಳುಕಿದಂತಾಗುತ್ತೆ......"*[೧]

ಶಾಸ್ತ್ರಿಗಳನ್ನು ರಕ್ಷಣೆ ಮಾಡಲು ಎಷ್ಟು ಆತುರರೋ ಲಕ್ಕನಿಗೆ ಶಿಕ್ಷೆಕೊಡಲೂ ಅಷ್ಟೇ ಕಾತುರರಾದ ಪಂಚಾಯ್ತಿದಾರರು ಕಾಮಸಂಬಂಧಿ ನ್ಯಾಯ ತೀರ್ಮಾನದಲ್ಲಿ ತೋರುವ ದ್ವಿಸ್ತರ ನೀತಿ ಬಿಂಬಿತವಾಗಿದೆ. ಲಕ್ಕನಿಗೆ ಬೆತ್ತದಿಂದ ಹೊಡೆಸಿ ದರುಮನಳ್ಳಿಯಿಂದ ಬಹಿಷ್ಕಾರ ಹಾಕುವ ತೀರ್ಪು ಊರಿನ ಅನೇಕರಲ್ಲಿ ಅಸಮಾದಾನವನ್ನು ಮೂಡಿಸುತ್ತದೆ. ಕೃಷ್ಣಶಾಸ್ತ್ರಿಗಳ ವರ್ತನೆಯಿಂದ ಪಂಚಾಯ್ತಿ ಕಟ್ಟೆಯಲ್ಲಿ ಸೇರಿದ ಸಾರ್ವಜನಿಕರಲ್ಲಿ ಕೆಲವರಿಗೆ ಸತ್ಯವಿರಬಹುದು ಎನಿಸುವುದು ಕೂಡ ಕಾದಂಬರಿಯಲ್ಲಿ ಸಹಜವಾಗಿ ಬಂದಿದೆ. ಅರವಿಂದ ಮಾಲಗತ್ತಿ ಅವರು ಅಭಿಪ್ರಾಯ ಪಡುವಂತೆ

> *"ಮೂಲಭೂತವಾಗಿ ಈ ಕಾದಂಬರಿ ಸಮಾಜದಲ್ಲಿ ನಡೆಯುವ ಕಾಮಸಂಬಂಧಿ ನ್ಯಾಯಗಳು ಅಸಮಾನತೆಯಿಂದ ಕೂಡಿವೆ ಎನ್ನುವುದನ್ನು ಹೇಳುತ್ತ ಬದುಕಿನ ವಿರೋದಾಭಾಸಕ್ಕೆ ಕನ್ನಡಿ ಹಿಡಿಯುತ್ತವೆ. ಈ ಅಸಮಾನತೆಯ ನ್ಯಾಯಕ್ಕೆ ಮಾನವನಿಂದ ನಿರ್ಮಿತವಾದ ವರ್ಣ ಅಥವಾ ಜಾತಿಯಿಂದ ಕೂಡಿದ ವ್ಯವಸ್ಥೆ ಪರಂಪರಾಗತ ಮತೀಯ ನಡವಳಿಕೆಗಳು ಮತ್ತು ಪರಾವಲಂಬಿ ಆರ್ಥಿಕ ಜೀವನ, ಅಧಿಕಾರ ಶೂನ್ಯತೆ ಕಾರಣ ಎಂದು ವ್ಯಾಖ್ಯಾನಿಸಲು ಪ್ರಯತ್ನಿಸಿದೆ*[೨].

ಆದರೆ ಕೆಳಜಾತಿವರ್ಗದವರೊಳಗಿನ ಕಾಮಸಂಬಂಧಿ ನ್ಯಾಯ ತೀರ್ಮಾನಗಳು ಮೇಲ್ಜಾತಿ ವರ್ಗದ ಕಾಮ ಸಂಬಂಧಿ ನ್ಯಾಯ ತೀರ್ಮಾನಕ್ಕಿಂತ ಬೇರೆಯದೇ ಜಾಡು ಹಿಡಿದಿರುವುದು ಗಮನಾರ್ಹವಾದುದು. ಸಾಂಪ್ರದಾಯಿಕ ಸಮಾಜದ ಉನ್ನತ ಜಾತಿಯ ಶ್ರೀಮಂತರ ಹಿಡಿತದಲ್ಲಿದ್ದ ನ್ಯಾಯತೀರ್ಮಾನಗಳು ಹಿಂಸಾರೂಪವನ್ನು ತಾಳಿ ದೌರ್ಜನ್ಯವೆಸಗಿರುವುದನ್ನು ಕಾದಂಬರಿ ಹೇಳುವಲ್ಲಿ ಯಶಸ್ವಿಯಾಗಿದೆ. ಪುರುಷರ ವಿಚಾರ ಬಂದಾಗ ಕೆಳಜಾತಿಗೆ ಅನ್ಯಾಯವಾಗಿದೆ. ಮಹಿಳೆಯ ಕಾಮಸಂಬಂಧಿ ವಿಚಾರ ಬಂದಾಗ 'ಹೆಣ್ಣು' ಎನ್ನುವ ಒಂದೇ ಕಾರಣಕ್ಕೆ ದೌರ್ಜನ್ಯಕ್ಕೊಳಗಾಗುತ್ತಾ

---

೧. ವೈಶಾಖ – ಚದುರಂಗ – ನವ್ಯಾಲೆ ಪ್ರಕಾಶನ ಮೈಸೂರು – ೧೯೯೩. ಪು. ೧೭೯

೨. ಕಾದಂಬರಿಗಳ ವಿಮರ್ಶೆ–(ಪ್ರ ಸಂ.) ಅರವಿಂದ ಮಾಲಗತ್ತಿ–ಪ್ರಸಾರಂಗ–ಮೈಸೂರು – ಪು. ೪೪

ಬಂದಿದ್ದಾಳೆ. ಮೇಲ್ಜಾತಿಯ ರುಕ್ಮಿಣಿಗೆ ಶಿಕ್ಷೆಯಲ್ಲಿ ಯಾವ ರಿಯಾಯಿತಿಯೂ ಇಲ್ಲ. ಶಾಸ್ತ್ರಿಗಳಿಗೆ ಎಲ್ಲಾ ಕಡೆಯಿಂದಲೂ ರಕ್ಷಣೆ ಸಿಗುತ್ತದೆ. ಹೆಣ್ಣಿಗೇ ಒಂದು ನೀತಿ ಗಂಡಿಗೇ ಒಂದು ನೀತಿ ಚಾಲ್ತಿಯಲ್ಲಿದ್ದು ಮಹಿಳೆ ಮಾತ್ರ ಅಪರಾಧಿಯ ಸ್ಥಾನದಲ್ಲಿ ನಿಲ್ಲುತ್ತಾಳೆ.

ವೈಶಾಖದ ಹುಣ್ಣಿಮೆ ಕಳೆದ ಮಾರನೆಯ ದಿನ ದರುಮನಳ್ಳಿಯ ಬ್ರಾಹ್ಮಣರು ಸಭೆ ಸೇರಿ ಹೊಲೆಯನ ಸಂಪರ್ಕ ಮಾಡಿ ಮಹಾಪಾತಕವೆಸಗಿದ ರುಕ್ಮಿಣಿಗೆ ಅವಳು ಜೀವಂತವಿರುವಾಗಲೇ ಘಟಸ್ಫೋಟ ಕರ್ಮಮಾಡಿ ಸಂಬಂಧ ಕಡಿದುಕೊಳ್ಳುವ ತೀರ್ಪುಹೊರಬೀಳುತ್ತದೆ. ವಿಧವೆಯಾದ ಲಕ್ಷ್ಮಮ್ಮ ನೀರಿರೋ ಕಡೆ ಬೇಡ ಅವಳ ಮನೆ ಎದುರೇ ನಡೆಯಲಿ ಎಂದು ನುಡಿಯುತ್ತಾಳೆ. ಈ ಮಾತನ್ನು ಒಪ್ಪುವ ಬ್ರಾಹ್ಮಣ ಸಭೆ ಊರಿನಲ್ಲಿ ಮುಂದೆಂದೂ ಇಂತದ್ದು ನಡೆಯದಿರುವಂತೆ ಎಚ್ಚರ ವಹಿಸಲು ಹೀಗೆ ಮಾಡಬೇಕು ಎಂದು ಶೋಷಿತರನ್ನು ಮತ್ತಷ್ಟು ಹಿಂಸಿಸಿ ಊರಿಗೆ ಬುದ್ಧಿಕಲಿಸುವ ರೀತಿ ಅಮಾನವೀಯವಾಗಿ ಕಾಣುತ್ತದೆ. ಲಕ್ಕನಿಗೆ ಶಿಕ್ಷೆ ಕೊಡುವುದರ ಹಿಂದೆಯೂ ಇಂತದ್ದೇ ಆಲೋಚನೆ ಇರುವುದನ್ನು ಗಮನಿಸಬಹುದು. ಅನ್ಯಾಯಕ್ಕೊಳಗಾಗಿ ಸಂಕಟದಲ್ಲಿರುವವರಿಗೆ ಇನ್ನಷ್ಟು ಅನ್ಯಾಯವನ್ನು ಹೇರಿ ಸಮಾಜ ಸುಧಾರಣೆ ಎಂದುಕ್ಕೊಳ್ಳುವುದು ಆ ಕಾಲದ ಬ್ರಷ್ಟ ವ್ಯವಸ್ಥೆಗೆ ಹಿಡಿದ ಕನ್ನಡಿ.

ರುಕ್ಮಿಣಿಯನ್ನು ರಕ್ಷಿಸಲು ಒಂಟಿಯಾಗಿ ಕೃಷ್ಣ ಶಾಸ್ತ್ರಿಗಳು ಮಾಡುವ ಎಲ್ಲಾ ಪ್ರಯತ್ನಗಳೂ ವಿಫಲವಾಗುತ್ತವೆ. ವೈದಿಕ ಸಮುದಾಯದವರ ನಿಲುವುಗಳು ಗಟ್ಟಿಗೊಳ್ಳುತ್ತವೆ. ರುಕ್ಮಿಣಿ ತನ್ನನ್ನು ತಲೆಬೋಳಿಸಿ ಕತ್ತೆ ಮೇಲೆ ಕೂರಿಸಿ ಮೆರವಣಿಗೆ ಮಾಡಿ ಘಟಸ್ಫೋಟಮಾಡಿ ಜಾತಿಯಿಂದ ಹೊರಹಾಕುವ ವಿಚಾರ ತಿಳಿಯುತ್ತಿದ್ದಂತೆ ಮನುಷ್ಯ ಲೋಕದಿಂದಲೇ ಮರೆಯಾಗುತ್ತಾಳೆ. ಸಂಪ್ರದಾಯದ ಕಠೋರ ನೀತಿ ವಿಧವೆಯನ್ನು ನಡೆಸಿಕೊಳ್ಳುತ್ತಿದ್ದ ರೀತಿಯನ್ನು ಕಾದಂಬರಿ ತೆರೆದಿಡುತ್ತದೆ. ಟಿ.ಪಿ. ಅಶೋಕರವರು ಅಭಿಪ್ರಾಯ ಪಡುವಂತೆ ರುಕ್ಮಿಣಿಯ ಪಾತ್ರವನ್ನು ವಿಶ್ಲೇಷಿಸಬಹುದು.

> *"ಲೈಂಗಿಕ ಸಂಬಂಧವೆನ್ನುವುದು ಮನೋದೈಹಿಕ ವ್ಯಾಪಾರವಾಗಿರುವುದರಿಂದ ಕಾಮವು ಹಸಿವು ನೀರಡಿಕೆಗಳಂತೆ ಒಂದು ಮೂಲಭೂತ ಸಹಜ ಜೈವಿಕ ಪ್ರವೃತ್ತಿ ಈ ಪ್ರವೃತ್ತಿಯಿಂದ ಯಾವ ಆರೋಗ್ಯಕರ ಜೀವಿಯೂ ತಪ್ಪಿಸಿಕೊಳ್ಳುವಂತಿಲ್ಲ"*[1]

ಸುಪ್ತಾವಸ್ಥೆಯಲ್ಲಿದ್ದ ರುಕ್ಮಿಣಿಯ ಲೈಂಗಿಕ ಭಾವನೆಗಳನ್ನು ಪ್ರಚೋದಿಸಿ ನಿಜವಾದ ಅಪರಾಧಿಯಾಗಿ ನೈತಿಕ ಚೌಕಟ್ಟನ್ನು ಮೀರುವ ಕೃಷ್ಣಶಾಸ್ತ್ರಿಗಳನ್ನು ವೈದಿಕ ಸಮುದಾಯದ ಸಂಪ್ರದಾಯ ಬದ್ಧ ಜಾತಿವಾದಿಗಳು ರಕ್ಷಿಸುತ್ತಾರೆ. ಒಂದೇ ಸಮುದಾಯದಲ್ಲಿ ಹೆಣ್ಣಿಗೇ ಒಂದು ನ್ಯಾಯ ಗಂಡಿಗೇ ಒಂದು ನ್ಯಾಯ ಎನ್ನುವುದನ್ನು ಕಾದಂಬರಿ ವ್ಯಾಖ್ಯಾನಿಸುತ್ತದೆ. ರುಕ್ಮಿಣಿ ಎಚ್ಚೆತ್ತ ಲೈಂಗಿಕ ಅವಸ್ಥೆಯಲ್ಲಿ ಲಕ್ಕನನ್ನು

---

೧. (          – ಶಿವರಾಮಕಾರಂತರ ಕಾದಂಬರಿಗಳಲ್ಲಿ ಸ್ತ್ರೀ ಸಂಕಥನ ಸ್ವರೂಪ– ಡಾ.ಟಿ.ರಾಜೇಂದ್ರ ತಗಡ್ಲಿ– ದೇಸಿ ಪುಸ್ತಕ– ಬೆಂಗಳೂರು– ೨೦೦೯ – ಪು. ೧೮೩

ಅವಲಂಬಿಸುವುದು ಅನಿವಾರ್ಯ ಮತ್ತು ಸಹಜ ಎಂದು ಚಿತ್ರಿಸುವ ಕಾದಂಬರಿಕಾರರು ಸಮಾಜದ ದೃಷ್ಟಿಯಲ್ಲಿ ಲಕ್ಕ ಅಪರಾಧಿಯಾಗಿರುವುದನ್ನು ವಿಶ್ಲೇಷಿಸುತ್ತಾರೆ. ಕೃಷ್ಣ ಶಾಸ್ತ್ರಿಗಳು ತಪ್ಪೊಪ್ಪಿಕೊಳ್ಳುವುದನ್ನು ತಳ್ಳಿಹಾಕುವ ಬ್ರಾಹ್ಮಣ ಸಮುದಾಯದ ಜಾತಿಸಂಬಂಧಿ ಲಿಂಗಾಧಾರಿತ

ಅಭಿವ್ಯಕ್ತಿ ಪಡಿಸುತ್ತದೆ. ವಿಧವೆಯಾದ ರುಕ್ಮಿಣಿ ಸಮಾಜದ ಯಾವ ಅನುಭವಗಳೊಂದಿಗೂ ಬಾಳಲಾಗುವುದಿಲ್ಲ. ಆದರೆ ಬುಂಡಮ್ಮನ 'ವೈಧವ್ಯ' ಅವಳಿಗೆ ಒದಗಿಬಂದ ಕಷ್ಟಗಳಿಂದ ಗಟ್ಟಿಗೊಳ್ಳುತ್ತದೆ. ವಿಧವೆಯಾದ ವೆಂಕ್ಟಿ, ಗಂಡನನ್ನು ಬಿಟ್ಟ ಶಿವುನಿ, ಭಂಗಿಚಟದ ಗಂಡನನ್ನು ಪಡೆದ ಬುಂಡಮ್ಮನ ಸೊಸೆ ಮೊದಲಾದವರು ತಮ್ಮ ಲೈಂಗಿಕ ಆಸೆಗಳನ್ನು ಈಡೇರಿಸಿಕೊಳ್ಳಲು ಸಮಾಜ ವಿಧಿಸಿದ ಚೌಕಟ್ಟನ್ನು ಮೀರಿದವರು. ಇವರು ಸಮಾಜವನ್ನು ಧೈರ್ಯದಿಂದ ಎದುರಿಸಬಲ್ಲರು. ಆದರೆ ರುಕ್ಮಿಣಿ ಭ್ರಷ್ಟ ಸಂಪ್ರದಾಯದಲ್ಲಿ ಸಿಲುಕಿ ಬದುಕನ್ನೇ ತ್ಯಜಿಸುತ್ತಾಳೆ. ರುಕ್ಮಿಣಿಗೆ ನೋವು ಉಪಶಮನಕ್ಕೆ ಅವಕಾಶವಿಲ್ಲ. ತಳಸಮುದಾಯದ ಎಲ್ಲಾ ನೊಂದ ಮಹಿಳೆಯರೂ ತಮ್ಮ ಕೆಲಸಗಳೊಂದಿಗೆ ನೋವನ್ನು ಚರ್ಚಿಸಬಲ್ಲರು. "ಏನಾರ ಆಗ್ಲಿ ಆ ಬ್ರಾಂಬರು ತಲೆಬೋಳಿಸ್ತೀವಿ ಊರುಬಿಟ್ಟ್ಯೋಡಿಸ್ತೀವಿ ಅನ್ನೊತಂಕ ವೋಗಬಾರ್ದಾಗಿತ್ತು. ಬೊಸರಿ ಎಂಗಸು ಅವಲು ತೋರ ಗೋಳಕಿಚ್ಚು ಉಯಿಕೊಬ್ಯಾಡದೂಂತ ಅವರಿಗೆ ಅನ್ನಿಸಬ್ಯಾಡ್ದ ?"– ಕಲ್ಯಾಣಿಯ ಈ ಮಾತುಗಳು ರುಕ್ಮಿಣಿಯ ಮೇಲಿನ ಅನುಕಂಪದ್ದು. ಕೃಷ್ಣಶಾಸ್ತ್ರಿಗಳನ್ನು ಬಿಟ್ಟರೆ ರುಕ್ಮಿಣಿಗೆ ಆ ಸಮಾಜದ ಅನುಕಂಪ ದೊರೆಯದಿರುವುದನ್ನೂ ಆ ಸಮಾಜದ ಅಮಾನವೀಯತೆಯ ಶಿಷ್ಟ ಸಮುದಾಯದವರನ್ನು ಕಾದಂಬರಿ ತೆರೆದಿಡುತ್ತದೆ.

## ೭. ವಿಧವೆ – ಸ್ವಾತಂತ್ರ್ಯ–ಜವಾಬ್ದಾರಿ

ವೈವಾಹಿಕ ಬದುಕಿನಿಂದ ವಂಚಿತಳಾದ ರುಕ್ಮಿಣಿಗೆ ಗಂಡನನ್ನು ಕಳೆದುಕೊಂಡಿರುವುದು ಅವಳ ಬದುಕಿನ ದುರಂತ. ವಿಧವೆ ಬುಂಡಮ್ಮನ ಪಾಲಿಗೆ ವೈಧವ್ಯ ಸ್ವಾತಂತ್ರ್ಯ ಮತ್ತು ಹೆಚ್ಚಿನ ಜವಾಬ್ದಾರಿಯನ್ನು ತಂದಿದೆ. ತಳ ಸಮುದಾಯದ ವಿಧವೆಯರು ಹೆಚ್ಚಿನವರು ಹೊಸಸ್ವಾತಂತ್ರ್ಯದಿಂದ ಚಿಗುರುವುದನ್ನು ಕಾದಂಬರಿ ತೆರೆದಿಡುತ್ತದೆ.

> *"ವೈವಾಹಿಕ ಚೌಕಟ್ಟು ಕೂಡ ಮಹಿಳೆಯರ ಜೀವನ ಸ್ವರೂಪ, ಧೋರಣೆಗಳನ್ನು ರೂಪಿಸುವ ಒಂದು ನಿರ್ಣಾಯಕ ಅಂಶವಾಗಿದೆ. ಯಾವುದಾದರೊಂದು ಕಾರಣದಿಂದ ಗಂಡನ ಆಸರೆ ತಪ್ಪಿ ಬದುಕನ್ನು ಎದುರಿಸುವಾಗ ಮಹಿಳೆ ಹಿಂದೆಂದಿಗಿಂತ ಧೈರ್ಯವಂತೆಯೂ, ಕ್ರಿಯಾಶೀಲೆಯೂ ಆಗಿದ್ದಾಳೆ. ಹೆಂಗಸಿನ ಕರ್ತೃತ್ವ ಶಕ್ತಿ. ತನಗೆ ದೊರೆತ ಈ ಸ್ವಾತಂತ್ರ್ಯದಲ್ಲಿ ಚಿಗುರುವುದೂ ಉಂಟು. ವೈಶಾಖ ಕಾದಂಬರಿಯ ಬೆಳಕು ವಿಶೇಷವಾಗಿ ಈ ವಿಧವೆಯರ, ಗಂಡನನ್ನು*

*ಬಿಟ್ಟವರ, ಇಲ್ಲವೇ ಗಂಡನ ಬೆಂಬಲ ಹೆಚ್ಚಾಗಿಲ್ಲದ ಮಹಿಳೆಯರ ಮೇಲೆ ಬಿದ್ದಿದೆ. ವಿವಾಹ ಚೌಕಟ್ಟಿನೊಳಗೆ ಸದ್ದಿಲ್ಲದೆ ಬದುಕುವ ಸಾತು, ಪಾತುಗಳಿದ್ದಾರೆ. ಆದರೆ ಅಂತವರ ಬದುಕು ಈ ಕಾದಂಬರಿಯಲ್ಲಿ ವಿಶೇಷವಾಗಿ ತೆರೆದುಕೊಂಡಿಲ್ಲ. ಬುಂಡಮ್ಮನೂ ರುಕ್ಮಿಣಿಯಂತೆ ವಿಧವೆಯಾಗಿದ್ದವಳು. ಆದರೆ ಅವಳ ಪಾಲಿಗೆ ವೈಧವ್ಯ ತಂದ ಸ್ವಾತಂತ್ರ್ಯ ಜವಾಬ್ದಾರಿಯೇ ಬೇರೆ"*[೧]

ವಿಜಯಾದಬ್ಬೆಯವರ ಈ ಮಾತುಗಳು ವಿಧವಾ ಬದುಕು ಸಂಘರ್ಷಕ್ಕೊಡ್ಡಿಕೊಳ್ಳುವುದನ್ನು ಚರ್ಚಿಸುತ್ತವೆ. ವಿವಾಹ ನೀಡುವ ಲೈಂಗಿಕ ಪರವಾನಗಿಯೂ ಪುರುಷ ಸಮಾಜದವೇ ಆಗಿವೆ. ವಿವಾಹ ವ್ಯವಸ್ಥೆಯೊಳಗೂ ನಲುಗುವ ಮಹಿಳೆ ಇದರಿಂದ ಹೊರಗಾದಾಗಲೂ ಪರಿತಪಿಸಬೇಕಾಗುತ್ತದೆ. ಅವಳೊಳಗಿದ್ದ ಜೀವಕಾಮ ಮಾವಶಾಸ್ತ್ರಿಗಳ ಆಕ್ರಮಣವನ್ನು ಒಪ್ಪಿಕೊಳ್ಳುವುದರೊಂದಿಗೆ ಪರ್ಯಾವಸಾನವಾಗಿದೆ. ಮಾವನ ಲೈಂಗಿಕ ಆಕ್ರಮಣಕ್ಕೆ ಯಾವ ವಿರೋಧವೂ ಇಲ್ಲದೆ ಮೌನಿಯಾಗಿದ್ದ ರುಕ್ಮಿಣಿಯನ್ನು ಕುರಿತು ಗಾಯತ್ರಿನಾವಡರವರು

*"ಕಾದಂಬರಿಯಲ್ಲಿ ರುಕ್ಮಿಣಿ ಮಾತನಾಡುವುದು ವಿಶ್ವನ ರಸಿಕ ಜೀವನದ ದಿನಗಳ ಬಗೆಗೆ ಮಾವಶಾಸ್ತ್ರಿ ಹಾಗೂ ಲಕ್ಕರನ್ನು ವಿಶ್ವನ ಜೊತೆ ಸಮೀಕರಿಸುವ ನೆಲೆಯಲ್ಲಿ ಸರಸಿಯೊಂದಿಗೆ ಅವಳ ಮುದ್ದಾಟ ಇವೆಲ್ಲವೂ ಅವಳೊಳಗಿನ ಜೀವಕಾಮವನ್ನೇ ಧ್ವನಿಸುತ್ತದೆ. ಹೀಗಾಗಿಯೇ ಮಾವಶಾಸ್ತ್ರಿಗಳ ಆಕ್ರಮಣವನ್ನು ಪ್ರತಿಭಟಿಸದೆ ಇರುವಲ್ಲಿ ಅವಳ ಅವಲಂಬಿತ ಬದುಕು, ಶಾಸ್ತ್ರಿಗಳ ಜೊತೆಯಲ್ಲಿ ಸಂಬಂಧ, ಭಕ್ತಿ ಗೌರವಗಳಷ್ಟೆ ಕಾರಣವಾಗಿರದೆ ಅವಳೊಳಗಿನ ಜೀವಕಾಮವೂ ಪ್ರೇರಕವಾಗಿದೆ ಅನಿಸುತ್ತದೆ. ಇಲ್ಲವೆಂದಾದರೆ ಶಾಸ್ತ್ರಿಗಳ ಲೈಂಗಿಕ ಆಕ್ರಮಣದ ಪೂರ್ವ ಸಂಚನ್ನು ಕಂಡೂ ರುಕ್ಮಿಣಿ ಯಾವುದೇ ಪರಿಹಾರ ಮಾರ್ಗವನ್ನು ಹುಡುಕುವ ಪ್ರಯತ್ನ ಮಾಡಿಲ್ಲವೇಕೆ ?"*[೨]

ಎಂಬ ಪ್ರಶ್ನೆಯನ್ನೆತ್ತುತ್ತಾರೆ. ರುಕ್ಮಿಣಿ ಗರ್ಭಿಣಿಯಾದುದರ ಬಗ್ಗೆ ಲಕ್ಕನನ್ನು, ಮಾವ ಶಾಸ್ತ್ರಿಗಳನ್ನು ಅನುಮಾನ ಪಡುತ್ತಾಳೆ. ಅವಳಿಗೆ ಈ ವಿಚಾರದಲ್ಲಿ ದ್ವಂದ್ವವಿದ್ದು ಬಿಡಿಸಲಾರದೆ ತಟಸ್ಥಳಾಗುತ್ತಾಳೆ. ಅವಳ ಅಪಾರವಾದ ನೋವನ್ನು 'ಮದುವೆ' ಎನ್ನುವ ವ್ಯವಸ್ಥೆಯನ್ನು ಬಿಟ್ಟು ಹೇಳಿಕೊಳ್ಳಲಾಗದ ಸ್ಥಿತಿಯಲ್ಲಿ ಸಿಲುಕಿರುವುದನ್ನು ಕಾದಂಬರಿ ಕಟ್ಟಿಕೊಡುತ್ತಿದೆ. ಆಯ್ಕೆಗೆ ಅವಕಾಶವೇ ಇಲ್ಲದೆ ದುಸ್ಥಿತಿಗೆ ತಳ್ಳುವ ಅಸಹಾಯಕತೆಯನ್ನು ದಾರುಣ ಅವಸ್ಥೆಯನ್ನು ಮಾತಿಗೆ ಮೀರಿದ ನೋವನ್ನು ಕಾದಂಬರಿ ಬಿಂಬಿಸುತ್ತದೆ. ಸಂಯಮದ ಕೋಟೆಯಿಂದ ಹೊರಬರುವ ಮಾವ ಸೊಸೆಗೆ 'ವ್ಯವಸ್ಥೆ' ಎದುರಾಗುವ ರೀತಿ ವಿಶಿಷ್ಟವಾಗಿದೆ. ಮಾವಶಾಸ್ತ್ರಿಗಳನ್ನು ರಕ್ಷಿಸುವುದಕ್ಕೆ ಅಹರ್ನಿಷಿ ಪ್ರಯತ್ನಿಸುವ ವೈದಿಕ ಸಮಾಜ ಅದೇ ಸಮುದಾಯದ

---

೧. ಮಹಿಳೆ –ಸಾಹಿತ್ಯ– ಸಮಾಜ– ವಿಜಯಾದಬ್ಬೆ– ರಚನಾ ಪ್ರಕಾಶನ – ಮೈಸೂರು, ೧೯೮೯–ಪು. ೭೬

೨. ಮಹಿಳಾ ಸಂಕಥನ – ಗಾಯತ್ರಿ ನಾವಡ – ಕನ್ನಡ ಪುಸ್ತಕ ಪ್ರಾಧಿಕಾರ – ೨೦೦೩. ಪು. ೧೨೪

ರುಕ್ಮಿಣಿಯನ್ನು ರಕ್ಷಿಸದೆ ದುರಂತಕ್ಕೆ ತಳ್ಳುತ್ತ ವ್ಯವಸ್ಥೆಯಲ್ಲಿ ಮೇಲ್ನೋಟಕ್ಕೆ ಅಪರಾಧಿಯಾಗಿ ಕಾಣುವ ಲಕ್ಕನನ್ನು ಕತ್ತಲೆಯಲ್ಲಿಡುತ್ತದೆ.

**೮. ಮಹಿಳಾ ಶಿಕ್ಷಣ – ವಿಧವಾ ಜೀವನ**

ಮುಂಬಯಿ ಮಹಾನಗರದ ಮಧ್ಯಮ ಹಾಗೂ ಮೇಲ್ಮಧ್ಯಮ ವರ್ಗಗಳ ಜೀವನದ ಹಿನ್ನೆಲೆಯಲ್ಲಿ ಚಿತ್ರಣಗೊಂಡ ವ್ಯಾಸರಾಯ ಬಲ್ಲಾಳರ ಕಾದಂಬರಿ 'ಉತ್ತರಾಯಣ'. ೧೯೭೦ರ ದಶಕದ ಮುಂಬಯಿ ನಗರ ಜೀವನ ಕುಟುಂಬದೊಳಗೆ ಒಡ್ಡಿದ ಸಂಘರ್ಷಗಳನ್ನು ತೆರೆದಿಡಲಾಗಿದೆ. ಮಹಿಳಾ ಶಿಕ್ಷಣ ನಗರ ಜೀವನಕ್ಕೆ ಒಗ್ಗಿಸಿಕೊಂಡ ರೀತಿ ಕಾದಂಬರಿಯಲ್ಲಿ ಅನಾವರಣಗೊಂಡಿದೆ. ಕೇಶವರಾಯರ ಬಡಕುಟುಂಬದಲ್ಲಿ ನಾಲ್ಕು ಮಕ್ಕಳಲ್ಲಿ ಗಂಡುಮಗ ಗೋವಿಂದ ಉಳಿದವರು ಮೂವರು ಹೆಣ್ಣುಮಕ್ಕಳು. ವಿದ್ಯಾವಂತೆಯರಾಗಿ ದುಡಿಯಲು ಹೊರಜಗತ್ತಿಗೆ ತೆರೆದುಕೊಳ್ಳುತ್ತಾರೆ. ಜಾಣನಾದ ಮಗನಿಂದ ತುಂಬಾ ನಿರೀಕ್ಷಿಸುವ ತಾಯಿ ತಂದೆಗೆ ನಿರಾಶೆಯಾಗುತ್ತದೆ. ಮೊದಲ ಮಗಳು ರುಕ್ಮಿಣಿ ವಿವಾಹವಾಗಿ ಒಂದು ಗಂಡು ಮಗುವಿನ ತಾಯಿಯಾಗುತ್ತಿದ್ದಂತೆ ಗಂಡನನ್ನು ಕಳೆದುಕೊಂಡು ವಿಧವೆಯಾಗುತ್ತಾಳೆ. ತಂಗಿ ಹೇಮಾ ಮಧ್ಯಮ ಕುಟುಂಬದ ಯುವಕನನ್ನು ವಿವಾಹವಾಗಿ ಗಂಡನೊಂದಿಗೆ ಬಾಳಲಾರದೆ ವಿವಾಹ ಬಂಧನದಿಂದ ಹೊರಬರುತ್ತಾಳೆ. ಕಾಯಿಲೆ ಬೀಳುವ ತಂದೆ ಪಿ.ಯು.ಸಿಯ ನಂತರ ಓದಲಾಗದೆ ಪಟ್ಟಣದ ವಿಲಾಸಿ ಜೀವನಕ್ಕೆ ಸಿಲುಕಿ ಮಾನಸಿಕ ಅಸ್ವಸ್ಥನಾಗಿ ಮನೆಯಲ್ಲಿ ಬಂಧಿಯಾದ ತಮ್ಮ, ಇವರ ಜವಾಬ್ದಾರಿ ಹೊತ್ತ ರುಕ್ಮಿಣಿ ಉದ್ಯೋಗ ಹಿಡಿಯುವುದು ಅನಿವಾರ್ಯವಾಗುತ್ತದೆ. 'ಡೇವಿಸ್‌ಬ್ರೌನ್' ಸಂಸ್ಥೆಯಲ್ಲಿ ಉದ್ಯೋಗ ಹಿಡಿಯುವ ರುಕ್ಮಿಣಿ ತೌರಿನವರಿಗೆ ಆಸರೆಯಾಗುತ್ತಾಳೆ.

ರುಕ್ಮಿಣಿ ವಿಧವೆಯಾಗಿ ತೌರಿಗೆ ಬಂದ ನಂತರ ಹೇಮಾ ಗಂಡನನ್ನು ಬಿಟ್ಟು ಮಹಿಳಾ ವಸತಿ ನಿಲಯದಿಂದ ತೌರಿಗೆ ಬರುವುದನ್ನು ತಪ್ಪಿಸಿಕೊಳ್ಳುತ್ತಾಳೆ. ಹೇಮಾ ವಿವಾಹವಾಗಿ ಗಂಡನಿಂದ ದೂರವಾಗಲು ಕೊಡುವ ಕಾರಣ ದಿಟ್ಟತನದವು ಎನಿಸಿದರೂ ಸುಂದರಿಯಾದ ವಿದ್ಯಾವಂತೆಯಾದ ಹೇಮಾ ಸ್ವತಂತ್ರವಾಗಿ ಬದುಕುವ ಅವಕಾಶಕ್ಕಾಗಿ ಹಾತೊರೆಯುತ್ತ ಅವಳ ದಾಂಪತ್ಯವನ್ನು ಹೀಗೆ ವಿವರಿಸುತ್ತಾಳೆ.

> *"ಗಂಡನ ಬಾಹುಬಂಧನ ಅಪ್ರಿಯವಾದುದೆಂದು ತೋರತೊಡಗಿದಾಗ, ಆ ಸೌಮ್ಯ ಮುಖದ ವಿಕಾರವಾದ ಹಸಿವಿನಲ್ಲಿ, ಹಸಿವನ್ನು ಮಾತ್ರ ಗುರುತಿಸಿ ಜಿಗುಪ್ಸೆ ಬಂದಾಗ ಹೇಮಾಗೆ ತಮ್ಮ ದಾಂಪತ್ಯ ಮೂರಾಬಟ್ಟೆಯಾಗಿದೆಯೆಂದು ತಿಳಿಯಲು ತಡವಾಗಲಿಲ್ಲ. ಗಿರೀಶ ಬದುಕಿದ್ದುದೇ ಹೆದರಿಕೆಯ ಪಿಂಡವಾಗಿ. ಹೆದರಿಕೆಯ ಹುತ್ತದಲ್ಲಿ ಅಡಗಿದ್ದ ಹಾವು. ಆತನಿಗೆ ಮನುಷ್ಯನಾಗುವ ಆಸೆಯೇ ಇರಲಿಲ್ಲ. ತಂದೆಯ ಹೆದರಿಕೆಯ ತಾಯಿಯ ಹೆದರಿಕೆಯ ಬದುಕಲು ಕಲಿಯಲು ಸಹಾಯ ಭರವಸೆಗಳಿರದೆ ಸಾಧ್ಯವಿಲ್ಲ ಎಂದು ಸಾರುವಂತಿದ್ದ ತಮ್ಮಂದಿರಾದ ಸತೀಶ,*

*ರಮೇಶ, ಇವರೆಲ್ಲರ ಪ್ರಭಾವದ ಕ್ಷುದ್ರ ಪ್ರಪಂಚದಲ್ಲಿ ಗಿರೀಶನ ಕಾಮದ ಯಜ್ಞದ ಪಶುವಾಗಿ, ಆತನಿಗಾಗಿ ಮಕ್ಕಳನ್ನು ಹೆರುವ ಯಂತ್ರವಾಗಿ ತನ್ನೆಲ್ಲ ಆಸೆ ಆಕಾಂಕ್ಷೆಗಳನ್ನು ಸುಟ್ಟು ಕಾರಕೂನನ ಹೆಂಡತಿಯಾಗಿ ಬಾಳಬೇಕು"*[1]

ಇಂತಹ ಆಲೋಚನೆಗಳಿಂದ ತನ್ನ ದಾಂಪತ್ಯಕ್ಕೆ ಮದುವೆಯಾಗಿ ಎರಡೇ ವಾರಕ್ಕೆ ಕೊನೆ ತಂದುಕೊಂಡಿದ್ದಳು. ಹೇಮಾಳಿಗಿದ್ದ ಮಹತ್ವಾಕಾಂಕ್ಷೆ ಹಾಗೂ ಸ್ವತಂತ್ರ ಬದುಕು ಅವಳ ದಾಂಪತ್ಯವನ್ನು ನಾಶಮಾಡಿತ್ತು. ಆದರೆ ಹೇಮಾಳ ಸೌಂದರ್ಯಕ್ಕೆ ಮಾರುಹೋದ ಗಂಡ ಗಿರೀಶ ವಿವಾಹ ವಿಚ್ಛೇಧನಕ್ಕೆ ವಿರೋಧ ವ್ಯಕ್ತಪಡಿಸುತ್ತಾನೆ. ಗಿರೀಶನನ್ನು ಸರಿಪಡಿಸಲು ಸಾಧ್ಯವೇ ಇಲ್ಲ ಎಂದು ತಿಳಿದಾಗ ಹೇಮಾ ತನ್ನ ಜಗತ್ತನ್ನು ತಾನೇ ಸೃಷ್ಟಿಸಿಕೊಳ್ಳಲು ತನ್ನ ವ್ಯಕ್ತಿತ್ವಕ್ಕೆ ತನ್ನದೇ ಆದ ಪರಿಸರವನ್ನು ನಿರ್ಮಿಸಿಕೊಳ್ಳಲು ತಡಮಾಡಲಿಲ್ಲ. ಅವಳ ಪರಿಚಿತವಲಯದವರೆಲ್ಲ ಅವಳನ್ನು ಗುರುತಿಸುತ್ತಿದ್ದುದು 'ಸುಂದರಿಯಾದ ರಿಸೆಪ್ಷನಿಸ್ಟ್' ಸುಂದರಿಯಾದ ಸೇಲ್ಸ್‌ಗರ್ಲ್' ಸುಂದರಿಯಾದ ಪರಿಚಯದ 'ದುಡಿಯುವ ಹುಡುಗಿ' ಎಂದು 'ಹೇಮಾವತಿ'ಯೆಂದಲ್ಲ. ಇವರನ್ನೆಲ್ಲ ಎದುರಿಸುವ ಧೈರ್ಯವೂ ಗಿರೀಶನಿಗಿಲ್ಲ. ಮತ್ತೆ ಮತ್ತೆ ದಾಂಪತ್ಯ ಬದುಕಿಗೆ ಆಹ್ವಾನಿಸುವ ಗಿರೀಶನ ಬಗ್ಗೆ ಹೇಮಾಳಿಗೆ ಜಿಗುಪ್ಸೆ ಬರುತ್ತದೆ.

*"ತಮ್ಮ ಒಡೆದ ದಾಂಪತ್ಯವನ್ನು ಸರಿಪಡಿಸಲು ಸಾಧ್ಯವೇ ಇಲ್ಲವೆನ್ನುವ ಸತ್ಯ ಆ ಬಡಪಾಯಿಗೇಕೆ ಹೊಳೆಯುವುದಿಲ್ಲ! ಆತನ ಸಣ್ಣತನವನ್ನು ಆತನ ಹೆದರಿಕೆಯನ್ನು ತನ್ನ ದೇಹ ಸೌಂದರ್ಯವನ್ನು ಮಾತ್ರ ಬಯಸುವ ಆತನ ಲೋಲುಪತೆಯನ್ನು ಆತನ ಕ್ಷುದ್ರ ವ್ಯಕ್ತಿತ್ವವನ್ನು ತಾನು ದ್ವೇಷಿಸುತ್ತೇನೆಂದು ಇನ್ನೂ ಆತನಿಗೆ ತಿಳಿಯದೆ ?"*[2]

ಎಂದು ಪ್ರಶ್ನಿಸಿಕೊಳ್ಳುವ ಹೇಮಾಳ ಮನಸ್ಸು 'ವಿವಾಹ' ಬಂಧನವನ್ನು ವಿರೋಧಿಸಿ ಹೊರ ಬರುವುದನ್ನು ಕಾದಂಬರಿ ವಿವರಿಸುತ್ತದೆ. 'ವಿವಾಹ'ವನ್ನು ವಿರೋಧಿಸುವ ಹೇಮಾ ತನ್ನವರ ದೃಷ್ಟಿಯಲ್ಲಿ ಕೆಟ್ಟವಳಾಗಿ ಕಾಣುತ್ತಾಳೆ. ಸಂಪ್ರದಾಯಸ್ಥರ ನೋಟದಲ್ಲಿ ವಿರೋಧವಿರುವುದು ಸಹಜವಾದುದೆ. ಆದರೆ ಹೇಮಾಳಿಗೆ 'ಮದುವೆ ಮಾನಸಿಕ ಹಿಂಸೆ ಎಂಬ ತಿಳುವಳಿಕೆ." ಇದನ್ನು ಪಟ್ಟುಹಿಡಿದು ವಾದಿಸುತ್ತ ತಾಯಿಯ ಮರಣದ ಸಂದರ್ಭದಲ್ಲೂ ಗಿರೀಶನ ಕೃಪೆಗೆ ಪಾತ್ರಳಾಗುವುದಿಲ್ಲ. ತಾಯಿಯ ಅಂತ್ಯಕ್ರಿಯೆಗೆ ಬಂದ ರುಕ್ಮಿಣಿ ಉದ್ಯೋಗ ಮಾಡುತ್ತಿದ್ದ ಸಂಸ್ಥೆಯ ಮುಖ್ಯಾಧಿಕಾರಿ ಮೋಹನ್‌ರಾವ್ ಹೇಮಾಳ ಕಣ್ಣಿಗೆ ಬೀಳುತ್ತಾನೆ. ಹೆಂಡತಿಯನ್ನು ಕಳೆದುಕೊಂಡು ವಿಧುರನಾದ ಮೋಹನ್ ಚಿಕ್ಕವಯಸ್ಸಿನ ನಿಷ್ಠಾವಂತ ಅಧಿಕಾರಿ.

ಡೇವಿಸ್‌ಬ್ರೌನ್ ಕಂಪನಿಯ ಅಧಿಕಾರಿ ಮೋಹನ್ ರುಕ್ಮಿಣಿಯನ್ನು ತನ್ನ ಕಾರ್ಯದರ್ಶಿಯಾಗಿ ಕೆಲಸ ಮಾಡಿಸುತ್ತ ಅವಳ ವೈಧವ್ಯಕ್ಕೆ ಅನುಕಂಪ

---

೧. ಉತ್ತರಾಯಣ-ವ್ಯಾಸರಾಯ ಬಲ್ಲಾಳ-ಗೀತಾಬುಕ್ ಹೌಸ್-ಮೈಸೂರು ೧೯೬೯ ಪು. ೨೭೬

೨. ಅದೇ ಪು. ಪು-೨೭೯

ತೋರಿಸುವುದು ಸಂಸ್ಥೆಯವರ ಅಸಮಾಧಾನಕ್ಕೆ ಕಾರಣವಾಗುತ್ತದೆ. ಮೋಹನನ ಮಾತಿನಲ್ಲಿನ ಪ್ರೀತಿ, ಅನುಕಂಪ ರುಕ್ಮಿಣಿಯ ಬೆಂದ ಬದುಕಿಗೆ ತಂಪನೆರೆಯುತ್ತವೆ. ಉದ್ಯೋಗ ತಂದ ಆರ್ಥಿಕ ಅವಲಂಬನೆ. ಅವಳ ಬದುಕಿನ ಉತ್ಸಾಹ ಹೆಚ್ಚಿಸುವ ಮೊದಲೇ ತಾಯಿ ತೀರಿಕೊಳ್ಳುತ್ತಾಳೆ. ಒಂದು ಮಗುವಿನ ತಾಯಿಯಾಗಿದ್ದ ರುಕ್ಮಿಣಿ ಗಂಡನನ್ನು ಕಳೆದುಕೊಂಡ ಸ್ವಲ್ಪ ಸಮಯದಲ್ಲೇ ಮಗು ಭಾಸ್ಕರನನ್ನು ಕಳೆದುಕೊಂಡು ಅನಾಥೆಯಾಗುವುದು ಅವಳ ಬದುಕಿನ ದುರಂತ. ಇದರೊಂದಿಗೆ ಹೇಮಾಳ ಒಡೆದ ದಾಂಪತ್ಯ ರುಕ್ಮಿಣಿಯ ಬದುಕಿನ ನೆಮ್ಮದಿ ಕೆಡಿಸಲು ಯಶಸ್ವಿಯಾಗುತ್ತವೆ. ತನ್ನ 'ವೈಧವ್ಯ'ಕ್ಕಾಗಿ ಮರುಗುವ ರುಕ್ಮಿಣಿ ಒಂದು ಕಡೆಯಾದರೆ 'ವಿವಾಹ' ಬಂಧನವನ್ನು ಮುರಿದು ಹೊರಬರುವ ಹೇಮಾ ಇನ್ನೊಂದೆಡೆ ನಿಲ್ಲುತ್ತಾರೆ. ಪರಸ್ಪರ 'ದಾಂಪತ್ಯ'ಕ್ಕಾಗಿ ಹಂಬಲಿಸುವ ರುಕ್ಮಿಣಿಯ ಬದುಕನ್ನು 'ದಾಂಪತ್ಯ ಬದುಕ'ನ್ನು ವಿರೋಧಿಸುವ ಹೇಮಾಳ ಬದುಕಿಗೆ ಕಾದಂಬರಿ ಮುಖಾಮುಖಿಯಾಗಿಸುತ್ತದೆ. ಮಹಿಳೆಗೆ ಆಧುನಿಕ 'ವೃತ್ತಿಜೀವನ' ತಂದು ಕೊಟ್ಟ ಸ್ವಾತಂತ್ರ್ಯ ಸ್ವಚ್ಛಂಧತೆಯ ಕಡೆಗೆ ಮುಖಮಾಡುವುದನ್ನು ಕಾದಂಬರಿ ವಿವರಿಸುತ್ತದೆ. ಆದರೆ ರುಕ್ಮಿಣಿಯ ಬದುಕಿನ ನೆಲೆ ದಾಂಪತ್ಯ ಜೀವನದ ಮಹತ್ವದತ್ತ ತುಡಿಯುತ್ತದೆ. ಹೇಮಾ ವೈವಾಹಿಕ ಬದುಕನ್ನು ಹೀಗೆ ವಿಶ್ಲೇಷಿಸುತ್ತಾಳೆ. ಅವಳ ಮಾವ 'ಮದುವೆ'ಯನ್ನು ಕುರಿತು ಹೇಳುವಾಗ

> *"ನನ್ನ ಜೀವನಕ್ಕೆ ಅರ್ಥಕೊಡುವವಳು ನಾನೇ. ಮಾವಾ ನಾನು ಮದುವೆಯಾದುದು ದೊಡ್ಡ ತಪ್ಪು.... ಯಾಕೆ ಆ ತಪ್ಪು ಮಾಡಿದೆ ಎಂಬ ನೋವು ನನ್ನನ್ನು ಇನ್ನೂ ಕೊರೆಯುತ್ತಿದೆ..... ಆದರೆ ಆ ತಪ್ಪನ್ನು ತಿದ್ದಿಕೊಳ್ಳಲು ಬೇರೆಯವರ ಮುಖದಲ್ಲಿ ಏನಿದೆಯೆಂದು ನಾನು ನೋಡುವುದಿಲ್ಲ."*[೧]

ಈ ಮಾತುಗಳಿಂದ ನೊಂದ ರುಕ್ಮಿಣಿ ತಂದೆತಾಯಿಯ ಸಾವಿಗೆ ಕಾರಣವಾದ ನೀನು ಈಗಲಾದರೂ ತಿದ್ದಿಕೊಳ್ಳಬೇಕು ಎನ್ನುವಾಗ

> *"ನನ್ನ ಜೀವನ ಅಪ್ಪನಿಗಾಗಿಯೂ ಅಲ್ಲ : ಅಮ್ಮನಿಗಾಗಿಯೂ ಅಲ್ಲ..... ನಿನಗಾಗಿ .....ಅವರ ಪ್ರೀತಿಯ ನೆನಪನ್ನೇ ಪೂಜಿಸಿ ನನ್ನ ಕುತ್ತಿಗೆಗೆ ನಾನು ನೇಣು ಹಾಕಿಕೊಳ್ಳುವುದಿಲ್ಲ ..... ನಾನು ಬೆಳೆಯಲು ಕಾರಣವಾಗಿದ್ದರೆ ಮಾತ್ರ ನನ್ನ ಮದುವೆಗೆ ಅರ್ಥವಿತ್ತು ..... ನಾನು ಕುಗ್ಗಲು ಕಾರಣವಾದಾಗ, ನನ್ನ ಕರಿಮಣಿಗೆ ಅರ್ಥವಿಲ್ಲ ....."*[೨]

ಶಿಕ್ಷಣ ತಂದುಕೊಟ್ಟ ಆರ್ಥಿಕ ಭದ್ರತೆ ಆಧುನಿಕ ಮಹಿಳೆಯರ ಬದುಕಿನಲ್ಲಿ ಸಂಬಂಧಗಳ ಸಂವೇದನೆಯನ್ನು ಹತ್ತಿಕ್ಕುವುದರ ಕುರಿತು ಕಾದಂಬರಿ ವಿವರಿಸುತ್ತಿದೆ. ಹೇಮಾಳ ಬದುಕು ಎತ್ತರೆತ್ತರಕ್ಕೆ ಬೆಳೆಯುತ್ತಿದೆ ಎಂದು ಭಾವಿಸುವ ರುಕ್ಮಿಣಿಗೆ ಅವಳ ಭಿನ್ನವಾದ ಜೀವನಾನುಭವ ಅವಳನ್ನು ಆ ರೀತಿ ಪಳಗಿಸಿರಬಹುದು ಎಂದು

---

೧. ಉತ್ತರಾಯಣ–ವ್ಯಾಸರಾಯ ಬಲ್ಲಾಳ–ಗೀತಾಬುಕ್ ಹೌಸ್–ಮೈಸೂರು ೧೯೬೯ ಪು. ೨೯೪

೨. ಅದೇ ಪು – ಪು – ೪೯೫

ತೋರುತ್ತದೆ. ರುಕ್ಮಿಣಿಯ ಬದುಕಿನೊಂದಿಗೆ ಹೇಮಾಳ ಬದುಕು ಎದುರಾದಾಗ ಸಹಜವಾಗಿ ಇಂಥ ಪ್ರಶ್ನೆಗಳು ಏಳುತ್ತವೆ.

**೯. ಆಧುನಿಕ ನಗರ ಜೀವನದಲ್ಲಿ 'ವಿವಾಹ' ಬಂಧನ – ಬಿಡುಗಡೆ**

ರುಕ್ಮಿಣಿಯ ಬಾಸ್ ಮೋಹನರಾವ್‌ನನ್ನು ಅಕ್ಕ ತಂಗಿ ಇಬ್ಬರೂ ಒಪ್ಪಿಕೊಳ್ಳುತ್ತಾರೆ. ಮುಗ್ಧ ಮನಸ್ಸಿನ ಸುಂದರ ವಿಧವೆ ರುಕ್ಮಿಣಿಯ ಸನ್ನಡತೆ ಮೋಹನನ್ನು ಸೆಳೆದರೆ, ಸುಂದರವಾಗಿದ್ದು ನೇರ ನಡೆನುಡಿಯ ಹೇಮಾ ಮೋಹನನಿಗೆ ಆಕರ್ಷಿತಳಾಗುತ್ತಾಳೆ. ರುಕ್ಮಿಣಿಯ ಸೌಜನ್ಯ ಸೌಮ್ಯ ಸ್ವಭಾವಗಳು ಮೋಹನನ್ನು ಅಂತರ್ಯದಲ್ಲಿಟ್ಟು ಆರಾಧಿಸುತ್ತವೆ. ಆದರೆ ಹೇಮಾಳ ಚುರುಕುತನ, ಧೈರ್ಯ, ದಿಟ್ಟತನಗಳು ಮೋಹನನ್ನು ಮುತ್ತಿ ಆಕರ್ಷಿಸುತ್ತವೆ. ಮೋಹನನ ಮೋಹದ ಬಲೆಗೆ ಬಿದ್ದ ಹೇಮಾ ನೇರವಾಗಿ ಸ್ವತಂತ್ರವಾಗಿ ತನ್ನಿಷ್ಟಕ್ಕೆ ತಕ್ಕಂತೆ ಬಳಸಿಕೊಳ್ಳಬಲ್ಲಳು. ಇದು ರುಕ್ಮಿಣಿಯಿಂದ ಸಾಧ್ಯವಾಗುವುದಿಲ್ಲ. ವೈವಾಹಿಕ ಬದುಕಿನಿಂದ ಹೊರಬರುವ ಹೇಮಾ ಮೋಹನನೊಂದಿಗೆ ಸ್ವತಂತ್ರಳಾಗಿರಲು ಸಾಧ್ಯವಾದರೆ, ವಿಧವೆಯಾದ ರುಕ್ಮಿಣಿಗೆ ವಿದ್ಯಾವಂತ ಉದ್ಯೋಗಿಯಾದರೂ ಸಾಧ್ಯವಾಗದಿರುವ ಆಧುನಿಕ ಪಟ್ಟಣ ಜೀವನವನ್ನು ಕಾದಂಬರಿ ವಿವರಿಸುತ್ತದೆ. ಮೋಹನನೊಂದಿಗೆ ತಂಗಿ ಹೇಮಾ ಅನೈತಿಕ ಸಂಬಂಧವಿರಿಸಿಕೊಂಡಿದ್ದಾಳೆ. ಇದರಿಂದ ಮೋಹನ ಡೇವಿಸ್‌ಬ್ರೌನ್ ಕಂಪನಿಯ ನಿರ್ದೇಶಕನಾಗುವುದು ತಪ್ಪಿಹೋಗುವುದು ಎಂಬ ವಿಚಾರದಿಂದ ನೊಂದು ಮೋಹನನ್ನು ಭೇಟಿಯಾಗಲು ಹೋದ ರುಕ್ಮಿಣಿ ಪ್ರತ್ಯಕ್ಷವಾಗಿ ತಂಗಿ ಹೇಮಾ ಮತ್ತು ಮೋಹನನ ವರ್ತನೆಯನ್ನು ನೋಡುತ್ತಾಳೆ. ಇದರಿಂದ ಮನನೊಂದು ರುಕ್ಮಿಣಿ ಆತ್ಮಹತ್ಯೆ ಮಾಡಿಕೊಳ್ಳುವುದರೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ.

ಆಧುನಿಕ ಬದುಕಿನ ತಲ್ಲಣಗಳು ಪಟ್ಟಣ ಜೀವನದಲ್ಲಿ 'ವಿವಾಹ' 'ವೈಧವ್ಯ'ದಂತಹ ಸಾಮಾಜಿಕ ಮೌಲ್ಯಗಳನ್ನು ಅನುಸರಿಸಲಾಗದಷ್ಟು ಘೋರವಾಗಿ ಪರಿಣಮಿಸಿರುವುದನ್ನು ಈ ಕೃತಿ ವಿವರಿಸುತ್ತದೆ. ಮಧ್ಯಮ ವರ್ಗದ ಕುಟುಂಬಗಳು ಸುಂದರ ಬದುಕಿಗಾಗಿ ಕಾಣುವ ಕನಸು ಕಮರಿ ಹೋಗುವುದನ್ನು ಕಾದಂಬರಿ ವಿಶ್ಲೇಷಿಸುತ್ತದೆ. 'ವಿವಾಹ' ಸಂಸ್ಥೆಯೊಳಗೆ ತನ್ನ ನೈಸರ್ಗಿಕ ಆಸೆಗಳನ್ನು ಪೂರೈಸಿಕೊಳ್ಳುತ್ತ ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯಬೇಕಾದ ಮಹಿಳಾ ಬದುಕು ಹೊಸಹೊಸ ಸಮಸ್ಯೆಗಳಿಗೆ ಎದುರಾಗುವುದನ್ನು ಗಮನಿಸಬಹುದು.

ವಿಧುರನಾದ ಮೋಹನ್‌ರಾವ್ ತನ್ನ ಕಾರ್ಯಚತುರತೆಯಿಂದ ಎಲ್ಲರ ಗೌರವಕ್ಕೆ ಪಾತ್ರನಾಗಿ ಸುಂದರ ಯುವತಿಯರನ್ನು ಆಕರ್ಷಿಸುವುದು ಸಾಧ್ಯವಾಗುತ್ತದೆ. ಅಂತಹ ಸುಂದರಿಯರಲ್ಲಿ ರುಕ್ಮಿಣಿ, ಹೇಮಾವತಿ ಸೇರಿಕೊಳ್ಳುತ್ತಾರೆ. ಹೇಮಾಳ ಬಿರುಕು ಬಿಟ್ಟ ದಾಂಪತ್ಯದ ಅರಿವಿದ್ದ ಮೋಹನ ಹತ್ತಿರ ಸೇರಿಸುವುದು, ವಿಧವೆ ರುಕ್ಮಿಣಿಯನ್ನು

ಅನುಕಂಪದಿಂದ ಕಾಣುವುದು ಕಾದಂಬರಿ ಎಳೆಎಳೆಯಾಗಿ ತೆರೆದಿಡುತ್ತದೆ. ಆದರೆ ಇಬ್ಬರೂ ಅಕ್ಕತಂಗಿಯರಿಗೆ ಮೋಹನನೊಂದಿಗೆ 'ವಿವಾಹ'ದ ನೆಲೆಯಲ್ಲಿ ಬದುಕು ಕಟ್ಟಿಕೊಳ್ಳಲು ಅವಕಾಶವಿಲ್ಲ. ಯಾವ ಕಾರಣಕ್ಕೂ ತೀರಿಕೊಂಡ ಹೆಂಡತಿ, ದೂರದ ಊರಿನಲ್ಲಿ ಬೆಳೆಯುತ್ತಿದ್ದ ಮಗಳ ಬಗ್ಗೆ ಯಾವ ಸುಂದರಿಯರ ಮುಂದೂ ಹೇಳುವ ಪ್ರಯತ್ನವನ್ನು ಮಾಡದ ಮೋಹನ ಎಚ್ಚರದಿಂದ ಮರೆಮಾಚುವುದನ್ನು ಕಾದಂಬರಿ ಬಯಲುಮಾಡುತ್ತದೆ. ಪುರುಷನಿಗಿಲ್ಲದ ಕಟ್ಟು ಪಾಡುಗಳು ಮಹಿಳೆಗೆ ಹೊರೆಯಾಗಿ ಕಾಡುವುದು ಆಧುನಿಕ ಬದುಕಿನಲ್ಲೂ ನಿರಂತರವಾಗಿರುವುದನ್ನು ಕಾದಂಬರಿ ಅನಾವರಣಗೊಳಿಸುತ್ತದೆ.

## ಅಧ್ಯಾಯ – ೭

# ಆಧುನಿಕ ಕಾಲಘಟ್ಟದಲ್ಲಿ 'ವೈಧವ್ಯ'ದ – ಸ್ಥಿತ್ಯಂತರ ಸ್ವರೂಪ

೧. ವಿಧವಾ ಮರುವಿವಾಹದ ಸಂಘರ್ಷ

೨. 'ಮರುವಿವಾಹ'–ಕರ್ಮಸಿದ್ಧಾಂತದ ನೆಲೆಯಲ್ಲಿ

೩. 'ತಾಯ್ತನ'–'ಮರುವಿವಾಹ'–ದ್ವಂದ್ವದ ನೆಲೆಯಲ್ಲಿ

೪. 'ವಿಧವೆ' – ಅಸ್ತಿತ್ವದ ಹೋರಾಟ

೫. ವಿಧವೆಯ ಸಾಮಾಜಿಕ ಪ್ರತಿಷ್ಠೆ

೬. ಆಧುನಿಕ ಕಾಲಘಟ್ಟದ 'ವಿಧವಾಮರುವಿವಾಹ'

೭. ಅಂತರ್ಜಾತಿ 'ವಿಧವಾಮರುವಿವಾಹ'– ಸಂಘರ್ಷದ ನೆಲೆಯಲ್ಲಿ

೮. ಮತಧರ್ಮಗಳ ಹಿನ್ನೆಲೆಯಲ್ಲಿ 'ವಿಧವಾವಿವಾಹ'ದ ಸಂಘರ್ಷ

೯. 'ವಿಧವಾವಿವಾಹ'– ಮಹಿಳಾ ಬದುಕಿನ ತಲ್ಲಣಗಳು

ಅಧ್ಯಾಯ ೭

## ಆಧುನಿಕ ಕಾಲಘಟ್ಟದಲ್ಲಿ 'ವೈಧವ್ಯ'ದ ಸ್ಥಿತ್ಯಂತರ ಸ್ವರೂಪ

ಸ್ವಾತಂತ್ರ್ಯ ಪೂರ್ವದ ಕಾಲಘಟ್ಟದಲ್ಲಿ 'ವೈಧವ್ಯ' ಶಾಪವಾಗಿ ಪರಿಣಮಿಸಿ ವಿಧವೆಯರ ಪರಿಸ್ಥಿತಿ ಹೀನಾಯವಾಗಿತ್ತು. ವಿಧವೆಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿ ಸುಧಾರಣೆಯ ಹಂತವನ್ನು ತಲುಪುವ ಕಾಲವಾಗಿತ್ತು. ಆದರೆ ಆರ್ಥಿಕ ಅಭದ್ರತೆಯಿಂದ ಬಳಲುವಾಗ ಸಾಮಾಜಿಕ ಕೀಳರಿಮೆಗೆ ಅವ್ಯಾಹತವಾಗಿ ಗುರಿಯಾದರು. ವಿಧವೆಯರು ಸಾಮಾಜಿಕವಾಗಿ ಅವಗಣನೆಗೆ ಗುರಿಯಾದರು. ಅವಮಾನದಿಂದ ನಡೆಸಿಕೊಂಡ ವ್ಯವಸ್ಥೆ ಅನುಕಂಪದಿಂದ ವರ್ತಿಸುವುದನ್ನು ಮರೆತಿರುವುದೂ ಸಾಮಾಜಿಕ ಸತ್ಯ. ಇಂತಹ ಅಮಾನವೀಯ ಸಾಮಜಿಕ ನೀತಿಯನ್ನು ತೆರೆದಿಡುವ ಕೆಲಸವನ್ನು ನವೋದಯದ ನಂತರದಲ್ಲಿ ಕಥನ ಸಾಹಿತ್ಯಗಳು ವಿವರವಾಗಿ ಕಟ್ಟಿಕೊಟ್ಟಿವೆ. ಆ ಕಾಲಘಟ್ಟದಲ್ಲಿ ಅವಗಣನೆಗೊಳಗಾದ ವಿಧವೆಯರು ಬದುಕು ಕಟ್ಟಿಕೊಳ್ಳಲು ಹೆಣಗಾಡಿರುವುದನ್ನು ಆ ಸಂದರ್ಭದ ಕೃತಿಗಳು ಕಟ್ಟಿಕೊಟ್ಟಿವೆ. ಸ್ವಾತಂತ್ರ್ಯ ಪೂರ್ವದ ಕಾಲಘಟ್ಟ ತನ್ನೊಳಗೆ ಹುದುಗಿಸಿಟ್ಟುಕೊಂಡ ವೈಧವ್ಯದ ವಿದ್ಯಮಾನಗಳನ್ನು ಸಾಹಿತ್ಯ ಕೃತಿಗಳು ತೆರೆದಿಡುತ್ತವೆ. ಎಸ್.ಎಲ್.ಬೈರಪ್ಪನವರ 'ಗೃಹಭಂಗ', 'ವಂಶವೃಕ್ಷ', ಪಿ.ಲಂಕೇಶ್‌ರವರ 'ಮುಸ್ಸಂಜೆ ಕಥಾ ಪ್ರಸಂಗ' ಕೃತಿಗಳನ್ನು ಈ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಬಾಲವಿಧವೆಯಾದವರು ಸಾಂಪ್ರದಾಯಿಕ ಕಟ್ಟುಪಾಡುಗಳಿಂದ ಹೊರಬರಲು 'ವಿಧವಾ ಮರು ವಿವಾಹ', 'ಬ್ರಹ್ಮ ಚರ್ಯ', 'ಆತ್ಮಹತ್ಯೆ' ಬೇರೆ ಮತಧರ್ಮವನ್ನು ಸೇರುವ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಆದರೆ ಮಕ್ಕಳನ್ನು ಪಡೆದ ವಿಧವೆಯರು ತಮ್ಮ ಉಳಿವಿಗಾಗಿ ಮಕ್ಕಳ ಭವಿಷ್ಯಕ್ಕಾಗಿ ಹೋರಾಡುವಾಗ ಸಂಪ್ರದಾಯ ಬದ್ಧವಾದ ನೈತಿಕ ಚೌಕಟ್ಟನ್ನು ಮೀರಲಾರದೆ ತ್ರಾಸದಾಯಕವಾದ ಬದುಕಿನಲ್ಲಿ ನೊಂದರು. ಇಂತಹ ಸಂದರ್ಭಗಳಲ್ಲಿ ವಿಧವೆಯರು ನಿಷ್ಠುರವಾಗಿ ವರ್ತಿಸುವುದು, ಕೆಲವೊಮ್ಮೆ ಕ್ರೂರಿಗಳಾಗುವುದು, ಇನ್ನೂ ಕೆಲವು ಬಾರಿ ನೈತಿಕ ಚೌಕಟ್ಟನ್ನು ಮೀರುವ ಅನಿವಾರ್ಯತೆಯೂ ಎದುರಾಗುತ್ತಿತ್ತು. ಇಂತಹ ಸಮಸ್ಯೆಗಳ ತೀವ್ರತೆಯನ್ನು ಹಲವಾರು ಕೃತಿಗಳು ಚರ್ಚಿಸುತ್ತವೆ. ವೈಧವ್ಯದ ಸಮಸ್ಯೆ ಅಮಾಯಕ ಹೆಣ್ಣಿನ ಬದುಕನ್ನು ನುಂಗಿಹಾಕುವುದರ ಕುರಿತು ಹೇಳುತ್ತಾ ತಕ್ಕ ಪರಿಹಾರವನ್ನೂ ಕೃತಿಯೊಳಗೆ ಸೂಚಿಸಿರುವುದೂ ಗಮನಾರ್ಹವಾದುದಾಗಿದೆ. ಪಿತೃಪ್ರಧಾನ ವ್ಯವಸ್ಥೆ ರೂಪಿಸಿರುವ ವಿಧವಾ ಮೌಲ್ಯಗಳು ವಿಧವೆಯರ ಬದುಕಿನ ಪ್ರಗತಿಗೆ ಹಿನ್ನೆಡೆಯಾಗಿರುವುದೂ ಕಥನ ಸಾಹಿತ್ಯ ಅನಾವರಣಗೊಳಿಸುತ್ತದೆ. ನೈತಿಕ ಅಧಃಪತನಕ್ಕೆ ಕಾರಣವಾಗುವ ಪುರುಷ ಸಮಾಜ ವಿಧವೆಯನ್ನು ದಾಸ್ಯಕ್ಕೆ ನೂಕಿರುವ ಸತ್ಯವನ್ನೂ ತೆರೆದಿಡುತ್ತದೆ. ಸಮಾಜ

ಹೆಣ್ಣಿಗೊಂದು ನ್ಯಾಯ ಗಂಡಿಗೊಂದು ನ್ಯಾಯ ಎನ್ನುವ ದ್ವಿಸ್ತರ ನೀತಿಯನ್ನು ಚರ್ಚಿಸುತ್ತದೆ. ವಿಧವೆಯ ಜೀವನ ಪ್ರೀತಿ, ಬದುಕುವ ಛಲ, ಸ್ವಾಭಿಮಾನ, ತಪಸ್ವೀ ಜೀವನವನ್ನು ಹಲವಾರು ಕೃತಿಗಳು ಬಿಂಬಿಸುವಲ್ಲಿ ಯಶಸ್ವಿಯಾಗುತ್ತವೆ. ಸಾಮಾಜಿಕ ಸಂಘರ್ಷಕ್ಕೊಡ್ಡಿಕೊಳ್ಳುವ ವಿಧವೆಯ ಬದುಕು ಸಾಮಾಜಿಕ ಮೌಲ್ಯಗಳಿಗೆ ಬದ್ಧವಾಗಿರುವುದನ್ನು ಈ ಕೃತಿಗಳು ತೆರೆದು ತೋರಿಸುತ್ತವೆ.

೧. <u>ವಿಧವಾ ಮರುವಿವಾಹದ ಸಂಘರ್ಷ</u>

ಎಸ್.ಎಲ್.ಬೈರಪ್ಪನವರ 'ವಂಶವೃಕ್ಷ' ಕಾದಂಬರಿಯ ಪ್ರಾರಂಭದಲ್ಲಿ ಶ್ರೋತ್ರಿಯರ ಒಬ್ಬನೇ ಮಗ ಆಕಸ್ಮಿಕವಾಗಿ ಮರಣ ಹೊಂದುತ್ತಾನೆ. ಇದರಿಂದ ಪ್ರಾಪ್ತವಾಗುವ ಕಾತ್ಯಾಯಿನಿಯ 'ವೈಧವ್ಯ' 'ಮರುಮದುವೆ' ಮುಂತಾದ ಸಂಘರ್ಷಗಳನ್ನು ತಂದೊಡ್ಡುತ್ತದೆ. ಪುಟ್ಟ ಗಂಡು ಮಗುವಿನೊಂದಿಗೆ ಒಂದಷ್ಟು ದಿನ ಕಳೆಯುವ ಕಾತ್ಯಾಯಿನಿ ಪ್ರಕೃತಿಯ ಹಿಡಿತದಿಂದ ಬಿಡುಗಡೆ ಹೊಂದುವುದು ಸಾಧ್ಯವಾಗುವುದಿಲ್ಲ. ಕಾದಂಬರಿಕಾರರು ಇಂತದ್ದೇ ಇನ್ನೊಂದು ಪ್ರಸಂಗವನ್ನು ತರುತ್ತಾರೆ. ಕಾತ್ಯಾಯಿನಿಯ ಮಾವ ಶ್ರೋತ್ರಿಯರ ಬದುಕಿನಲ್ಲಿ ಎದುರಾಗುತ್ತದೆ. ಶ್ರೋತ್ರಿಗಳ ಪತ್ನಿ ಭಾಗೀರತಮ್ಮ ಮನೆ ಕೆಲಸಕ್ಕಿದ್ದ ಲಕ್ಷ್ಮಿಯ ಮನವೊಲಿಸಿ ಶ್ರೋತ್ರಿಯವರ ಬಳಿಗೆ ಕಳುಹಿಸುತ್ತಾಳೆ. ತಾನಾಗಿ ಅರಸಿಬಂದ ಸುಖದಿಂದ ವಿಮುಖರಾಗಲಾರದೆ ಅನುಭವಿಸಲೂ ಸಾಧ್ಯವಾಗದೆ ಭೀಕರವಾದ ಹೋರಾಟದಲ್ಲಿ ತೊಡಗುತ್ತಾರೆ. ಕೊನೆಗೆ ಮನಸ್ಸನ್ನು ಹತೋಟಿಗೆ ತಂದುಕೊಂಡು 'ಧರ್ಮ'ದ ಮೊರೆ ಹೋಗುತ್ತಾರೆ. ಆದರೆ ಕಾತ್ಯಾಯಿನಿಗೆ ಧಾರ್ಮಿಕ ಮೌಲ್ಯದ ಮೊರೆ ಹೋಗುವುದು ಅಸಾಧ್ಯವಾಗುತ್ತದೆ.

ಕಾತ್ಯಾಯಿನಿ 'ಮರುಮದುವೆ'ಯಾಗುವ ಪ್ರಸಂಗ ಕಾದಂಬರಿಯಲ್ಲಿ ಒಂದು ತರ್ಕವನ್ನೇ ಒಡ್ಡುತ್ತದೆ. ಶ್ರೋತ್ರಿಯವರನ್ನು ವಿರೋಧಿಸಿ ರಾಜಾನೊಂದಿಗೆ ಮದುವೆಯಾಗುವ ಆಯ್ಕೆ ಅವಳ ಮುಂದಿದ್ದರೂ ಹಾಗೆ ಮಾಡಲಾಗುವುದಿಲ್ಲ. ಬಹುಶಃ ಅವಳಿಗೆ ಮಾವ ಶ್ರೋತ್ರಿಯವರ ಮೇಲಿದ್ದ ಗೌರವ ಮತ್ತು ಅವಳು ಬೆಳೆದುಬಂದ ಸಂಸ್ಕಾರ ಅವಳನ್ನು ತಡೆಯುತ್ತವೆ. ವಿಧವಾ ಮೌಲ್ಯವನ್ನು ವಿರೋಧಿಸುವ ಶ್ರೋತ್ರಿಗಳು ಮರುಮದುವೆಗೆ ತಕ್ಷಣವೇ ಒಪ್ಪಿಗೆ ಸೂಚಿಸುವ ಸ್ಥಿತಿಯಲ್ಲಿರಲಿಲ್ಲ. ಇದರಿಂದ ಅನೇಕ ರೀತಿಯ ವಾದವನ್ನು ಮಂಡಿಸುವ ಕಾತ್ಯಾಯಿನಿ ಬಹಿರಂಗವಾಗಿ ಸಮಾಜವನ್ನು ನಿರ್ಭಿಢೆಯಿಂದ ಎದುರಿಸುವ ನಿರ್ಧಾರಕ್ಕೆ ಬರುತ್ತಾಳೆ. ಕಾತ್ಯಾಯಿನಿಯ ವಿದ್ಯಾಭ್ಯಾಸಕ್ಕೆ ಸಮ್ಮತಿಸುವ ಶ್ರೋತ್ರಿಯವರಿಗೆ 'ಮರುವಿವಾಹ'ಕ್ಕೆ ಸಮ್ಮತಿ ಸೂಚಿಸುವುದು ಸುಲಭವಾಗುವುದಿಲ್ಲ. ಅವರ ಮುಂದಿದ್ದ ಸಂಪ್ರದಾಯ ಸಮಾಜ ಅವರ ಈ ನಿರ್ಧಾರಕ್ಕೆ ತಡೆಯೊಡ್ಡುತ್ತದೆ.

ಉನ್ನತ ವ್ಯಾಸಂಗಕ್ಕೆ ತೊಡಗಿಕೊಂಡ ಕಾತ್ಯಾಯಿನಿ ಈಗ ಸ್ವತಂತ್ರವಾಗಿ ಯೋಚಿಸುವ ಸ್ಥಿತಿ ತಲುಪಿದ್ದಾಳೆ. ರಾಜಾ ನಂತಹ ಸ್ಪುರದ್ರೂಪಿ ವಿದ್ಯಾವಂತನಿಗೆ ಮನಸೋತು ತನ್ನ ಹಿಂದಿನ ಬದುಕಿನಿಂದ ಸಂಪೂರ್ಣ ಮರೆಯಾಗುತ್ತಾಳೆ. ಅವಳ ಮುಂದಿರುವ ಆಯ್ಕೆಗಳೆಂದರೆ ನಿಷ್ಠಾವಂತ ಅತ್ತೆ ಮಾವ ಮಗನೊಂದಿಗೆ ಜೀವನ ಪರ್ಯಂತ ತನ್ನ ನೈಸರ್ಗಿಕ ಆಸೆಗಳನ್ನು ಅದುಮಿಟ್ಟು ಬದುಕುವುದು, ಮತ್ತು ತನ್ನನ್ನು ಪ್ರೀತಿಸುವ ರಾಜಾನನ್ನು ವಿವಾಹವಾಗಿ ಬದುಕು ಕಟ್ಟಿಕೊಳ್ಳುವುದು. ಬಾಲವಿಧವೆಯರು ವಿದ್ಯಾಭ್ಯಾಸವನ್ನು ಪಡೆದು ಸನಾತನ ಧರ್ಮವನ್ನು ಪ್ರಶ್ನೆಮಾಡುವ ಕಾಲಘಟ್ಟದಲ್ಲಿ ನಿಂತು ಯೋಚಿಸುವ ಕಾತ್ಯಾಯಿನಿ 'ಮರುವಿವಾಹ'ದಂತಹ ಸಂಘರ್ಷಕ್ಕೆ ತನ್ನ ಬಾಳನ್ನು ಒಡ್ಡಿಕೊಳ್ಳುತ್ತಾಳೆ. ರಾಜಾನನ್ನು ಮದುವೆಯಾಗುವ ವಿಷಯ ಮಾವ ಅತ್ತೆಗೆ ತಿಳಿಸುವುದು ತುಂಬಾ ಕಷ್ಟವಾಗಿದ್ದಾಗ ರಾಜಾನ ಮಾತು ಕೋಪದಿಂದ ಬಂತು "ಇಷ್ಟು ಧೈರ್ಯ ಇಲ್ಲದ ನೀನು ಇಷ್ಟು ದೂರ ಯಾಕೆ ನನ್ನನ್ನು ಹಿಡಿದು ನಡೆದೆ?" ಎಂದು. ಆ ದಿನವೇ ಅವಳು ಪತ್ರದ ಮೂಲಕ ತನ್ನ ಮರುವಿವಾಹದ ನಿರ್ಧಾರವನ್ನು ತಿಳಿಸುತ್ತಾಳೆ. ಹದಿನಾರು ಪುಟಗಳಲ್ಲಿ ಮನುಷ್ಯನ ಮೂಲ ಸ್ವಭಾವವನ್ನು ತುಳಿದು ಕೃತಕವಾದ ನಡೆನುಡಿಗಳನ್ನು ಮಾಡಿರುವ ಸಮಾಜದ ಕೃತಕತೆಯನ್ನು ವಿವರಿಸಿದ್ದಳು. ಸ್ತ್ರೀಪುರುಷರ ಸುಖಜೀವನಕ್ಕೆ ತೊಡಕಾದ ಆಚಾರವಿಚಾರಗಳನ್ನು ವಿಶ್ಲೇಷಿಸಿದ್ದಳು. ಕೊನೆಯ ಪುಟದಲ್ಲಿ ಹೀಗೆ ಬರೆದಿದ್ದಳು.

> *"ಸಮಾಜದ ಕುರುಡು ತೆರೆಯನ್ನು ಸರಿಸಿ ಮಾನವೀಯ ಅಂತಃಕರಣದ ದೃಷ್ಟಿಯಿಂದ ಇದನ್ನು ನೀವು ನೋಡಬೇಕಾಗಿ ಪ್ರಾರ್ಥಿಸುತ್ತೇನೆ. ನಿಮ್ಮ ಮಗಳೇ ಅಂತಃಕರಣದ ಕೂಗಿಗೆ ಓಗೊಟ್ಟು ನನ್ನಂತೆ ತೀರ್ಮಾನಿಸಿದ್ದರೆ ತಂದೆಯಾದ ನೀವು ಹೇಗೆ ಅನುಭೂತಿ ತೋರಿಸುತ್ತಿದ್ದೀರೋ ಹಾಗೆಯೇ ನೋಡಿ. ನಾನು ನಿಮ್ಮ ನಂಬಿಕೆಗೆ ಎಂದೂ ದ್ರೋಹ ಮಾಡಿಲ್ಲ. ನಿಮ್ಮ ಅಪ್ಪಣೆ ಪಡೆದು ನಿಮ್ಮ ಪವಿತ್ರ ಆಶೀರ್ವಾದವನ್ನು ಹೊತ್ತೇ ನನ್ನ ಹೊಸಬಾಳನ್ನು ಜೀವಿಸಲು ಹೋಗುತ್ತಿದ್ದೇನೆ. ಇದೆಲ್ಲವನ್ನು ಬಾಯಿಬಿಟ್ಟು ಹೇಳಲಾರದೆ ಈ ಕಾಗದದಲ್ಲಿ ಬರೆದಿದ್ದೇನೆ. ಈ ಸಂಜೆ ನಾನು ಹಿಂದಿರುಗಿದಾಗ ನೀವು ಆಶೀರ್ವದಿಸಬೇಕಾಗಿ ನಿಮ್ಮ ಚರಣಗಳಲ್ಲಿ ತಲೆಯಿಟ್ಟು ಬೇಡಿಕೊಳ್ಳುತ್ತೇನೆ."*[1]

ಹೊಸ ಬದುಕಿಗೆ ತನ್ನನ್ನು ತೆರೆದುಕೊಳ್ಳುವ ಉತ್ಸಾಹದಲ್ಲಿದ್ದ ಕಾತ್ಯಾಯಿನಿಗೆ ಮೊದಲ ಮದುವೆಯ ಸಂಬಂಧವನ್ನು ತೊರೆದು ಹೋಗುವುದು ಸುಲಭವಾಗಿರಲಿಲ್ಲ- ಮಾವ ಶ್ರೋತ್ರಿಗಳು ಗೃಹ ಜೀವನವನ್ನು ಕುರಿತು ಹೀಗೆ ಹೇಳುತ್ತಾರೆ. "ವಂಶೋತ್ಪತ್ತಿಗಾಗಿ

ಲೆ ಅಕಸ್ಮಾತ್ ಗೃಹನಷ್ಟವಾದರೆ ಪುನಃ ಅದಕ್ಕೆ ತಿರುಗಿ ಹೋಗುವುದು ಧರ್ಮವಲ್ಲ" ಎಂದು ಗಂಡಸರು ಹತ್ತು ಮದುವೆಯನ್ನಾದರೂ

೧. ವಂಶವೃಕ್ಷ – ಎಸ್ –ಸಾಹಿತ್ಯ ಭಂಡಾರ – ಬೆಂಗಳೂರು–೨೦೦೯. ಪು. ೧೩೮

ಆಗಬಹುದೆಂಬ ಕಾತ್ಯಾಯಿನಿಯ ವಾದವನ್ನು ತಳ್ಳಿಹಾಕುವ ಶ್ರೋತ್ರಿಯವರು ತಮ್ಮ ಜೀವನದಲ್ಲಿ ಒದಗಿದ ಇಂತದ್ದೇ ಸಂದರ್ಭವನ್ನು ತಿರಸ್ಕರಿಸಿದ್ದನ್ನು ಹೇಳುತ್ತಾರೆ. ತನ್ನ ದಾರಿಯಲ್ಲೇ ಧರ್ಮವನ್ನು ಹಿಡಿದೆ. "ಯಾರು ಧರ್ಮಕ್ಕೆ ತಮ್ಮನ್ನು ಸಮರ್ಪಿಸಿಕೊಳ್ಳುತ್ತಾರೋ ಅವರನ್ನು ಧರ್ಮವೇ ಯಾವ ಕಷ್ಟವೂ ಇಲ್ಲದೆ ಕೈಹಿಡಿದು ನಡೆಸುತ್ತೆ" ಎಂದುಧರ್ಮಾಧರ್ಮ ಕುರಿತು ಉಪದೇಶ ಮಾಡುತ್ತಾರೆ.

ಶ್ರೋತ್ರಿಗಳು ನಂಬಿದ್ದ ಜೀವಾನಾದರ್ಶಗಳಿಗೂ ಅದಮ್ಯ ಶಕ್ತಿಯ ಪ್ರಕೃತಿ ಗುಣಗಳಿಗೂ ಅವರ ವ್ಯಕ್ತಿತ್ವದಲ್ಲಿ ಹೋರಾಟ ನಡೆದೇ ಇತ್ತು. ಪ್ರಕೃತಿ ಹಿಡಿತದಿಂದ ಮುಕ್ತಿ ಹೊಂದದೆ ಮನುಷ್ಯನಿಗೆ ಬಿಡುಗಡೆ ಇಲ್ಲ ಎಂದು ಅವರ ಅಧ್ಯಯನದಿಂದ ತಿಳಿದಿದ್ದರು. ಅತೃಪ್ತ ಬಯಕೆಯ ಯೌವನದ ಅಭೀಪ್ಸೆಗಳನ್ನು ಗೆಲ್ಲುವ ಹೋರಾಟ ಮಾಡುತ್ತಲೇ ಬಂದಿದ್ದರು. ದೇಹದ ಬಯಕೆಯನ್ನು ಸ್ಥಿಮಿತದಲ್ಲಿಟ್ಟುಕೊಂಡ ಶ್ರೋತ್ರಿಗಳು ಕಾತ್ಯಾಯಿನಿಯ ಮರುವಿವಾಹದ ನಿರ್ಧಾರವನ್ನು ಚರ್ಚೆಗೆ ನಿಲ್ಲಿಸುತ್ತಾರೆ. ಕಾತ್ಯಾಯಿನಿ ಮಾವನೊಂದಿಗೆ ವಾದಿಸಲು ನಡೆಸಿದ ತಯಾರಿಯೆಲ್ಲ ಮರೆತು ಹೋಗಿ ಶೂನ್ಯವಾದಳು. ಆದರೂ ಹೇಳಿದಳು.

> *"ಈ ಸಮಾಜದಲ್ಲಿ ಹೆಣ್ಣಿನ ಬಾಳಿನಲ್ಲಿ ಏನಾದರು ಆಘಾತವಾದರೆ ಪುನಃ ರೂಢಿಸುವ ಸಾಧ್ಯತೆಯೇ ಇಲ್ಲ. ವಿಧುರನಾದ ಗಂಡಸು ಹತ್ತು ಸಲ ಮದುವೆಯಾದರೂ ನಡೆಯುತ್ತೆ. ಹೆಣ್ಣಿನ ಅಂತಃಕರಣವನ್ನು ಅರ್ಥಮಾಡಿಕೊಳ್ಳುವ ಸಹಾನುಭೂತಿ ಈ ಜಗತ್ತಿಗೆ ಮೊದಲಿನಿಂದಲೂ ಇಲ್ಲ"*[೧]

ಮಾನವ ಸಹಜ ಧರ್ಮವನ್ನು ಕುರಿತು ಮಾತನಾಡುವ ಕಾತ್ಯಾಯಿನಿ ಮರುಮದುವೆಯ ನಿರ್ಧಾರದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಮರುವಿವಾಹ ವಿಚಾರದಲ್ಲಿ ದ್ವಂದ್ವದಲ್ಲಿ ಸಿಲುಕಿದ ಕಾತ್ಯಾಯಿನಿ ರಾಜಾನನ್ನು ದೂರ ಇರುವಂತೆ ಹೇಳಿದಳಾದರೂ ಮರೆಯಲಾಗದೆ ಮನಸ್ಸಿನ ದೊಡ್ಡ ಪ್ರವಾಹದೆದುರಿನಲ್ಲಿ ಕೊಚ್ಚಿಹೋದಳು. ತನ್ನ ಜೀವನದ ಹೊಸ ಪಾತ್ರವನ್ನು ಅವಳು ನಿಶ್ಚಯಿಸಿಕೊಂಡಳು. ಆ ಪಾತ್ರದಲ್ಲಿ ನಡೆಯುವ ಇಲ್ಲವೇ ಕ್ಷಯಿಸಿ ಸಾಯುವ ತೀರ್ಮಾನಕ್ಕೆ ಬಂದಳು. ಮೊದಲ ಗಂಡನ ಸಂಸಾರವನ್ನು, ಮಗನನ್ನು ಬಿಟ್ಟು ಹೊರಡುವ ಕಾತ್ಯಾಯಿನಿಯ ನಿರ್ಧಾರದ ಹಿಂದಿರುವ ಶಿಕ್ಷಣದ ಮಹತ್ವವನ್ನು ಮರೆಯುವಂತಿಲ್ಲ. ಶಿಕ್ಷಣ ಕಾತ್ಯಾಯನಿಗೆ ನೀಡಿದ ಸ್ವಾತಂತ್ರ್ಯ, ಆತ್ಮವಿಶ್ವಾಸ, ಕಾದಂಬರಿಯಲ್ಲಿ ತೆರೆದುಕೊಳ್ಳುತ್ತದೆ. ಆದರೆ ಒಂದು ವ್ಯವಸ್ಥೆಯನ್ನು ಮುರಿದು ಹೊರ ಬರುವ ಕಾತ್ಯಾಯಿನಿಯ ಬದುಕು ಮತ್ತೊಂದು ಅವ್ಯವಸ್ಥೆಗೆ ಮತ್ತಷ್ಟು ಅಂಟಿಕೊಳ್ಳುವಂತೆ ಬಿಂಬಿತವಾಗಿದೆ.

**೨. ಮರುವಿವಾಹ – ಕರ್ಮ ಸಿದ್ಧಾಂತದ ನೆಲೆಯಲ್ಲಿ**

ಕಾತ್ಯಾಯಿನಿ ಸಮಾಜವನ್ನು ನಿರ್ಬಿಢೆಯಿಂದ ಎದುರಿಸುವ ಹಂತವನ್ನು ತಲುಪುತ್ತಾಳೆ. ಶ್ರೋತ್ರಿಯವರಿಂದ ಬಂದ ಧರ್ಮಸೂಕ್ಷ್ಮಗಳನ್ನು ಅರ್ಥೈಸಿಕೊಳ್ಳುವ

೧. ವಂಶವೃಕ್ಷ – –ಸಾಹಿತ್ಯ ಭಂಡಾರ – ಬೆಂಗಳೂರು–೨೦೦೯. ಪು. ೧೪೦

ವ್ಯವದಾನವೂ ಇರಲಿಲ್ಲ ಅವಳಿಗೆ ಆ ವಯಸ್ಸು ಅಲ್ಲ ಎಂಬುದನ್ನು ಮರೆಯಲಾಗುವುದಿಲ್ಲ. ಕಾಲೇಜಿನಲ್ಲಿ ಓದಿದವಳು ಅವಳಲ್ಲಿರುವ ಪ್ರಕೃತಿ ಸಹಜ ತುಡಿತವನ್ನು ಮೆಟ್ಟನಿಲ್ಲುವ ಶಕ್ತಿ ಯಾವ ತತ್ವ ಚಿಂತನೆಗೂ ಇರಲಿಲ್ಲ. ಮರುಮದುವೆಯಾಗುವ ಚಿಂತಸೆಯೊಂದಿಗೆ ಹೊರನಡೆದ ಕಾತ್ಯಾಯಿನಿ ರಾಜಾನೊಂದಿಗೆ ಸಂತೋಷವಾಗಿರಲು ಸಾಧ್ಯವಾಗುವುದಿಲ್ಲ. ರಾಜಾನಿಂದ ಮಕ್ಕಳನ್ನು ಪಡೆಯಲಾಗದ ಕಾತ್ಯಾಯಿನಿ ತಾನು ಮಾಡಿದ್ದು ಪಾಪಕಾರ್ಯ ಎಂದು ಪಶ್ಚಾತ್ತಾಪ ಪಡುತ್ತಾಳೆ. ಇದಕ್ಕಾಗಿ ಮತ್ತೆ ಶ್ರೋತ್ರಿಯವರನ್ನು ಎದುರಿಸುವ ಸಂದರ್ಭ ಬರುತ್ತದೆ. ತನ್ನ ಮಗು ಚೀನಿಗಾಗಿ ಹಂಬಲಿಸುತ್ತಾಳೆ. ಮಗುವನ್ನು ಕರೆದುಕೊಂಡು ಹೋಗುವ ಸ್ವಾತಂತ್ರ್ಯವನ್ನು ಕಾತ್ಯಾಯನಿಗೇ ಬಿಡುವ ಮಾವನ ಔದಾರ್ಯ ಅವಳ ನಿರ್ಧಾರವನ್ನೇ ಬದಲಾಯಿಸುತ್ತದೆ.

> *"ಉಳಿದವರು ಯಾರು ತಡೆಯಲೆತ್ನಿಸಿದರೂ ಅವಳ ಹಟದಿಂದ ಮಗುವನ್ನು ಒಯ್ಯಬಹುದಾಗಿತ್ತು. ಅತ್ತೆಯ ಚುಚ್ಚುಮಾತು ತಂದೆಯ ನಿರ್ದಾಕ್ಷಿಣ್ಯ ಯಾವುದೂ ಅವಳಿಗೆ ನಾಟುವುದಿಲ್ಲ. ಶ್ರೋತ್ರಿಯರ ಮುಂದೆ ಮಾತ್ರ ತಾನೆಷ್ಟು ಸಣ್ಣವಳು ಎಂಬ ಅರಿವು ಅವಳಿಗಾಗುತ್ತದೆ. ಲೌಕಿಕ ತರ್ಕಕ್ಕೆ ತಾನು ಮದುವೆಯಾದದ್ದೇನೂ ತಪ್ಪಿಲ್ಲವೆಂದು ಅವಳಿಗನಿಸುತ್ತದೆ. ರಾಜನೂ ಅವಳ ಈ ಭಾವನೆಯನ್ನು ಪೋಷಿಸಲು ತನ್ನ ಔದಾರ್ಯವನ್ನೆಲ್ಲ ವೆಚ್ಚ ಮಾಡುತ್ತಾನೆ. ಆದರೆ ಕಾತ್ಯಾಯಿನಿ ಯುಗಸಂಧಿಕಾಲದಲ್ಲಿ ಬೆಳೆದವಳು ಆಧುನಿಕ ಜೀವನ ಮೌಲ್ಯಗಳ ಪ್ರಭಾವಕ್ಕೊಳಗಾಗಿದ್ದರೂ ತಾನು ಬೆಳೆದು ಬಂದ ಸನಾತನ ಧರ್ಮದ ಸಂಸ್ಕಾರಗಳಿಂದ ಪೂರ್ಣವಾಗಿ ಮುಕ್ತವಾಗುವುದು ಅವಳಿಗೆ ಸಾಧ್ಯವಾಗುವುದಿಲ್ಲ. ತಾನು ತೆಗೆದುಕೊಂಡ ನಿರ್ಣಯದಿಂದ ಸಂಬಂಧಿಸಬಾರದ ಶಾಪವೊಂದು ಜರುಗಿ ಹೋಯಿತೆಂದು ಅವಳ ಒಳಮನಸ್ಸು ಸದಾ ಅಳುಕುತ್ತದೆ. ಮದುವೆಯ ಹೊಸದರಲ್ಲಿದ್ದ ಬಯಕೆಯ ಕಾವು ಕಡಿಮೆಯಾದಾಗ ಈ ಅಳುಕು ಹೆಚ್ಚುತ್ತಲೇ ಹೋಗುತ್ತದೆ. ಮುಂದೆ ರಾಜಾನಲ್ಲಿ ಒಂದು ಮಗುವಾದರೂ ಆಗಿದ್ದರೆ ಇವನ್ನೆಲ್ಲ ಅವಳು ಮರೆಯ ಬಹುದಾಗಿತ್ತು. ಆದರೆ ಒಂದರ ಮೇಲೊಂದು ಸಂಭವಿಸುವ ಗರ್ಭಪಾತಗಳು. ಕೊನೆಗೂ ಗರ್ಭದಾರಣೆ ಅಪಾಯಕಾರಿ ಎಂದು ಡಾಕ್ಟರು ಕೊಟ್ಟ ಎಚ್ಚರಿಕೆ ಅವಳ ಪಾಪ ಭೀತಿಯನ್ನು ಮತ್ತಷ್ಟು ಹೆಚ್ಚಿಸುತ್ತದೆ. ಈ ಮಾನಸಿಕ ಸಂಘರ್ಷ ಅವಳ ರಕ್ತಹೀನತೆಯಾಗಿ ದೈಹಿಕಸ್ತರದ ಮೇಲೂ ಪರಿಣಾಮ ಮಾಡುತ್ತದೆ. ತನ್ನ ಮಗನನ್ನು ಮುಂದೆಯಾದರು ಒಲಿಸಿಕೊಳ್ಳಲೆತ್ನಿಸಿದಾಗ ಅವಳು ಅನುಭವಿಸುವ ಸೋಲು ಆಗಲೇ ನಿರ್ವಿಣ್ಣಳಾಗಿದ್ದ ಕಾತ್ಯಾಯಿನಿಯನ್ನು ಹತಾಶೆಯತ್ತ ನೂಕುತ್ತದೆ. ಅವಳ ಅಂತರಂಗದ ಆಳದಿಂದ ತೊಳೆದು ಹೋಗದೆ ಉಳಿಯುವ ಪಾಪದ ವಾಸನೆ ನಿಧಾನವಾಗಿ ಅವಳನ್ನು ಕೊಲ್ಲುತ್ತದೆ. ಇದು*

*ಮುಖ್ಯವಾಗಿ ಸಂವೇದನಾಶೀಲ ವ್ಯಕ್ತಿಗಳು ಯುಗಸಂಧಿಕಾಲದಲ್ಲಿ ಅನುಭವಿಸುವ ಯಾತನೆಯನ್ನು ಸಂಘರ್ಷವನ್ನೂ ಸೂಚಿಸುತ್ತದೆ*"[೧]

ಹೀಗೆ ಮರುವಿವಾಹದ ನಂತರ ಅನುಭವಿಸುವ ತಲ್ಲಣಗಳು ಅವಳಲ್ಲಿದ್ದ ಭವಿಷ್ಯದ ಕನಸು, ಯೌವನ, ವಿದ್ಯೆ, ಮೊದಲ ಪತಿ, ಮಗು, ಸಂಸಾರ ಯಾವುದನ್ನೂ ಹಿಂದಿರುಗಿ ನೋಡದಂತೆ ದೂರ ಒಯ್ಯುತ್ತವೆ. ಅವಳು ಮಾವನ ಮುಂದೆ ವಾದ ಹೂಡುತ್ತಾಳೆ.

ಪುರಾತನ ಸಂಸ್ಕೃತಿ, ಧರ್ಮ ಮುಂತಾದ ನೆಲೆಯಲ್ಲಿ ಯೋಚಿಸುವ ಶ್ರೋತ್ರಿಗಳು 'ಮಾನವಧರ್ಮ'ದ ಬಗ್ಗೆ ಯೋಚಿಸುವುದೇ ಇಲ್ಲ. ಹಾಗೆಯೇ ಕಾತ್ಯಾಯಿನಿಯೂ ಕರ್ಮಸಿದ್ಧಾಂತದ ಹಿನ್ನೆಲೆಯಲ್ಲಿಯೇ ಚಿಂತಿಸುತ್ತಾಳೆ. ಸನಾತನ ಧರ್ಮವನ್ನು ಆಧುನಿಕ ಬದುಕಿಗೆ ಕಾದಂಬರಿ ಮುಖಾಮುಖಿಯಾಗಿಸುತ್ತದೆ. ಶ್ರೋತ್ರಿಗಳು ತಮ್ಮ ಜೀವನಾನುಭವದ ಹಿನ್ನೆಲೆಯಲ್ಲಿ ಧರ್ಮ ಅಧರ್ಮದ ದ್ವಂದ್ವದಲ್ಲಿರುವಂತೆ ಕಾಣುತ್ತಾರೆ. ಕಾತ್ಯಾಯಿನಿ ಅವಳ ತಲೆಮಾರಿನವರ ಸೂಕ್ತವೆನಿಸುವ ನಿರ್ಧಾರ ತೆಗೆದುಕೊಳ್ಳುತ್ತಾಳೆ. ಕಾತ್ಯಾಯಿನಿಗೆ 'ಧರ್ಮ' ಎನಿಸಿದ್ದು ಶ್ರೋತ್ರಿಯವರಿಗೆ 'ಅಧರ್ಮ' ವಾಗುತ್ತದೆ. ಕಾತ್ಯಾಯಿನಿ ಶ್ರೋತ್ರಿಗಳ 'ಧರ್ಮ'ದ ಪರಿಕಲ್ಪನೆಯನ್ನು ಅರ್ಥೈಸಿಕೊಳ್ಳುವ ಗೋಜಿಗೆ ಹೋಗದಿರುವುದನ್ನು ಕಾದಂಬರಿ ವ್ಯಕ್ತಪಡಿಸುತ್ತದೆ.

**೩. <u>'ತಾಯ್ತನ' 'ಮರುವಿವಾಹ' – ದ್ವಂದ್ವದ ನೆಲೆಯಲ್ಲಿ</u>**

ಕಾತ್ಯಾಯಿನಿಯ 'ಮರುವಿವಾಹ' ಒಪ್ಪದ ಸಮಾಜ ಅವಳ ವಿದ್ಯೆ ಸೌಂದರ್ಯ ಸಂಸ್ಕಾರಗಳನ್ನು ಒಪ್ಪುತ್ತದೆ. ಆದರೆ ಅವಳ ಭವಿಷ್ಯದ ಚಿಂತನೆಗಳು ಗೌಣವಾಗಿ, ಹತಾಶೆ, ಪಶ್ಚಾತ್ತಾಪದಲ್ಲೇ ಪಾಪ ಪ್ರಜ್ಞೆಯಿಂದ ಕಳೆಯುವುದನ್ನು ಕಾದಂಬರಿ ಬಿಂಬಿಸುತ್ತದೆ. ಜಿ.ಎಸ್.ಅಮೂರರವರು ಹೀಗೆ ಅಭಿಪ್ರಾಯ ಪಡುತ್ತಾರೆ.

"*ಜ್ಞಾನವನ್ನೂ, ಅದು ತೋರಿಸುವ ಧರ್ಮವನ್ನು ಬಿಟ್ಟುಕೊಟ್ಟು ಪ್ರಕೃತಿ ಧರ್ಮವನ್ನು ಬೆನ್ನು ಹತ್ತುವ ಕಾತ್ಯಾಯಿನಿ ದುಃಖಪಡಲೇಬೇಕು ಎಂದು ಕಾದಂಬರಿಕಾರರು ಹಟ ತೊಟ್ಟಂತಿದೆ*"[೨]

ಕಾತ್ಯಾಯಿನಿಯ ಪಾಪದ ಭೀತಿ ತೀವ್ರವಾದಾಗ ಅವಳು ತನ್ನ ಮೂಲಭೂತ ನಂಬುಗೆಗಳನ್ನೇ ಕಳೆದುಕೊಳ್ಳುತ್ತಾಳೆ.

"*ಜೀವನೋತ್ಸಾಹ ಭರದಲ್ಲಿ ಮೂಲಪ್ರಕೃತಿ ಕರೆಗೆ ಓಗೊಟ್ಟು ರಾಜಾನನ್ನು ಮದುವೆಯಾಗುವ ಕಾತ್ಯಾಯಿನಿ ವೈಚಾರಿಕ ಪಾತಳಿಯಲ್ಲಿ ಶ್ರೋತ್ರಿಯರ ಪ್ರಭಾವಲಯದಿಂದ ಪಾರಾಗುವುದು ಅವಳಿಗೆ ಸಾಧ್ಯವಾಗುವುದಿಲ್ಲ. ಮಗ ಚೀನಿಯನ್ನು ಶ್ರೋತ್ರಿಯರಿಗೆ ಬಿಟ್ಟುಕೊಡುವುದು ಅವಳು ಶ್ರೋತ್ರಿಯ ಕೃತಿಯನ್ನು ಒಪ್ಪಿಕೊಂಡಂತೆ.*"[೩]

---

೧. ಸಮಗ್ರ ವಿಮರ್ಶೆ–ಗಿರಡ್ಡಿ ಗೋವಿಂದರಾಜ–ಕರ್ನಾಟಕ ಬುಕ್ ಏಜೆನ್ಸಿ–ಬೆಂಗಳೂರು–೨೦೦೧ ಪು. ೧೧೪–೧೧೫

೨. ಸಮಕಾಲೀನ ಕಥಾ ಕಾದಂಬರಿ ಹೊಸ ಪ್ರಯೋಗಗಳು – ಜಿ.ಎಸ್. ಅಮೂರ – ಪು. ೬೩

೩. ಅದೇ ಪು. ಪು – ೬೪

ವಂಶೋದ್ಧಾರಕ ಎಂದು ನೆಚ್ಚಿಕೊಂಡ ಚೀನಿಯನ್ನು ಸನಾತನ ಧರ್ಮಾವಲಂಬಿಯಾದ ಶ್ರೋತ್ರಿಗಳು ಬಿಟ್ಟುಕೊಡಲಾರರು. ವಿಧವೆ ಸೊಸೆ ಕಾತ್ಯಾಯಿನಿಯನ್ನು ಬಿಟ್ಟು ಕೊಡುವುದರಲ್ಲಿ ಯಾವ ಕರುಳಿನ ಕೂಗು ಅಡ್ಡಿಪಡಿಸಲಾರದು. ಅವಳ ತಲ್ಲಣಗಳ ಅರಿವಿದ್ದ ಶ್ರೋತ್ರಿಗಳು ಮರುವಿವಾಹದ 'ಆಯ್ಕೆ'ಗೆ ಒಪ್ಪಿಗೆ ಕೊಡುವುದು ಅವರ ಅಂತಃಕರಣದ ಮಿಡಿತಕ್ಕೆ ಸಾಕ್ಷಿಯಾಗಿದೆ. ಆದರೆ ಸಾಮಾಜಿಕ ಮೌಲ್ಯಗಳನ್ನು ಮೀರುವ ಸಂದರ್ಭದಲ್ಲಿ ವೈಯಕ್ತಿಕ ತಲ್ಲಣಗಳು ಹೇಗಿರುತ್ತವೆ ಎನ್ನುವುದನ್ನು ಜಿ.ಎಸ್.ಅಮೂರರವರು ಹೀಗೆ ಅಭಿಪ್ರಾಯ ಪಡುತ್ತಾರೆ.

> ಸಾಮೂಹಿಕ ನೆಲೆಯಿಂದಲೇ ಎಂಬ ಬೀಜವೃಕ್ಷ ನ್ಯಾಯದ ತೊಡಕನ್ನು ಬಿಡಿಸುವುದು ಕಷ್ಟ 'ವಿಧವಾ ವಿವಾಹ'ದಂತಹ ಒಂದು ಸಂಗತಿ ಸ್ವೀಕೃತಿ ಸಾಮಾಜಿಕ ಮೌಲ್ಯವಾಗಿ ಬೆಳೆದು ಬರಲು ನೂರಾರು ವರ್ಷ ಬರಿದೆ ಕಾದರೆ ಪ್ರಯೋಜನವಿಲ್ಲ. ಮೊದಮೊದಲು ಜನವಿರೋಧವನ್ನು ಅನುಭವಿಸಬೇಕಾಗುತ್ತದೆ"[೧]

ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಈ ಕಾದಂಬರಿ 'ವಿವಾಹ' ಮತ್ತು 'ಕುಟುಂಬ'ದ ನೆಲೆಯಿಂದ ವಿಧವೆಯ ವಾಸ್ತವತೆಯ ಬಗ್ಗೆ ಅರಿವು ಮೂಡಿಸುತ್ತದೆ. ಆದರೆ ಪರ್ಯಾಯವನ್ನು ಹುಡುಕುವಲ್ಲಿ ಪರಂಪರೆ ಮತ್ತು ಆಧುನಿಕತೆಯ ದ್ವಂದ್ವವನ್ನು ಮೀರಲಾಗುವುದಿಲ್ಲ. ಹೆಣ್ಣಿನ ಬಹುತೇಕ ದುಃಖಗಳು ಅವಳ ಅಭಿವ್ಯಕ್ತಿ ಕಾಣದ 'ಕಾಮ' ಎನ್ನುವುದನ್ನು ನಂಬಬಹುದು. ಆದರೆ 'ವಿವಾಹ'ದ ಹೊರತಾಗಿ ಮಹಿಳೆ ತನ್ನ ಅಗತ್ಯದ ಕಾಮವನ್ನು ಅನುಭವಿಸಲು ಸಾಧ್ಯವಿಲ್ಲ. ಇಲ್ಲಿ ಕಾತ್ಯಾಯಿನಿ 'ವಿವಾಹ'ದೊಳಗೆ ತನ್ನ ನೈಸರ್ಗಿಕ ಆಸೆಗಳ ಪೂರೈಕೆಗೆ ಮುಂದಾಗುವುದು ಆ ಕಾಲದ ಮಹತ್ವದ ಸಂಗತಿಯಾಗುತ್ತದೆ. ಅಲ್ಲೂ ಅವಳನ್ನು ಕಾಡುವ ಪಾಪಪ್ರಜ್ಞೆ ವೈವಾಹಿಕ ಬದುಕನ್ನು ನಾಶಮಾಡಲು ಮುಂದಾಗುವುದು ಸಾಮಾಜಿಕ ದುರಂತವೆಂದು ಭಾವಿಸಬಹುದು.

ಕಾತ್ಯಾಯಿನಿ ರಾಜಾನನ್ನು ವಿವಾಹವಾದ ನಂತರ ಪದೇ ಪದೇ ಗರ್ಭಪಾತಕ್ಕೊಳಗಾಗುತ್ತಾಳೆ. ಇದರಿಂದ ಆಘಾತಕ್ಕೊಳಗಾದ ಆಕೆ ತನ್ನ 'ಮರುವಿವಾಹ'ವನ್ನು 'ಪಾಪಕಾರ್ಯ'ಎಂದು ಭಾವಿಸುತ್ತಾ ಸಾಗುತ್ತಾಳೆ. ಇದರಿಂದ ಅವಳು ಹೊರಬರಲಾರದೆ ಮಾನಸಿಕ ಖಿನ್ನತೆಯನ್ನು ಅನುಭವಿಸುವುದನ್ನು ಕಾದಂಬರಿ ಬಿಂಬಿಸುತ್ತದೆ. ಆದರೆ ತಾನು 'ಮರುವಿವಾಹ'ಕ್ಕೊಳಗಾದ ಸಂದರ್ಭ ಅನೇಕ ಸಂಘರ್ಷಗಳಿಗೆ ಎಡೆಮಾಡಿದ್ದನ್ನು ಮರೆಯಲಾಗದೆ ದುಃಖಿಸುತ್ತಾಳೆ. ಮೊದಲ ಪತಿ ಮತ್ತು ಮಗ ಚೀನಿ ದುರ್ಬರವಾದ ಬದುಕಿನ ಈ ಸಂದರ್ಭದಲ್ಲಿ ಅವಳನ್ನು ಭಾದಿಸುತ್ತಾರೆ. ಇದರಿಂದ ಹೊರಬರಲಾಗದೆ ಮತ್ತೆ ಮಗ ಚೀನಿಯನ್ನು ಹಂಬಲಿಸಿ ಅಸ್ವಸ್ಥಳಾಗುವ ಕಾತ್ಯಾಯಿನಿ ಪಾಪಪ್ರಜ್ಞೆಯಿಂದ ಹೊರಬರಲಾಗದೆ ಒದ್ದಾಡುತ್ತಾಳೆ.

೧. ಸಮಕಾಲೀನ ಕಥಾ ಕಾದಂಬರಿ ಹೊಸ ಪ್ರಯೋಗಗಳು – ಜಿ.ಎಸ್. ಅಮೂರ – ಪು. ೬೭

ಒಟ್ಟಾರೆಯಾಗಿ ಕಾದಂಬರಿ 'ವಿಧವಾ ವಿವಾಹ'ದಿಂದ ವಿಧವೆ ಅನುಭವಿಸಬಹುದಾದ ದ್ವಂದ್ವಗಳು 'ಪಾಪಪ್ರಜ್ಞೆ'ಯಾಗಿ ಪರಿವರ್ತನೆಯಾಗುವುದನ್ನು ವಿವರಿಸುತ್ತದೆ. ಇದರಿಂದ ಹೊರ ಬರಲಾಗದೆ ಕಾತ್ಯಾಯಿನಿ ಬದುಕು ಅಂತ್ಯವಾಗುವುದನ್ನು ಕಾದಂಬರಿ ಬಿಂಬಿಸುತ್ತದೆ.

ಮಹಿಳೆ ವೈಚಾರಿಕ ದೃಢತೆಯಿಂದ ಸ್ವಂತಿಕೆ ಬೆಳೆಸಿಕೊಂಡು ಬೌದ್ಧಿಕವಿಕಾಸದ ಹಾದಿ ಕ್ರಮಿಸುವುದು ತೀರಾ ಕಷ್ಟದ ಸಂಗತಿ. ಹಾಗಾಗಿ ವಿಚಾರಶಕ್ತಿಯನ್ನು ಬದಲಾಗುತ್ತಿರುವ ಮೌಲ್ಯಗಳನ್ನು ತೂಗಿನೋಡಿ ಬದಲಾಗಲು ತಕ್ಕ ಮಾನಸಿಕ ಸಿದ್ಧತೆಯೂ ಬೇಕು. ಇಂತಹ ಅವಕಾಶಗಳನ್ನು ತಾನು ಬದುಕುವ ವಾತಾವರಣದಿಂದ ಪಡೆಯುವಂತಾಗಬೇಕು ಮತ್ತು ನಮ್ಮ ದಿನನಿತ್ಯದ ಬದುಕಿನಲ್ಲಿ ಅನುಸರಿಸುವ ಮೌಲ್ಯಗಳು ವೈಚಾರಿಕವಾದುವೆ? ಮಾನವೀಯವಾದುವೇ? ಎಂಬ ಪ್ರಶ್ನೆ ಏಳಬೇಕು. ಆದರೆ ನಮ್ಮ ಬದುಕಿನ ಮೇಲೆ ಜಾತಿ, ಧರ್ಮ, ಸಾಮಾಜಿಕ ಮೌಲ್ಯಗಳು ಸವಾರಿ ಮಾಡುತ್ತಿರುತ್ತವೆ. ಇದರ ಅರಿವಾದರೂ ಇರಬೇಕಾದುದು ಮುಖ್ಯವಾಗುತ್ತದೆ.

**೫. <u>ವಿಧವೆ – ಅಸ್ತಿತ್ವದ ಹೋರಾಟ</u>**

ಎಸ್.ಎಲ್.ಭೈರಪ್ಪನವರ 'ಗೃಹಭಂಗ' ಕಾದಂಬರಿಯ ಮುಖ್ಯಪಾತ್ರ ಗಂಗಮ್ಮ. ನಿರ್ಭಿಡೆಯ ಗಟ್ಟಿ ಮನಸ್ಸಿನವಳಾಗಿ ಕಾಣುತ್ತಾಳೆ. ಅವಳ ವಿವಾಹದ ಪ್ರಾರಂಭದ ದಿನಗಳು ಅನುಕೂಲಕರವಾಗಿದ್ದರೂ 'ವೈಧವ್ಯ' ಸಂಪೂರ್ಣ ತ್ರಾಸದಾಯಕವಾಗಿ ಕಾಡುತ್ತದೆ. ಮದುವೆಯಾಗುವಾಗ ಹದಿಮೂರು ವರ್ಷದ ಹುಡುಗಿ. ಯಜಮಾನರಿಗೆ ನಲವತ್ತೈದರ ಪ್ರಾಯ. ಮೊದಲ ಹೆಂಡತಿಗೆ ಎರಡು ಮಕ್ಕಳಾಗಿ ಸತ್ತಿದ್ದವು. ಕೊನೆಗೆ ಅವಳೂ ತೀರಿಕೊಂಡಿದ್ದಳು. ಕೊನೆಗೂ ಆ ಸಂಬಂಧದಿಂದಲೇ ರಾಮಣ್ಣನವರಿಗೆ ಗಂಗಮ್ಮನನ್ನು ಮದುವೆ ಮಾಡಿದ್ದರು. ರಾಮಸಂದ್ರವೂ ಸೇರಿದಂತೆ ಮೂರು ಊರಿನ ಶಾನುಭೋಗಿಕೆ ಆರು ಎಕರೆ ಗದ್ದೆ ಎಂಟು ಎಕರೆ ಹೊಲ, ಮುನ್ನೂರು ತೆಂಗಿನ ಮರ ಮದುವೆಯಲ್ಲಿ ಪಾತ್ರೆ, ಪರಟಿ, ಬೆಳ್ಳಿ ಬಂಗಾರಗಳಿಂದ ಶ್ರೀಮಂತರಾದ ಅವರಿಗೆ ಯಾರು ತಾನೇ ಹೆಣ್ಣುಕೊಡುತ್ತಿರಲಿಲ್ಲ? ರಾಮಣ್ಣನವರನ್ನು 'ಹಸು'ವಿಗೂ ಗಂಗಮ್ಮನನ್ನು 'ಹುಲಿ'ಗೂ ಆ ಊರಿನ ಜನ ಹೋಲಿಸಿದ್ದಿದೆ. ಈ ಮಾತು ಕಿವಿಗೆ ಬಿದ್ದಾಗ

*"ಈ ಜನದ ಬಾಯಿಗೆ ನನ್‌ಯಡಗಾಲ ಹಳೇ ಯಕ್ಕಡಾ ತುರುಕ ಸೂಳೆಮಕ್ಕಳನ್ ತಂದು ಎಂದು ಅವಳು ಅಂದುಕೊಂಡುದ್ದೂ ಉಂಟು"*[೧]

ಹೀಗೆ ಬೈಯ್ಯುವಾಗ ಗಂಗಮ್ಮ ಕ್ರೂರಿಯಾಗಿ ಕಂಡರೂ ತನ್ನ ಗಂಡನ ವಿರುದ್ಧ ಅಲ್ಲ ಟೀಕಿಸುವ ಜನರ ವಿರುದ್ಧ ಎಂದು ಭಾವಿಸಬಹುದು. ಇಲ್ಲಿಂದಲೇ ಟೀಕಾಕಾರರ ವಿರುದ್ಧ ಧ್ವನಿ ಎತ್ತುವ ಗಂಗಮ್ಮ ಪರಿಚಯವಾಗುತ್ತಾಳೆ. ನೇರ ನುಡಿಯ ಗಟ್ಟಿ ಮನಸ್ಸಿನ

೧. ಗೃಹಭಂಗ – ಎಸ್.ಎಲ್.ಭೈರಪ್ಪ – ಸಾಹಿತ್ಯ ಭಂಡಾರ – ಮೈಸೂರು – ೨೦೦೮ – ಪು. ೧೧

ಧೈರ್ಯದ ಮಹಿಳೆಯಾಗಿ ಕಾಣುತ್ತಾಳೆ. ವಿಧವೆಯಾದ ಗಂಗಮ್ಮ ತನ್ನ ಗಂಟಲನ್ನು ದೊಡ್ಡದು ಮಾಡಿಕೊಂಡು ಅವಾಚ್ಯ ಶಬ್ದಗಳಿಂದ ನಿಂದಿಸುವುದಕ್ಕೆ ವ್ಯವಸ್ಥೆಯ ಕೊಡುಗೆಯೂ ಇದೆ. ಇಬ್ಬರು ಗಂಡುಮಕ್ಕಳಿದ್ದರೂ ಅವರ ಬೇಜವಾಬ್ದಾರಿ ಬದುಕಿನ ರೀತಿ ಗಂಗಮ್ಮನ ಮೇಲೆ ಪ್ರತಿಕೂಲ ಪರಿಣಾಮವನ್ನು ಬೀರುತ್ತದೆ. ಬ್ರಾಹ್ಮಣ ಕುಟುಂಬದ ಹೆಣ್ಣು ಮಗಳೊಬ್ಬಳು ಕ್ರೂರಿಯಾಗಿ ನಿಷ್ಠುರವಾಗಿ ವರ್ತಿಸುವುದನ್ನು ಕಾದಂಬರಿ ಅನಾವರಣಗೊಳಿಸುತ್ತದೆ.

ಗಂಗಮ್ಮ ಮೇಲ್ನೋಟಕ್ಕೆ ಕ್ರೂರಿಯಾಗಿ ಕಂಡರೂ ಅವಳ ಅಂತಃಕರಣ ತಾಯ್ತನದ ಪ್ರೀತಿ ಮತ್ತು ವಿಧವೆಯ ವ್ರತ ನಿಷ್ಠೆಯನ್ನು ಎಚ್ಚರವಿರುವಂತೆ ಮಾಡುತ್ತವೆ. ಆಸ್ತಿ ಅಡವಿಟ್ಟು ಸಾಲ ತೆಗೆಯುವ ಉದ್ದೇಶದಿಂದ ತಿಪಟೂರಿನ ಸಬ್‌ರಿಜಿಸ್ಟ್ರಾರ್ ಕಛೇರಿಗೆ ಹೋದಾಗ

> *"ವಿಧವೆಯಾದ ಗಂಗಮ್ಮ ತಿಪಟೂರಿನ ಹೋಟೆಲ್‌ನಲ್ಲಿ ಏನೂ ತಿನ್ನುವಂತಿಲ್ಲ. ಹುರಿಯುವ ಮೊದಲು ನೀರು ಹಾಕಿರುವುದರಿಂದ ಪುರಿಯನ್ನು ಮುಟ್ಟುವ ಹಾಗಿಲ್ಲ. ಕೆರೆಯಲ್ಲಿ ಮೈ ತೊಳೆದುಕೊಂಡು ಒದ್ದೆ ಸೀರೆಯಲ್ಲಿ ಎರಡು ಹಿಡಿ ಹುರಿಗಡಲೆ ಒಂದು ಮುರುಕು ಬೆಲ್ಲ ಅಗಿದು ಮತ್ತೆ ಗಾಡಿಯಲ್ಲಿ ಕುಳಿತಳು"*[೧]

ಇಂತಹ ಸಂದರ್ಭಗಳಲೆಲ್ಲ ವ್ರತನಿಯಮವನ್ನು ಪಾಲಿಸುತ್ತಾ ನಿಷ್ಠೆಯಿಂದ 'ವಿಧವಾ ಮೌಲ್ಯ'ಗಳನ್ನು ಪಾಲಿಸುತ್ತಾಳೆ. ತನ್ನ ಪತಿಯ ಮರಣಾ ನಂತರ ಮಕ್ಕಳಿಗೆ ಬರಬೇಕಾಗಿದ್ದ ಶಾನುಭೋಗಿಕೆಯನ್ನು ಮರಳಿ ಪಡೆಯಲು ಹೋರಾಟಕ್ಕಿಳಿಯುತ್ತಾಳೆ. ಆರ್ಥಿಕ ಅಭದ್ರತೆಯಿಂದ ಕಷ್ಟಪಡುವ ಗಂಗಮ್ಮ ಆಸ್ತಿ ಮನೆ ಎಲ್ಲವನ್ನು ಕಳೆದುಕೊಳ್ಳುವಾಗ ಧೈರ್ಯಗೆಡುತ್ತಾಳೆ. ಇಂತಹ ಸಂದರ್ಭದಲ್ಲೆಲ್ಲ ಅವಳಿಂದ ಬರುವ ಬೈಗುಳಗಳಲ್ಲಿ ಅವಳ ದುಃಖ ಹತಾಷೆಗಳು ಹರಳುಗಟ್ಟಿವೆ. ಇಷ್ಟಕ್ಕೆಲ್ಲ ಕಾರಣನಾದ ಶಿವೇಗೌಡನಿಗೆ "ಇವನ ಮನೆ ಬಿದ್ದು ಹೋಗಿ, ಉತ್ತು ಹರಳು ಹಾಕ, ಮೋಸದಲ್ಲಿ ಆಸ್ತಿ ಬಂತು ಅಂತ ಮೆರೀತಿದಾನೆ ಮನೆಹಾಳ" ಎಂದು ಛೀಮಾರಿ ಹಾಕಿ ಸಮಧಾನ ಪಟ್ಟುಕೊಳ್ಳುತ್ತಾ ಗಂಗಮ್ಮ ಮಾನಸಿಕ ಅತೃಪ್ತಿ ಕೊರಗುಗಳಿಂದ ಇತರರಿಗೆ ಪೀಡಕಳಾಗಿ ಬದುಕುವುದನ್ನು ಕಾದಂಬರಿ ತೆರೆದಿಡುತ್ತದೆ. ವ್ಯವಸ್ಥೆಯಿಂದಾದ ದೌರ್ಜನ್ಯವನ್ನು ಸವಾಲಾಗಿ ಸ್ವೀಕರಿಸುತ್ತಾಳೆ. ಮಾನವೀಯ ಮೌಲ್ಯಗಳಿಗೆ ಬದ್ಧಳಾಗಿ ಬದುಕುಲಾಗದೆ ವ್ಯವಸ್ಥೆಯಲ್ಲಿ ತನ್ನ ದೌರ್ಭಾಗ್ಯಕ್ಕಾಗಿ ಲೋಕದ ಎಲ್ಲರನ್ನು ಶಪಿಸುವಂತಾಗುತ್ತಾಳೆ.

ಗಂಗಮ್ಮ ಸಹನಶೀಲೆ ಸಾಧ್ವಿಯಾದ ಸೊಸೆ ನಂಜಮ್ಮನನ್ನು ಅತ್ಯಂತ ಹೀನಾಯವಾಗಿ ನಡೆಸಿಕೊಳ್ಳುವುದು ಅಮಾನವೀಯವಾಗಿ ಕಾಣುತ್ತದೆ. ನಂಜಮ್ಮನ ಗಂಡ ಚನ್ನಿಗರಾಯನ ಬೇಜವಾಬ್ದಾರಿಯಿಂದ ಖಿನ್ನಳಾಗಿ ಸಂಸಾರದ ಹೊರೆ ಹೊತ್ತು ಹಣ್ಣಾದ ನಂಜಮ್ಮನಿಗೆ ಗಂಗಮ್ಮನ ಕ್ರೌರ್ಯದ ಗುಣವನ್ನು ಕಾದಂಬರಿ ಮುಖಾಮುಖಿ

೧. ಗೃಹಭಂಗ – ಎಸ್.ಎಲ್.ಭೈರಪ್ಪ – ಸಾಹಿತ್ಯ ಭಂಡಾರ – ಮೈಸೂರು – ೨೦೦೮ – ಪು. ೨೦

ಯಾಗಿಸುತ್ತದೆ. ಮಗಚನ್ನಿಗರಾಯನ ದೌರ್ಜನ್ಯ ಹೊಣೆಗೇಡಿತನಕ್ಕೆ ಮರುಗುವುದು ಬಹಳ ಕಡಿಮೆ ಎನ್ನಬಹುದು. ಆದರೆ ನಂಜಮ್ಮನ ಮೇಲೆ ಹರಿಹಾಯುವಾಗ ಗಂಗಮ್ಮನಲ್ಲಿನ ತದ್ವಿರುದ್ದ ಗುಣದಿಂದಾಗಿ ಘರ್ಷಣೆಗಳಾಗದಂತೆ ತಡೆಯುತ್ತವೆ. ಧಾರ್ಮಿಕ ಆಚರಣೆಗಳಲ್ಲಿದ್ದ ನಿಷ್ಠೆ ಗಂಗಮ್ಮನನ್ನು ಮತ್ತಷ್ಟು ಗಟ್ಟಿಗೊಳಿಸುತ್ತವೆ. ಅಯ್ಯಶಾಸ್ತ್ರಿಗಳು ಗಂಗಮ್ಮನಿಗೆ ಋಷಿ ಪಂಚಮಿ ಮಾಡಿಸುವುದಕ್ಕೆ ಸೂಚಿಸುವಾಗ ಒಂದೇ ಬಾರಿಗೆ ಒಪ್ಪಿಕೊಳ್ಳುವುದಕ್ಕೆ ಅವಳಿಗಿದ್ದ ವ್ರತನಿಷ್ಠೆ ಮತ್ತು ಅವಳ ಪ್ರತಿಷ್ಠೆ ಹಿನ್ನೆಲೆಯಾಗಿದೆ ಎಂದು ಭಾವಿಸಬಹುದು. ಗಂಡನ ಶ್ರಾದ್ಧದ ದಿನ ಪಿಂಡ ಹಾಕಲು ಬಂದ ಪುರೋಹಿತರು ತುಪ್ಪದಲ್ಲಿ ಮಾಡಿದ ಉಪ್ಪಿಟ್ಟು ಬಯಸಿದಾಗ ತನಗೆ ಹಣ ಕೊರತೆ ಇದ್ದಾಗಲೂ ತನ್ನ ತೌರಿನಲ್ಲಿ ಕೊಟ್ಟ ಬೆಳ್ಳಿ ಪಾತ್ರೆಯನ್ನು ಮಾರಿ ಹಿರಿಯರಿಗೆ ಮಾಡಬೇಕಾದ ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ಮಾಡುವುದು ಅವಳ ಧಾರ್ಮಿಕ ಭಕ್ತಿಯನ್ನು ಬಿಂಬಿಸುತ್ತದೆ.

ತನ್ನದೇ ಆದ ನಂಬಿಕೆಯಲ್ಲಿ ಜೀವನ ನಡೆಸಿ ಕಷ್ಟಗಳನ್ನನುಭವಿಸುತ್ತ ತನ್ನ ತಾನು ಸವೆಸಿಕೊಂಡಳು. ವಯಸ್ಸು ಕಳೆದಂತೆ ಅವಳಲ್ಲಿ ಹುಟ್ಟಿಕೊಳ್ಳುವ ಅಸಹಾಯಕತೆ ಬಡತನ ಅವಳನ್ನು ಭಯದ ನೆಲೆಯಲ್ಲಿ ನಿಲ್ಲಿಸುತ್ತವೆ. ತನ್ನ ಅಸ್ತಿತ್ವದ ಉಳಿಯುವಿಕೆಗಾಗಿ ಪರಿತಪಿಸುತ್ತಾಳೆ. ತನ್ನನ್ನು ಸವೆಸಿಕೊಂಡು ತನ್ನ ಗಂಡುಮಕ್ಕಳಿಗಾಗಿ ಕಷ್ಟಪಟ್ಟ 'ತಾಯಿ'ಯ ಬದುಕಿನ ಅನನ್ಯತೆ ಗಂಗಮ್ಮನಲ್ಲಿ ಕಾಣಬಹುದು. ಉನ್ನತ ಜಾತಿಯಲ್ಲಿ ಹುಟ್ಟಿದ ಗಂಗಮ್ಮ ಕೀಳಾಗಿ ಕಾಣಿಸುತ್ತ ಹೆಣ್ಣಾದ ಕಾರಣಕ್ಕೆ ಸೋಲುತ್ತಾ ವ್ಯವಸ್ಥೆಯ ಒಳಗೆ ಕರಗುವುದು ಕಾದಂಬರಿಯಲ್ಲಿ ಅಭಿವ್ಯಕ್ತವಾಗಿದೆ. ಅತ್ಯಂತ ಶೋಚನೀಯವಾದ ಪರಿಸ್ಥಿತಿಗಳನ್ನು ಸವಾಲಾಗಿ ಸ್ವೀಕರಿಸುತ್ತ ಆರ್ಥಿಕ ಸ್ವಾವಲಂಬನೆಗಾಗಿ ಹೋರಾಟದ ಹಾದಿಯನ್ನು ಹಿಡಿಯುತ್ತಾಳೆ. ಇಂತಹ ಸಂದರ್ಭಗಳಲ್ಲಿ ಅವಾಚ್ಯ ಶಬ್ಧಗಳನ್ನೇ ತನ್ನ ಅಸ್ತ್ರವನ್ನಾಗಿ ಮಾಡಿಕೊಳ್ಳುವುದು ಅನಿವಾರ್ಯವೂ ಆಗಿತ್ತೆಂದು ಭಾವಿಸಬಹುದು. 'ಗಯ್ಯಾಳಿ' ಪಟ್ಟವನ್ನು ಹೊತ್ತು ಅವಕಾಶ ವಂಚಿತಳಾಗಿ ಶೌರ್ಯ, ದ್ವೇಷ, ಮಾತ್ಸರ್ಯಗಳ ಪ್ರತಿಮೂರ್ತಿಯಾಗಿ ಕಂಡರೂ ಅಂತಃಕರಣ ಮಾನವೀಯತೆಯಿಂದ ಮಿಡಿಯುತ್ತಿತ್ತು ಎಂದು ಗುರುತಿಸಬಹುದು. ಈ ಕಾದಂಬರಿಯ ವಿಧವೆ ಗಂಗಮ್ಮ ಮೇಲ್ಜಾತಿಯವಳಾದರೂ ಶೋಷಣೆಗೊಳಗಾಗುವಾಗ 'ಜಾತಿ'ಗಿಂತ ಮಿಗಿಲಾಗಿ 'ಹೆಣ್ಣು' ಎನ್ನುವ ಲಿಂಗಾಧಾರಿತ ತಾರತಮ್ಯ ಎದುರಾಗುವುದನ್ನು ಕಾದಂಬರಿ ತೆರೆದಿಡುತ್ತದೆ.

'ಮುಸ್ಸಂಜೆ ಕಥಾ ಪ್ರಸಂಗ' ಕಾದಂಬರಿಯ ರಂಗವ್ವ ವಿಧವೆಯಾಗಿ ಮಗಳು ಸಾವಂತ್ರಿಯನ್ನು ಬೆಳೆಸುತ್ತಾ ಕನಸು ಕಟ್ಟಿಕೊಂಡವಳು. ಪೂರ್ಣ ಕಾದಂಬರಿ ರಂಗವ್ವನ ಹೋರಾಟದ ಬದುಕನ್ನು ಅನಾವರಣಗೊಳಿಸುತ್ತಾ ಸಾಗುತ್ತದೆ. ಕಂಬಳ್ಳಿ ಗ್ರಾಮದಲ್ಲಿ

ಮುಖ್ಯವಾಗಿ 'ಹಣ' ಮತ್ತು 'ಪ್ರೇಮ'ದಿಂದಾಗಿ ನಡೆದ ಕೆಲವು ಘಟನೆಗಳು ಮತ್ತು ಕೆಲವು ಬದಲಾವಣೆಗಳು ರಂಗವ್ವ'ನ ಪಾತ್ರದ ಮೂಲಕ ಕಾದಂಬರಿಯಲ್ಲಿ ತೆರೆದುಕೊಳ್ಳುತ್ತವೆ. ಈ ಕಾದಂಬರಿಯ ರಂಗವ್ವ ಮತ್ತು ಮಗಳು ಸಾವಂತ್ರಿಯ ಬಗ್ಗೆ ಪಿ.ಲಂಕೇಶ್‌ರವರು ಕಾದಂಬರಿಯ ಎರಡನೇ ಮುದ್ರಣದ ಮುನ್ನುಡಿಯಲ್ಲಿ "ಕಾದಂಬರಿಯ ಪ್ರಾರಂಭದ ಎಂಭತ್ತು ಪುಟಗಳನ್ನು ಬರೆಯುವಾಗ ಕೊರೆತ ಎನಿಸಿದ್ದು ವಿಧವೆ ರಂಗವ್ವ ಮತ್ತು ಅವಳ ಮಗಳು ಸಾವಂತ್ರಿಯ ಪಾತ್ರಗಳು ಶುರುವಾಗುತ್ತಿದ್ದಂತೆ ಬರೆಯುವ ಖುಷಿ ಹೊಮ್ಮತೊಡಗಿತು" ಎನ್ನುತ್ತಾರೆ. ವಿಧವೆಯ ಬದುಕಿನ ಆಯಾಮಗಳು ವಿವಿಧ ರೀತಿಯಲ್ಲಿ ತೆರೆದುಕೊಳ್ಳುತ್ತಾ ಸಾಗುತ್ತವೆ.

> *"ಕಂಬಳ್ಳಿಯ ಜನರ ಮುಖ್ಯ ಉದ್ಯೋಗ ಬೇಸಾಯ ಮತ್ತು ಹಾಲುಹೈನು ತೆಗೆದುಕೊಂಡು ಹೋಗಿ ಶಿವಮೊಗ್ಗೆಯಲ್ಲಿ ಮಾರುವುದು ಎಂಬುದು ಪರಂಪರೆಯ ಮಾತಾಯಿತು. ಈಚೆಗೆ ಒಂದು ಹಿಟ್ಟು ಮತ್ತು ಅಕ್ಕಿಯ ಹಲ್ಲರ್ ಬಂದಿದೆ. ಶಿವಮೊಗ್ಗದ ಪ್ರಭಾವದಿಂದ ವರದಕ್ಷಿಣೆ ಹೆಂಡ ಜೂಜು ಪುಢಾರಿತನಗಳೆಲ್ಲ ಇಲ್ಲಿ ಕಾಲಿಟ್ಟಿವೆ. ಜಾತಿಗಳ ಹೆಸರಲ್ಲಿ ಹಲಬಗೆಯ ಸಾಹಸಗಳು ನಡೆಯುತ್ತಿವೆ. ಇವುಗಳನ್ನೆಲ್ಲ ಪರೋಕ್ಷವಾಗಿ ಮಾತ್ರ ವಿವರಿಸುತ್ತ ಮನುಷ್ಯರ ನಡಾವಳಿಗಳನ್ನು ಹೇಳುವುದು ಒಳ್ಳೆಯದೆಂದು ರಂಗವ್ವ ಎಂಬ ವಿಧವೆಯೊಬ್ಬಳ ಸಂಸಾರದ ವರ್ಣನೆಯಿಂದ ಈಗ ಆರಂಭಿಸುವ ಆಣೆಬಡ್ಡಿ ರಂಗವ್ವ ಗಟ್ಟಿ ಹೆಂಗಸು. ಗಂಡ ಸತ್ತಾಗ ಕೇವಲ ಎರಡು ದಿನ ಅತ್ತು ಎಮ್ಮೆ ಆಕಳನ್ನು ನೋಡಿಕೊಂಡು ಆಗ ಚಿಕ್ಕವಳಿದ್ದ ಸಾವಂತ್ರಿಯನ್ನು ಮಡಿಲಲ್ಲಿಟ್ಟುಕೊಂಡು ಸಾಕಿ ದೊಡ್ಡವಳು ಮಾಡಿದಳು. ಅವಳಿಗೆ ಅನೇಕ ಕಷ್ಟಗಳು ಬಂದಿವೆ"*[೧]

ಇದು ಆಣೆ ಬಡ್ಡಿರಂಗವ್ವನ ಸಂಕ್ಷಿಪ್ತ ವಿವರವಾಗಿದ್ದು ಅವಳು ಬಡ್ಡಿ ವ್ಯವಹಾರದೊಂದಿಗೆ ಗಟ್ಟಿಯಾಗಿ ಮೌನವಾಗಿ ಸುಖವಾಗಿದ್ದಳು ಎಂದು ಭಾವಿಸಬಹುದು. ಆದರೆ ಮಗಳು ಸಾವಂತ್ರಿಯ ಯೌವನ ರಂಗವ್ವನ ನಿದ್ದೆಗೆಡಿಸುವಲ್ಲಿ ಯಶಸ್ವಿಯಾಯಿತು. ಮಗಳನ್ನು ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿದ್ದ ರಂಗವ್ವನಿಗೆ ಎದುರಾಗುವ ಸಮಸ್ಯೆಗಳಿಗೆ ತನ್ನ ಮಾತಿನಿಂದಲೇ ಪರಿಹಾರ ಕಂಡುಕೊಳ್ಳುತ್ತಾಳೆ. ಒಂದು ದಿನ ಮನೆಯಲ್ಲಿಲ್ಲದೆ ಬ್ಯಾಡರ ಮಂಜನೊಂದಿಗೆ ಮಾತನಾಡಲು ಹೋಗಿದ್ದ ಸಾವಂತ್ರಿಯನ್ನು ಹುಡುಕಿ ಭಯವಾಗಿ ಶಾಸ್ತ್ರಿಯವರನ್ನು ಕಂಡು ತನ್ನ ಆತಂಕ ಹೇಳಿಕೊಳ್ಳುತ್ತಾಳೆ. ಶಾಸ್ತ್ರಿಗಳು

> *"ಅಲ್ಲವ್ವ ನಿನ್ನ ಮಗಳು ಗಂಡು ಹುಡುಗರ ಜೊತೆಗೆ ಹೋಗದೆ ನೀನು ಹೋಗಾಕಾದೀತ? ಯಾಕೆ ಹೀಗೆ ರಂಪ ಮಾಡ್ತಿ, ಬರ್ತಾಳೆ ಬಿಡು, ಇನ್ನೇನು ಬಂದು ಬಿಡುತ್ತಾಳೆ. ಎಲ್ಲೋ ಮಾತಾಡ್ತ ನಿಂತಿರಬಹುದು"*[೨]

---

೧. ಮುಸ್ಸಂಜೆ ಕಥಾ ಪ್ರಸಂಗ – ಪಿ. ಲಂಕೇಶ್ – ಪತ್ರಿಕೆ ಪ್ರಕಾಶನ, ಬೆಂಗಳೂರು – ೨೦೦೩. ಪು. ೨

೨. ಅದೇ ಪು– ಪು– ೭

ಎನ್ನುವ ಮಾತುಗಳಿಂದ ಕುಪಿತಳಾದ ರಂಗವ್ವ ಶಾಸ್ತ್ರಿಗೆ ಏಕವಚನದಿಂದ ನಿಂದಿಸುತ್ತಾಳೆ. ಅವಳ ಮಾತುಗಳು ಮಗಳ ಮೇಲಿನ ಅನುಮಾನ ಭಯದ ನೆಲೆಯಲ್ಲಿ ವ್ಯಕ್ತವಾಗಿದೆ. ಶಾಸ್ತ್ರಿಗಳು ದಂಡ ಹಾಕಿಸುವ ವಿಚಾರ ಮಾತನಾಡಿದಾಗ ಆಣೆಬಡ್ಡಿ ರಂಗವ್ವನಿಗೆ ಸಮಾಧಾನವಾದರೂ ತನ್ನ ಪತಿಯನ್ನು ಕಳೆದುಕೊಂಡದ್ದಕ್ಕಾಗಿ ಪರಿತಪಿಸುತ್ತಾಳೆ. ವ್ಯವಸ್ಥೆಯಲ್ಲಿ ಹೆಂಡತಿ ಮತ್ತು ಮಗಳು ರಕ್ಷಣೆಯಿಂದ ಬಾಳಬೇಕೆಂದರೆ ಗಂಡಸಿನ ಆಶ್ರಯದಲ್ಲಿರುವುದರಿಂದ ಮಾತ್ರ ಎನ್ನುವ ನೀತಿಯನ್ನು ರೂಪಿಸಿದೆ. ಗಂಡಸಿನ ಆಶ್ರಯ ಕಳೆದುಕೊಂಡ ಹೆಣ್ಣು, ಆ ಸಮಾಜದಲ್ಲಿ ಸಣ್ಣ ವಿಚಾರಕ್ಕೂ ತಲೆತಗ್ಗಿಸಬೇಕಾಗಿತ್ತು ಎನ್ನುವುದನ್ನು ಕಾದಂಬರಿ ವಿವರಿಸುತ್ತದೆ. ವಿಧವೆಯ ಬದುಕು ಇಡೀ ಕಾದಂಬರಿಯಲ್ಲಿ ಮನುಷ್ಯರ ನಡವಳಿಕೆಯನ್ನೆ ವಿವರಿಸುವಷ್ಟು ಪ್ರಭಾವಿಸ ಬಲ್ಲದಾದರೆ ಬದುಕಿನ ಸಂಕೀರ್ಣತೆಯನ್ನು ದಟ್ಟವಾಗಿ ವಿವರಿಸುತ್ತದೆ ಎಂದು ಭಾವಿಸಬಹುದು. ಬದುಕಿನ ಕಠಿಣ ಪರೀಕ್ಷೆಗಳಿಗೆ ಒಡ್ಡಿಕೊಳ್ಳುವ ರಂಗವ್ವ ಆಣೆಬಡ್ಡಿ ವ್ಯವಹಾರದೊಂದಿಗೆ ಗಟ್ಟಿಗೊಳ್ಳುತ್ತಾ ಹೋಗುತ್ತಾಳೆ. ಗಂಡನ ಸಾವಿನಿಂದ ವಿಚಲಿತಳಾಗದೆ ತನಗಿರುವ ಆರ್ಥಿಕ ಪರಿಸ್ಥಿತಿ ನೆಚ್ಚಿಕೊಳ್ಳುವುದು, ಆ ಮೂಲಕ ಧೈರ್ಯ ಹೊಂದುವುದು ಅವಳ ಭವಿಷ್ಯದ ಮಾರ್ಗವನ್ನು ಸುಗಮಗೊಳಿಸಿಕೊಳ್ಳುತ್ತಿದ್ದಾಳೆ ಎನಿಸುತ್ತದೆ.

ಬೈಗುಳಗಳ ಮೂಲಕ ತನ್ನನ್ನು ರಕ್ಷಣೆ ಮಾಡಿಕೊಳ್ಳಲು ಸದಾ ಯತ್ನಿಸುವ ರಂಗವ್ವ ತನ್ನ ಮಗಳ ವಿಚಾರದಲ್ಲೂ ಹೀಗೆ ವರ್ತಿಸುತ್ತಾಳೆ. ಮಗಳು ಸಾವಂತ್ರಿ ಬ್ಯಾಡರ ಹುಡುಗ ಮಂಜನೊಂದಿಗೆ ಕದ್ದು ಮುಚ್ಚಿ ಸರಸವಾಡುವುದನ್ನು ಸಹಿಸದೆ ಮಂಜ 'ಹಾಡು ಹಾಡಿಸಿಕೊಳ್ಳಲು ಬಂದಿದ್ದೇನೆ' ಎನ್ನುವ ಮಾತನ್ನು 'ಆಡುಆಡಿಸಿಕೊಳ್ಳಲು ಬಂದಿದ್ದೇನೆ' ಎನ್ನುವಾಗ ರಂಗವ್ವ

> *"ಆಡು ಕುರಿ ಎಲ್ಲಾ ಕುರುಬರ ಮನ್ಯಾಗ ಕಣೋ ಬ್ಯಾಡಿ. ಹೋಗೋ ಅದೇನೋ ಹೇಳ್ತಾರಲ್ಲ ನಾಯಿಗೆ ಸಲಿಗೆ ಕೊಟ್ರೆ ನಡುಮನೆಗೆ ಬಂದಿತ್ತಂತೆ"*[1]

ಮಾತಿನ ಧೈರ್ಯವಂತೆಯಾಗಿ ಕಾಣುತ್ತಾಳೆ. ಇಂತಹ ನಿಷ್ಠುರ ಬದುಕಿನ ಹಿಂದೆ ನಿಂತ ವ್ಯವಸ್ಥೆಯನ್ನು ಮರೆಯುವಂತಿಲ್ಲ. ರಂಗವ್ವ ತನ್ನ ಮಗಳು ಸಾವಂತ್ರಿಯ ಬ್ಯಾಡರ ಮಂಜನೊಂದಿಗಿನ ಪ್ರಣಯ ಸಂಬಂಧ ಕಡಿದು ಹಾಕುವ ಸಲುವಾಗಿ ಊರಿನವರ ಬಾಯಿಮುಚ್ಚಿಸಲು ಹೋರಾಟಕ್ಕಿಳಿಯುತ್ತಾಳೆ. ರಂಗವ್ವ ತುಂಬಾ ಜಿಪುಣೆಯಾಗಿದ್ದರಿಂದ ತನಗೆ ಸಿಗಬಹುದಾಗಿದ್ದ ಒಂದು ರೂಪಾಯಿಗೂ ತನ್ನೆದೆಯನ್ನು ಮೃದುವಾಗಿಸಿಕೊಳ್ಳುತ್ತಿದ್ದಳು. ಮಗಳು ಸಾವಂತ್ರಿ ಬ್ಯಾಡರ ಮಂಜನೊಂದಿಗೆ ಟೆಂಟಿನಲ್ಲಿ ಸಿನಿಮಾ ನೋಡಿ ನಡುರಾತ್ರಿ ಮನೆಗೆ ಬಂದಾಗ ಅವಳಿಗಿದ್ದ ಸಿಟ್ಟು ಕುಡುಗೋಲನ್ನು

---

೧. **ಮುಸ್ಸಂಜೆ ಕಥಾ ಪ್ರಸಂಗ – ಪಿ. ಲಂಕೇಶ್ – ಪತ್ರಿಕೆ ಪ್ರಕಾಶನ, ಬೆಂಗಳೂರು – ೨೦೦೩. ಪು. ೫**

ಕೈಗೆತ್ತಿಕೊಳ್ಳುವಂತೆ ಮಾಡುತ್ತದೆ. ಆದರೆ ಮಂಜ ತಂದಿಟ್ಟ ರೇಷ್ಮೆ ಅಂಚಿನ ಸೀರೆ ನೋಡಿದಾಗ ಕುಡುಗೋಲನ್ನು ಮೂಲೆಗೆಸೆಯುತ್ತಾಳೆ. ರಂಗವ್ವ ಆರ್ಥಿಕವಾಗಿ ಗಟ್ಟಿಗೊಳ್ಳಲು ಎಲ್ಲರನ್ನೂ ಎದುರುಹಾಕಿಕೊಳ್ಳಲು ತಯಾರಿದ್ದಳು. ಆದರೆ ಸಾವಂತ್ರಿಯ ಸಮಸ್ಯೆ ರಂಗವ್ವ ಮತ್ತು ಶಾಸ್ತ್ರಿಗಳ ಅಕ್ರಮ ಸಂಬಂಧದೊಂದಿಗೆ ತಳುಕು ಹಾಕಿಕೊಳ್ಳುತ್ತದೆ. ರಂಗವ್ವನ ಅಕ್ರಮ ಸಂಬಂಧ ಸಾವಂತ್ರಿಗೆ ಅಸ್ಪಷ್ಟವಾಗಿಯೇ ಇದ್ದರೂ ತನ್ನ ಪ್ರಣಯದ ಚಲ್ಲಾಟಕ್ಕೆ ರಹದಾರಿಯಾಗಿದ್ದಂತು ನಿಜ.

ಬಡ್ಡಿ ವ್ಯವಹಾರದಲ್ಲಿ ನಿಷ್ಣಾತಳಾದ ರಂಗವ್ವ ಬರಮಣ್ಣನ ಹತ್ತಿರ ಇಟ್ಟ ಹಣದಲ್ಲಿ ವಂಚನೆ ಮಾಡಿರುವ ಅನುಮಾನದಿಂದ ಮಾತನಾಡುತ್ತಾಳೆ. ಇದರಿಂದ ಹೆದರಿದ ಬರಮಣ್ಣ ಅವಳನ್ನು ಬಾಯಿಮುಚ್ಚಿಸಲು ಮಾಡುವ ನಿಂದೆಗಳಿಗೆ ಉತ್ತರವಾಗಿ

> *"ಹಿಂಗೆಲ್ಲ ಮಾತಾಡಿದರೆ ನಿನ್ನ ಕಚ್ಚೆ ಹಿಡಿದು ಎಳೆದು ಬೀದ್ಯಾಗ ಮೆರವಣಿಗೆ ಮಾಡಿಸೇನು ಕೊಳಕ ಮುಂಡೇ ಮಗನೆ ನನಗೆ ಕೊಡೊದನ್ನು ಕೊಟ್ಟು ಮುಂದಿನ ಮಾತಾಡಲ್"*[1]

ಎಂದು ಗಟ್ಟಿ ಧ್ವನಿಯಲ್ಲಿ ಮಾತನಾಡುತ್ತಾಳೆ. ಪುರುಷ ಪ್ರಾಬಲ್ಯವನ್ನು ತನ್ನ ಅವಾಚ್ಯ ಶಬ್ಧಗಳಿಂದ ಹತ್ತಿಕ್ಕಲು ಪ್ರಯತ್ನಿಸುವ ರಂಗವ್ವ ಒಳಗೊಳಗೇ ಬೆದರಿದವಳಂತೆ ಕಾಣುತ್ತಾಳೆ.

ರಂಗವ್ವನ ಒಂಟಿ ಬದುಕಿಗೆ ಅಂಟಿಕೊಂಡ ಮಗಳು ಸಾವಂತ್ರಿಯ ಬದುಕಿನೊಂದಿಗೆ ಚಲ್ಲಾಟವಾಡಲು ಅನೇಕರು ಆ ಊರಿನಲ್ಲಿ ಹಾತೊರೆಯುವವರೆ. ಆದರೆ ಸಾವಂತ್ರಿಯ ಮನಸ್ಸನ್ನು ಕದ್ದ ಮಂಜ ಸಾವಂತ್ರಿಗಾಗಿ ಹುಡುಕಾಡಿದರೆ ಸಾವಂತ್ರಿ ಮಂಜನಿಗಾಗಿ ಹುಡುಕಾಡುತ್ತಾಳೆ. ಈ ಮಧ್ಯೆ ಪ್ರೀತಿಸುವ ನೆವದಿಂದ ಸಾವಂತ್ರಿಯನ್ನು ತನ್ನ ಚಪಲ ತೀರಿಸಿಕೊಳ್ಳಲು ಹವಣಿಸುವ ಬಸ್ಯನಿಗೆ ಸಾವಂತ್ರಿ ಚನ್ನಾಗಿಯೇ ಬುದ್ಧಿಕಲಿಸುತ್ತಾಳೆ. ಆದರೆ ರಂಗವ್ವನ ದೌರ್ಬಲ್ಯವನ್ನು ಬಳಸಿಕೊಂಡು ಸಾವಂತ್ರಿಯನ್ನು ಪಡೆಯುವ ಸಂಚು ವಿಪಲವಾಗುತ್ತದೆ. ಆದರೆ ದೇಹದ ಆಕರ್ಷಣೆಯಿಂದ ವಯೋಸಹಜ ಗುಣಗಳಿಂದ ಸಾವಂತ್ರಿಯ ಬಾಳಿಗೆ ಬೆಸೆದುಕೊಂಡ ಮಂಜನಿಗೆ ಸಾವಂತ್ರಿಯ ಸಹಕಾರ ಸಿಗುತ್ತದೆ. ಮಗಳ ಬದುಕಿನ ಏನೆಲ್ಲ ರಹಸ್ಯಗಳೂ ಹೊರಬರಲು ಅವಕಾಶ ನೀಡದೆ ಬಡ್ಡಿಯ ಹಣದಲ್ಲಿ ತಲ್ಲೀನಳಾದ ರಂಗವ್ವನಿಗೆ ಬಸ್ಯ ಕೆಲವೊಂದು ಚುರುಕ ಮುಟ್ಟಿಸುತ್ತಾನೆ. ಇವ್ಯಾವುದನ್ನು ನಂಬಲಾಗದೆ,

> *"ರಂಗವ್ವ ಕ್ರಮೇಣ ಮಗಳ ಮೇಲಿನ ಹಿಡಿತ ಸಡಿಲಗೊಳಿಸುತ್ತ ಇದ್ದಹಾಗಿತ್ತು. ಮಗಳ ಗುಣ ತನಗೆ ಗೊತ್ತಿರುವುದರಿಂದ ಅವಳಿಗೆ ಎಷ್ಟೇ ಹಳಾರ ಕೊಟ್ಟರೂ*

೧. ಮುಸ್ಸಂಜೆ ಕಥಾ ಪ್ರಸಂಗ – ಪಿ. ಲಂಕೇಶ್ – ಪತ್ರಿಕೆ ಪ್ರಕಾಶನ, ಬೆಂಗಳೂರು – ೨೦೦೩. ಪು. ೧೫

*ವ್ಯತೆಯಿಲ್ಲವೆಂದು ಆಕೆ ತಿಳಿದಂತಿತ್ತು. ಸಾವಂತ್ರಿಗೆ ತನಗೆ ಸಿಕ್ಕ ಈ ಸ್ವಾತಂತ್ರ್ಯದಿಂದಾಗಿ ಸಂತೋಷವಾದರೂ ತನಗೆ ಅದರ ಜೊತೆಗೆ ದೊರೆತ ಜವಾಬ್ದಾರಿಯಿಂದಾಗಿ ಬೇಸರವಾಗಿತ್ತು"*[೧]

ರಂಗವ್ವನ ಬಡ್ಡಿ ವ್ಯವಹಾರ ತನ್ನ ಮೇಲಿರುವ ಮಮತೆ ಯಾವುದರ ಕಡೆಯೂ ಲಕ್ಷ್ಯವಿಲ್ಲದೆ ಯೌವನದ ಸೆಳೆತಕ್ಕೆ ಸಿಲುಕಿರುವ ಸಾವಂತ್ರಿ ಒಮ್ಮೊಮ್ಮೆ ತನ್ನ ತಾಯಿಯ ಬಗ್ಗೆ ಯೋಚಿಸುತ್ತಾಳೆ. ತಾನು ಮಾಡುತ್ತಿರುವ ಮೋಸದ ಆಟವನ್ನು ತಾಯಿಯೊಂದಿಗೆ ಹೇಳಿ ಅವಳ ಎದೆಯಲ್ಲಿ ಮುಖವಿಟ್ಟು ಶಮನ ಮಾಡಿಕೊಳ್ಳಬೇಕೆಂದು ಯೋಚಿಸುತ್ತಾಳೆ. ಆದರೆ ಬಸ್ಯನನ್ನು ಅತ್ಯಾಚಾರ ಮಾಡಲು ಯತ್ನಿಸಿದವ ಎಂದು ತಾಯಿಯೊಂದಿಗೆ ಬಿಂಬಿಸಿ ಮಂಜನೊಂದಿಗೆ ಕಳ್ಳಾಟವಾಡುವ ತಾನು ಹೇಳಬೇಕಾದ ಸುಳ್ಳಿಗೆ ಬೆದರುತ್ತಾಳೆ. ಎದೆ ಭಾರವಾಗಿ ಅವಳ ಗಂಟಲು ಕಟ್ಟಿ ಬರುತ್ತದೆ.

*"ಅವ್ವ ಅದೇನನ್ನೋ ಗಾಢವಾಗಿ ಚಿಂತಿಸುತ್ತಿದ್ದ ಹಾಗಿತ್ತು, ಸಾವಂತ್ರಿಗೆ ತಾನು ನೋಡದ ಅಪ್ಪ : ಆತ ಸತ್ತು ಹೋದ ಮೇಲೆ ಜೀವ ಉಳಿಸಿಕೊಳ್ಳಲು ಪಟ್ಟಪಾಡು, ತನಗೆ ಯಾವುದಕ್ಕೂ ಕಡಿಮೆ ಇಲ್ಲದಂತೆ ನಡೆಸಿಕೊಂಡು ಬಂದ ಬಗೆ, ಅವಳನ್ನು ಕಿತ್ತು ತಿನ್ನಲು ಕಾದುನಿಂತ ಊರ ಜನ – ಎಲ್ಲವೂ ನೆನಪಾಗಿ ಅವ್ವನ ಬಗ್ಗೆ ಅಪಾರ ಕರುಣೆ ಉಕ್ಕಿ ಬಂತು"*[೨]

ತಾಯಿಯ ಆಶ್ರಯ ಕಳೆದುಕೊಂಡರೆ ಸಾವಂತ್ರಿ ಊರ ಜನರ ಬಾಯಿಗೆ ಬೀಳುವುದು ಖಚಿತ. ಆ ಸತ್ಯ ಸಾವಂತ್ರಿಗೂ ತಿಳಿದಿದೆ. ಆದರೆ ಮಂಜನನ್ನು ಬಿಟ್ಟಿರಲಾರದ ಸ್ಥಿತಿಗೆ ತಲುಪಿದ್ದರಿಂದ ತಾಯಿಯ ಎಲ್ಲಾ ನಿಷ್ಠುರಗಳಿಗೂ ಹೊಂದಿಕೊಳ್ಳದೆ ಉಪಾಯವಿಲ್ಲ ಎಂದು ಯೋಚಿಸುತ್ತಾಳೆ. ಆದರೆ ರಂಗವ್ವನಿಗೆ ಮಗಳ ಮೇಲಿನ ಮಮತೆಯನ್ನು ಮರೆಸುವಷ್ಟು ರೋಷದಿಂದ ಅತ್ಯಂತ ಹೀನಾಯವಾಗಿ ಬೈಯ್ಯುತ್ತಾಳೆ. "ನಿಂಗೆ ಮದುವೆ ಗಿದುವೆ ಬೇಕಾಗಿಲ್ಲ ಅಂತ ಕಾಣಿಸ್ತತಿ. ನಿನ್ನ ಮಡ್ಡಿಗೆ ಬೆಂಕಿ ಬೀಳ" ಎಂದು ಬೈಯ್ಯುವಾಗಲೂ ಸಾವಂತ್ರಿ ಸುಮ್ಮನಾಗುತ್ತಾಳೆ. ರಂಗವ್ವ ಗಯ್ಯಾಳಿ ಪಟ್ಟವನ್ನು ಹೊತ್ತು ಅವಕಾಶವಂಚಿತೆಯಾಗಿ ಶೌರ್ಯ ದ್ವೇಷ ಮಾತ್ಸರ್ಯಗಳ ಪ್ರತಿಮೂರ್ತಿಯಾಗಿ ಕಂಡರೂ ಅಂತಃಕರಣ ಮಾನವೀಯತೆಯಿಂದ ಮಿಡಿಯುತ್ತಿತ್ತು ಎಂದು ಕಾದಂಬರಿ ಅನೇಕ ಸಂದರ್ಭಗಳಲ್ಲಿ ಬಿಂಬಿಸುತ್ತದೆ. ಮಗಳ ಪ್ರಣಯ ಪ್ರಕರಣದಿಂದ ತಲೆತಗ್ಗಿಸುವುದನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಾಗದ ರಂಗವ್ವ ಮಗಳನ್ನು ಹದ್ದುಬಸ್ತಿನಲ್ಲಿಡಲು ಏನೆಲ್ಲ ಉಪಾಯಗಳನ್ನು ಮುಂದಾಲೋಚನೆಗಳನ್ನು ಮಾಡಲು ತಯಾರಾಗುತ್ತಾಳೆ. ಊರಿನಲ್ಲಿ ತನ್ನ ಬಗ್ಗೆ ಅನುಕಂಪ ಪಡೆಯಲು, ತನ್ನ ಅಧಿಕಾರ ಸ್ಥಾಪಿಸಲು ಮತ್ತು ತನ್ನನ್ನು ರಕ್ಷಿಸಕೊಳ್ಳಲು ಮಾಡುವ ಸಂಚುಗಳಲ್ಲಿ ಭರ್ಮಣ್ಣನ ಮೇಲೆ ಹಣಕೊಡದೆ ಮೋಸ ಮಾಡಿದ್ದಾನೆಂದು ಕಲ್ಪನೆಯ ಕಥೆ ಕಟ್ಟಿ ಹೇಳುತ್ತಾಳೆ.

---

೧. ಮುಸ್ಸಂಜೆ ಕಥಾ ಪ್ರಸಂಗ – ಪಿ. ಲಂಕೇಶ್ – ಪತ್ರಿಕೆ ಪ್ರಕಾಶನ, ಬೆಂಗಳೂರು – ೨೦೦೩. ಪು. ೬೭
೨. ಅದೇ ಪು– ಪು– ೬೭

ಹಣವಸೂಲಿ ಮಾಡುವ ವಿಚಾರ ಬಂದಾಗ ಉಪಾಯದಿಂದ ವಸೂಲಿ ಮಾಡುವಂತೆ ಹೇಳುವ ಮಾಸ್ತರಿಗೆ

> *"ಸಾಕು ಬಿಡ್ರಿ ಗಿಡ್ಡ ಮೇಷ್ಟ್ರೇ......... ನನಗೆ ಭಯ ಹುಟ್ಸಿಸ ಬ್ಯಾಡ್ರಿ, ಮಾಟ ಮಾಡ್ಸಿ, ಕೈಮುಸುಕು ಹಾಕಿ, ಶಾಸ್ತ್ರಿಯೋರ ಹತ್ರ ಮಂತ್ರಮಾಡ್ಸಿ, ಇದ್ಯಾವದೂ ಆಗದಿದ್ರೆ ಅವರ ಮನೀಗೆ ಬೆಂಕಿ ಹಾಕಿ ನನ್ನ ಹಣ ಪಡಕೋತೀನಿ"*[1]

ಎನ್ನುವಾಗ ರಂಗವ್ವ ವಿಧವೆಯಾದ ನಂತರ ಆರ್ಥಿಕ ಭದ್ರತೆಗಾಗಿ ಹಿಂದೆಂದಿಗಿಂತ ಗಟ್ಟಿಗಳಾಗಿ ತೋರುತ್ತಾಳೆ. ಅವಳ ಬೈಗುಳಗಳಲ್ಲಿ ಅವಳ ದುಃಖ ಹತಾಷೆಯ ಭಾವನೆಗಳು ಹರಳುಗಟ್ಟಿವೆ. ವಿಧವಾ ಮೌಲ್ಯ, ಸಂಪ್ರದಾಯಗಳ ಕಟ್ಟುಪಾಡುಗಳು ಯಾವುವೂ ಆಕೆಯ ಆರ್ಥಿಕ ಗಳಿಕೆಯ ಸಂದರ್ಭದಲ್ಲಿ ಅವಳನ್ನು ಹಿಮ್ಮೆಟ್ಟಿಸುವುದಿಲ್ಲ.

ಸಾವಂತ್ರಿಯ ಪ್ರೇಮ ವ್ಯವಹಾರದಿಂದ ನೊಂದ ರಂಗವ್ವ ತನ್ನ ತಮ್ಮ ಶಿವನಂಜನ ಆಗಮನದಿಂದ ಸಮಾಧಾನದಿಂದ ಇರುವಂತೆ ನಟಿಸುತ್ತಾಳೆ. ಶಿವನಂಜನೊಂದಿಗೆ ಆಗಮಿಸಿದ್ದ ಉಡುಪ ಮತ್ತು ಮಮ್ತಾಜ ದಂಪತಿಗಳು ಸಮಸ್ಯೆಯನ್ನು ಸಾಕಷ್ಟು ತಿಳಿಗೊಳಿಸುವ ಪ್ರಯತ್ನ ಮಾಡುತ್ತಾರೆ. ಆದರೂ ಭರ್ಮಣ್ಣ, ಶಿವಾಜಿ, ರಾಚನಂತವರಿಂದ ಶೋಷಿತೆಯಾದರೂ ಮಾನಸಿಕವಾಗಿ ಜರ್ಜರಿತಳಾಗುವುದಿಲ್ಲ. ಹಲವಾರು ಸಂದರ್ಭಗಳಲ್ಲಿ ತನ್ನ ನಿಷ್ಟುರವಾದ ಅನಿಸಿಕೆಗಳನ್ನು ಹರಿಬಿಡುತ್ತಾಳೆ. ಆದರೆ ಇವರುಗಳ ಕಣ್ಣು ರಂಗವ್ವನ ಮತ್ತು ಮಗಳು ಸಾವಂತ್ರಿಯ ಮೇಲೆ. ಕಂಬಳ್ಳಿಯ ಊರೆಲ್ಲಾ ಒಂದಾಗಿ ಸಾವಂತ್ರಿಯ ಪ್ರಣಯವನ್ನು ಬಯಲು ಮಾಡುವ ಪ್ರಸಂಗ ಮಾತ್ರ ಅತ್ಯಂತ ಹೇಯವಾಗಿ ಕಾಣುತ್ತದೆ. ತಾಯಿ ಮಗಳನ್ನು ಊರಿನಿಂದಲೇ ಗಡಿಪಾರು ಮಾಡುವ ಪಿತೂರಿ ಅಮಾನವೀಯ ಕೃತ್ಯವಾಗಿ ಕಾಣುತ್ತದೆ. ಗಟ್ಟಿಗಿತ್ತಿಯಾಗಿ ರಂಗವ್ವ ಒಂಟಿ ಪುರುಷನನ್ನು ಎದುರಿಸಬಹುದೇ ಹೊರತು ಊರಿಗೆ ಊರೇ ಒಂದಾದಾಗ ಹತಾಶಳಾಗುತ್ತಾಳೆ. ಮಗಳನ್ನು ಕಳೆದುಕೊಳ್ಳುವ ಸಂದರ್ಭಕ್ಕೆ ಸಂಪೂರ್ಣ ಶರಣಾಗುತ್ತಾಳೆ. ಸಾವಂತ್ರಿ–ಮಂಜರ ಗುಪ್ತ ಪ್ರಣಯದಾಟವನ್ನು ಪತ್ತೆಹಚ್ಚಿ ಅವರನ್ನು ಗಾಡಿಯಲ್ಲಿ ಕಟ್ಟಿ ರಂಗವ್ವನ ಮನೆ ಮುಂದೆ ತಂದು ನಿಲ್ಲಿಸುತ್ತಾರೆ. ಗಾಡಿಯಲ್ಲಿ ಕರೆತರುವಾಗ ರಾಚ, ಶಿವಾಜಿ, ಭರ್ಮಣ್ಣ, ಸಣ್ಣೀರಪ್ಪ ಗಾಡಿಯ ಮುಂಭಾಗದಲ್ಲಿ ನಡೆದು ಬರುತ್ತಿದ್ದರು. ಬರುವಾಗ ಸಾವಂತ್ರಿಯ ಬಗ್ಗೆ ಕೀಳಾಗಿ ಮಾತನಾಡುತ್ತ ಪ್ರತಿಷ್ಠೆಯ ಕೆಲಸಮಾಡಿದವರಂತೆ ವರ್ತಿಸುತ್ತಿದ್ದರು. ಆದರೆ ಭರ್ಮಣ್ಣ, ಬಸ್ಯ, ರಾಚ ಮುಂತಾದವರು ಸಾವಂತ್ರಿಯನ್ನು ಕಾಮದ ಕಣ್ಣಿನಿಂದ ಕಂಡವರೆ ತಮಗೆ ಸಿಗದ ಸಾವಂತ್ರಿಗೆ ಮತ್ತು ಅವಳ ಅವ್ವ ರಂಗವ್ವನಿಗೆ ಅವಮಾನ ಮಾಡಿ ಖುಷಿ ಪಡುವುದೇ ಅವರ ಉದ್ದೇಶವಾಗಿತ್ತು.

---

೧. ಮುಸ್ಸಂಜಿ ಕಥಾ ಪ್ರಸಂಗ – ಪಿ. ಲಂಕೇಶ್ – ಪತ್ರಿಕೆ ಪ್ರಕಾಶನ, ಬೆಂಗಳೂರು – ೨೦೦೩. ಪು. ೩೩

## ೫. ವಿಧವೆಯ ಸಾಮಾಜಿಕ ಪ್ರತಿಷ್ಠೆ

ಆದರೆ ಈ ಘಟನೆ ಅನಿರೀಕ್ಷಿತ ತಿರುವು ಪಡೆದುಕೊಂಡದ್ದು ಕಾದಂಬರಿಯಲ್ಲಿ ಮಹತ್ವದ ಸಂಗತಿಯಾಗಿ ಮೂಡಿಬಂದಿದೆ. ಪ್ರೇಮಿಗಳಿಗೆ ಜಯವಾಗಿ ರಂಗವ್ವ ಅವರ ಪ್ರೀತಿಯನ್ನು ಒಪ್ಪಿ ಎಲ್ಲರ ಸಮ್ಮುಖದಲ್ಲಿ ಮದುವೆ ಮಾಡಿಸಿ ಬಹಳ ಎತ್ತರದ ಸ್ಥಾನದಲ್ಲಿ ನಿಲ್ಲುತ್ತಾಳೆ. ನೋಡುಗರಿಗೆ ಭಯ ಮೂಡಿಸಿದ್ದ ರಂಗವ್ವ ಕೈಯಲ್ಲಿದ್ದ ಕುಡುಗೋಲು ಬಿಟ್ಟು ಮಂಜ ಮತ್ತು ಸಾವಂತ್ರಿಯನ್ನು ಎಳೆಗರುಗಳಂತೆ ಎಳೆದು ತಂದು ನಿಲ್ಲಿಸಿದಳು.

> *"ಕ್ಷಣಮಾತ್ರದಲ್ಲಿ ಆಗುತ್ತಿದ್ದ ಈ ವಿಷಯ ನೋಡಿದ ಕೆಲವರಿಗೆ ರಂಗವ್ವ ಅವರಿಬ್ಬರನ್ನೂ ಕೊಚ್ಚಿ ಹಾಕುವುದಾಗಿ ಕಾಣಿಸಿತು. ಆದರೆ ರಂಗವ್ವ ಅವರಿಬ್ಬರನ್ನೂ ಗಾಡಿಯಿಂದ ಕೆಳಕ್ಕೆ ಎಳೆದು ತಂದು ಸೊಂಟದಲ್ಲಿದ್ದ ತಾಳಿಸರವನ್ನು ಕೈಗೆ ಉಗುಚಿ ಹಾಕಿಕೊಂಡು ಮಂಜನಿಗೆ ಕೊಟ್ಟು ಅದನ್ನು ಸಾವಂತ್ರಿಯ ಕೊರಳಿಗೆ ಕಟ್ಟಲು ಹೇಳಿದಳು"*[೧]

ಇದರಿಂದ ಭೀತನಾದ ಮಂಜ ತನ್ನ ಕೊನೆಗಾಲ ಸಮೀಪಿಸಿದೆ ಎಂದೇ ಹೆದರುತ್ತಾನೆ. ಅಲ್ಲಿಗೆ ಬಂದ ಪೋಲೀಸರು ಉಡುಪನ ಸಮಾದಾನದ ಮಾತಿನಿಂದ ವಾಪಾಸಾಗುತ್ತಾರೆ. ಇವುಗಳಿಗೆ ವಿಚಲಿತಳಾಗದ ರಂಗವ್ವ ಮಗಳ ಹರಿದ ಬಟ್ಟೆ ತೆಗೆಸಲು ಸ್ನಾನ ಮಾಡಿಸಿ ಮಂಜ ಸೈಕಲ್ ಸವಾರಿಯ ದಿವಸ ತಂದುಕೊಟ್ಟ ರೇಷ್ಮೆ ಸೀರೆ ಉಡಿಸಿ "ಅದೇನಾಗ್ತತೋ ನಾ ನೋಡ್ಕಂತಿನಿ ಸುಖವಾಗಿರು ನನ್ನ ಸುಡುಗಾಡು ಮಗಳೇ" ಎಂದು ಅರ್ಧಬೈದು ಅರ್ಧ ರೋಮಾಂಚಿತಳಾಗುತ್ತಾಳೆ. ಕೊನೆಗೂ ಅಂತಿಮ ತೀರ್ಪು ರಂಗವ್ವನದೇ. ಈ ಸಂದರ್ಭ ಒಂಟಿ ಬದುಕಿನ ನಿಸ್ಸಾಹಯಕ ಸ್ಥಿತಿಯನ್ನು ಸೂಚಿಸುತ್ತದೆ. ತನ್ನ ರಕ್ಷಣೆಗಾಗಿ ಯಾರನ್ನೂ ನಂಬುವ ಸ್ಥಿತಿಯಲ್ಲಿಲ್ಲದ ರಂಗವ್ವ ಮಗಳು ಸಾವಂತ್ರಿಯನ್ನು ಕಳೆದುಕೊಳ್ಳಲು ತಯಾರಿರಲಿಲ್ಲ. ತನ್ನ ಸ್ವಂತ ನಿರ್ಧಾರದಿಂದ ಸ್ವಾಭಿಮಾನವನ್ನು ಮೆರೆಯುತ್ತಾಳೆ. ಆ ತಕ್ಷಣಕ್ಕೆ ಮಂಜನನ್ನು 'ಅಳಿಯ' ಎಂದು ಒಪ್ಪಿಕೊಳ್ಳುವ ರಂಗವ್ವ ಸಾಮಾಜಿಕ ಪ್ರತಿಷ್ಠೆಗಾಗಿ ಈ ನಿರ್ಧಾರಕ್ಕೆ ಬರುವ ಅನಿವಾರ್ಯತೆ ಇತ್ತು. ತನ್ನ ಆಂತರ್ಯದ ನೋವು ಹತಾಷೆ ದುಃಖಗಳಿಗೆ ಪರಿಹಾರ ಕಂಡಕೊಳ್ಳಲೇ ಬೇಕಾದ ತುರ್ತು ಇತ್ತು. ತನ್ನನ್ನು ಸುತ್ತುವರಿದ ಸಮಸ್ಯೆಗಳಿಗೆ ಎದುರು ನಿಂತು ಪರಿಹಾರಕಂಡುಕೊಳ್ಳುವಾಗ ಹಿಂದೆಂದಿಗಿಂತ ಕ್ರೂರಿ ಹಠಮಾರಿತನದವಳಾಗಿ ಕಾಣುತ್ತಾಳೆ. ಆ ಊರಿನ ದಗಾಕೋರರಿಂದ ದೂರ ಇರುವುದರಿಂದ ಆಕೆ ಸುಖಹೊಂದಬಹುದಾಗಿತ್ತು. ಇದಕ್ಕೂ ಅನೇಕ ತೊಡಕುಗಳಿದ್ದುವು. ಇಷ್ಟೆಲ್ಲ ಘಟನೆಗಳನ್ನು ಎದುರಿಸುವ ರಂಗವ್ವನನ್ನು ಕುರಿತು ಉಡುಪರು ಹೀಗೆ ವ್ಯಾಖ್ಯಾನಿಸುತ್ತಾರೆ.

---

೧. ಮುಸ್ಸಂಜೆ ಕಥಾ ಪ್ರಸಂಗ – ಪಿ. ಲಂಕೇಶ್ – ಪತ್ರಿಕೆ ಪ್ರಕಾಶನ, ಬೆಂಗಳೂರು – ೨೦೦೩. ಪು. ೨೯೨

*"ಭಾರತದ ಜಾತೀಯತೆ, ಸಂಪ್ರದಾಯಶರಣತೆ ಮತ್ತು ಸಣ್ಣತನ ಅವನ ಮನಸ್ಸನ್ನು ಕೆಣಕಿತ್ತು. ರಂಗವ್ವನಂತ ಏಕಮಾತ್ರ ವ್ಯಕ್ತಿ ಸಂದರ್ಭದ ಒತ್ತಡಕ್ಕೆ ಸಿಕ್ಕು ಧೈರ್ಯದ ನಿಲುವು ತೆಗೆದುಕೊಂಡದ್ದು ಮತ್ತು ತೀವ್ರಭಾವನೆಗಳಿಂದಾಗಿ ಜಾತಿಯ ಕಟ್ಟು ಒಡೆದದ್ದು ವಿಸ್ಮಯಕರ ಅಪರೂಪದ ಪ್ರಸಂಗವಾಗಿ ಕಂಡಿತೇ ಹೊರತು ಒಂದು ಸಾಮೂಹಿಕ ಆಂದೋಲನ ದೂರವಾಗಿಯೇ ಕಂಡಿತು"*[೧]

ಆದರೆ ಕ್ರಮೇಣ ಕಂಬಳ್ಳಿಯ ದ್ವೇಷದ ಉರಿ ಹತ್ತಿಕೊಂಡು ಹಳ್ಳಿಗೆ ಹಳ್ಳಿಯೇ ಉರಿದು ನಿಲ್ಲುತ್ತದೆ. ರಂಗವ್ವ ಊರ ಹೊರಗೆ ಗುಡಿಸಿಲಲ್ಲಿ ಅಳಿಯ ಮಗಳೊಂದಿಗೆ ಬದುಕು ಕಟ್ಟಿಕೊಳ್ಳಬೇಕಾಗುತ್ತದೆ. ಇದರಿಂದಲೂ ವಿಚಲಿತಳಾಗದ ರಂಗವ್ವ ತನಗೆ ಬಂದ ಬಾಳಿಗೆ ಹೊಂದಿಕೊಳ್ಳುವುದು ಕಾದಂಬರಿಯಲ್ಲಿ ಅನಾವರಣಗೊಂಡಿದೆ. ರಂಗವ್ವನು ಕಟ್ಟಿದ ಕನಸು ಚೂರಾಗಿ ವ್ಯವಸ್ತೆಯನ್ನು ವಿರೋಧಿಸಲಾಗದೆ ಬದುಕುತ್ತಾಳೆ. ಆದರೆ ಲೇಖಕರ ಮುಂದೆ ಅವಿದ್ಯೆ ಮೌಢ್ಯಗಳಿಂದ ತೊಳಲುವ ಸ್ತ್ರೀ ಸಮೂಹವೇ ಇದ್ದುದು ಸ್ಪಷ್ಟವಾಗುತ್ತದೆ.

ಅತ್ಯಂತ ಶೋಚನೀಯ ಪರಿಸ್ಥಿತಿಗಳನ್ನು ಸವಾಲಾಗಿ ಸ್ವೀಕರಿಸುತ್ತ ಆರ್ಥಿಕ ಸ್ವಾವಲಂಬನೆಗಾಗಿ ಹೋರಾಟದ ಹಾದಿಯನ್ನು ಹಿಡಿಯುವಾಗ ಅವಾಚ್ಯಶಬ್ಧಗಳನ್ನೇ ತಮ್ಮ ಅಸ್ತ್ರವನ್ನಾಗಿ ಮಾಡಿಕೊಳ್ಳುವುದು ಅನಿವಾರ್ಯ ಎನ್ನುವಂತೆ ಕಾದಂಬರಿಕಾರರು ಚಿತ್ರಿಸಿದ್ದಾರೆ. ರಂಗವ್ವ ಕಂಬಳ್ಳಿಗೆ ಬೆಂಕಿ ಬಿದ್ದು ಊರಹೊರಗಿನ ಗುಡಿಸಲಿನಲ್ಲಿ ವಾಸಮಾಡುವ ಸಂದರ್ಭ ಬಂದಾಗ ಮಗಳು ಅಳಿಯ ಎನ್ನುವ ಸಂಬಂಧದ ಕೊಂಡಿಯನ್ನು ಬೆಸೆದು ಬದುಕಲು ಹೊಂದಾಣಿಕೆ ಮಾಡಿಕೊಳ್ಳುತ್ತಾಳೆ. ದಲಿತ ಮತ್ತು ಉನ್ನತ ಜಾತಿಯ ವೈವಾಹಿಕ ಸಂಬಂಧ ವೈರುಧ್ಯಗಳನ್ನು ಕಟ್ಟಿಕೊಂಡರೂ ಮಾನವೀಯ ಅಂತಃಸಂಬಂಧಗಳ ಕಡೆ ಕಾದಂಬರಿ ಮುಖಮಾಡಿರುವುದನ್ನು ಚಿತ್ರಿಸುತ್ತದೆ.

ರಂಗವ್ವನಿಗೆ ಎದುರಾಗುವ ಲಿಂಗತಾರತಮ್ಯ ಅರ್ಥಹೀನವಾದ ವ್ಯವಸ್ಥೆಯನ್ನು ಪರಿಚಯಿಸುತ್ತದೆ. ಪುರುಷ ರಾಜಕಾರಣ ಮತ್ತು ವ್ಯವಸ್ಥೆಯ ಕ್ರೌರ್ಯದೊಳಗೆ ನಲುಗುವುದು ಆ ವ್ಯವಸ್ತೆಯ ಪ್ರತಿಬಿಂಬ. ರಂಗವ್ವಳಿಗೆ 'ವೈಧವ್ಯ' ತಂದ ಕಷ್ಟಗಳಿಂದ ಗಟ್ಟಿಯಾಗುತ್ತ ಹೋಗುತ್ತಾಳೆ. ಆದರೆ ವ್ಯವಸ್ಥೆ ಅವಳನ್ನು ಸಾಕಷ್ಟು ಹಣ್ಣುಮಾಡುತ್ತದೆ. ಅವಳು ಬಡ್ಡಿ ವ್ಯವಹಾರದಿಂದ ಹಣವಂತಳಾಗುವುದನ್ನು ಸಹಿಸದ ಊರಿನ ಹಲವರು ಸಾವಂತ್ರಿಯ ಸೌಂದರ್ಯಕ್ಕೆ ಮಾರುಹೋಗಿ ಬಯಸಿ ಬಯಸಿ ಮನನೊಂದು ಹತಾಷರಾಗಿ ಹಿಂಸಿಸುವುದು ಗಮನಾರ್ಹವಾದುದು. ಕೊನೆಯ ದಿನಗಳಲ್ಲಿ ರಂಗವ್ವನ ಹಣಕಾಸಿನ ಚಟುವಟಿಕೆಗಳು ವಿಶಿಷ್ಟ ತಿರುವು ಪಡೆದುಕೊಂಡವು ಎನ್ನುವ ಲೇಖರು ಅವಳನ್ನು ಹೀಗೆ ವಿಶ್ಲೇಷಿಸುತ್ತಾರೆ.

---

೧. **ಮುಸ್ಸಂಜೆ ಕಥಾ ಪ್ರಸಂಗ – ಪಿ. ಲಂಕೇಶ್ – ಪತ್ರಿಕೆ ಪ್ರಕಾಶನ, ಬೆಂಗಳೂರು – ೨೦೦೩. ಪು. ೨೯೩**

*"ಅವಳು ಮನುಷ್ಯನನ್ನು ಕೇವಲ ಮನುಷ್ಯರಾಗಿ ಮತ್ತು ನಾಳೆ ತೀರ ಕಷ್ಟದ ವೇಳೆಯಲ್ಲಿ ತನ್ನ ಬೆಂಬಲಕ್ಕೆ ಬೇಕಾಗಬಹುದಾದ ವ್ಯಕ್ತಿಗಳಾಗಿ ನಡೆಸಿಕೊಂಡಿದ್ದರಿಂದ ಅವಳ ಬಗ್ಗೆ ಕೆಲವು ತೀರ್ಮಾನಕ್ಕೆ ನಾವು ಬರಬಹುದು. ಅವಳಲ್ಲಿ ರಾಜಕಾರಣ ಸದಾ ಸುಪ್ತವಾಗಿದ್ದು ತನ್ನ ಅಭಿವ್ಯಕ್ತಿಗಾಗಿ ತಕ್ಕ ಸಮಯಕ್ಕಾಗಿ ಕಾಯುತ್ತಿತ್ತು. ಹಣವನ್ನು ಬಡ್ಡಿಗಾಗಿ ಸಾಲ ಕೊಡುವುದು ಒಂದುಕಾಲಕ್ಕೆ ನೆಮ್ಮದಿ ನೀಡುವ ಪ್ರಶ್ನೆಯಾಗಿದ್ದರೆ, ಅದನ್ನು ಹಿಂದಕ್ಕೆ ಕೇಳದಿರುವುದು ಈಗ ಅವಳಿಗೆ ಸುಖತರಬಹುದಾಗಿತ್ತು. ರಂಗವ್ವ ತನ್ನ ಕಷ್ಟಗಳಿಂದಾಗಿ ಈಗ ಪರಿಪಕ್ವ ಹೆಣ್ಣಾಗಿ ರೂಪುಗೊಂಡಿದ್ದಳು"*[೧]

ಅವಳ ಜಾತ್ಯಾತೀತ ನಿಲುವಿಗೆ ದ್ವೇಷ ಬಿಟ್ಟು ವಿಷಾದದೆಡೆಗೆ ತಿರುಗುವ ರಾಚ, ಭರ್ಮಣ್ಣ. ಆಶ್ಚರ್ಯಚಕಿತರಾಗಿ ಕಾಣುತ್ತಾರೆ. ಅವಳ ಈ ಪರಿಯ ಬೆಳವಣಿಗೆ ಅವಳ ಅಂತರಂಗದ ಪ್ರೀತಿಗೆ ಸಾಕ್ಷಿಯಾಗುತ್ತದೆ. ಮಗಳ ಮದುವೆ ಜಾತಿಯೊಳಗೇ ನಡೆದು ಸುಖಕಾಣಬೇಕೆಂದು ಬಯಸುವ ರಂಗವ್ವನಿಗೆ ಆ ಊರಿನ ವಿವಾಹಿತ ಅವಿವಾಹಿತ ಪುರುಷರ ವ್ಯಾಮೋಹಕ್ಕೆ ಒಳಗಾಗುವುದು ಆ ವ್ಯವಸ್ಥೆಯ ವಿಕೃತಿಯಾಗಿ ಕಾದಂಬರಿ ತೆರೆದಿಡುತ್ತದೆ. ಆಕಸ್ಮಿಕವಾಗಿ ಪರಿಚಯವಾಗಿ ಚಲ್ಲಾಟಗಳಿಂದ ಊರಿನವರ ಸಂಚಿಗೆ ಬಲಿಯಾಗಿ ಸಾವಂತ್ರಿಯ ವಿವಾಹ ಕೀಳುಜಾತಿಯ ಯುವಕನೊಂದಿಗೆ ನೆರವೇರುವುದರೊಂದಿಗೆ ಆ ಸಮಾಜದ ಜಾತಿಸಂಬಂಧಿ ಘಟನೆಗಳನ್ನು ವಿವರಿಸುತ್ತದೆ.

ಸಾಮಾಜಿಕ ಮೌಲ್ಯಗಳ ಮುಸುಕಿನಲ್ಲಿ ಬಾಳು ಬೀದಿಪಾಲುಮಾಡುವ ವ್ಯವಸ್ಥೆಯ ವಿರುದ್ಧ ರಂಗವ್ವನಲ್ಲಿ ಹೆಪ್ಪುಗಟ್ಟಿದ್ದ ನೋವು ಸ್ಫೋಟವಾಗುವುದನ್ನೂ ಗಮನಿಸಬಹುದು. ರಂಗವ್ವ ಜೀವಪರ ನೀತಿಯನ್ನು ಅನುಸರಿಸಲಾಗದೆ ಬದುಕುವುದಕ್ಕೂ ವ್ಯವಸ್ಥೆಯ ಕೊಡುಗೆ ಇದೆ. ಅನಿವಾರ್ಯವಾಗಿ ಮಂಜನನ್ನು 'ಅಳಿಯ' ಎಂದು ಒಪ್ಪಿ ಬದುಕುವಾಗ ಬಡ್ಡಿಹಣವನ್ನು ವಸೂಲಿ ಮಾಡದೆ ಇರುವ ಎಲ್ಲಾ ಜಾತಿಯವರ ಮನೆಯಲ್ಲೂ ಊಟ ತಿಂಡಿ ಮಾಡುವ ರಂಗವ್ವನ ಪರಿವರ್ತಿತ ಬದುಕನ್ನು ತೆರೆದಿಡುತ್ತದೆ. ಮಹಿಳೆಯ ಆಂತರ್ಯದ ಹಲವಾರು ಬಗೆಯ ನೋವುಗಳು ಅವಾಚ್ಯ ಬೈಗುಳಗಳೊಂದಿಗೆ ಹೊರಹೊಮ್ಮುವ, ಆರ್ಥಿಕ ಭದ್ರತೆಗಾಗಿ ಆಣೆಬಡ್ಡಿ ವ್ಯವಹಾರ ಮಾಡಿ ನಿಂದಿಸಿಕೊಳ್ಳುವ ರಂಗವ್ವನ ಪಾತ್ರ ಅನಾವರಣಗೊಂಡಿದೆ. ಆ ಕಾಲದ ಪುರುಷ ಸಮಾಜ ವಿಧಿಸುವ ನಿಯಮಗಳು ಹಿಂಸಾತ್ಮಕವಾಗಿದ್ದು ಜಾತಿಯನ್ನು ತಳುಕು ಹಾಕಿಕೊಂಡಿದ್ದವು. ವ್ಯವಸ್ಥೆಯ ಸೂತ್ರದ ಗೊಂಬೆಯಂತೆ ಬದುಕಲು ಇಚ್ಛಿಸದ ರಂಗವ್ವ ವಿರೋಧಿಸುವುದೂ ಸಾಧ್ಯವಾಗದೆ ಸೋಲುತ್ತಾಳೆ. ಇದೂ ಒಂದು ರೀತಿಯ ದುರಂತ ಬದುಕು ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಎಚ್.ಎಸ್.ಶಿವಪ್ರಕಾಶ್‌ರವರು ತಮ್ಮ ಲೇಖನದಲ್ಲಿ ಲಂಕೇಶರವರ 'ಜಾತಿ'ವಾದದ ನಿಲುವನ್ನು ಹೀಗೆ ಪ್ರಸ್ಥಾಪಿಸುತ್ತಾರೆ.

---

೧. ಮುಸ್ಸಂಜೆ ಕಥಾ ಪ್ರಸಂಗ – ಪಿ. ಲಂಕೇಶ್ – ಪತ್ರಿಕೆ ಪ್ರಕಾಶನ, ಬೆಂಗಳೂರು – ೨೦೦೩. ಪು. ೩೧೯

> *"ನಮ್ಮ ಗುರುಗಳಾದ ಲಂಕೇಶ್ ಅವರು ಒಂದು ಸಲ ನನಗೆ ಕ್ಲಾಸಿನ ಹೊರಗೆ ಒಂದು ದೊಡ್ಡ ಪಾಠ ಹೇಳಿಕೊಟ್ಟರು. ನೋಡಯ್ಯ, ಈ ಮೇಲ್ಜಾತಿಯವರು ಮೇಲರಿಮೆಯಿಂದ ಶೋಷಿತ ಜಾತಿಯವರು ಕೀಳರಿಮೆಯಿಂದ ಬಿಡಿಸಿಕೊಳ್ಳದಿದ್ದರೆ ಸಮಾಜ ಗಬ್ಬೆದ್ದು ಹೋಗುತ್ತೆ ಎಂದು ಹೇಳಿದ್ದರು."*[೧]

ಈ ಮಾತುಗಳು ಲಂಕೇಶರವರಿಗೆ ಆ ಕಾಲದಲ್ಲಿ ಕಾಡಿರುವ ಜಾತಿ ಸಮಸ್ಯೆಯನ್ನು ವ್ಯಕ್ತಪಡಿಸುತ್ತವೆ. 'ಮುಸ್ಸಂಜೆಯ ಕಥಾ ಪ್ರಸಂಗದಲ್ಲಿ ಲಿಂಗ ಅಸಮಾನತೆಯಿಂದ ನರಳುವ ಸಾಮಾಜಿಕ ವ್ಯವಸ್ಥೆಯನ್ನು ರಂಗವ್ವನ ಪಾತ್ರದ ಮೂಲಕ ಚಿತ್ರಿಸುತ್ತಾರೆ. ಜಾತಿವ್ಯವಸ್ಥೆಯೊಳಗೆ 'ಪ್ರೀತಿ' 'ದ್ವೇಷ'ವಾಗಿ ನಲುಗುವುದನ್ನು ಕಾದಂಬರಿ ತೆರೆದಿಡುತ್ತದೆ. ಜಾತಿಯಾಧಾರಿತ ಲಿಂಗಾಧಾರಿತ ಸಾಮಾಜಿಕ ಮೌಲ್ಯಗಳು ಜೀವಪರವಾದ 'ಪ್ರೀತಿ'ಯನ್ನು ಸಂಘರ್ಷಕ್ಕೊಡುವ ರೀತಿ ವಿಶೇಷವಾಗಿದೆ.

**೬. ಆಧುನಿಕ ಕಾಲಘಟ್ಟದಲ್ಲಿ ವಿಧವಾ ಮರುವಿವಾಹ**

ಗಂಗಾಪಾದೇಕಲ್‌ರವರ 'ಹೊಸಹೆಜ್ಜೆ' ಕಥನ ವಿಧವಾ ವಿವಾಹವನ್ನು ಸಂಪ್ರದಾಯ ಮನಸ್ಸುಗಳು ಒಪ್ಪಿಕೊಳ್ಳುವುದನ್ನು ವಿವರಿಸುತ್ತದೆ. ರಾಜಾರಾಯರ ಒಬ್ಬನೇ ಮಗ ಮಹೇಶನ ಮದುವೆಗಾಗಿ ಹಲವಾರು ಜಾತಕಗಳನ್ನು ಅವಲೋಕಿಸುವ ರಾಮಶಾಸ್ತ್ರಿಗಳು ರಾಜಾರಾಯರ ಹಿತೈಷಿಗಳೂ ಹೌದು. ಯಾವ ಜಾತಕವೂ ಸರಿಬರದಿರುವ ವಿಚಾರಕ್ಕೆ ಸ್ಪಂದಿಸುವ ಮಹೇಶ ರಾಮಾಶಾಸ್ತ್ರಿಗಳ ಚಿಕ್ಕವಯಸ್ಸಿನ ವಿಧವೆ ಕುಸುಮಳನ್ನು ವಿವಾಹವಾಗುವ ನಿರ್ಧಾರವನ್ನು ತಿಳಿಸುತ್ತಾನೆ. ಈ ವಿಷಯಕ್ಕೆ ತಕ್ಷಣಕ್ಕೆ ತತ್ತರಿಸುವ ಶಾಸ್ತ್ರಿಗಳಿಗೆ ನಿಜವಾಗಿಯೂ ತಮ್ಮ ಮಗಳ ಮರುವಿವಾಹದ ವಿಷಯ ಸಂತೋಷವನ್ನೇ ತಂದಿತ್ತು. ಶ್ರೀಮಂತ ಕುಟುಂಬದ ಸುಸಂಸ್ಕೃತ ರಾಜಾರಾಯರಲ್ಲಿ ತಮ್ಮ ವಿಧವೆ ಮಗಳನ್ನು ಸೊಸೆಯನ್ನಾಗಿ ಸ್ವೀಕರಿಸಿ ಎಂದು ಪ್ರಸ್ತಾಪಿಸುವುದು ಗೊಂದಲಕಾರಿಯಾಗಿ ಕಾಣುತ್ತದೆ. ಕುಸುಮಳ ಮರುಮದುವೆ ಜಿಜ್ಞಾಸೆಯಲ್ಲಿ ರಾಜಾರಾಯರನ್ನು ಹೀಗೆ ವಿಶ್ಲೇಷಿಸುತ್ತಾರೆ.

> *"ತನ್ನಲ್ಲಿ ಗುರುಸಮಾನ ಭಕ್ತಿಯನ್ನಿಟ್ಟ ರಾಜಾರಾಯರ ಮನಸ್ಸಿಗೆ ನೋವು ಮಾಡುವುದೆ? ಆತ ಉದಾರಿ ವಿಶಾಲ ಹೃದಯಿ, ಎಲ್ಲವೂ ನಿಜ, ಆದರೂ ಒಬ್ಬನೇ ಒಬ್ಬ ಮಗನ ಬದುಕಿನಲ್ಲಿ ವಿಧವೆ ಪಾಲುಗಾರ್ತಿಯಾಗುವುದನ್ನು ಬಯಸಿಯಾರೆ? ಸಹಿಸಿಯಾರೆ? ಒಂದೊಮ್ಮೆ ಮಹೇಶನ ಒತ್ತಾಯಕ್ಕಾಗಿ ಸಹಿಸಿದರೂ ಒಳಗೇ ತನ್ನ ಬಗ್ಗೆ ಏನಂದುಕೊಂಡಾರು? ನಾನು ಅಷ್ಟಾಗಿ ನಂಬಿದ್ದ ಅವರೇ ತಮ್ಮ ಸ್ವಾರ್ಥ ನೋಡಿಕೊಂಡರಲ್ಲ ಎಂದು ನೋಯದೆ ಇದ್ದಾರೆ?"*[೨]

---

೧. ಪ್ರಜಾವಾಣಿ ದಿನಪತ್ರಿಕೆ – ಲೇಖನ – ಹೆಚ್.ಎಸ್. ಶಿವಪ್ರಕಾಶ್ – ದಿನಾಂಕ ೨೬ – ಏಪ್ರಿಲ್ – ೨೦೧೨.

೨. ಹೊಸಹೆಜ್ಜೆ – ಗಂಗಾ ಪಾದೇಕಲ್ – ಕನ್ನಡ ಸಂಘ ವಿವೇಕಾನಂದ ಕಾಲೇಜು – ಪುತ್ತೂರು. ದ.ಕ. ೧೯೯೬ – ಪು. ೩೩–೩೪

ಎಂದು ಚಿಂತನಾಶೀಲರಾಗುವ ಶಾಸ್ತ್ರಿಗಳು ದ್ವಂದ್ವಕ್ಕೊಳಗಾಗುತ್ತಾರೆ. ಒಂದೆಡೆ ಮಗಳ ಭವಿಷ್ಯದ ಚಿಂತನೆ ಇನ್ನೊಂದೆಡೆ ಮಹೇಶನಿಗೆ ವಿಧವೆಯನ್ನು ಮದುವೆಮಾಡಿಸಿ ಸಮಾಜನಿಂದನೆಗೊಳಗಾಗುವುದು. ಕಡೆಗೂ ಮದುವೆ ಪ್ರಸ್ತಾಪ ಮಾಡಲಾರದೆ ಚಡಪಡಿಸುತ್ತಾರೆ. ಕಥೆ ವಿಧವಾ ವಿವಾಹದಲ್ಲಿ ಮುಕ್ತಾಯವಾಗುವುದು ಸಂಪ್ರದಾಯ ಬದ್ಧ ಮನಸ್ಸುಗಳ ಪರಿವರ್ತನಶೀಲತೆಯನ್ನು ಪ್ರತಿಬಿಂಬಿಸುತ್ತದೆ.

ಪ. ರಾಮಕೃಷ್ಣ ಶಾಸ್ತ್ರಿಯವರ 'ಬದುಕು'ಕಥೆ ವಿಧವೆಯಾಗಿ ಮಗುವಿನೊಂದಿಗೆ ತಮ್ಮನನ್ನು ಆಶ್ರಯಿಸಿದರೂ ಬದುಕು ಕಟ್ಟಿಕೊಳ್ಳಲಾಗದೆ ಹತಾಶಳಾಗುವುದನ್ನು ವಿವರಿಸುತ್ತದೆ. ತುಂಟ ಬಾಲಕ ರಘು ತನ್ನ ಸೋದರಮಾವನ ಕೋಣೆಯೊಳಗೆ ಮಾಡಿದ ಅನಾಹುತಗಳನ್ನು ಸಹಿಸಿಕೊಳ್ಳದೆ ರಘುವನ್ನು ಹೊಡೆದು ಹಿಂಸೆ ಮಾಡುವ ರಘುವಿನ ಮಾವನ ವರ್ತನೆ ಅಮಾನವೀಯವಾದುದು. ಅದನ್ನು ಸಮರ್ಥಿಸಿಕೊಳ್ಳುವ ರಘುವಿನ ಮಾವ ತನ್ನ ಅಕ್ಕನ ಅಸಹಾಯ ಸ್ಥಿತಿಗೂ ಮರುಗುತ್ತಾನೆ. ಇದರಿಂದ ಖಿನ್ನತೆಯುಂಟಾದರೂ ತಾನು ರಘುವಿಗೆ ಹೊಡೆದು ಸರಿದಾರಿಗೆ ತರುವ ಪ್ರಯತ್ನ ಮಾಡಿರುವುದರ ಬಗ್ಗೆ ಆದರವಿದೆ. ತನ್ನ ವಿಧವೆ ಅಕ್ಕ ಚಿಕ್ಕ ಮಗು ರಘುವಿನೊಂದಿಗೆ ತಮ್ಮನ ಮನೆಗೆ ಬಂದು ಸೇರಿದಾಗ ಒಬ್ಬಂಟಿಯಾದ ರಘುವಿನ ಮಾವ ಅಕ್ಕ ಮತ್ತು ಮಗುವನ್ನು ಪ್ರೀತಿಯಿಂದ ಕಾಣುತ್ತಾನೆ. ರಘುವಿಗೆ ಶಿಕ್ಷೆ ನೀಡಿದ ಅರಿವಾದಾಗ ಬಹಳ ಪಶ್ಚಾತ್ತಾಪ ಪಡುತ್ತ ರಾತ್ರಿ ನಿದ್ರೆಯಿಲ್ಲದೆ ಬೆಳಿಗ್ಗೆ ಎದ್ದು ನೋಡುವಾಗ ಅಕ್ಕನ ಪತ್ರ ಕೈ ಸೇರಿತ್ತು. 'ನಾವು ನಿರ್ಗತಿಕರು' ಎಂದು ಸಾರಿ ಹೇಳುತ್ತಿದ್ದ ರಘುವಿನ ಕಣ್ಣುಗಳು ಮಾವನ ಕಣ್ಣ ಮುಂದೆ ಬಂದು ಹುಚ್ಚನಂತಾದ.

> *"ನನ್ನ ಜಂಭ ಆ ಕಾಗದ ಓದಿ ಕೊಚ್ಚಿ ಹೋಗಿತ್ತು. ಆ ಸಜಲ ನೇತ್ರಗಳು ಕಣ್ಮುಂದೆ ತೇಲಿ "ನೀನು ಅಪರಾಧಿ" ಎಂದು ಹೇಳಿದುವು. ಆ ವೇದನಾ ಪೂರ್ಣ ನೀಲಿ ಕಣ್ಣುಗಳು ನನ್ನನ್ನು ನೋಡಿ 'ನಾವು ನಿರ್ಗತಿಕರು' ಎಂದು ಸಾರಿದುವು. ಕೈಯಲ್ಲಿ ಅಂಟಿಕೊಂಡ ರಕ್ತ 'ನನ್ನನ್ನು ಕ್ಷಮಿಸು' ಎಂದು ಹೇಳಿತು."*[೧]

ಅಕ್ಕ ಮತ್ತು ರಘುವನ್ನು ಅರಸುವುದು ಅಸಾಧ್ಯವಾದಾಗ ಕಾಲಮಿಂಚಿ ಹೋಗಿರುವುದರ ಅರಿವಾಗುತ್ತದೆ. ವಿಧವೆಯರಿಗೆ ನೀಡುವ ಆಶ್ರಯ ಕೇವಲ ಅನುಕಂಪವಾದರೆ ಬದುಕು ದುರಂತದಲ್ಲಿ ಕೊನೆಯಾಗುವ ಸಾಧ್ಯತೆಗಳೇ ಹೆಚ್ಚು. ಪರಸ್ಪರ ಹೊಂದಾಣಿಕೆಯಲ್ಲಿ ಇರುವ ಬಿರುಕುಗಳು ಅನೇಕ ಸಂದರ್ಭಗಳಲ್ಲಿ ಅನಾಹುತಕ್ಕೆಡೆ ಮಾಡುತ್ತವೆ ಎಂದು ಕೃತಿಯ ಮೂಲಕ ಭಾವಿಸಬಹುದು.

ಮನೋರಮಾ ಅವರ 'ಮುಖವಾಡ' 'ವಿಧವಾ ವಿವಾಹ' ಮಾನವೀಯ ಸಂಬಂಧವನ್ನು ಬೆಸೆಯುವಲ್ಲಿ ವಿಫಲವಾಗುವುದನ್ನು ವಿವರಿಸುತ್ತದೆ. ಸ್ವಾತಿ ಮತ್ತು ಮಂಗಳ ಬಾಲ್ಯ ಸ್ನೇಹಿತೆಯರು. ಸ್ವಾತಿಯ ಪತಿ ಸುನಿಲ್ ಮಂಗಳೆಯ ವಿವಾಹವನ್ನು

---

೧. ಕಲ್ಲು ಕರಗಿತು – ಪ. ರಾಮಕೃಷ್ಣ ಶಾಸ್ತ್ರಿ – ಲಲಿತ ಪ್ರಕಾಶ – ಪುತ್ತೂರು ದ.ಕ. ೧೯೮೩ – ಪು. ೧೦

ಗಿರೀಶನಿಗೆ ಮಾಡಿಸುವಲ್ಲಿ ಯಶಸ್ವಿಯಾದರು. ಆದರೆ ಗಿರೀಶ ಹಳ್ಳಿಯ ಮಧ್ಯಮವರ್ಗದ ರೈತನಾಗಿದ್ದವನು. ಅವನ ಸಹಾಯಕ್ಕೆಂದು ಕೆ.ಇ.ಬಿಯಲ್ಲಿ ಇಂಜಿನಿಯರ್ ಆಗಿದ್ದ ಸುನಿಲ್ ಗಿರೀಶನ ತೋಟದ ನೀರಿಗಾಗಿ ವಿದ್ಯುತ್ತನ್ನು ಒದಗಿಸುತ್ತಾನೆ. ಅದೇ ವಿದ್ಯುತ್ ಶಾಕ್‌ನಿಂದ ಗಿರೀಶ್ ಅಸುನೀಗುತ್ತಾನೆ. ವಿಧವೆಯಾದ ಮಂಗಳೆಯ ಮನವೊಲಿಸಿ ಮಹಿಳಾ ಚಳುವಳಿಯ ಮುಂಚೂಣಿಯಲ್ಲಿದ್ದ ಸುನಂದಮ್ಮನವರ ಸಹಾಯದಿಂದ ಮುರುಳಿ ಎಂಬ ಯುವಕನೊಂದಿಗೆ ವಿವಾಹ ಮಾಡಿಸುತ್ತಾರೆ. ಇದರಿಂದ ಸಂತುಷ್ಟರಾದ ಸ್ವಾತಿ ಮತ್ತು ಸುನಿಲ್ ದಂಪತಿಗಳಿಗೆ ಧನ್ಯತಾಭಾವ ಉಕ್ಕುತ್ತದೆ. ಆದರೆ ಸುನಂದಮ್ಮನ ಮೊಮ್ಮಗಳ ವಿವಾಹಕ್ಕೆ ಮಂಗಳ ಮುರುಳಿ ನವದಂಪತಿಗಳಾಗಿ ಭಾಗವಹಿಸುತ್ತಾರೆಂಬ ನಂಬಿಕೆ ಹುಸಿಯಾಗುತ್ತದೆ.

ಸ್ವಾತಿ ಮಂಗಳೆಯನ್ನು ಕಾಣದೆ ಸುನಂದಮ್ಮನನ್ನು ವಿಚಾರಿಸಿದಾಗ

> *"ಛೇ ನಿಂಗೆ ಅಷ್ಟು ಗೊತ್ತಾಗೊದಿಲ್ವೇ. ಮದುವೆ ಅಂದ್ರೆ ಅತ್ಯಂತ ಪವಿತ್ರವಾದ ಕಾರ್ಯ...... ಒಬ್ಬಾಕೆಯ ಜೀವಮಾನಕ್ಕೆ ಸಂಬಂಧಿಸಿದ್ದು ...... ಆದ್ದರಿಂದ ದೈವ ದೇವರುಗಳಿಗೆ ಇಷ್ಟವಾಗದೆ ಇರೋದನ್ನು ಮಾಡೋಕಾಗುತ್ತಾ ಹೇಳು...... ಇದು ನನ್ನ ಮೊಮ್ಮಗಳ ಮದುವೆ ಎಂದರು"*[1]

ವಿಧವೆಯನ್ನು ಮರುವಿವಾಹದ ನಂತರವೂ 'ಅಮಂಗಳ' 'ಅನಿಷ್ಟ' ಎಂದು ದೂರ ಇಡುವ ಸಂಪ್ರದಾಯ ಬದ್ಧ ಮನೋಭಾವಗಳು ಬದಲಾಗುವುದಿಲ್ಲ ಎನ್ನುವ ಅಭಿಪ್ರಾಯ ಕಥೆಯಲ್ಲಿ ಹೊಮ್ಮುತ್ತದೆ. 'ವಿಧವಾಮರುವಿವಾಹ ಸಾಮಾಜಿಕ ಸುಧಾರಣೆಯ ನೆಲೆಯಲ್ಲಿಯೇ ನಿಂತು ಬಿಡುತ್ತದೆ. 'ವಿವಾಹ' ಮಾನವೀಯ ಸಂಬಂಧಗಳನ್ನು ಬೆಸೆಯುವಲ್ಲಿ ವಿಫಲವಾಗುವುದನ್ನು ಕಥೆ ವಿವರಿಸುತ್ತದೆ.

ಅತ್ತೆ ಕಾವೇರಿ ವಿಧವೆಯಾಗುತ್ತಿದ್ದಂತೆ ಗಂಡನ ಮನೆಯವರು ತಲೆಬೋಳಿಸಿ ಕೆಂಪು ಸೀರೆ ಉಡಿಸಿ ತೌರಿಗೆ ಕಳುಹಿಸಿಕೊಡುವುದು ಚಿಕ್ಕವಯಸ್ಸಿನ ನಿರೂಪಕನಿಗೆ ಆಶ್ಚರ್ಯವಾಗುತ್ತದೆ, ಕ್ರಮೇಣ ಆಕೆಯ ಸೇವೆ ಆ ಮನೆಗೆ ನಿರಂತರವಾಗುತ್ತ ಅವಳು ನಿಗೂಢವಾಗಿ ಸಾಯುವುದೂ ರಹಸ್ಯವಾಗಿಯೇ ಉಳಿದುಬಿಡುತ್ತದೆ. ಇದರಿಂದ ವಿಧವೆಯರ ಬದುಕಿನ ಉದ್ಧಾರಕ್ಕೆ ಪ್ರಯತ್ನಿಸುವ ನಿರೂಪಕನಿಗೆ ದಾರಿಯೇನೂ ಸುಗಮವಾಗಿರಲಿಲ್ಲ. ಬಹುದೊಡ್ಡ ಹಾಡುಗಾರ್ತಿಯಾಗಿ ಹೊರಹೊಮ್ಮಿದ್ದ ನಯನತಾರಾ ಎನ್ನುವ ದೂರದ ಸಂಬಂಧಿ, ಸಹಪಾಠಿಯ ಸಹಾಯವನ್ನು ನಿರೀಕ್ಷಿಸುತ್ತಾನೆ. ತಾನು ತನ್ನ ಸ್ನೇಹಿತರೊಂದಿಗೆ ಹುಟ್ಟು ಹಾಕಿದ್ದ 'ಹೊಂಬೆಳಕು' ಸಂಸ್ಥೆಗೆ ಸಹಾಯಕ್ಕಾಗಿ 'ಸಂಗೀತ ಸಂಜೆ' ಕಾರ್ಯಕ್ರಮಕ್ಕಾಗಿ ನಯನ ತಾರಾಳನ್ನು ಆಹ್ವಾನಿಸುತ್ತಾನೆ, ಮೊದಲು ಒಪ್ಪಿ ನಂತರ ಆ ದಿನ ಕಾರ್ಯಕ್ರಮ ನೀಡಲು ನಿರಾಕರಿಸುವ ನಯನ ತಾರಾಳ ಸ್ಥಿತಿಗೆ ಕೋಪ ಬಂದರೂ ಸಹಿಸಿಕೊಳ್ಳುತ್ತಾನೆ.

---

೧. ಮುಖವಾಡ – ಮನೋರಮಾ ಎಂ.ಭಟ್– ಕನ್ನಡ ಪ್ರಪಂಚ ಪ್ರಕಾಶನ– ಪುತ್ತೂರು–೧೯೯೪–ಪು–೧೧೧

ಆಕೆಯ ಗಂಡ ಮತ್ತು ತಂದೆ ಅವಳನ್ನು ಅಂಕೆಯಲ್ಲಿಟ್ಟುಕೊಂಡು ದುಡಿಸಿಕೊಳ್ಳುವ ರೀತಿ ಅಮಾನವೀಯವಾಗಿ ಕಾಣುತ್ತದೆ.

ನೊಂದ ವಿಧವೆಗೆ ಬಾಳುಕೊಡುವ ಕಾರ್ಯವನ್ನು ಅನಿಷ್ಟ ಅಶುಭವೆಂದು ಜರಿಯುವುದು ಪುರುಷ ಸಮಾಜದ ಧೋರಣೆಯಾಗಿದೆ.

> *"ಸಂಪ್ರದಾಯ ವಿರುದ್ಧವಾಗಿ ಕಾರ್ಯ ನಡೆಸುವ ನಿನ್ನ ಸಂಸ್ಥೆಗೆ ಸಹಾಯಾರ್ಥವಾಗಿ ನಯನತಾರಾ ಕಾರ್ಯಕ್ರಮ ನೀಡುವುದು ನಮಗ್ಯಾರಿಗೂ ಇಷ್ಟವಿಲ್ಲ. ಒಂದು ಹೆಣ್ಣು ವಿಧವೆಯಾದಳು ಅಂದರೆ ಅದು ಅವಳ ಹಣೆಬರಹ. ಶಾಸ್ತ್ರಸಮ್ಮತವಾದ ಕಟ್ಟುನಿಟ್ಟಿನ ಜೀವನ ನಡೆಸುತ್ತಾ ಬ್ರಹ್ಮಚರ್ಯ ಪಾಲನೆ ಮಾಡಬೇಕಾಗಿರುವ ಹೆಣ್ಮಕ್ಕಳಿಗೆಲ್ಲ ಮರುಮದುವೆ ಮಾಡಹೊರಟಿದ್ದೀಯಲ್ಲಾ ಇದು ಸರಿಯೆ?"*[೧]

ಎಂದು ವಿಧವಾ ವಿವಾಹವನ್ನು ವಿರೋಧಿಸುವ ನಯನತಾರಾಳ ತಂದೆ ರಾಜಶೇಖರಯ್ಯನವರು ಸಂಪ್ರದಾಯವಾದಿಗಳಾಗಿ ಕಾಣುತ್ತಾರೆ. ಅವರಿಗೆ ನೀಡುವ ಉತ್ತರ ತುಂಬಾ ಮಾರ್ಮಿಕವಾಗಿದೆ.

> *"ನನಗೂ ಒಂದೊಂದು ಬಾರಿ ಹಾಗನಿಸುತ್ತೆ ಚಿಕ್ಕಪ್ಪ. ನಿಮ್ಮಂಥ ಸ್ವಾರ್ಥಿ ಗಂಡಸರ ಅಧೀನದಲ್ಲಿರುವುದಕ್ಕಿಂತಲೂ ಹೆಣ್ಣು ಒಂಟಿಯಾಗಿ ಉಳಿಯುವುದೇ ಲೇಸಾದೀತು. ಎಷ್ಟೋ ಬಾರಿ ಮರುಮದುವೆಯೆಂಬುದು ಕಳಚಿಕೊಂಡ ಸಂಕೋಲೆಯನ್ನು ಮತ್ತೆ ತೊಡಿಸಿಕೊಳ್ಳುವ ದುರಂತವಾಗುವ ಸಂಭವವೂ ಇದೆ. ಈ ದಿಕ್ಕಿನಲ್ಲಿಯೂ ನಮ್ಮ ಸಂಸ್ಥೆ ಯೋಚಿಸಬೇಕಾದ ಅಗತ್ಯವಿದೆ."*[೨]

ಇಷ್ಟು ಹೇಳುವುದಲ್ಲದೆ ತನ್ನ ತತ್ವವನ್ನು ಪ್ರತಿಪಾದಿಸಬೇಕಾದ ಅನಿವಾರ್ಯತೆಗಾಗಿ ನಿರೂಪಕನಿಗೆ ವಿಷಾದವೆನಿಸುತ್ತದೆ. ಈ ಪ್ರಪಂಚದಲ್ಲಿ ಯಾರೂ ಶಾಶ್ವತರಲ್ಲ ಆದರೆ ಬದುಕಿದ್ದಾಗ ಎಷ್ಟು ಬದುಕಿನ ವಿಕಾಸಕ್ಕೆ ಸಹಾಯವಾಗಲು ಸಾಧ್ಯವಾಗುತ್ತೊ ಅಷ್ಟು ಪ್ರಯತ್ನ ಪಡಬೇಕು. ಸತ್ತವರ ಜೊತೆ ಬದುಕಿದ್ದವರ ಜೀವನ ಅಂತ್ಯವಾಗುವುದಿಲ್ಲ ಎಂದು ಅಭಿಪ್ರಾಯಪಡುತ್ತ ಹೀಗೆ ಹೇಳುತ್ತಾರೆ.

> *"ಹೆಣ್ಣಿನ ಮೇಲೆ ಪ್ರಕೃತಿ ತೋರದ ಕ್ರೌರ್ಯವನ್ನು ಸಮಾಜವೇಕೆ ಹೇರಬೇಕು? ಗಂಡಿರಲಿ, ಹೆಣ್ಣಿರಲಿ ಮಾನವ ಸಂಘ ಜೀವಿ. ವೈರಾಗ್ಯವೆಂಬುದು ಸದಾಕಾಲ ಎಲ್ಲರಲ್ಲೂ ಸ್ವಾಭಾವಿಕವಲ್ಲ. ಕಾಲವಾದ ಆತ್ಮೀಯರಿಗಾಗಿ ತೀವ್ರವಾಗಿ ನೋವು ಅನುಭವಿಸುವ ಮನುಷ್ಯ ಚೇತನವು ಸಾಂತ್ವನ ನೀಡಬಲ್ಲ ಪ್ರೀತಿ ತುಂಬಿದ ಇನ್ನೊಂದು ಚೇತನಕ್ಕಾಗಿ ಹಂಬಲಿಸುವುದು ಅತ್ಯಂತ ಸಹಜ ಪರಮ ಸತ್ಯ."*[೩]

ಇಂತಹ ಧೋರಣೆಗೆ ತೀವ್ರವಾಗಿ ಪ್ರತಿಕ್ರಿಯಿಸುವ 'ಹೊಂಬೆಳಕು' ಸಂಸ್ಥೆಯ ಸಂಸ್ಥಾಪಕನಿಗೆ ನಯನತಾರಾಳು ಅಧೀನದಲ್ಲಿದ್ದ ಗಾಜಿನ ಗೊಂಬೆಯಾಗಿ

---

೧. ಗಾಜಿನ ಗೊಂಬೆಗಳು – ಲೀಲಾ ಮಣ್ಣಾಲ – ನಿಸರ್ಗ ಪ್ರಕಾಶನ – ಮೈಸೂರು – ೧೯೯೮. ಪು. ೧೪೪
೨. ಅದೇ ಪು. ಪು–೧೪೪
೩. ಅದೇ ಪು. ಪು–೧೪೫

ಕಾಣಿಸುತ್ತಾಳೆ. ಮನುವಿನ ಮಾತನ್ನು ಸ್ಮರಿಸುತ್ತ "ಹೆಣ್ಣು ಮೊದಲು ಹೆತ್ತವರ ಅಧೀನದಲ್ಲೂ ನಂತರ ಗಂಡನ ಅಧೀನದಲ್ಲೂ ಇರಬೇಕೆಂಬ ಶಾಸನ ಸುಳ್ಳಾಗಿದೆ" ಇಲ್ಲಿ ಹೆಣ್ಣು ಏಕಕಾಲಕ್ಕೆ ತಂದೆ ಮತ್ತು ಗಂಡನ ಕೈಗೊಂಬೆಯಾಗಿದ್ದಾಳೆ ಎಂದುಕೊಳ್ಳುತ್ತಾನೆ. ಎರಡು ವರ್ಷದ ನಂತರ ನಯನತಾರಾಳ ಪತಿ ಚಂದ್ರಕಾಂತಾ ಅಪಘಾತದಲ್ಲಿ ಮಡಿದ ಸುದ್ದಿ ನಿರೂಪಕನಿಗೆ ನೋವು ತರಲಿಲ್ಲ. ಆದರೆ ತಂದೆ ರಾಜಶೇಖರಯ್ಯನೊಂದಿಗೆ ಬೇಟಿಯಾಗಿ ನಯನಳ ಹೆಸರಿನಿಂದ ಕಾರ್ಯಕ್ರಮ ನೀಡುವ ಇಚ್ಛೆವ್ಯಕ್ತಪಡಿಸುವಾಗ "ನೊಂದ ನೋವ ನೊಂದವರೆ ಬಲ್ಲರು" ಎನಿಸುತ್ತದೆ. ಸಮಾಜ ಮೆಚ್ಚುವ ಮಟ್ಟದಲ್ಲಿ ಬದುಕುವ ಹೆಣ್ಣಿಗೂ ಬಾಲ್ಯದಲ್ಲೇ ವಿಧವೆಯಾಗಿ ಸೇವೆಯಲ್ಲಿ ದಿನಕಳೆಯುವ ಹೆಣ್ಣಿಗೂ ಯಾವ ದೊಡ್ಡ ವ್ಯತ್ಯಾಸಗಳನ್ನು ಗುರುತಿಸಲಾಗುವುದಿಲ್ಲ. ಇಲ್ಲಿ ಈ ವ್ಯವಸ್ಥೆಯಲ್ಲಿ ಮಹಿಳೆಯರು ಗಾಜಿನ ಗೊಂಬೆಗಳು ಎನ್ನುವುದನ್ನು ಈ ಕಥೆ ಅನಾವರಣಗೊಳಿಸುತ್ತದೆ.

**೭. 'ಅಂತರ್ಜಾತಿ ವಿಧವಾ ಮರುವಿವಾಹ' – ಸಂಘರ್ಷದ ನೆಲೆಯಲ್ಲಿ**

ಬಿಳುಮನೆ ರಾಮದಾಸ್‌ರವರು ದಟ್ಟಮಲೆನಾಡಿನ ಜೀವವೈವಿಧ್ಯತೆಯನ್ನು ಅರಿತವರು. ಕುವೆಂಪುರವರು ಕಂಡಿರಿಸಿದ ಮಲೆನಾಡಿನ ದಟ್ಟ ಜೀವನದ ಅನುಭವಗಳನ್ನು ಶೂದ್ರ ಜಗತ್ತಿನ ವಿವರಗಳನ್ನು ಅತ್ಯಂತ ಕಾಳಜಿಯಿಂದ ತೆರೆದಿಡುತ್ತಾರೆ. ಇವರ 'ವ್ಯಾಮೋಹ' ಕಾದಂಬರಿ ಸ್ವಾತಂತ್ರ್ಯ ಪೂರ್ವದ ಅವಿಭಕ್ತ ಕುಟುಂಬದ ಜೀವನವನ್ನು ವಿವರಿಸುತ್ತದೆ. ಅವಿಭಕ್ತ ಕುಟುಂಬದೊಳಗಿನ ವಿದ್ಯಾವಂತ ಯುವಕ ಶ್ರೀನಿವಾಸನ ತವಕ ತಲ್ಲಣಗಳು ಅನಾವರಣಗೊಂಡಿವೆ. ಕಾದಂಬರಿಯ ಕೇಂದ್ರ ಪಾತ್ರ ವಿಧವೆ ಕಾಡಮ್ಮ ಹೆಗ್ಗಡತಿ. ಮಲೆನಾಡಿನ ಒಕ್ಕಲಿಗ ಕುಟುಂಬದ ವೈವಿಧ್ಯಪೂರ್ಣ ಬದುಕನ್ನು ಅವಲೋಕಿಸಬಹುದು. ಚಿಕ್ಕ ವಯಸ್ಸಿನಲ್ಲೆ ಕೊಂಚ ವಯಸ್ಸಾದ ವ್ಯಕ್ತಿಯನ್ನು ಮದುವೆಯಾಗಿ ಕೆಲವು ವರ್ಷಗಳಲ್ಲೆ ಕಾಡಮ್ಮ ಹೆಗ್ಗಡತಿಯವರು ವಿಧವೆಯಾಗುತ್ತಾರೆ. ಚಿಕ್ಕ ಮಕ್ಕಳ ಸಂಸಾರದ ಜವಾಬ್ದಾರಿ ಹೊರುತ್ತಾರೆ.

ಹೆಗ್ಗಡತಿ ಎಂದೇ ಕಾದಂಬರಿಯ ಉದ್ದಕ್ಕೂ ಕರೆಸಿಕೊಳ್ಳುವ ಕಾಡಮ್ಮ ಹೆಗ್ಗಡತಿಯವರು ನಾಲ್ಕು ಗಂಡುಮಕ್ಕಳನ್ನು ಸಮಾನವಾಗಿ ನೋಡಿಕೊಳ್ಳುತ್ತಾರೆ. ಆಸ್ತಿ ಹೆಚ್ಚಿಸಲು ಕಾಡುಕಡಿಸಿ ಗದ್ದೆ ಮಾಡಿಸಿದ್ದರು. ಪುಟ್ಟಮ್ಮ ಚಿನ್ನಮ್ಮ ಇಬ್ಬರು ಸೊಸೆಯರು ಇವರ ಅಂಕೆಯಲ್ಲೇ ಬದುಕುತ್ತಿದ್ದರು. ಹಿರಿಯ ಮಗನ ಸಾವು ಹಿರಿಸೊಸೆ ಚಿನ್ನಮ್ಮ ವಿಧವೆಯಾಗುಳಿಯುವಂತಾಗುತ್ತದೆ. ಚಿನ್ನಮ್ಮನ ಮಗ ಶ್ರೀನಿವಾಸ ಶೂದ್ರರು ವಿದ್ಯಾಭ್ಯಾಸ ಮಾಡದ ಕಾಲದಲ್ಲೂ ವಿದ್ಯಾವಂತನಾಗಿ ಹೊರಹೊಮ್ಮುತ್ತಾನೆ. ಆ ಕಾಲದಲ್ಲಿ ಅತ್ತೆ ಸೊಸೆಯನ್ನು ಹತೋಟಿಯಲ್ಲಿಟ್ಟುಕೊಳ್ಳುವ ವೈಖರಿ ಕಾಡಮ್ಮ ಹೆಗ್ಗಡತಿಯವರು ತಮ್ಮ ಸೊಸೆಯಂದಿರನ್ನು ಬೈಗುಳಗಳಿಂದ, ಕೆಲವು ಸಮಯ

ಹೊಡೆದು ನಿಯಂತ್ರಿಸುವುದನ್ನು ಗಮನಿಸಬಹುದು. ಹೆಗ್ಗಡತಿಯವರು ಸೊಸೆಗೆ ಪೊರಕೆಯಿಂದ ಹೊಡೆದು ತನ್ನತ್ತೆ ನಾಗಮ್ಮ ತಾನು ಸೊಸೆಯಾಗಿದ್ದಾಗ ಕೊಡುತ್ತಿದ್ದ ಶಿಕ್ಷೆಯನ್ನು ನೆನಪಿಸಿ ಸಮರ್ಥಿಸಿಕೊಳ್ಳುತ್ತಿದ್ದುದು ಕ್ರೌರ್ಯ ಎನಿಸುತ್ತದೆ. ಇದು ಮಲೆನಾಡಿನ ಅವಿಭಕ್ತ ಕುಟುಂಬದಲ್ಲಿ ಸಾಮಾನ್ಯ ವಿಷಯವೇ ಆಗಿತ್ತು ಎನ್ನಬಹುದು. ಅತ್ತೆ ಮಾತು ಮಾತ್ರ ನಡೆಯುತ್ತಿದ್ದು ಗಂಡಸು ವಾದಿಸುವಂತಿರಲಿಲ್ಲ. ಇದರಿಂದ ಎಲ್ಲಾ ಸೊಸೆಯಂದಿರು ಏಕಾಂಗಿಯಾಗಿಯೇ ಅತ್ತೆಯನ್ನು ಎದುರಿಸುವ ಪದ್ಧತಿ ರೂಢಿಯಾಗಿತ್ತು.

ಹಿರಿಸೊಸೆ ಶ್ರೀನಿವಾಸನನ್ನು ಪಡೆದು ವಿಧವೆಯಾಗಿ ಕೂಡು ಕುಟುಂಬದಲ್ಲಿ ತನ್ನ ಮಗನಿಗೆ ಸಿಗಬೇಕಾದ ಆಸ್ತಿ, ಮಗನ ಮದುವೆಯ ಕನಸಿನೊಂದಿಗೆ ಕಾಲನೂಕುತ್ತಾಳೆ. ವಿದ್ಯಾವಂತನಾದ ಮಗ ತನ್ನ ಮನಸ್ಸಿನ ಇಂಗಿತವನ್ನು ಆಲಿಸುವುದಿಲ್ಲ ಎಂಬ ಕೊರಗು ಸದಾ ಅವಳನ್ನು ಕಾಡುತ್ತದೆ. ಇದರಿಂದ ಹತಾಶಳಾಗದೆ ಆಶಾವಾದಿಯಾಗಿಯೇ ಉಳಿಯುತ್ತಾಳೆ. ಆ ಮನೆಯಲ್ಲಿ ಸೊಸೆ ಅತ್ತೆಯ ಎದುರು ಹೀನಾಯವಾದ ಬದುಕಿಗೆ ಅಂಟಿಕೊಂಡೇ ಬದುಕಬೇಕು. ಹೆಗ್ಗಡತಿಯವರು ಸೊಸೆಯಂದಿರನ್ನು ಬಹಳ ಹದ್ದುಬಸ್ತಿನಲ್ಲಿಟ್ಟು ತಮ್ಮ ಉತ್ತಮಿಕೆಯನ್ನು ಮೆರೆಯುತ್ತಾರೆ.

> *"ದಿನನಿತ್ಯ ನೋಡಿದ ವ್ಯಕ್ತಿಗಳ ಗುಣಾವಗುಣಗಳನ್ನು ಸೆರೆಹಿಡಿಯುವುದರಲ್ಲಿ ಹೆಗ್ಗಡತಿಯವರು ನಿಸ್ಸೀಮರು. ಪ್ರತಿಯೊಬ್ಬ ಮನುಷ್ಯನಲ್ಲೂ ಒಂದೊಂದು ತರಹದ ಪ್ರತಿಭೆ ಇರುತ್ತದೆ, ಕೆಲವರ ಪ್ರತಿಭೆ ಬೆಳಕಿಗೆ ಬರುತ್ತದೆ. ಕೆಲವರದ್ದು ಬೆಳಕಿಗೆ ಬರುವುದೇ ಇಲ್ಲ. ಬೆಳಕಿಗೆ ಬಂದವರು ತಾವು ಉಳಿದೆಲ್ಲ ಮನುಷ್ಯರಿಗಿಂತ ದೊಡ್ಡವರು ಎಂದು ತಿಳಿಯುತ್ತಾರೆ. ಬೆಳಕಿಗೆ ಬಾರದವರು ಕೀಳರಿಮೆಯನ್ನು ಬೆಳಸಿಕೊಳ್ಳುತ್ತಾರೆ."*[೧]

ಶೂದ್ರರು ವಿದ್ಯಾಭ್ಯಾಸ ಮಾಡದ ಕಾಲಕ್ಕೆ ವಿದ್ಯಾವಂತನಾಗಿ ವಕೀಲವೃತ್ತಿ ಮಾಡುತ್ತಿದ್ದ ಶ್ರೀನಿವಾಸ ತಾಯಿಯ ಕನಸುಗಳನ್ನು ಚಿಗುರಿಸಿದ್ದ. ಆದರೆ ಬ್ರಾಹ್ಮಣ ಸಮುದಾಯದವರೇ ಮೇಧಾವಿಗಳೆನಿಸಿಕೊಂಡ ಕಾಲ ಶೂದ್ರ ಸಮುದಾಯದ ಶ್ರೀನಿವಾಸನ ವಿದ್ಯೆಗೆ ವೃತ್ತಿಗೆ ಆ ವ್ಯವಸ್ಥೆಯಲ್ಲಿ ಬೆಲೆಯಿಲ್ಲದಾಯಿತು. ವಿದ್ಯಾವಂತನಾದ ಶ್ರೀನಿವಾಸನನ್ನು 'ಅರೆಹುಚ್ಚ' ಎಂದು ಬಿಂಬಿಸಿತು. ವಕೀಲ ವೃತ್ತಿ ಬಿಟ್ಟು ಊರು ಸೇರಿದ ಶ್ರೀನಿವಾಸನನ್ನು ಕಾಡಮ್ಮ ಹೆಗ್ಗಡತಿಯವರು ಪ್ರೀತಿಯಿಂದಲೇ ನೋಡಿಕೊಳ್ಳುತ್ತಾರೆ. ಆಕಸ್ಮಿಕವಾಗಿ ಹನಸ ಭಟ್ಟರ ವಿಧವೆ ಸೊಸೆ ಲಕ್ಷ್ಮಿಯ ಪರಿಚಯವಾಗಿ ಪ್ರೀತಿಗೆ ತಿರುಗುವುದು ಕಾದಂಬರಿಯ ದೊಡ್ಡ ತಿರುವು. ಹನಸದ ಸುಬ್ರಾಯ ಭಟ್ಟರು ಹೆಂಡತಿ ಮೈಲೆ ಕಾಯಿಲೆಯಿಂದ ತೀರಿಕೊಂಡಾಗ ಅಡಿಗೆ ಮಾಡಲಿಕ್ಕೆ ತನ್ನ ಹದಿನೈದು ವರ್ಷದ

---

೧. ವ್ಯಾಮೋಹ – ಬಿಳುಮನೆ ರಾಮದಾಸ್ – ಮಲೆನಾಡು ಪ್ರಕಾಶನ – ಬೆಂಗಳೂರು – ೧೯೯೦ – ಪು. ೯

ಹಿರಿಯ ಮಗನಿಗೆ ಒಂಬತ್ತು ವರ್ಷದ ಲಕ್ಷ್ಮಿಯನ್ನು ಮದುವೆ ಮಾಡುವುದು ಆ ಕಾಲದ ಬಾಲ್ಯವಿವಾಹದಂತಹ ಅನಿಷ್ಟ ಪದ್ಧತಿಯನ್ನು ಎದುರು ನಿಲ್ಲಿಸುತ್ತದೆ. ಮಲೇರಿಯಾದಿಂದ ಮಗ ತೀರಿಕೊಂಡು ಸೊಸೆ ಲಕ್ಷ್ಮಿ ಬಾಲವಿಧವೆಯಾಗಿರುವುದು ಇನ್ನೊಂದು ದುರಂತ.

*"ಲಕ್ಷ್ಮಿಯ ಕೈಬಳೆ ಒಡೆದು ತಲೆಬೋಳಿಸಿ ಕೆಂಪು ಸೀರೆ ಉಡಿಸಿ ಅವಳಿಗೆ ಮುಂಡೆ ಎಂದು ಹಣೆಪಟ್ಟಿ ಹಚ್ಚಲಾಯಿತು. ಶುಭಕಾರ್ಯದಲ್ಲಿ ಅವಳು ಸುಳಿಯದಂತೆ ಅವಳನ್ನು ದೂರ ಇಟ್ಟರು. ಆಮೇಲೆ ಅವಳು ಅಪರೂಪಕ್ಕೊಮ್ಮೆ ಮೇಗರವಳ್ಳಿಯ ಈಶ್ವರ ದೇವಸ್ಥಾನದಲ್ಲಿ ನಡೆಯುವ ಪುರಾಣದ ಕಥೆಗಳನ್ನು ಕೇಳಲಿಕ್ಕೆ ಹೋಗುವಳಷ್ಟೆ. ಎಲ್ಲ ಹೆಂಗಸರಿಗಿಂತ ಹಿಂದೆ ತಲೆಯ ಮೇಲೆ ಸೆರಗು ಹಾಕಿಕೊಂಡು ಕೂರುವಳು ಅವಳು ದೇವರಿಗೆ ಸಮೀಪ ಕೂರಬಾರದಂತೆ. ದೇವರು ಅವಳ ಹಿರಿಯರಿಗೆ ಕಿವಿಮಾತು ಹೇಳಿದ್ದಾರೇನೋ? ಅವಳ ರೂಪು ಅವಳ ಮೈಕಟ್ಟು ಬಹಳ ಮಂದಿಯ ಮಡಿವಂತರ ತಲೆಕೆಡಿಸಿತ್ತು. ಶೂದ್ರರೂ ಹೇಗೂ ಅವಳನ್ನು ಆಸೆ ಪಡುವಂತಿಲ್ಲ. ಅವಳ ಬೇಟೆಗೆ ಅವಕಾಶವಿಲ್ಲದೆ ಮಡಿವಂತರು ಅವಳನ್ನು ನೆನಸಿಕೊಂಡು ಮನಸ್ಸಿನಲ್ಲೇ ಮಂಡಿಗೆ ತಿನ್ನುತ್ತಿದ್ದರು. ಅಪರೂಪಕ್ಕೆ ಎಲ್ಲಿಯಾದರೂ ಅವಳ ಭೇಟಿಯಾದರೆ ಬಹಳ ಹೊತ್ತು ಅವಳನ್ನೇ ಕಿರುಗಣ್ಣಿನಲ್ಲಿ ನೋಡುತ್ತಾ ಕೆಲವರು ಖುಷಿಪಡುತ್ತಿದ್ದರು. ಆಕೆ ಒಬ್ಬಳೇ ಸಿಕ್ಕಾಗಲೋ ಈಶ್ವರ ದೇವಸ್ಥಾನದಲ್ಲಿ ಪ್ರಸಾದ ಹಂಚುವಾಗಲೋ ಅವಳ ಮೇಲಿನ ಆಸೆಯನ್ನು ತಡೆಯಲಿಕ್ಕಾಗದೆ ಕೆಲವರು "ನಮ್ಮ ಸುಬ್ರಾಯನ ಸೊಸೆಯಲ್ವೇನೆ" ಎಂದು ಒಂದಿಷ್ಟು ಪ್ರಸಾದವನ್ನು ಅವಳಿಗೆ ಜಾಸ್ತಿಹಾಕಿ ತೃಪ್ತಿ ಪಡುತ್ತಿದ್ದರು, ಆಕೆಗೆ ಮರುಮದುವೆ, ಮಾಡಲು ಅಥವಾ ಆಕೆಯನ್ನು ಮದುವೆ ಮಾಡಿಕೊಳ್ಳಲು ಯಾರೂ ತಯ್ಯಾರಿರಲಿಲ್ಲ. ಅವಳ ಮೇಲೆ ತಮ್ಮ ಆಸೆ ತೀರಿಸಿಕೊಳ್ಳಲು ಎಲ್ಲ ಮಡಿವಂತರು ತುದಿಗಾಲಲ್ಲಿ ನಿಂತಿದ್ದರು. ಮುದುಕರು ಕೂಡ ಅವಳನ್ನು ಮತ್ತೆ ಮತ್ತೆ ನೋಡುವಂತೆ ಇದ್ದಳು ಅವಳು"*[೧]

ಲಕ್ಷ್ಮಿ ವಿಧವೆಯಾಗುತ್ತಿದ್ದಂತೆ ಸಾರ್ವಜನಿಕ ಬದುಕಿಗೆ ಅಶುಭವಾದಳು. ಆದರೆ ಪುರುಷರ ಕಣ್ಣಿಗೆ ಸುಂದರಿಯಾದಳು. ಲಕ್ಷ್ಮಿಗೆ ಮರುಮದುವೆ ಮಾಡಲಾರದವರು ಅವಳ ದೇಹ ಸೌಂದರ್ಯಕ್ಕೆ ಮಾರುಹೋಗುವುದು ವ್ಯವಸ್ಥೆಯ ವೈರುಧ್ಯ. ಲಕ್ಷ್ಮಿಯನ್ನು ಮದುವೆಯಾಗಲು ಯೋಚಿಸುವ ಶ್ರೀನಿವಾಸನ ಮುಂದೆ ಜಾತಿವ್ಯವಸ್ಥೆ ನಿಲ್ಲುತ್ತದೆ. ಇದರಿಂದ ಸಾಕಷ್ಟು ಕಿರಿಕಿರಿಯನ್ನೂ ಅನುಭವಿಸುತ್ತಾನೆ. ವಿದ್ಯಾವಂತ ಯುವಕನ ಆಲೋಚನೆಗಳು ವೈಚಾರಿಕ ನಿಲುವುಗಳು ಸಂಪ್ರದಾಯಸ್ಥರನ್ನು ತುಳಿದು ನಿಲ್ಲುತ್ತವೆ. ಲಕ್ಷ್ಮಿಯನ್ನು ಮದುವೆಯಾಗಿ ಮುಂದಿನ ಪೀಳಿಗೆಗೆ ದಾರಿಕಾಣಿಸುವ ಆಲೋಚನೆ ಬ್ರಾಹ್ಮಣ ಸಮುದಾಯದ ವಿರೋಧದ ಅಳುಕಿನೊಳಗೇ ಮೂಡುತ್ತದೆ.

---

೧. ವ್ಯಾಮೋಹ – ಬಿಳುಮನೆ ರಾಮದಾಸ್ – ಮಲೆನಾಡು ಪ್ರಕಾಶನ – ಬೆಂಗಳೂರು – ೧೯೯೦ – ಪು. ೯

ಆದರೂ ಹೊಸ ಎಚ್ಚರವನ್ನು ಮೂಡಿಸಬೇಕೆಂದು ಆಶಾವಾದಿಯಾಗುತ್ತಾನೆ. ಅವನೊಳಗೆ ಗಂಡು ಹೆಣ್ಣು ಎಲ್ಲ ಒಂದೇ ಎನ್ನುವ ನಿಲುವು ತಾಳಿ ಜಾತಿಗೆ ವಿಧಾಯ ಹೇಳಬೇಕೆನ್ನುವ ಅದಮ್ಯವಾದ ಆಕಾಂಕ್ಷೆ ಮೊಳೆಯುತ್ತದೆ. ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತನಾಗುತ್ತಾನೆ. ಮಠಗಳು, ಸ್ವಾಮಿಗಳು ಈ ನಿಟ್ಟಿನಲ್ಲಿ ಕೆಲಸ ಮಾಡಲು ಒಪ್ಪದಿರುವುದರ ಬಗ್ಗೆ ಹತಾಶೆಗೊಳ್ಳುವ ಶ್ರೀನಿವಾಸ ತನ್ನ ವಿಧವಾ ವಿವಾಹದ ನಿರ್ಧಾರವನ್ನು ಗಟ್ಟಿಗೊಳಿಸಿಕೊಳ್ಳುತ್ತಾನೆ.

ಜಾತಿವಿರೋಧಿ ವಿಚಾರವಾದಿಯಾಗಿ ತನ್ನ ನಿರ್ಧಾರವನ್ನು ಲಕ್ಷ್ಮಿಗೆ ತಿಳಿಸುತ್ತಾನೆ. ಲಕ್ಷ್ಮಿ ಒಪ್ಪದಿದ್ದಾಗ

> *"ನೀನು ಇದೇ ಕೆಂಪು ಸೀರೆ ಉಟ್ಟುಕೊಂಡು ತಿಂಗಳಿಗೊಮ್ಮೆ ತಲೆ ಬೋಳಿಸಿಕೊಳ್ಳುತ್ತ ಮೇಗರವಳ್ಳಿ ಈಶ್ವರ ದೇವಸ್ಥಾನದ ಚಾವಡೀಲಿ ಹಿಂದಿನ ಸಾಲಿನಲ್ಲಿ ಕುಳಿತು ಪೂಜೆ ಮುಗಿದ ಮೇಲೆ ಕೋಸುಂಬರಿ ತಿಂದುಕೊಂಡು ಹೋಗೋದರಲ್ಲೆ ನಿನ್ನ ಆಯಸ್ಸು ಕಳೀಬೇಕು ಅಂತ ಮಾಡಿದಿಯಾ? ನಿನಗೆ ನನ್ನನ್ನು ಮದುವೆಯಾಗಲಿಕ್ಕೆ ಇಷ್ಟವಿಲ್ಲದಿದ್ದರೂ ಚಿಂತೆ ಇಲ್ಲ. ನಿಮ್ಮ ಜಾತಿಯವರನ್ನಾದರೂ ಒಬ್ಬನ್ನ ಮದುವೆಯಾಗಿ ಸುಖ ಜೀವನ ಸಡೆಸು"*[1]

ಎಂದು ತನ್ನ ನಿರ್ಧಾರವನ್ನು ಮುಂದಿಟ್ಟ ಶ್ರೀನಿವಾಸನಿಗೆ ಲಕ್ಷ್ಮಿಯನ್ನು ಮದುವೆಗೆ ಒಪ್ಪಿಸುವುದು ಸಾಧ್ಯವಾಗುವುದಿಲ್ಲ. ಇಲ್ಲಿ ಮರುಮದುವೆಗೆ ಗಂಡಿನ ಒಪ್ಪಿಗೆ ಇದೆ ಹೆಣ್ಣಿನ ನಿರಾಕರಣೆ ಇದೆ. ಶ್ರೀನಿವಾಸನ ನಿಲುವು ವೈಚಾರಿಕವಾದದ್ದೇ ಆದರೂ ಇದರ ಹಿಂದೆ ಲಕ್ಷ್ಮಿಯ ಯೌವನ ಭರಿತ ಸೌಂದರ್ಯದ ಸೆಳೆತವೂ ಇದೆ. ಏನೇ ಆದರೂ ಬ್ರಾಹ್ಮಣ ಸಮುದಾಯದವರನ್ನು ಎದುರು ಹಾಕಿಕೊಂಡು ಅಂತರ್ ಜಾತಿ ವಿವಾಹವಾಗಿ 'ಸುಖದ ಬದುಕು' ಎಂದು ಬದುಕುವುದು ಅಸಾಧ್ಯದ ಮಾತು. ಒಮ್ಮೆ ಲಕ್ಷ್ಮಿ ಶ್ರೀನಿವಾಸನನ್ನು ಬ್ರಾಹ್ಮಣ ದ್ವೇಷಿ ಎಂದು ಜನ ಆಡಿಕೊಳ್ಳುವುದರ ಬಗ್ಗೆ ಕೇಳಿದಾಗ ಶ್ರೀನಿವಾಸ ನೀಡುವ ಉತ್ತರ ಮಾರ್ಮಿಕವಾಗಿತ್ತು.

> *"ನಿಮ್ಮ ಹಿರಿಯರು ಯಾಕೋ ಗಂಡಸತ್ತ ಹೆಣ್ಣು ಮಕ್ಕಳ ಜೀವನ ಹಾಳು ಮಾಡೋಕೆ ಗಂಡಸತ್ತ ಮೇಲೆ ಅವಳು ತಲೆ ಬೋಳಿಸಿಕೊಳ್ಳಬೇಕು, ಬಳೆಹಾಕಿಕೊಳ್ಳಬಾರದು ಅಂತ ಕಟ್ಟಪ್ಪಣೆ ಮಾಡಿದಾರಲ್ಲ ಅದನ್ನು ನಾನು ಅದೆಲ್ಲ ಹಿಂದಿನ ಕಾಲದ್ದು ಅದೆಲ್ಲ ಈಗ ಬೇಡ ಈಗ ಗಂಡಸತ್ತ ಹೆಣ್ಣು ಮಕ್ಕಳಿಗೆ ಮದುವೆ ಮಾಡಿ. ಅವರು ಕುಂಕುಮ ಇಡುವಂತಾಗಲಿ ಅಂತ ಹೇಳಿ ಬಿಟ್ಟರೆ ನಾನು ಬ್ರಾಹ್ಮಣ ದ್ವೇಷಿಯಾಗಿ ಬಿಡುತ್ತೀನಿ ಅಲ್ವಾ? ನಾನು ಕೂಡ ಮನು, ಶಶಾಂಕ, ಹಾರಿತ, ಯಜ್ಞಾವಲ್ಕರಂತೆ ಅಪ್ಪಣೆ ಮಾಡತೀನಿ. ಹೆಂಡತಿಸತ್ತ ಎಲ್ಲ ಗಂಡಸರೂ ಕಡ್ಡಾಯವಾಗಿ ತಲೆಬೋಳಿಸಿಕೊಳ್ಳಬೇಕು. ಮರುಮದುವೆ ಅವರಿಗೆ ಸಲ್ಲದು. ಅವರು*

---

೧. ವ್ಯಾಮೋಹ – ಬಿಳುಮನೆ ರಾಮದಾಸ್ – ಮಲೆನಾಡು ಪ್ರಕಾಶನ – ಬೆಂಗಳೂರು – ೧೯೯೦ – ಪು. ೧೬೪

*ಚಿನ್ನಾಭರಣ ಹಾಕಬಾರದು, ಯಾವಾಗಲು ಕೆಂಪುಪಂಚೆ, ಕೆಂಪು ಅಂಗಿ ಹಾಕಿಕೊಳ್ಳಬೇಕು. ಶುಭ ಸಮಾರಂಭದಲ್ಲಿ ಅವರು ಭಾಗವಹಿಸಬಾರದು. ಒಂದು ವೇಳೆ ಅವರು ಪರಸ್ತ್ರೀ ಸಂಪರ್ಕಮಾಡಿದರೆ ಅವರಿಗೆ ಬಹಿಷ್ಕಾರ ಹಾಕಿ ಜಾತಿಯಿಂದ ಹೊರಗೆ ಹಾಕಬೇಕು. ಅಂತ ಹೇಳತೀನಿ ಎಲ್ಲಾ ಹಾಗೆ ಮಾಡ್ತಾರ?"*[1]

ಲಕ್ಷ್ಮಿಗೆ ಶ್ರೀನಿವಾಸನ ಮಾತುಗಳು ಬಹಳ ಹಿಡಿಸಿದವು. ತಾನು ಹಿರಿಯರ ಮಾತಿನಂತೆ ತನ್ನ ಬಾಳು ಹಾಳುಮಾಡಿಕೊಂಡ ಬಗ್ಗೆ ಜಿಗುಪ್ಸೆಯಾಯಿತು. ಹನ್ನೆರಡು ವರ್ಷಕ್ಕೆ ಸರಿಯಾಗಿ ಸೀರೆಯುಡುವ, ಹೂಮುಡಿದು ತಲೆಬಾಚಿ, ಜಡೆ ಹೆಣೆದುಕೊಳ್ಳುವ ಸಮಯಕ್ಕೆ ವಿಧವೆಯಾದುದಕ್ಕೆ ಮರುಗುತ್ತಾಳೆ. ಶ್ರೀನಿವಾಸನ ದೇಹ ಸೌಂದರ್ಯ, ಯೌವನವನ್ನು ತನ್ನ ಜಾತಿಯ ಹುಡುಗರಿಗೆ ಹೋಲಿಸಿಕೊಂಡು ಶ್ರೀನಿವಾಸನನ್ನು ಮನಸಾರೆ ಮೆಚ್ಚುತ್ತಾಳೆ. ಆದರೆ ಲಕ್ಷ್ಮಿಯ ಮಾತಿಗೆ ಮನಸ್ಸಿಗೆ ಬೆಲೆಕೊಡುವವರು ಯಾರು ? ಕಲ್ಪನಾ ಲೋಕದ ಸುಖ ವಾಸ್ತವಕ್ಕೆಂದೂ ಇಳಿಯಲಾರದೆ ಹೋಗುತ್ತವೆ. ಶ್ರೀನಿವಾಸ ಮದುವೆ ಪ್ರಸ್ತಾಪ ಮಾಡಿ ಮದುವೆಯಾಗಲು ಒಪ್ಪದ ಲಕ್ಷ್ಮಿಯನ್ನು "ಇಲ್ಲಿಗೆ ನಿನ್ನ ನನ್ನ ಸಂಬಂಧ ಮುಗಿಯಿತು" ಎಂದು ಅವಳ ಬಂಧನವನ್ನು ಬಿಡಿಸಿಕೊಂಡು ಹೊರಟು ಬಂದವನು ಮತ್ತೆ ಲಕ್ಷ್ಮಿಯನ್ನು ನೋಡಿದ್ದು ಲಕ್ಷ್ಮಿಯ ಶವವನ್ನು. ಸಾವು ಅಷ್ಟು ಬೇಗ ಅವಳಿಗೆ ಬಂದಿರುವುದು ಆಶ್ಚರ್ಯವಾದರೂ ಆ ಸಾವಿಗೆ ತನ್ನನ್ನೂ ಹೊಣೆಗಾರನನ್ನಾಗಿ ಮಾಡಿಕೊಳ್ಳುವ ಉದಾರತೆ ಅವನ ಹೃದಯಕ್ಕಿದೆ. ಪರಸ್ಪರ ಪ್ರೀತಿಸಿದ ಹೃದಯಗಳು ನೋವಿಗೆ ಪರಸ್ಪರರನ್ನು ಗುರಿಮಾಡಿಕೊಳ್ಳುವುದು ಮಾನವೀಯ ನೆಲೆಯಲ್ಲಿ ಬಿಂಬಿತವಾಗಿದೆ.

ತಾನು ಹಿಂದಿನ ದಿನ ಭೇಟಿಯಾಗಿ ಮದುವೆ ವಿಚಾರ ಮಾತನಾಡಿದ್ದ ಪೊದೆಯ ಪಕ್ಕದ ನೇರಲು ಮರಕ್ಕೆ ನೇಣುಹಾಕಿಕೊಂಡು ಸಾವನ್ನಪ್ಪಿದ ಲಕ್ಷ್ಮಿ ಸ್ವಜಾತಿಯವರ ಅನುಮಾನದ ಮಾತುಗಳಿಗೆ ಗುರಿಯಾಗಿದ್ದಳು. ವಿಧವೆ ಯೌವನದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವುದು ಅವಳ ಸುತ್ತ ಅನುಮಾನದ ಹುತ್ತ ಬೆಳೆಯುವುದು ಸಹಜವಾದಂತೆ ಲಕ್ಷ್ಮಿಯನ್ನೂ ಬಿಡಲಿಲ್ಲ.

*"ಒಬ್ಬರು ಅವಳು ಬಸುರಾಗಿದ್ದಳು ಎಂದು ಹೇಳಿದರೆ ಮತ್ತೊಬ್ಬರು ಅವಳು ಈಗಾಗಲೇ ಎರಡು ಬಾರಿ ಗರ್ಭ ತೆಗೆಸಿಕೊಂಡಿದ್ದಳು ಎಂದರು. ಇನ್ನೊಬ್ಬರು ಅವಳ ನಡವಳಿಕೆ ಸರಿ ಇರಲಿಲ್ಲ ತನ್ನನ್ನು ಪ್ರೇಮಿಸಲು ಬಂದಿದ್ದಳು. ತಾನು ನಿರಾಕರಿಸಿದೆ ಎಂದು ಹೇಳಿದರು"*[2]

ಹೀಗೆ ಮಾತನಾಡಿಕೊಳ್ಳುತ್ತಿದ್ದು ಆಕೆಯನ್ನು ಅನುಭವಿಸಲು ವಿಫಲರಾದ ಮಡಿವಂತರ ಮಾತುಗಳಿಗೆ ಲಕ್ಷ್ಮಿಯನ್ನು ಶ್ರೀನಿವಾಸ ಅನುಮಾನ ಪಡುವಂತವನಲ್ಲ. ಅವಳ ಸಾವಿಗೆ

---

೧. ವ್ಯಾಮೋಹ – ಬಿಳುಮನೆ ರಾಮದಾಸ್ – ಮಲೆನಾಡು ಪ್ರಕಾಶನ – ಬೆಂಗಳೂರು – ೧೯೯೦ – ಪು. ೧೦೬

೨. ಅದೇ ಪು. ಪು– ೨೩೦

ತಾನೇ ಕಾರಣ, ಹೋಗಿ ನಿಜಾಂಶವನ್ನು ಹೇಳಿಬಿಡಬೇಕೆನಿಸಿತು. ಇದರಿಂದ ಲಕ್ಷ್ಮಿಯ ಮಾವ ತಲೆ ಎತ್ತಿ ಓಡಾಡುವುದು ಕಷ್ಟವಾಗಬಹುದೆಂದು ಸುಮ್ಮನಾಗುತ್ತಾನೆ. ಕೊನೆಗೆ ಲಕ್ಷ್ಮಿಯ ದೇಹ ಪಂಚಭೂತಗಳಲ್ಲಿ ಲೀನವಾಗುವಾಗ ತಾನೂ ಕೊಳ್ಳಿಯನ್ನು ಹಾಕಿ ಅವಳ ಬಾಳಿಗೆ ವಿದಾಯ ಹೇಳುತ್ತಾನೆ.

ಕಾದಂಬರಿಯಲ್ಲಿ ಬರುವ ಬ್ರಾಹ್ಮಣ ಜಾತಿಯ ಲಕ್ಷ್ಮಿ ಹಸಿವು ಬಾಯಾರಿಕೆಯಷ್ಟೇ ಸಹಜವಾದ ದೇಹದ ಬಯಕೆಯನ್ನು ಹತ್ತಿಕ್ಕಲಾರದೆ ಬದುಕುವುದು ಸಹಜವೆನಿಸುತ್ತದೆ. ಆದರೆ ಅಕ್ರಮ ಸಂಬಂಧದ ಕಾರಣ ಆತ್ಮಹತ್ಯೆ ಮಾಡಿಕೊಳ್ಳುವಲ್ಲಿ ಅವಳ ಪಾಲು ಎಷ್ಟು ಎನ್ನುವ ಪ್ರಶ್ನೆ ಸಹಜವಾಗಿ ಮೂಡುತ್ತದೆ. ಲಕ್ಷ್ಮಿಯ ಮನಸ್ಸಿನ ಇಂಗಿತವನ್ನು ತಿಳಿದ ಶ್ರೀನಿವಾಸ ಅವಳಿಗೆ ಬಾಳುಕೊಡಲು ಸಿದ್ಧನಾಗಿದ್ದ ಆದರೆ ಅವಳ ಬದುಕಿನಲ್ಲಿ ಆಟ ಆಡಿದ್ದ ಎಷ್ಟು ಮಂದಿ ಅವಳ ಸಾವಿಗೆ ಕಾರಣರಾಗಿದ್ದರು ಎಂಬ ಪ್ರಶ್ನೆಯನ್ನು ಕಾದಂಬರಿ ಎತ್ತುತ್ತದೆ. ಏನೇ ಆದರೂ ಒಂಟಿ ವಿಧವೆ ಆ ಸಮಾಜದಲ್ಲಿ ತನ್ನನ್ನು ರಕ್ಷಣೆ ಮಾಡಿಕೊಂಡು ಬದುಕುವುದು ಸಾಧ್ಯವೇ ಇರಲಿಲ್ಲ ಎಂದು ಕಾದಂಬರಿ ವಿಶ್ಲೇಷಿಸುತ್ತದೆ. ಶ್ರೀನಿವಾಸನಂತಹ ಶೂದ್ರ ವಿದ್ಯಾವಂತ ಪಾರಂಪರಿಕವಾಗಿ ಬಂದ ವಿಧವಾ ಶೋಷಣೆಯ ಕ್ರಮವನ್ನು ಪ್ರಶ್ನೆಮಾಡುವುದು ಕಾದಂಬರಿಯೊಳಗಿನ ಹೊಸ ಎಚ್ಚರ ಎನಿಸುತ್ತದೆ.

ಅಂತರ್‌ಜಾತಿ ವಿಧವಾ ವಿವಾಹವನ್ನು ಎತ್ತಿ ಹಿಡಿಯುವ ಕಾದಂಬರಿ ಒಪ್ಪಿತ ಮೌಲ್ಯಗಳನ್ನು ವಿರೋಧಿಸುತ್ತಿದೆ. ಸಂಪ್ರದಾಯದ ಹೆಸರಿನಲ್ಲಿ ವಿಧವೆಯರನ್ನು ತುಳಿಯುವ ಕ್ರೂರ ಸಂಸ್ಕೃತಿಯನ್ನು ಪ್ರಶ್ನೆ ಮಾಡುವ ಶ್ರೀನಿವಾಸ ಪಡೆದ ವಿದ್ಯಾಭ್ಯಾಸಕ್ಕೆ ಮಹತ್ವ ಸಿಕ್ಕಂತಾಗಿದೆ. 'ವೈಧವ್ಯ' ಶಾಪವಾಗಿ ಪರಿಣಮಿಸಿದ್ದ ಕಾಲಘಟ್ಟ ಶೂದ್ರ ಸಮುದಾಯದ ವಿಧವೆಯರಾದ ಕಾಡಮ್ಮ ಹೆಗ್ಗಡತಿ, ಚಿನ್ನಮ್ಮ ಮತ್ತು ಲಕ್ಷ್ಮಿಯನ್ನು ಹಿಂಸೆಯಲ್ಲಿ ಬಂದಿಸಿತ್ತು ಎನ್ನುವುದನ್ನು ಮಲೆನಾಡಿನ ಗ್ರಾಮ್ಯಭಾಷೆಯಲ್ಲಿ ಕಟ್ಟಿಕೊಡುವುದು ಕಾದಂಬರಿಯ ವಿಶೇಷವಾಗಿದೆ. ವಿಧವಾ ಅಂತರ್‌ಜಾತಿ ಮರುವಿವಾಹ ಪಿತೃಪ್ರಧಾನ ವ್ಯವಸ್ಥೆಯೊಳಗೂ ನಡೆಯಬಹುದು ಎಂಬ ಸೂಚನೆಯನ್ನು ಕಾದಂಬರಿ ನೀಡುತ್ತಿದೆ. ಆದರೆ ವಿಧವೆ ತನ್ನ ಬಾಳಿನ ವಿಷಮತೆಗಾಗಿ ಆತ್ಮಹತ್ಯೆಯನ್ನು ಆಯ್ಕೆಮಾಡಿಕೊಳ್ಳುವುದು ಪುರುಷ ಪ್ರಧಾನ ಸಂಸ್ಕೃತಿಯ ಹಿನ್ನೆಲೆಯಿಂದಲೇ ಎಂದು ಅಭಿಪ್ರಾಯ ಪಡಬಹುದು. ಕಾದಂಬರಿಯಲ್ಲಿ ವಿಧವಾ ಅಂತರ್ಜಾತಿ ವಿವಾಹದ ಕುರಿತು ಸ್ಥಿತ್ಯಂತರ ಯುಗದಲ್ಲಿ ಪರಿಣಾಮಕಾರಿಯಾಗಿ ಮೂಡಿ ಬಂದಿದೆ.

೮. <u>ಮತಧರ್ಮಗಳ ಹಿನ್ನೆಲೆಯಲ್ಲಿ ವಿಧವಾ ವಿವಾಹದ ಸಂಘರ್ಷ</u>

ಸಮಾಜ ವಿವಿಧ ಪ್ರದೇಶದ, ವಿವಿಧ ಸಮುದಾಯಗಳ ಮಹಿಳೆಯರನ್ನು ಶೋಷಣೆಗೊಳಪಡಿಸಿರುವ ಸಾಧ್ಯತೆಗಳು ವಿಭಿನ್ನವಾಗಿವೆ. ಆದರೆ ಅವಳ ಶೋಷಣೆಯ

ರೀತಿ, ಆಯಾ ಸಮುದಾಯದ ಅಥವಾ ಸಮಾಜದ ಒಳರಚನೆಯನ್ನು ಅವಲಂಬಿಸಿದೆ. ಮಹಿಳೆಯರ ಸ್ಥಿತಿಯನ್ನು ಜಾತಿ, ವರ್ಗ ಶ್ರೇಣಿಗಳ ಆಧಾರದಿಂದ ಅರ್ಥೈಸಿಕೊಳ್ಳುವ ಅಗತ್ಯವಿದೆ. ಶ್ರೇಣಿಯ ಒಂದೊಂದು ಹಂತದಲ್ಲಿ ಆಕೆಯ ಜೀವನಕ್ರಮ, ಜೀವನಧೋರಣೆ ಅವಳು ಪಡೆದ ಸ್ಥಾನವನ್ನು ಬಿಂಬಿಸುತ್ತದೆ. ಈ ಶ್ರೇಣೀಕೃತ ಸಮಾಜ ಅನೇಕ ಅಸಮಾನ ತಳಪಾಯದ ನೆಲೆಗಳ ಮೇಲೆ ನಿಂತಿದೆ. ಅದರಲ್ಲೂ ಲಿಂಗಾಧಾರಿತ ಅಸಮಾನತೆಯು ವರ್ಣಾಧಾರಿತ ಅರ್ಥಾದಾರಿತ ಅಸಮಾನತೆಗಳಿಗಿಂತ ಭಿನ್ನವಾಗಿದೆ. ಇಲ್ಲಿ ಅಮಾನವೀಯ ಕ್ರೌರ್ಯ ನೆಲೆ ನಿಂತಿದೆ ಎಂದು ಭಾವಿಸಿದರೆ ತಪ್ಪಾಗಲಾರದು. ಈ ಹಿನ್ನಲೆಯಲ್ಲಿ ವಿಧವಾ ಅಂತರ್ಜಾತಿ ಮತಗಳ ವಿವಾಹದ ಸಮಸ್ಯೆ ಮತ್ತು ಸವಾಲುಗಳನ್ನು ಹೆಚ್.ನಾಗವೇಣಿರವರ 'ಗಾಂಧಿಬಂದ' ಕಾದಂಬರಿ ಸುಧೀರ್ಘವಾಗಿ ಚರ್ಚಿಸುತ್ತದೆ.

ಕಾದಂಬರಿಯ ಕೇಂದ್ರ ಪಾತ್ರ ದ್ರೌಪದಿ ಒಬ್ಬ ಬ್ರಾಹ್ಮಣ ವಿಧವೆ. ತಾಯಿ ತಂದೆಯ ರಕ್ಷಣೆಯಲ್ಲಿ ಬೆಳೆದು ಬಾಳಿದವಳು. ಸಕೇಶಿಯಾಗುಳಿಯುವ ದ್ರೌಪದಿ, ಬ್ರಾಹ್ಮಣ ಸಂಪ್ರದಾಯದ ಕುಟುಂಬದೊಳಗೆ ಉಳಿದಳು. ಆದರೆ 'ರಕ್ಷಣೆ' ನೀಡುವ 'ಸಾಕುವ' ನೆಪದಲ್ಲಿ ಬ್ರಾಹ್ಮಣ ಕುಟುಂಬ ಅವಳನ್ನು ಅವಲಂಬಿಯಾಗಿ ಬದುಕುವುದಕ್ಕೆ ಪ್ರೇರೇಪಿಸಿದೆ. ಆ ವ್ಯವಸ್ಥೆಗೆ ವಿರುದ್ಧವಾಗಿ ಹೋದಾಗ ತಂದೆತಾಯಿಯ ಆಶ್ರಯವನ್ನು ಕಳೆದುಕೊಳ್ಳುವ ಭಯ ಆವರಿಸಿದಾಗ ತೌರಿನಲ್ಲಿ ಬಂದಿಯಾಗುತ್ತಾಳೆ. ಬ್ರಾಹ್ಮಣ ಸಮುದಾಯದವರ ವಿಪರೀತ ಬಿಗಿ ಕ್ರಮ ದ್ರೌಪದಿಯ ನಡವಳಿಕೆ ಮೇಲೆ ಕಣ್ಣಿಟ್ಟು ತಮ್ಮ ಜಾತಿಯ ಪಾವಿತ್ರ್ಯವನ್ನು ರಕ್ಷಣೆ ಮಾಡುವ ಹೊಣೆಹೊತ್ತಿರುವುದನ್ನು ಕಾದಂಬರಿ ವಿವರಿಸುತ್ತದೆ. ಸಾಮಾಜಿಕ ಮೌಲ್ಯಗಳು ಬದಲಾಗುತ್ತಿವೆ, ಬದಲಾಗಬೇಕು ಎನ್ನುತ್ತಿರುವ ಈ ಕಾಲದಲ್ಲಿ ವಿಧವೆಯರು ಎದುರಿಸುತ್ತಿರುವ ಪರಿಸ್ಥಿತಿ ಹೀನಾಯವಾಗಿಯೇ ಇದೆ. ಆದರೆ ೧೯೨೦–೨೭ರ ಕಾಲ ಘಟ್ಟದ ಕಥಾವಿನ್ಯಾಸವನ್ನು ಚಿತ್ರಿಸುತ್ತಿರುವ ಲೇಖಕಿ ಅಸ್ಪೃಶ್ಯ, ಅಸಮಾನತೆಯ ನೆಲೆಯಲ್ಲಿ ಮಹಿಳೆಯ ಮೇಲೆ ಹೇರುವ ಅಮಾನವೀಯ ಸಾಮಾಜಿಕ ಮೌಲ್ಯಗಳನ್ನು ಪ್ರಶ್ನೆ ಮಾಡುತ್ತಾರೆ. ತಮ್ಮ ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ.

> "ಕೋಮುಜ್ವಾಲೆಯೆಂಬ ಕಿಚ್ಚನ್ನು ಹಚ್ಚುವವರಿಂದಲೇ ಇತಿಹಾಸದ ಸತ್ಯವನ್ನು ಮರೆಮಾಚುವ ಪ್ರಯತ್ನಗಳೂ ನಡೆದಿವೆ. ಅಸ್ಪೃಶ್ಯತೆ ಮತ್ತು ಅಸಮಾನತೆ ಎಂಬ ಆಂತರಿಕ ಕಾರ್ಯಸೂಚಿಯನ್ನು ತಮ್ಮ ಅಂತರಂಗದಲ್ಲಿ ಅಡಿಗಿಸಿಕೊಂಡಿರುವ ನನ್ನ ಧರ್ಮದ ಹಲವು ಶ್ರೇಷ್ಠರು, ನಮ್ಮ ಮೇಲ್ವರ್ಗದಲ್ಲಿ ಧರ್ಮಸಂಕರ ನಡೆದೇ ಇಲ್ಲ ಎಂದು ವಾದಿಸುತ್ತಿರುವ ಈ ಹೊತ್ತಲ್ಲಿ ನನ್ನ ಅಜ್ಜಯ್ಯನ ಮೂಲಗೇಣಿಯ ಧಣಿ ಮಗಳು ಬಾಲವಿಧವೆ ದ್ರೌಪದಿಯೂ ಧರ್ಮಸಂಕರಕ್ಕೆ ಒಳಗಾಗಿ

ಅತ್ಯಂತ ನಿಕೃಷ್ಟವಾಗಿ ಬದುಕಿದ್ದ ಕಥೆಯನ್ನು ನಾನು ಎಂದಾದರೂ ಮರೆಯುವುದುಂಟೆ[೧]

ಎಂದು 'ವೈಧವ್ಯ' ತಂದ ಮೂಕವೇದನೆಯನ್ನು ಕಾದಂಬರಿಯಲ್ಲಿ ಅನಾವರಣಗೊಳಿಸಿದ್ದಾರೆ.

'ವೈಧವ್ಯ' ಶಾಪವಾಗಿ ಪರಿಣಮಿಸಿದ ಕಾಲಘಟ್ಟದಲ್ಲಿ ಸಹಜವಾಗಿಯೋ ಆಕಸ್ಮಿಕವಾಗಿಯೋ ಒದಗಿದ ಪತಿಯ ಮರಣ ಪತ್ನಿಯ ಬಾಳನ್ನು ನಾಶಮಾಡುವುದು ಜೀವವಿರೋಧಿ ಸಾಮಾಜಿಕ ಮೌಲ್ಯ ಎಂದು ಹಲವಾರು ಸಾಹಿತ್ಯ ಕೃತಿಗಳು ಪ್ರತಿಪಾದಿಸುತ್ತಲೇ ಬಂದಿವೆ. 'ವೈಧವ್ಯ' 'ಮರುವಿವಾಹ' 'ಅಂತರ್‌ಜಾತಿ ವಿವಾಹ' ದಂತಹ ಸಾಮಾಜಿಕ ಮೌಲ್ಯವನ್ನು ಈ ಕಾದಂಬರಿ ಚರ್ಚಿಸುತ್ತದೆ. ವಿಧವಾ ಮರುವಿವಾಹದಂತಹ ಮೌಲ್ಯ ವಿಧವೆಯ ಬಾಳಿನಲ್ಲಿ ಬೆಳಕು ನೀಡಬಹುದಾದರೂ ಅನೇಕ ತವಕ ತಲ್ಲಣಗಳನ್ನು ಒಡ್ಡಿದೆ. ಈ ಹಿನ್ನೆಲೆಯಲ್ಲಿ ಈ ಕೃತಿ ಅಧ್ಯಯನ ಯೋಗ್ಯವೆನಿಸಿದೆ. ಇಂದಿಗೂ ವ್ಯವಸ್ಥೆಯಲ್ಲಿ 'ವಿಧವಾವಿವಾಹ' ಸಾಕಷ್ಟು ಗೊಂದಲಗಳನ್ನು ಹುಟ್ಟುಹಾಕಿದೆ. ಪ್ರಧಾನ ವ್ಯವಸ್ಥೆಯ ವೈಧವ್ಯದ ಆಚರಣೆಗಳು ತನ್ನ ಬಿಗಿಹಿಡಿತವನ್ನು ಇನ್ನಷ್ಟು ಗಟ್ಟಿಗೊಳಿಸುತ್ತ ಸಾಗಿವೆ. ಆದರೂ ಸನಾತನ ಮೌಲ್ಯಗಳನ್ನು ವಿರೋಧಿಸಿ ನಿಲ್ಲುವ ಮಾನಸಿಕ ಸ್ಥೈರ್ಯ ವಿಧವೆಯರ ಒಳಗೆ ನಿಧಾನವಾಗಿ ನೆಲೆಯಾಗುತ್ತಿದೆ ಎಂದೂ ಕಾದಂಬರಿ ಗುರುತಿಸುತ್ತಿದೆ. ಬಾಲ್ಯವಿವಾಹವನ್ನು ನಿರಾಕರಿಸುತ್ತ ವಿಧವಾವಿವಾಹಕ್ಕೆ ಹೆಚ್ಚು ಒತ್ತು ನೀಡುವುದರೊಂದಿಗೆ ಸಾಮಾಜಿಕ ಸಮಸ್ಯೆಯನ್ನು ಎತ್ತಿಹಿಡಿಯುತ್ತಾರೆ. 'ವೈಧವ್ಯ' ತಂದ ಅಸಹಾಯಕತೆ, ನೋವು, ಅವಮಾನಗಳನ್ನು ಕಾದಂಬರಿ ಮನಗಾಣಿಸುತ್ತದೆ. ವೈದಿಕ ಸಮಾಜದ ಅವಹೇಳನಕ್ಕೊಳಗಾದ ಬಾಲವಿಧವೆ ದ್ರೌಪದಿ ಮುಗ್ಧತೆಯೊಳಗೆ ಪ್ರಬುದ್ಧತೆಯನ್ನು ಮತ್ತು ಜೀವನ ಪ್ರೀತಿಯನ್ನು ಕಟ್ಟಿಕೊಂಡಿದ್ದಳು ಎನ್ನುವುದೂ ಗಮನಾರ್ಹವಾದ ಅಂಶ.

'ಗಾಂಧಿ ಬಂದ' ಕಾದಂಬರಿ 'ವಿಧವೆ'ಯ ಜೀವನವನ್ನು ದೀರ್ಘವಾಗಿಯೇ ತೆರೆದಿಡುತ್ತದೆ. ಬ್ರಾಹ್ಮಣ ಸಮುದಾಯದ ವಿಧವೆ ಅಂತರ್ಜಾತಿಯ ಪುರುಷನೊಂದಿಗೆ ಮರುವಿವಾಹವಾಗುವ ಘಟನೆ ಕಾದಂಬರಿಯ ಕೇಂದ್ರವಾಗಿದೆ. ವಿಧವೆ ಮರುವಿವಾಹವಾಗುವ ಆಲೋಚನೆ, ಚರ್ಚೆ, ಸಂಘರ್ಷ ಎಲ್ಲವೂ ಕುತೂಹಲಕರವಾಗಿ ಮೂಡಿಬಂದಿದೆ. ಸಾಮಾಜಿಕ ಮೌಲ್ಯಗಳ ಪರಿವರ್ತನೆಯನ್ನು ಕಾದಂಬರಿ ಕಟ್ಟಿಕೊಡುತ್ತದೆ. ಆ ಸಂದರ್ಭದ ಮಾನವ ಸಂಬಂಧಗಳ ಒಳತೋಟಿಯನ್ನು ತೆರೆದಿಡುತ್ತದೆ.

---

೧. ಗಾಂಧಿಬಂದ – ಹೆಚ್.ನಾಗವೇಣಿ–ಲೋಹಿಯಾ ಪ್ರಕಾಶನ – ಬಳ್ಳಾರಿ – ೨೦೦೮ – ಮುನ್ನುಡಿ

*"ಸಾಮಾಜಿಕ ವ್ಯವಸ್ಥೆಯ ಕ್ರೌರ್ಯ, ಹಿಂಸೆ, ಶೋಷಣೆಗಳ ವಿರುದ್ಧ ಬಂಡಾಯದ ದನಿಯೆತ್ತುತ್ತವೆ. ಅಂತೆಯೇ ಶಿಖಂಡಿ ದಾರುವನ್ನು ಮದುವೆಯಾಗುವ ಮಾರಪ್ಪ, ವಿಧವೆ ದ್ರೌಪದಿಗೆ ತಾಳಿಕಟ್ಟುವ ಅದ್ರಾಮರ ಹಿಂದೆ ನಿಂತು ಗಾಂಧಿ ತತ್ವದ ಒತ್ತಡಗಳು ಕೆಲಸಮಾಡುತ್ತವೆ"*[1]

ದ್ರೌಪದಿಗೆ ತಾಳಿಕಟ್ಟಿ ಬದುಕು ನೀಡುವುದೂ ಕೂಡ ಪುರುಷ ಕೇಂದ್ರಿತ ಸಮಾಜದ ಗೆರೆಯ ಒಳಗೇ ಎನ್ನುವುದೂ ಬಹಳ ಮುಖ್ಯವಾಗುತ್ತದೆ. ಇಸ್ಲಾಂಧರ್ಮದ ಅದ್ರಾಮ. ಹಿಂದೂ ಧರ್ಮದ ಬ್ರಾಹ್ಮಣ ಸಮಾಜದ ವಿಧವೆ ದ್ರೌಪದಿ ದಂಪತಿಗಳಾಗುವುದು ವೈಯಕ್ತಿಕ ನೆಲೆಯಲ್ಲಿ ಅಸಾಧ್ಯದ ಮಾತು. ಹಾಗಾಗಿಯೇ ಶೂದ್ರಸಮುದಾಯದವರ ನೇರ ಜವಾಬ್ದಾರಿ ಎದ್ದುಕಾಣುತ್ತದೆ. ವಿಧವೆಯ ಅಂತರ್ಜಾತಿಯ ಮರುವಿವಾಹಕ್ಕೆ ಪ್ರತ್ಯಕ್ಷವಾಗಿಯೊ ಪರೋಕ್ಷವಾಗಿಯೊ ಒಂದು ಸಮುದಾಯದ ಕೃಪಾಪೋಷಣೆ ಅತ್ಯಗತ್ಯ ಎನ್ನುವುದನ್ನು ಕಾದಂಬರಿ ಸೂಚಿಸುತ್ತದೆ. ಬಹುತೇಕ ಕಾದಂಬರಿ, ಕಥೆಗಳಲ್ಲಿ ಅನಾವರಣಗೊಂಡ ವಿಧವೆಯ ತಲ್ಲಣಗಳು ಆತಂಕಗಳು ಸಂಘರ್ಷಗಳು ಈ ಕಾದಂಬರಿಯಲ್ಲೂ ಇವೆ. ಚಿಕ್ಕ ವಯಸ್ಸಿನ ವಿಧವೆಯ ಸುಂದರ ಬಾಳಿಗಾಗಿ ಹಾತೊರೆಯಬೇಕಾದ ಹಿರಿಯರ ಮನಸ್ಸು ಸಾಂಪ್ರದಾಯಿಕ ಕಟ್ಟುಪಾಡುಗಳಿಂದ ಕಠೋರವಾಗುತ್ತದೆ. ಪ್ರೀತಿ ತೋರಬೇಕಾದಲ್ಲಿ ದ್ವೇಷದಿಂದ ನಿಷ್ಠುರವಾಗಿ ವರ್ತಿಸುವುದು ಕಾದಂಬರಿಯಲ್ಲಿ ವ್ಯಕ್ತವಾಗಿದೆ. ಸೀನಪ್ಪ ಹೆಬ್ಬಾರರ ಶ್ರೀಮಂತಿಕೆ ಅವರ ಮನೆತನದ ಬ್ರಾಹ್ಮಣ ಸಮಾಜದ ಘನತೆಯನ್ನು ಎತ್ತಿಹಿಡಿಯುವಲ್ಲಿ ಶ್ರಮಿಸುತ್ತದೆ. ಪತ್ನಿ ರುಕುಣಿಯಮ್ಮ ಸಂಪ್ರದಾಯ ನೀತಿಯಿಂದ ಹೊರಬರಲಾರದೆ ಪಕ್ಕಾಜಾತಿವಾದಿಯಾಗಿ ಮಾನವೀಯತೆಯನ್ನು ಕಳೆದುಕೊಳ್ಳುತ್ತಾಳೆ,

*"ಸುರಗಿಮಠ ತಲೆ ತಲೆಮಾರುಗಳಿಂದ ಉಳಿಸಿ ಬೆಳೆಸಿಕೊಂಡು ಬಂದಿರುವ ಸನಾತನ ಸಂಪ್ರದಾಯ ಕೋಟೆಗೆ ಯಾವನಾದರೂ ಪಡ್ಪೋಸಿ ಬಿಲ ತೋಡುತ್ತಿರಬೇಕಾದರೆ ಅದನ್ನಲ್ಲಿಗೆ ಮಟ್ಟಹಾಕದೆ ಬಿಡಲಾದೀತೆ ? ಆದರೆ ಮಟ್ಟ ಹಾಕುವುದಾದರೂ ಯಾರು ? ಅದು ಹೇಗೆ ? ಎಂಬ ಚಿಂತೆ ಅವರನ್ನು ಕಂಗೆಡಿಸಿ ಬಿಟ್ಟಿತ್ತು"*[2]

ಸನಾತನ ಸಂಪ್ರದಾಯವನ್ನು ಉಳಿಸಿಕೊಳ್ಳುವ ಹೋರಾಟದಲ್ಲಿ ತೊಡಗುವ ಹೆಬ್ಬಾರರು ಅದ್ರಾಮನ ಹುಟ್ಟಡಗಿಸುವ ವಿಚಾರ ಮಂಥನದಲ್ಲಿ ತೊಡಗುತ್ತಾರೆ. ಕುಳ್ಯಾಗುತ್ತಿನ ಶೆಟ್ಟರು ಮತ್ತು ಪೂವಮರಕಾಲ ತಮ್ಮ ಮೇಲೆ ಇಟ್ಟಿರುವ ವಿಶ್ವಾಸದ ಕುರಿತು ಚಿಂತಿಸುವಾಗ ಶೆಟ್ಟರನ್ನು ಎದುರುಹಾಕಿಕೊಳ್ಳುವ ಧೈರ್ಯ ಅವರಿಗಿಲ್ಲದಾಯಿತು. ಕಾರಣ ಅವರಲ್ಲಿದ್ದ ನ್ಯಾಯ ಅನ್ಯಾಯಗಳ ನಿಷ್ಠುರವಾದ ತುಲನೆ. ಬೆಸ್ತರ ಪೂವಮರಕಾಲನ ಬಗ್ಗೆ ಯೋಚಿಸುವಾಗ ಅವನಲ್ಲಿರುವ ಪ್ರಾಮಾಣಿಕತೆ ಹಾಗೂ

---

೧. ಗಾಂಧಿಬಂದ – ಹೆಚ್.ನಾಗವೇಣಿ–ಲೋಹಿಯಾ ಪ್ರಕಾಶನ – ಬಳ್ಳಾರಿ – ೨೦೦೮ – ಪು – ೩೫೯

೨. ಅದೇ ಪು – ಪು – ೩೧

ಸ್ವಾರ್ಥ, ಮೋಸಕ್ಕೆ ತಟ್ಟನೆ ಸಿಡಿದೇಳುವ ದುಡುಕುತನ ಹೆಬ್ಬಾರರಿಗೆ ತೀರಾ ಪ್ರತಿಕೂಲವಾಗಿ ಕಾಣಿಸುತ್ತದೆ. ಅದ್ರಾಮನನ್ನು ಪರಲೋಕಕ್ಕೆ ಅಟ್ಟಲು ಹೇಳಿದರೆ ಮರಕಾಲ ಅನುಸರಿಸುವ ಖಾತ್ರಿ ಹೆಬ್ಬಾರರಿಗಿಲ್ಲ.

> *"ಹೆಬ್ಬಾರರೇ ತೀರಾ ಸ್ವಾರ್ಥಿ ಎಂದೆನಿಸಿದರೆ ಹಿಂದೆ ಮುಂದೆ ನೋಡದೆ 'ಜೈ ಭಜರಂಗಬಲಿ' ಎಂದು ಎತ್ತಿ ಅವರನ್ನೇ ಕಡಲಬಾಯಿಗೆ ಎಸೆಯುವವನೇ ಅಥವಾ ದ್ರೌಪದಿ ಅದ್ರಾಮರಿಗೆ ಬೇಗ ಒಮ್ಮೆ ಓಲಗ ಊದಿಸಿಬಿಡಿ' ಎಂದು ಅಂದರೂ ಅನ್ನಬಹುದು"*[೧]

ಅದ್ರಾಮನ ಅಂತ್ಯಕಾಣಿಸುವ ಹಿಂಸಾಮಾರ್ಗದಿಂದ ಹೊರಬಂದ ಹೆಬ್ಬಾರರು, ಮಾರಪ್ಪನ ಸಹಾಯದಿಂದ ಅದ್ರಾಮನನ್ನು ಮಟ್ಟಹಾಕುವ ಯೋಚನೆಯಿಂದ ಸ್ವಲ್ಪ ನಿರಾಳರಾಗುತ್ತಾರೆ. ಆದರೆ ಹೆಬ್ಬಾರರ ಒಡಲು ಹತ್ತಿ ಉರಿಯುತ್ತಿರುವುದರ ಸೂಚನೆ ಸಿಕ್ಕಿ ದ್ರೌಪದಿ ಭಯಪಡುತ್ತಾಳೆ. ಅದ್ರಾಮನ ಪ್ರೀತಿಯ ಮಾತು ಸಕ್ಕರೆ ನಿದ್ರೆ ಆವರಿಸುವಂತೆ ಮಾಡುತ್ತದೆ. ಹೆಬ್ಬಾರರ ಬಿರುಸಿನ ಧ್ವನಿಯಲ್ಲಿ ಬೆದರಿದ ದ್ರೌಪದಿ

> *"ಮಾನವೀಯತೆ ಇಲ್ಲದ ಧರ್ಮ ಶಾಸ್ತ್ರವನ್ನೇ ಧಿಕ್ಕರಿಸುವ ಮನಸ್ಥಿತಿಯಲ್ಲಿದ್ದ ದ್ರೌಪದಿಗೆ ಆ ನೋಟದ ಸುಡುಬಿಸಿ ಒಂದಿನಿತೂ ತಟ್ಟಲಿಲ್ಲ. ಅಥವಾ ಆಕೆಯಿಂದ ಚದುರಿ ಹೋಗುತ್ತಿರುವ ಹೊಂಗನಸು ಆತ್ಮವಿಶ್ವಾಸ, ಆಕಾಂಕ್ಷೆ ಅನಿಸಿಕೆಗಳನ್ನು ಮತ್ತೆ ಬಿಗಿದಿಟ್ಟುಕೊಳ್ಳುವಂತೆ ಅದ್ರಾಮ ಹನಿಸಿದ ಪ್ರೀತಿಯ ಸಿಂಚನಕ್ಕೋ ಏನೋ ಆ ತೀಕ್ಷ್ಣನೋಟ ತನ್ನ ಗುರಿಮುಟ್ಟದೆ ಅಂತಃಸತ್ವವನ್ನು ಕಳೆದುಕೊಂಡಿರಬೇಕು! ದ್ರೌಪದಿಯ ಕೊರಡಾಗಿರುವ ವ್ಯಕ್ತಿತ್ವ ಮುರಿದು ಬೀಳುತ್ತಿರುವ ಹೆಣ್ತನವನ್ನು ಜೋಪಾನವಾಗಿ ಎತ್ತಿಹಿಡಿದು ಅದಕ್ಕೆ ಇನ್ನಿಲ್ಲದಷ್ಟು ಜೀವಂತಿಕೆ, ದೃಢತೆ, ಬಲನೀಡಿ ಮತ್ತೆ ಚಿಗುರಿಸಬೇಕೆನ್ನುವ ಹಟದಿಂದ ಅದ್ರಾಮ ಸನಾತನ ಪರಂಪರೆಯ ಮೌಲ್ಯಗಳಲ್ಲಿರುವ ಮೌಢ್ಯತೆಯನ್ನು ಕುಟಿಲತೆಯನ್ನು ರಾಕ್ಷಸೀ ಗುಣವನ್ನು ಒಂದೊಂದಾಗಿಯೇ ಬಾಳೆದಿಂಡಿನ ಪದರ ಕಳಚಿದಂತೆ ಪದರಪದರವಾಗಿ ಕಳಚಿಟ್ಟು ಆಕೆಯ ಮನಕ್ಕೊಪ್ಪುವಂತೆ ವಿಶ್ಲೇಷಿಸುತ್ತಾ ಧರ್ಮದ ಒಟ್ಟಾರೆ ಒಳತಿರುಳೇನೆಂಬುದನ್ನು ಆಕೆಯೆದುರು ತೆರೆದಿಡಲು ಪ್ರಯತ್ನಿಸಿದ್ದ."*[೨]

ಇಂತಹ ಸುಧಾರಣೆಯನ್ನು ಅದ್ರಾಮ ಹೆಬ್ಬಾರರ ಮೂಲಕವೇ ಮಾಡಿಸುವ ಯೋಚನೆಯಲ್ಲಿ ಅವರ ಮುಂದೆ ಪ್ರಸ್ಥಾಪ ಮಾಡಿದಾಗ ಹೆಬ್ಬಾರರು "ಯಾರೋ ಒಬ್ಬ ಮುತ್ತಿನ ಬೆಲೆಯ ನಂಬಿಕೆಯನ್ನು ಉಪ್ಪಿಗೆ ಮಾರಿಕೊಂಡನಂತೆ, ಹೋಗು ಹೋಗು. ನಿನ್ನ ಕೆಲ್ಸ ನೋಡ್ಕೋ – ಜಟ್ಕಾ ಹೊಡಿ" – ಎಂದು ಕ್ಯಾಕರಿಸಿ ಉಗಿದು ಬೆನ್ನು ಹಾಕಿದ್ದರು" ಇದೆಲ್ಲಾ ಗಾಂಧಿಯವರ ಕಾರುಬಾರು : ಮುಂಡೆಗಳಿಗೆ ಮದ್ವೆ ಮಾಡಿಸದು, ಮನ್ಸ–ಮಾದಿಗರಿಗೆ ದೇವರ ಕೋಣೆಯಲ್ಲಿ ಮಣೆ ಇಕ್ಕುವುದು,

---

೧. ಗಾಂಧಿಬಂದ – ಹೆಚ್.ನಾಗವೇಣಿ–ಲೋಹಿಯಾ ಪ್ರಕಾಶನ – ಬಳ್ಳಾರಿ – ೨೦೦೮ – ಪು – ೩೩
೨. ಅದೇ ಪು – ಪು – ೪೫

ಕೈಯಲ್ಲಿರುವ ಜಪಮಣಿ ಕಿತ್ತು ಕೈಗೆ ತಕಲಿ ತುರುಕಿಸುದು, ಒಂದೇ ಎರಡೇ ಎಂದು ಗೊಣಗುತ್ತಾ ಹೆಬ್ಬಾರರು ಓಣಿಯ ತಲೆಗೆ ಬಂದವರೇ ಅದ್ರಾಮನಿಗೆ ಕೇಳಿಸುವಂತೆಯೇ "ಇವೆಲ್ಲ ಅರೆ ಬೆಂದ ಅಕ್ಕಿಗಳು, ಅತ್ತ ಅಕ್ಕಿಯೂ ಅಲ್ಲ, ಅನ್ನವೂ ಅಲ್ಲ. ಯಾವುದಕ್ಕೂ ಸಲ್ಲದವು" ಎಂದು ಹೇಳುತ್ತಲೇ ಚಾವಡಿ ಏರಿದ್ದರು."

ಅದ್ರಾಮನ ತಿಳುವಳಿಕೆಯನ್ನು ತೀರಾ ನಿಕೃಷ್ಟವಾಗಿ ಕಾಣುವ ಹೆಬ್ಬಾರರು ತಮ್ಮ ತತ್ವಸಿದ್ಧಾಂತಗಳಿಗೆ ಬದ್ಧರಾಗಿ ಸನಾತನ ಧರ್ಮದ ಪೋಷಣೆಗೆ ಪಣತೊಟ್ಟವರಂತೆ ಕಾಣುತ್ತಾರೆ. ಆದರೆ ದ್ರೌಪದಿಯನ್ನು ಪಡೆಯಲು ಹೊರಟು ಸಫಲನಾಗುವ ಅದ್ರಾಮ ದ್ರೌಪದಿಗೆ ದೇವದೂತನಾಗಿ ಕಾಣುತ್ತಾನೆ. ಹಾಗೂ ಅದ್ರಾಮನ ಪ್ರೀತಿ-ವಾತ್ಸಲ್ಯ ಮಮತೆಯ ಮಳೆಯಲ್ಲಿ ಮಿಂದು ವೈಧವ್ಯದ ಮರೆಯಲ್ಲಿ ಬಚ್ಚಿಟ್ಟ ಅನೇಕಾನೇಕ ಭಾವನೆಗಳನ್ನು ಬಿಚ್ಚಿಕೊಳ್ಳಲಾರಂಭಿಸಿದ್ದಳು.

*"ತನ್ನ ಬದುಕಿನ ಪ್ರತಿಯೊಂದು ಕ್ಷಣವನ್ನು ರೂಪಕವಾಗಿರಿಸುವ ಅದ್ಭುತ ಮಾಂತ್ರಿಕತೆ ಈತನಿಗಿದೆ, ಎಂದು ದ್ರೌಪದಿಗೆ ಅನಿಸಿದ್ದೇ ತಡ, ಅದ್ರಾಮ ಆಕೆಯ ಒಳಲೋಕವನ್ನು ಆಕ್ರಮಿಸಿಕೊಂಡಾಗಿತ್ತು. ಸಾವಿರಾರು ವರ್ಷಗಳಿಂದ ಧರ್ಮವೊಂದರ ಮೌಲ್ಯಗಳನ್ನು ಪೋಷಿಸದೆ, ಬರೀಯ ಮೌಢ್ಯವನ್ನು ಪೋಷಿಸುತ್ತಾ ಬಂದಿರುವ ಬ್ರಾಹ್ಮಣ ಸಮಾಜದ ಒಳಸತ್ಯ ಮತ್ತು ಒಳಸತ್ವವನ್ನು ಮನಮುಟ್ಟುವಂತೆ ಮನವರಿಕೆ ಮಾಡಿ ತನ್ನಲಿರುವ ಮಾನವೀಯತೆ ಎಂಬ ಅದ್ಭುತ ಮಂತ್ರದಿಂದಲೇ ದುಃಖಿತರ ಬದುಕಿನಲ್ಲಿ ನಿರಂತರವಾಗಿ ಸಂವೇದಿಸುತ್ತಾ ಅವರನ್ನು ಜೀವಂತವಾಗಿರಿಸಲು ಪ್ರಯತ್ನಿಸಿದರೆ ಯಾವ ಮನಸ್ಸು ತಾನೆ ಅದಕ್ಕೊಲಿಯದು"*[1]

ಸಂಪೂರ್ಣವಾಗಿ ಅದ್ರಾಮನ ಧ್ಯಾನದಲ್ಲಿ ತೊಡಗಿದ ದ್ರೌಪದಿಗೆ ತಾನು ಇಷ್ಟುದಿನ ಅಪ್ಪಯ್ಯನಿಗಾಗಿ ಅಪ್ಪಯ್ಯನ ಸುರಗಿ ಮಠಕ್ಕಾಗಿ, ಸನಾತನ ಧರ್ಮಶಾಸ್ತ್ರಕ್ಕಾಗಿ ಬದುಕಿದ್ದು. ತಾನು ತನಗಾಗಿ ಬದುಕಲೇ ಇಲ್ಲ ಎನ್ನುವ ಅರಿವಾಗಿ ತಾನು ತನಗಾಗಿ ಬದುಕಬೇಕೆಂದು ನಿರ್ಧಾರಮಾಡುತ್ತಾಳೆ. ಆದರೆ ಮಾನವೀಯತೆಯನ್ನು ಮರೆತರೂ ಸಾಂಪ್ರದಾಯಿಕ ಮೌಲ್ಯಗಳ ಹೆಸರಿನಲ್ಲಿ ಪೋಷಿಸಿಕೊಂಡುಬಂದ ಮೌಢ್ಯವನ್ನು ನಿರಾಕರಿಸಲಾರದ ಹೆಬ್ಬಾರರು ರುಕುಣಿಯಮ್ಮ ಹೇರುವ ಕಠೋರ ನೀತಿಯಿಂದ ಹೊರಬರಲಾರದೆ ಚಡಪಡಿಸುತ್ತಾಳೆ.

ವಿಧವಾ ವಿವಾಹದ ಪ್ರಸ್ಥಾಪವನ್ನು ಮುಂದಿಟ್ಟು ದ್ರೌಪದಿಗೆ ವಿವಾಹ ಮಾಡಿಸುವ ಸಲುವಾಗಿ ಕಾರ್ನಾಡರು ಬ್ರಾಹ್ಮಣ ಸಮಾಜದ ಧುರೀಣ ರಘುನಾಥಯ್ಯನವರು ಮಂಗಳೂರಿನ ಬ್ರಹ್ಮಸಮಾಜದಲ್ಲಿ ತಮ್ಮ ವಿಧವೆ ಮಗಳಿಗೆ ವಿವಾಹ ಮಾಡಿದ ವಿಚಾರವನ್ನು ಹೆಬ್ಬಾರರಿಗೆ ಮನಮುಟ್ಟುವಂತೆ ಹೇಳಬೇಕೆಂದು ಮಾರಪ್ಪನಿಗೆ ಒಪ್ಪಿಸುತ್ತಾರೆ. ಮಾರಪ್ಪನಿಗೆ ಹೆಬ್ಬಾರರನ್ನು ಒಪ್ಪಿಸುವುದು ಅಸಾಧ್ಯ

---

೧. ಗಾಂಧಿಬಂದ – ಹೆಚ್.ನಾಗವೇಣಿ–ಲೋಹಿಯಾ ಪ್ರಕಾಶನ – ಬಳ್ಳಾರಿ – ೨೦೦೮ – ಪು – ೪೬

ವೆನಿಸಿದಾಗ ಅದ್ರಾಮನ ಮೂಲಕ ರುಕುಣಿಯಮ್ಮನಿಗೆ ಹೇಳಿಸಿದರೆ "ಆ ಬ್ರಾಂಮಣ ಮೂರು ಬಿಟ್ಟವ...... ಅವನಿಗ್ಯಾತಕೆ ಬೇರೆ ಕುಟುಂಬದ ಮಾನ ಮರ್ಯಾದೆಯನ್ನು ಲಗಾಡಿ ತೆಗೆಯುವ ಇಚಾರ." ಎಂದು ತನ್ನ ಗಂಡನೊಂದಿಗೆ ಈ ವಿಚಾರ ಪ್ರಸ್ತಾಪಮಾಡದಂತೆ ಎಚ್ಚರ ವಹಿಸುತ್ತಾರೆ. ಆದರೂ ಅದ್ರಾಮ ಹೆಬ್ಬಾರರೊಂದಿಗೆ ಹೇಳಿ ಛೀಮಾರಿ ಹಾಕಿಸಿಕೊಂಡಿದ್ದ. ಹಾಗಾಗಿ ವಿಧವಾ ವಿವಾಹದ ಪ್ರಸ್ಥಾಪ ಹೆಬ್ಬಾರರಿಗೆ ಅಪ್ರಿಯವಾದುದು. ಇದರ ಅರಿವಿದ್ದ ಮಾರಪ್ಪ ವಿಧವಾ ವಿವಾಹದ ವಿಷಯವನ್ನೇ ತಟಸ್ಥಗೊಳಿಸುತ್ತಾನೆ. ಆದರೂ ಹೆಬ್ಬಾರರೇ ಅದ್ರಾಮ ದ್ರೌಪದಿಯನ್ನು ಸಂದಿಸದಂತೆ ಮಾಡುವ ಬಗೆ ಹೇಗೆ ? ಎಂದು ಪ್ರಶ್ನಿಸಿದರೆ

> "ನೀವು ಈ ತೋಡಿನ ನೀರನ್ನು ಕಡಲು ಸೇರದ ಹಾಗೆ ಮಾಡಲು ಯಾವ ಉಪಾಯ ಮಾಡಬಹುದೋ ಅದನ್ನೇ ಮಾಡಿಬಿಡಿ" ಎಂದಿದ್ದ 'ಎತ್ತಣದಾರಿ ಬದಲಿಸಿದರೂ ಈ ತೋಡು ಹರಿಯುವುದು ಅತ್ತಲೇ......... ಆ ಕಡಲಿನತ್ತಲೇ' ಎಂದು ದಾರ್ಶನಿಕನಂತೆ ಮಾತನಾಡಿದ್ದು ಹೆಬ್ಬಾರರಿಗೆ ಇನಿತೂ ಹಿಡಿಸಲಿಲ್ಲ"[೧]

ಹೀಗೆ ದ್ರೌಪದಿಯ ಮರುವಿವಾಹದ ವಿಚಾರ ಇಬ್ಬರಲ್ಲೂ ವಿರುದ್ಧ ದಿಕ್ಕಿನಲ್ಲಿ ಪ್ರವಹಿಸುತ್ತದೆ. ಬ್ರಾಹ್ಮಣ್ಯದ ಬೇಲಿಯನ್ನು 'ಮುರಿದು ಒಳನುಗ್ಗಲು ಪ್ರಯತ್ನಿಸುವ ಅದ್ರಾಮನ ಬಗ್ಗೆ ಮೆಚ್ಚುಗೆಯಾದರೆ, ಹೆಬ್ಬಾರರ ವೀರಾವೇಶದ ದುಡುಕಿನಲ್ಲಿ ದುರಂತವಾಗುವ ಅನುಮಾನವೂ ಮಾರಪ್ಪನಲ್ಲಿ ಮೂಡುತ್ತವೆ. ವಿಧವಾ ವಿವಾಹದಂತಹ ಗಾಂಧಿ ಆಲೋಚನೆಗೆ ಪುಷ್ಠಿ ನೀಡುವ ದ್ರೌಪದಿ ಅದ್ರಾಮನ ವಿವಾಹ ಈ ಕ್ಷಣಕ್ಕೆ ಖುಷಿ ಕೊಟ್ಟರೂ "ಮಸಣದ ಬೆಂಕಿಯಲ್ಲಿ ಚಳಿ ಕಾಯಿಸುವ ಬುದ್ದಿ ಬೇಡ' ಎನ್ನುವ ಒಳವಿವೇಕ ಮಾರಪ್ಪನಲ್ಲಿ ಇದ್ದೇ ಇದೆ. ಹೆಬ್ಬಾರರು ಇನಿತಾದರೂ ಬದಲಾಗಿದ್ದಾರೆಯೇ ಎಂದು ತಿಳಿಯಲು ಒಮ್ಮೆ ದ್ರೌಪದಿಯ ಮರುಮದುವೆ ವಿಚಾರ ತೆಗೆಯುತ್ತಾನೆ. ಇದರಿಂದ ಕುಪಿತರಾದ ಹೆಬ್ಬಾರರು ಬಂಟರ ಅಳಿಯ ಕಟ್ಟು ಸಂತಾನದ ಮನೆತನದಲ್ಲಿ ನಡೆಯಬಹುದಾದ ವಿಚ್ಛೇದನ ಮರುಮದುವೆ ನಮ್ಮ ಸಂಪ್ರದಾಯದಲ್ಲಿ ನಡೆಯಲಾರದು ನಮ್ಮ ಸಂಪ್ರದಾಯದಲ್ಲಿ 'ಒಂದು ಮದುವೆ ಒಂದು ಸಾವು' ಎಂದು ಖಡಾಖಂಡಿತವಾಗಿ ಹೇಳಿದರು. ಅಷ್ಟಕ್ಕೂ ಬಿಡದ ಮಾರಪ್ಪ ಅವರ ಬ್ರಾಹ್ಮಣ್ಯದ ಮೂಲಕ್ಕೆ ಕೊಳ್ಳಿ ಇಡುವಂತಹ ಒಂದೇ ಒಂದು ಪ್ರಶ್ನೆ ಎಸೆಯುತ್ತಾನೆ "ಹೆಬ್ಬಾರರೇ ನಿಮ್ಮ ಶಾಸ್ತ್ರದಲ್ಲಿ ಕಾಮಪರಿಹಾರಕ್ಕಾಗಿ ಯಾವುದಾದರೂ ಮಂತ್ರಗಿಂತ್ರ ಹೇಳಿದ್ದಾರಾ" ಎನ್ನುವ ಪ್ರಶ್ನೆ ಹೆಬ್ಬಾರರ ಅತ್ಮಾವಲೋಕನಕ್ಕೆ ದಾರಿಮಾಡಿಕೊಟ್ಟು, ಅವರನ್ನು ದುರ್ಬಲಗೊಳಿಸುತ್ತದೆ. ಕೊಂಚ ಅಧೀರರಾಗಿ ಹೆಬ್ಬಾರರು ಮತ್ತೆ ಸುಧಾರಿಸಿಕೊಳ್ಳುತ್ತಾರೆ. ಎಂತಹ ಸಂದರ್ಭದಲ್ಲೂ ದ್ರೌಪದಿಯ ಮರು ಮದುವೆ ಮಾಡುವ ನಿರ್ಧಾರವನ್ನು ಹೆಬ್ಬಾರರಿಂದ ನಿರೀಕ್ಷಿಸುವುದು ಸಾಧ್ಯವಾಗುವುದಿಲ್ಲ.

---

೧. ಗಾಂಧಿಬಂದ – ಹೆಚ್.ನಾಗವೇಣಿ–ಲೋಹಿಯಾ ಪ್ರಕಾಶನ – ಬಳ್ಳಾರಿ – ೨೦೦೮ – ಪು – ೮೮

ಮಾರಪ್ಪನ ಮದುವೆ ಪ್ರಸ್ಥಾಪ ಬಂದಾಗ ತಾಯಿ ಸೊರಕ್ಕೆ ಕಾರ್ನಾಡರ ಭಾಷಣದ ಪ್ರಭಾವಕ್ಕೆ ಒಳಗಾಗಿ ಮದುವೆಯಾಗುವ ಇಂಗಿತ ವ್ಯಕ್ತಪಡಿಸಿದಾಗ ಆಕೆಯ ಆಲೋಚನೆಗಳು ಅನೇಕ ವೈರುಧ್ಯಗಳನ್ನು ಒಡ್ಡುತ್ತವೆ. ಒಂದು ಕ್ಷಣ ದ್ರೌಪದಿಯ ಚಿತ್ರಣವೂ ಬಂದು ಹೋಗುತ್ತದೆ. ಇದರಿಂದ ವಿಚಲಿತಳಾಗದೆ ವಿಧವೆಯಾದರೂ ಮದುವೆಯಾಗಿ ಮಗ ಸಂಸಾರ ಮಾಡುವ ಕನಸು ಕಾಣುತ್ತಾಳೆ. ವಯಸ್ಸು ಮೀರಿಹೊಗುತ್ತಿರುವ ಮಗ ಮದುವೆ ವಿಚಾರದಲ್ಲಿ ದೂರಸರಿದಾಗ ಸೊರಕ್ಕೆಯ ಅಂತರಂಗದಲ್ಲಿ ಎದ್ದ ವಿಚಾರವಲ್ಲದೆ, ವಿಧವೆಯ ಮರುವಿವಾಹದ ನೆಲೆಯಲ್ಲಿ ಚಿಂತಿಸುವ ವಿಚಾರವಾದಿಯಾಗಿ ಇಲ್ಲಿ ಸೊರಕ್ಕೆ ಕಂಡು ಬರುತ್ತಿಲ್ಲ.

ದ್ರೌಪದಿಯನ್ನು ಅಪಾರವಾಗಿ ಪ್ರೀತಿಸುವ ಅದ್ರಾಮ ಆಕೆಯನ್ನು ಇನ್ನೆಂದೂ ಕಾಣುವ ಪ್ರಯತ್ನ ಮಾಡದಿರಲು ನಿರ್ಧರಿಸುತ್ತಾನೆ. ಮನೆಯವರ ಹಿಂಸೆಯಿಂದ ತಪ್ಪಿಸುವ ಉದ್ದೇಶವಾದರೂ ಅವನಿಂದ ನೋಡದಿರಲು ಸಾಧ್ಯವಾಗದೆ ಚಡಪಡಿಸುತ್ತಾನೆ. ಕಾರ್ನಾಡರು ಮತ್ತು ಮಾರಪ್ಪ ತನ್ನ ಸಹಾಯಕ್ಕೆ ಬರಬಹುದು ಎಂಬ ದೂರದ ಆಸೆಯೂ ಕಮರುತ್ತದೆ. ಹೆಬ್ಬಾರರ ಭದ್ರವಾದ ಕಾವಲಿನ ಕೋಟೆಯನ್ನು ಬೇಧಿಸಲು ಹೆಗ್ಗಣದಂತೆ ಬಿಲತೋಡುವುದಲ್ಲ. ವೀರಾಧಿವೀರನಂತೆ ಹೋರಾಡುವುದು ಎಂದು ಭಾವಿಸುವ ಅದ್ರಾಮ ದ್ರೌಪದಿಯ ವಿಚಾರದಿಂದ ದೂರವೇ ಸರಿದ. ಇದರಿಂದ ಕುಪಿತಳಾದ ದ್ರೌಪದಿಯ ರೋಷ ರೋದನವೆಲ್ಲ ಎದೆಗೂಡಿನಲ್ಲೆ ಅವಿತುಕೊಂಡುವು. ಹೆಬ್ಬಾರರು ಸಮಾಧಾನದಿಂದ ಮಾರಪ್ಪನ ಗಾಂಧಿತತ್ವಕ್ಕೆ ಮನಸ್ಸಿನಲ್ಲೆ ವಂದನೆಗಳನ್ನು ಸಲ್ಲಿಸಿದರು. ಮಾರಪ್ಪ ಅದ್ರಾಮ ದ್ರೌಪದಿಯ ಪ್ರಣಯದ ಕುರಿತು ಮೇಲುಸ್ತುವಾರಿ ವಹಿಸುವುದು ಪಾಪದ ಕೆಲಸ ಎಂದು ತೀರ್ಮಾನಿಸಿ ತಟಸ್ಥನಾಗುತ್ತಾನೆ.

ಆದರೆ ದ್ರೌಪದಿ ಮತ್ತು ಅದ್ರಾಮರ ಪ್ರಣಯ ಬೂದಿ ಮುಚ್ಚಿದ ಕೆಂಡದಂತೆ ಕಾವು ಕಳೆದುಕೊಳ್ಳದೆ ಎಚ್ಚೆತ್ತಿದೆ. ಕಾಲ ಕೂಡಿ ಬರುವುದಕ್ಕಾಗಿ ಕಾದು ನಿಂತಿದೆ. ಬಹಳ ದಿನಗಳವರೆಗೆ ದ್ರೌಪದಿಯನ್ನು ನೋಡದೆ ಇರಲಾರದ ಅದ್ರಾಮ ಕಂಗೀಲು ಕುಣಿತದ ತಂಡದೊಂದಿಗೆ ಹೆಬ್ಬಾರರ ಮನೆ ಮುಂದೆ ಬಂದು ನಿಂತಾಗ ಅದ್ರಾಮನಿಗೆ ತನ್ನ ಪ್ರೇಯಸಿಯ ಹುಡುಕಾಟ. ಆಕೆಯ ದರ್ಶನದಿಂದ ಮರುಜೀವ ಬಂದಂತಾಗಿ ದ್ರೌಪದಿಗೂ ಅವನ ಗುರುತು ಹತ್ತಿ ಮತ್ತೆ ಎಚ್ಚೆತ್ತ ಪ್ರೀತಿಯ ಮಳೆಯಲ್ಲಿ ಮೀಯುವಂತಾಗುತ್ತದೆ.

ಭೂತದ ಕೋಲಕ್ಕೆ ಅದ್ರಾಮನ ಜಟಕಾ ಬಂದಿರುವ ಸುದ್ದಿ ತಿಳಿದ ಹೆಬ್ಬಾರರು ಅಧೀರರಾದರು. ಹೆಂಡತಿ ರುಕುಣಿಯಮ್ಮನಿಗೆ ವಿಷಯ ತಿಳಿದು ದ್ರೌಪದಿಯನ್ನು ದೇವರ ಕೋಣೆಯಲ್ಲಿ ಬಂಧಿಸಿದರು. ಅವರು ಕೊಟ್ಟ ಕಾರಣ 'ವಿಧವೆಯರು ಅಂಗಳ

ಇಳಿದು ಮಡಿ ಕೆಡಿಸಬಾರದು' ಎನ್ನುವುದು. ಈ ವಿಚಾರ ಅಲ್ಲಿಯ ಬ್ರಾಹ್ಮಣರ ಮೆಚ್ಚುಗೆಗೆ ಪಾತ್ರವಾಗಿತ್ತು. ಇವ್ಯಾವುದರ ಅರಿವು ಇಲ್ಲದ ದ್ರೌಪದಿ ನರಕಯಾತನೆ ಅನುಭವಿಸುತ್ತಿದ್ದರೆ ಇಲ್ಲಿ ಅದ್ರಾಮ ದ್ರೌಪದಿಗಾಗಿ ಅರಸುತ್ತಿದ್ದಾನೆ. ಆದರೆ ಹೆಬ್ಬಾರರು ಸಿಟ್ಟಿನಿಂದ ಕುದಿಯುತ್ತ

> "ಮಗಳು ಸತ್ತರೂ ಸರಿಯೆ ಅವಳಿಗೆ ಇದೇ ರೀತಿಯಲ್ಲಿ ವೆಧವ್ಯದ ತರಬೇತಿ ನೀಡಬೇಕೆಂದು ತೀರ್ಮಾನ ಮಾಡಿಕೊಂಡಿದ್ದಾರೆ, ಸನಾತನ ಶಾಸ್ತ್ರ, ರೀತಿ ನೀತಿ ರಿವಾಜುಗಳನ್ನು ವಿಧವೆ ಹೆ ಣ್ಣೊಂದು ದಿಕ್ಕರಿಸುವುದಾದರೆ ಆಕೆಗೆ ಬದು ಗಿಂತ ಬೇಗ ನೀಡಬೇಕಾದುದು ಮರಣ ಎಂಬುದು ಹೆಬ್ಬಾರರ ನಿಲುವು"[೧]

ಆದರೆ ದ್ರೌಪದಿಯ ನಿಲುವು ಸನಾತನ ಧರ್ಮದ ಪಾಲನೆ ಮಾಡಿ ಬದುಕುವುದಕ್ಕಿಂತ ಮರಣವೇ ಲೇಸು ಎಂದಾಗಿದೆ. ಅದ್ರಾಮನನ್ನು ಮುಗಿಸಿಬಿಡುವ ಸಂಚು ಇರಬಹುದೆಂದು ಅವನಿಗಾಗಿ ದೂರ ಸರಿಯುವ ಪ್ರಯತ್ನ ಮಾಡುತ್ತಾಳೆ. ದ್ರೌಪದಿಗೆ ಸನಾತನ ಮೌಲ್ಯಗಳಿಗಿಂತ ತನ್ನ ಪ್ರೀತಿಯ ಭಾವನೆಗಳು ಮುಖ್ಯ ಎನಿಸುತ್ತವೆ. ಅದ್ರಾಮನ ಕಣ್ಣಿಗೆ ಕೋಲದ ದಿನ ದ್ರೌಪದಿ ಕಾಣಿಸಿಕೊಳ್ಳುವುದು ಅದ್ರಾಮನ ಅದೃಷ್ಟದ ಬಾಗಿಲು ತೆರೆದಂತೆಯೆ. ಆದರೆ ಹೆಬ್ಬಾರರು ರುಕಿಣಿಯಮ್ಮ ದುಃಖದಿಂದ ವ್ಯಗ್ರರಾಗುತ್ತಾರೆ. ದ್ರೌಪದಿಯನ್ನು ಅದ್ರಾಮ ಕೆಲವು ಸಂದರ್ಭಗಳಲ್ಲಿ ಅನಾಯಾಸವಾಗಿ ಬೇಟಿಯಾಗುವುದು ದ್ರೌಪದಿಯ ತಂದೆ ತಾಯಿಗೆ ನುಂಗಲಾರದ ತುತ್ತಾಗಿ ಪರಿಣಮಿಸುತ್ತದೆ.

ದ್ರೌಪದಿಯ ಮಾವ ತಣ್ಣೀರು ಬಾವಿಯ ಕೇಶವ ಶಾನುಭೋಗರ ಮನೆಯಲ್ಲಿ ಅನಂತಪದ್ಮನಾಭ ವ್ರತವನ್ನು ಸಂಭ್ರಮದಿಂದ ಆಚರಿಸುವ ಪದ್ಧತಿ ಇದ್ದು ದ್ರೌಪದಿ ಪಂಜರ ಬಿಟ್ಟ ಗಿಳಿಯಂತೆ ಮಾವನ ಮನೆಗೆ ಮಂಜಪ್ಪನ ಕಮಾನು ಗಾಡಿಯಲ್ಲಿ ಹೆಬ್ಬಾರರೊಂದಿಗೆ ಪಯಣಿಸುತ್ತಾಳೆ. ಎಂಟುದಿನ ಅಲ್ಲೇ ಇರುವ ಅವಕಾಶವೂ ಅವಳಿಗೆ ದೊರೆತು ಸಂತೋಷದಿಂದಲೇ ಹೊರಡುತ್ತಾಳೆ. ತಾನು ಇನ್ನೆಂದೂ ಹುಟ್ಟಿದ ಮನೆಯ ಮೆಟ್ಟಿಲೇರುವುದಿಲ್ಲ ಎಂದು ಆಕೆಗೆ ಹೇಗೆ ತಿಳಿಯಬೇಕು ? ಮದುವೆಯಾಗುವ ಅದ್ರಾಮನಿಗೇ ತಿಳಿಯದ ವಿಚಾರ. ಅವರ ವಿವಾಹದ ಕುರಿತು ಕುಳ್ಳಾಗುತ್ತಿನಲ್ಲಿ ಪಾಂಡು ಶೆಟ್ಟರು ಮತ್ತು ಮಾರಪ್ಪ ಪೂಸೂಡಿಗುತ್ತಿನ ತೌಡಶೆಟ್ಟರನ್ನು ಇಟ್ಟುಕೊಂಡು ಅದ್ರಾಮನ ಆಂತರ್ಯವನ್ನು ತೆರೆಯುವ ಪ್ರಯತ್ನದಲ್ಲಿ ತೊಡಗಿದ್ದಾರೆ. ಅದ್ರಾಮನ ಆಂತರ್ಯ ಅಷ್ಟು ಬೇಗ ತೀರ್ಮಾನ ನೀಡಲು ಒಪ್ಪುತ್ತಿಲ್ಲ. ದ್ರೌಪದಿಯನ್ನು ಕಾಪಾಡುವ ಜವಾಬ್ದಾರಿ ಒಂದೆಡೆಯಾದರೆ, ಜಾತಿ ವಿರೋಧಿಯಾಗಿ ಬದುಕುವ ಒತ್ತಡ ಒಂದು ಕಡೆ, ಇಷ್ಟರ ನಡುವೆ ಪರರ ಚಿಂತನೆಗೆ ಆಸಕ್ತಿ ಇಲ್ಲದ ಕಾಲದಲ್ಲಿ ಅದ್ರಾಮನಿಗೆ ಸಹಕರಿಸುವ ಅವರೆಲ್ಲರ ಆಂತರ್ಯದ ಧ್ವನಿಗೆ ಪ್ರತಿಕ್ರಿಯಿಸುವ ಅನಿವಾರ್ಯತೆಗಳು ಅವನನ್ನು ಹಿಗ್ಗಾಮುಗ್ಗ ದಂಡಿಸುತ್ತವೆ.

---

೧. ಗಾಂಧಿಬಂದ – ಹೆಚ್.ನಾಗವೇಣಿ–ಲೋಹಿಯಾ ಪ್ರಕಾಶನ – ಬಳ್ಳಾರಿ – ೨೦೦೮ – ಪು – ೧೩೮

*"ದ್ರೌಪದಿಯ ಬದುಕಿಗಾಗಿ ಆತ ಎಲ್ಲವನ್ನು ತ್ಯಾಗಮಾಡಲು ಸಿದ್ಧನಿರುವಾಗ ಪ್ರಾಣಭಯವಾಗಲಿ, ಮಾನಭಯವಾಗಲಿ, ಮತಧರ್ಮದ ಭಯವಾಗಲೀ, ಆತನನ್ನು ಕಾಡುತ್ತಿಲ್ಲ. ಯಾವುದೇ ಆರೋಪ ಆಪಾದನೆಗಳನ್ನು ಹೊರಲು ಆತ ಅಂಜುತ್ತಿಲ್ಲ. ಆದರೂ ಆತನ್ನು ಕಂಗೆಡಿಸುತ್ತಿರುವ ಒಳದನಿಯನ್ನು ಆತ ಹೊರಗೆಡವಲಾರ"*[೧]

ಆದರೆ ಕುಳ್ಳಾಗುತ್ತಿನ ಶೆಟ್ಟರ ಸ್ವಾಭಿಮಾನ ಕೆಣಕುವ ಮಾತುಗಳು ಅದ್ರಾಮನ ಒಪ್ಪಿಗೆಯನ್ನು ಪಡೆಯುತ್ತವೆ. ಅಷ್ಟಕ್ಕೂ ಅದ್ರಾಮನ ಪ್ರೀತಿಯ ಬಳ್ಳಿಯನ್ನು ಚಿಗುರಿಸಿ ಪೋಷಿಸಿದವರೇ ಗುತ್ತಿನೊಡೆಯರು. ಗಾಂಧಿಯವರಿಗೆ ಕೊಡಬೇಕಾದ ಗುತ್ತಿನೊಡೆಯರ ಬಂಗಾರದ ಒಡವೆಗಳನ್ನು ಸ್ವಾಹಮಾಡಿದರೆಂಬ ಕೋಪ ಸುರಗಿ ಮಠದ ಘನತೆ ಗೌರವ ನಾಶಮಾಡಿ ಬ್ರಾಹ್ಮಣ ಸಮುದಾಯದ ಸನಾತನ ಬ್ರಾಹ್ಮಣ ಧರ್ಮ-ಸಂಪ್ರದಾಯದ ಕೋಟೆಯನ್ನು ಭೇದಿಸಿರುವುದು. ದ್ರೌಪದಿ-ಅದ್ರಾಮರನ್ನು ಅವರ ದ್ವೇಷ ಸಾಧನೆಗೆ ದಾಳವಾಗಿ ಬಳಸಿಕೊಂಡಿರುವುದು. ಅಂತೆಯೇ ಇಬ್ಬರ ಬದುಕಿಗೆ ದಾರಿದೀಪವಾಗುವುದೂ ಗುತ್ತಿನ ಶೆಟ್ಟರು ಎಂದರೆ ತಪ್ಪಾಗುವುದಿಲ್ಲ.

ಅದ್ರಾಮ-ದ್ರೌಪದಿ ಒಬ್ಬರನೊಬ್ಬರು ವರಿಸಿರುವ ಸುದ್ದಿ ಹೆಬ್ಬಾರರು ಮಗಳನ್ನು ಕರೆತರಲು ಹೋದಾಗಲೇ ಜನರ ಬಾಯಿಗೆ ಬಿದ್ದಿರುವುದು.

"ಸುದ್ದಿತಿಳಿದೊಡನೆ, ಬ್ರಾಹ್ಮಣ ಜುಟ್ಟುಗಳೆಲ್ಲ ಸುರಗಿ ಮ 'ದಲ್ಲಿ ಜಮಾಯಿಸಿದ್ದವು. ಆಕೆ ಬ್ರಾಹ್ಮಣ್ಯವನ್ನು ಬಿಟ್ಟರೂ ಬ್ರಾಹ್ಮಣರು ಆಕೆಯನ್ನು ಬಿಡಬೇಕಲ್ಲವೇ? ಸನಾತನ ಧರ್ಮ ಶಾಸ್ತ್ರವನ್ನು ಮೆ ್ಟ ನಿಲ್ಲುವುದು, ಬ್ರಾಹ್ಮಣ್ಯದ ಸಂಪ್ರದಾಯ ಕಟ್ಟು ಕಟ್ಟಳೆಗಳನ್ನೆಲ್ಲ ಹೊಸ ಹಾಕುವುದೆಂದರೆ ಅದೇನು ಸಹಿಸುವ ವಿಚಾರವೇ? ಬ್ರಾಹ್ಮಣರು ಇನ್ನೂ ಹಲವಾರು ಶತಮಾನಗಳವರೆಗೂ ತಾವು ಜಾತಿ ಶ್ರೇಷ್ಠರು, ನೀತಿ ಶ್ರೇಷ್ಠರು ಎನ್ನುತ್ತ ಕೆಳಜಾತಿಯವರೆದುರು ಜುಟ್ಟು ಹಾರಿಸುತ್ತ ತಲೆ ಎತ್ತಿ ಡಾಡಬೇಡವೆ? ನೀತಿ ಬೋಧನೆ ಮಾಡಬೇಡವೇ? ಹೀಗಾದರೆ ಹೇಗೆ? ಇದಕ್ಕೇನು ಪರಿಹಾರ? ಆತನಿಗೆ ಹೊಡೆತವೇ ಬಡಿತವೇ ? ಆಕೆಯನ್ನು ಮರಳಿ ಎಳೆತರುವುದೇ? ಅ 'ವಾ 'ಟಶ್ರಾದ್ಧ ಮಾಡಿ ಪಿಂಡ ಬಿಡಿಸಿ ಕುಟುಂಬ ಬಳ್ಳಿಯಿಂದ ಕಳಚಿದವಳೆಂದು ನೆಮ್ಮದಿಯ ನಿಟ್ಟುಸಿರು ಬಿಡುವುದೇ?"[೨]

ಇನ್ನೂ ಕೆಲವರು ತಲೆಗೊಂದರಂತೆ ಪರಿಹಾರ ಸೂಚಿಸಿದರೆ, ಕೆಲವರು ನರಕದಲ್ಲಿ ಬಿದ್ದು ಸಾಯಲಿ ಎಂದು ಶಪಿಸಿದರು. ಏನೇ ಚರ್ಚೆಗಳು ನಡೆದರೂ ದ್ರೌಪದಿ ಪ್ರಿಯತಮನ ಸನಿಹದಲ್ಲಿ ನೆಮ್ಮದಿಯ ನಿಟ್ಟುಸಿರು ಬಿಟ್ಟಿದ್ದಾಳೆ. ಒಲಿದ ಜೀವಗಳನ್ನು ಒಂದು ಮಾಡಿದ ಸಮಾಧಾನದ ಭಾವ ಗುತ್ತಿನಶೆಟ್ಟರಿಗಾದರೆ ಮಗಳನ್ನು ಕಳೆದುಕೊಂಡ ದುಃಖ ಹತಾಷೆ ಹೆಬ್ಬಾರರಿಗೆ. ರುಕುಣಿಯಮ್ಮನನ್ನು ಸಮಾಧಾನ ಪಡಿಸಲು ಶಾನುಭೋಗರು ಆಡುವ ಮಾತುಗಳು

---

೧. ಗಾಂಧಿಬಂದ - ಹೆಚ್.ನಾಗವೇಣಿ-ಲೋಹಿಯಾ ಪ್ರಕಾಶನ - ಬಳ್ಳಾರಿ - ೨೦೦೮ - ಪು - ೨೯೩
೨. ಅದೇ ಪು. ಪು-೨೯೯

"ಆ ಹುಡುಗಿಯ ತುಂ ದ ಯೌವನಕ್ಕೆ ನಮ್ಮ ಸಂಪ್ರದಾಯ ರೀತಿರಿವಾಜುಗಳ ಅಂಕುಶ ಹಾ ದ್ದೇ ಪರಮ ತಪ್ಪು ದೇಹ ಮನಸ್ಸಿನ ಹಂಬಲ ಬಯಕೆಗಳನ್ನು ಅದುಮಿಡುವ ಶ್ತ ಆ ವಯಸ್ಸಿಗೆ ಇಲ್ಲ. ಆ ದೇಹಕ್ಕೂ ಇಲ್ಲ. ಇದು ಆಕೆಯ ಯೌವನದ ಕುರುಡಲ್ಲ ಮನಸ್ಸು ಸಹಜವಾದ ಬಯಕೆ. ಆಕೆಯನ್ನು ವೆ ಧವ್ಯ ಮುಚ್ಚಿಕೊಂಡಾಗಲೇ ನಾನು ಹೇಳಿದ್ದೆ – ಆಕೆಗೆ ಇನ್ನೊಂದು ಮದುವೆ ಮಾಡುವಾಂತ. ಹೆಬ್ಬಾರರೇ ಮುಖ ತಿರುಗಿಸಿದರು. ಈಗ ಹ್ಕ ನೆಲೆ ಹುಡು ಪಂಜರದಿಂದ ಕಾಡಿಗೆ ಹಾರಿ ಹೋಗಿದೆ. ಹೋದಮೇಲೆ ಯಾರು ಏನು ಮಾಡಲಾದೀತು? ಮನಸ್ಸು ದೇಹದ ಆಸೆಗಿಂತ ಧರ್ಮ ಸಂಪ್ರದಾಯ ದೊಡ್ಡದಲ್ಲ. ಎಂದು ಆಕೆಗನಿಸಿರಬೇಕು. ಅದು ತಪ್ಪಲ್ಲ"[೧]

ಧರ್ಮಸೂಕ್ಷ್ಮದ ಮಾತನಾಡಬೇಕಿದ್ದ ಶಾನುಭೋಗರು ನಿಷ್ಠುರವಾಗಿ ಧರ್ಮವಿರೋಧಿ ಮಾತನಾಡಿದ್ದು ಯಾರಿಗೂ ಹಿಡಿಸುವುದಿಲ್ಲ. ಅಲ್ಲಿರುವ ಬ್ರಾಹ್ಮಣರಿಗೆ ತಾವು ಬ್ರಾಹ್ಮಣ್ಯನ್ನು ಮರೆತಿರುವುದು ಪುರಾತನ ಸಂಪ್ರದಾಯವನ್ನು ಅಲಕ್ಷಿಸಿರುವುದು ಒಳದನಿಗೆ ಕೇಳಿಸುತ್ತದೆ. ಅದನ್ನು ಮುಚ್ಚಿಟ್ಟು ನಡೆದ ಘಟನೆಯ ಸುತ್ತ ಮನಸ್ಸನ್ನು ಹರಿಯ ಬಿಡುತ್ತಾರೆ. ಹೆಬ್ಬಾರರ ಸಿಟ್ಟು ದ್ರೌಪದಿ ಪರಜಾತಿಯವನೊಂದಿಗೆ ಓಡಿಹೋದದ್ದನ್ನು ಮುಚ್ಚಿಹಾಕುವಷ್ಟು ವ್ಯಗ್ರವಾಗಿ ಶಾನುಭೋಗರನ್ನು ದೂರಇಟ್ಟು ಉಳಿದ ಸ್ವಜಾತಿಯವರೊಂದಿಗೆ ಮಾತುಕತೆಗೆ ತೊಡಗುತ್ತಾರೆ. ಎಲ್ಲರ ನಿರ್ಧಾರವೂ ಏಕಮುಖವಾಗಿದ್ದು ಅದ್ರಾಮನನ್ನು ವಾಮಮಾರ್ಗದಿಂದ ನಾಶಮಾಡುವುದೊಂದೇ.

"ಕುತಂತ್ರ ಕುಚೇಷ್ಟೆಗಳಿಂದ ಪರಂಪರಾಗತ ಶೋಷಕರಾಗಿರುವ ಈ ಧರ್ಮಪಾಲಕರಿಗೆ ವೆ ರಿಯೊಡನೆ ನೇರ ಸೆಣಸಾಡಿ ಸೇಡುತೀರಿಸಿಕೊಳ್ಳುವ ಅ 'ವಾ ಸದೆಬಡಿವ ಸಾಮ ್ಯ ಹು ್ಪನಿಂದಲೇ ಬಂದಿಲ್ಲ. ಇಡೀಯ ನಾಲ್ಕೂರನ್ನು ಬೌದ್ಧಿಕವಾಗಿ ದಮನಗೊಳಿಸಲು ತೋಳ್ಬಲಕ್ಕಾಗಿ ಎದುರು ನೋಡುವುದು ಶೂದ್ರರತ್ತ. ಆದರೆ ಇದೀಗ ಶೂದ್ರರ ದಂಡೆಲ್ಲ ಆ ಕಡೆ ಇದೆ. ಅವರೇ ನಿಂತು ಮದುವೆ ನಡೆಸಿಕೊ ್ಪದ್ದಾರೆ"[೨]

ಎಂದುಕೊಳ್ಳುತ್ತ ಮಾಟಮಂತ್ರದ ಮೂಲಕ ನಾಶಮಾಡುವ ಮಾತು ಬಿದ್ದುಹೋಗಿ ಅದ್ರಾಮ-ದ್ರೌಪದಿಯರನ್ನು ಏನೇನು ಮಾಡಲಾಗದೆ ಅವರಿಗೆ ಹಿಡಿಶಾಪ ಹಾಕಿ ಸುಮ್ಮನಾಗಬೇಕಾಯಿತು. ಬ್ರಾಹ್ಮಣ ಸಮುದಾಯದವರು ನಡೆಸುತ್ತಿದ್ದ ಬೌದ್ಧಿಕ ಹಾಗೂ ಆರ್ಥಿಕ ಶೋಷಣೆಗೆ ಸಿಲುಕದ ಶೂದ್ರವರ್ಗದವರು ತಮ್ಮ ಪ್ರತಾಪವನ್ನು ಮೆರೆಯುತ್ತಾರೆ. ಹೆಬ್ಬಾರರು ಅನಿವಾರ್ಯವಾಗಿ ಮುಖಭಂಗವಾದರೂ ಒಪ್ಪಿಕೊಳ್ಳಲೇ ಬೇಕಾಯಿತು.

ಆದರೆ ಅದ್ರಾಮನ ತಂದೆ ಮ್ಯೊದಿನ್ ಬ್ಯಾರಿಯವರು ಮಗನ ಕೃತ್ಯವನ್ನು ಖಂಡಿಸುವುದು ಸಮಾಜ ಒಪ್ಪಿಕೊಂಡ ಧಾರ್ಮಿಕ ನೀತಿಯನ್ನು ವಿರೋಧಿಸಿರುವುದಕ್ಕೆ

೧. ಗಾಂಧಿಬಂದ – ಹೆಚ್.ನಾಗವೇಣಿ–ಲೋಹಿಯಾ ಪ್ರಕಾಶನ – ಬಳ್ಳಾರಿ – ೨೦೦೮ – ಪು – ೩೦೧
೨. ಅದೇ ಪು–ಪು–೩೦೨

ಎನಿಸುತ್ತದೆ. ಅದ್ರಾಮನ ತಾಯಿ ಅಕ್ಕಪಕ್ಕದವರನ್ನು ಎದುರಿಸುವುದು ಕಷ್ಟವೆಂದು ತಿಳಿದು ಗೋಳಾಡುತ್ತಾಳೆ. ವಿಧವೆಯನ್ನು ಮದುವೆಯಾದ ವಿಚಾರಕ್ಕಿಂತಲೂ ಬಹಳ ಮುಖ್ಯವಾಗಿ ಕಾಣುವುದು ಅನ್ಯ ಧರ್ಮದ ಹೆಣ್ಣು ಎನ್ನುವುದೇ ಆಗಿದೆ. ಅದ್ರಾಮನ ತಾಯಿ "ಆತನಿಗೆ ಬೇರೆ ಯಾವ ಹುಡುಗಿಯೂ ಸಿಗಲಿಲ್ಲವೇ? ಆ ಬ್ರಾಹ್ಮಣ ಜೋವೇ ಬೇಕಾಗಿತ್ತೇ? ಬ್ರಾಹ್ಮಣರ ಶಾಪ ಏಳೇಳು ಜನ್ಮಕ್ಕೂ ದಾಟಿ ಬರುವಂತದ್ದು" ಎಂದು ಪ್ರಲಾಪಿಸುತ್ತಾಳೆ. ಅವರಿಗೆ ಎರಡೂ ಧರ್ಮದ ಬಗ್ಗೆ ಗೌರವ ಇದ್ದು ಧಾರ್ಮಿಕ ನೀತಿಯನ್ನು ವಿರೋಧಿಸಲಾರರು ಪಾಪ ಬೀತಿಯೂ ಕಾಡುತ್ತದೆ. ಮಸೀದಿಯ ಜಾಮಾತಿನವರು ವಿಧವೆ, ಬ್ರಾಹ್ಮಣ ಜಾತಿಯವಳು ಎಂದು ವಿರೋಧಿಸದೆ ಇಸ್ಲಾಂ ಧರ್ಮಕ್ಕೆ ಸೇರಿಕೊಳ್ಳುವುದರ ಬಗ್ಗೆ ಚಿಂತಿಸುವುದು ಅದ್ರಾಮನ ತಂದೆಯನ್ನು ಇಕ್ಕಟ್ಟಿನಲ್ಲಿ ಸಿಲುಕಿಸುತ್ತದೆ. ದ್ರೌಪದಿಯನ್ನು ಇಸ್ಲಾಂ ಧರ್ಮಕ್ಕೆ ಸೇರಿಸಿಕೊಳ್ಳುವ ಪ್ರಯತ್ನ ನಡೆದಾಗ ಅದ್ರಾಮ "ಪ್ರೀತಿಗೆ ಜಾತಿಯಿಲ್ಲ ಮುಕ್ರಿಸ್ಯಾಬರೆ, ಸಾವಿಗೂ ಜಾತಿ ಇಲ್ಲ" ಎಂದು ತಿರಸ್ಕರಿಸುತ್ತಾನೆ. ಇಲ್ಲಿಗೆ ಇಸ್ಲಾಂ ಧರ್ಮದ ಮತಾಂತರ ಅದ್ರಾಮನು ಮಸೀದಿಗೆ ಬಂದು ನಮಾಜು ಮಾಡುವ ಪ್ರಕ್ರಿಯೆಗಳು ಅಂತ್ಯವಾಗುತ್ತವೆ. ಆದರೆ ಹೆಬ್ಬಾರರ ಸಂಪ್ರದಾಯ ಬದ್ಧ ಮನಸ್ಸು ಬ್ರಾಹ್ಮಣ ಸಮುದಾಯದವರ ಮನಸ್ಥಿತಿ ಬದಲಾಗುವುದಿಲ್ಲ.

### ೯. <u>ವಿಧವಾ ವಿವಾಹ – ಮಹಿಳಾ ಬದುಕಿನ ತಲ್ಲಣಗಳು</u>

ಏನೆಲ್ಲ ತಲ್ಲಣಗಳನ್ನು ಎಬ್ಬಿಸಿದ ವಿಧವಾ ಮರುವಿವಾಹ ಸಮಾಧಾನದ ನಿಟ್ಟುಸಿರನ್ನು ಬಿಡುವ ವೇಳೆಗೆ ದ್ರೌಪದಿಗೆ ಮತ್ತೆ ಒದಗಿ ಬರುವ ವೈಧವ್ಯ ಹತಾಷೆಯನ್ನುಂಟು ಮಾಡುತ್ತದೆ. ಅದ್ರಾಮನ ಸಾವು ಬ್ರಾಹ್ಮಣ ಸಮುದಾಯದವರಿಗೆ ಸಂಭ್ರಮವಾದರೆ ಗುತ್ತಿನ ಮನೆಯವರಿಗೆ ಸುತ್ತಲಿನ ಶೂದ್ರಸಮುದಾಯದವರಿಗೆ ಅತೀವನೋವಿಗೆ ಕಾರಣವಾಗುತ್ತದೆ. ದ್ರೌಪದಿ ನರಹರಿ ತೀರಿಕೊಂಡಾಗ ಕೇಶಮುಂಡನಕ್ಕೆ ವಿರೋಧ ಮಾಡಿದವಳು ಅದ್ರಾಮನ ಸಾವಿಗೆ ಸ್ವ ಇಚ್ಛೆಯಿಂದ ಬೋಳು ಹೊದ್ದು ಕೊಳ್ಳುವುದು ಅವಳಿಗಾದ ನೋವಿಗೆ ಸಾಕ್ಷಿಯಾಗಿದೆ.

ಮಗಳು ದ್ರೌಪದಿಯ ಬಾಳು ಮತ್ತೆ ಅರಳಿದಾಗ ಒಳಮನಸ್ಸಿಗಾದರೂ ಸಂತೋಷದ ಅನುಭವ ಆಗಬೇಕಾಗಿತ್ತು. ಅದೂ ಸಾಧ್ಯವಾಗದ ಬ್ರಾಹ್ಮಣ ಸಂಪ್ರದಾಯದ ಹೆಬ್ಬಾರರು ರುಕುಣಿಯಮ್ಮ ಕ್ರೂರಿಗಳಾಗಿ ಕಾಣುತ್ತಾರೆ. ಅದ್ರಾಮನ ತಂದೆ ತಾಯಿ ಇವರಿಗಿಂತ ಎತ್ತರದಲ್ಲಿ ನಿಲ್ಲುತ್ತಾರೆ. ಮಗಳ ಸುಖ ಮತ್ತು ಪ್ರಾಣಕ್ಕಿಂತ ಸನಾತನ ಸಂಪ್ರದಾಯಗಳೇ ಮಿಗಿಲಾಗಿರುವುದನ್ನು ಲೇಖಕಿ ಕಾದಂಬರಿಯಲ್ಲಿ ದೀರ್ಘವಾಗಿ ಚರ್ಚಿಸುತ್ತಾರೆ. ಮಾನವೀಯತೆ ಅಂಚಿಗೆ ಸರಿಯುವ ಸಂದರ್ಭಗಳನ್ನು

ಎಳೆಎಳೆಯಾಗಿ ತೆರೆದಿಡುವ ಕಾದಂಬರಿಯಲ್ಲಿ ಉನ್ನತ ಜಾತಿ ಧರ್ಮವನ್ನು ಅವಲಂಬಿಸಿರುವ ಕುಟುಂಬದ ಕ್ರೌರ್ಯ ಅನಾವರಣಗೊಂಡಿದೆ.

ಈ ಕಾದಂಬರಿಯ ವಿಧವಾವಿವಾಹ ಸಂಪ್ರದಾಯವಾದಿಗಳನ್ನು ವಿರೋಧಿಸಿ ನಡೆಯುವುದಿಲ್ಲ. ಗುತ್ತಿನ ಶೆಟ್ಟರ ದ್ವೇಷ ಸೇಡಾಗಿ ಪರಿವರ್ತನೆಯಾಗಿ ಪ್ರೀತಿಸಿದ ಅದ್ರಾಮ. ದ್ರೌಪದಿ ದಂಪತಿಗಳಾಗಲು ಸಾಧ್ಯವಾಗುವುದು ವ್ಯವಸ್ಥೆಯ ಸ್ವರೂಪವಾಗಿ ಕಾಣುತ್ತದೆ. ಬ್ರಾಹ್ಮಣ ಸಮಾಜ ಸಂಪ್ರದಾಯದ ಹೆಸರಿನಲ್ಲಿ ಅಸಾಹಾಯಕ ಹೆಣ್ಣಿಗೆ ನೀಡುವ ಹಿಂಸೆ ಅಮಾನವೀಯವಾಗಿ ಕಾದಂಬರಿಯಲ್ಲಿ ಚಿತ್ರಣಗೊಂಡಿದೆ. ಸನಾತನ ಸಂಪ್ರದಾಯದ ಮೌಲ್ಯಗಳು ತೀರಾ ಕಠಿಣವಾದಂತೆ ವಿಧವಾ ಮಹಿಳೆಯರ ಮನಸ್ಸು ದುರ್ಬಲವಾಗುವ ಘಟನೆಗಳು ಸ್ವಾತಂತ್ರ್ಯ ಪೂರ್ವದ ಕಥನ ಸಾಹಿತ್ಯ ಕೃತಿಗಳು ಅನಾವರಣಗೊಳಿಸಿವೆ. ಕೆಲವು ಸಂದರ್ಭಗಳಲ್ಲಿ ಸಂಪ್ರದಾಯದ ಕೋಟೆಯಿಂದ ಹೊರಬರಲು ಅನೈತಿಕ ಮಾರ್ಗಹಿಡಿದು ನಾಶಹೊಂದಿರುವುದನ್ನೂ ಕಥೆ ಕಾದಂಬರಿಗಳು ಕಟ್ಟಿಕೊಟ್ಟಿವೆ.

ದ್ರೌಪದಿಗೆ ವಿಧಿಸಿದ ಕಟ್ಟುಪಾಡುಗಳು ಅವಳನ್ನು ಅದ್ರಾಮನೊಂದಿಗೆ ಓಡಿಹೋಗಿ ಸಂಸಾರ ಮಾಡಲು ಪ್ರೇರೇಪಿಸುತ್ತವೆ. ದ್ರೌಪದಿಗೆ ಇದರಿಂದ ಯಾವ ಪಾಪ ಬೀತಿಯೂ ಕಾಡುವುದಿಲ್ಲ. ಅವಳ ವರ್ತನೆ ಎಂದಿಗೂ ಅಸಹಜ ಎನಿಸುವುದಿಲ್ಲ. ತನ್ನವರನ್ನು ಬಿಟ್ಟು ಹೋಗುವಾಗಲೂ ಅದ್ರಾಮನನ್ನು ಕಳೆದುಕೊಂಡು ಬದುಕುವಾಗಲೂ ತನ್ನ ಜಾತಿ ಕುಟುಂಬ ರಕ್ತಸಂಬಂಧಗಳ ನೆನಪಾಗುವುದಿಲ್ಲ. ಆದರೆ ಹೆಬ್ಬಾರರಿಗೆ ಭೂತದ ಕೋಲ ಮಾಡುವಾಗ ಅದ್ರಾಮ ತುಂಬಾ ಹತ್ತಿರದವನಾಗಿದ್ದ ಪ್ರೀತಿಯ ನೆನಪುಗಳು ಆಗದಿರಲು ಸಾಧ್ಯವಾಗಲಿಲ್ಲ.

ಅದ್ರಾಮನ ಸಾವು ಶೂದ್ರ ಸಮುದಾಯದವರ ನೋವಿಗೆ ಕಾರಣವಾಯಿತು. ಇದರಿಂದ ವಿಚಲಿತರಾಗದ ಶೂದ್ರ ಸಮುದಾಯದವರು ದ್ರೌಪದಿಯ ಮುಂದಿನ ಭವಿಷ್ಯಕ್ಕಾಗಿ ಗುತ್ತಿನೊಡೆಯರ ಮೇಲುಸ್ತುವಾರಿಯಲ್ಲಿ ಒಂದೆಡೆ ಸೇರಿ, ದ್ರೌಪದಿಯ ಮುಂದಿನ ದಿನಗಳ ನೈತಿಕ ಜವಾಬ್ದಾರಿಗಾಗಿ ತಲೆಕೆಡಿಸಿಕೊಳ್ಳುತ್ತಾರೆ. ಕುಳ್ಳಾಗುತ್ತಿನೊಡೆಯರು "ಈಗಿರುವ ತೋಟ ಮತ್ತು ತೋಟದ ಮನೆಯನ್ನು ದ್ರೌಪದಿಯ ಹೆಸರಿಗೆ ಬರೆಯುವುದಲ್ಲದೆ ಅಶನಾರ್ಥವಾಗಿ ಗುತ್ತಿನಮನೆಯಿಂದ ವರ್ಷಕ್ಕೆ ಆರು ಮುಡಿ ಅಕ್ಕಿ ಕಳುಹಿಸುವ ವ್ಯವಸ್ಥೆ ಮಾಡುತ್ತೇನೆ" ಎಂದೊಡನೆ ಪೂಸೂಡಿಗುತ್ತಿನ ತೌಡಶೆಟ್ಟರು .ಒಂದು ಮುಡಿ ಗದ್ದೆಯನ್ನು ಆಕೆಯ ಹೆಸರಿಗೆ ವರ್ಗ ಮಾಡಿಸಿಕೊಡುವೆ' ಎಂದು ವಾಗ್ದಾನ ನೀಡುವುದು ಎಲ್ಲ ಶೂದ್ರ ವರ್ಗದವರಿಗೂ ಸಮಾಧಾನದ ನಿಟ್ಟುಸಿರಿಡುವಂತಾಗುತ್ತದೆ. ದಾರು, ಸೊರಕ್ಕೆ, ಮಾರಪ್ಪ ಐತು ಮೊದಲ್ಗೊಂಡು ದ್ರೌಪದಿಯನ್ನು ಅವಳ ಮಗ ಭರತ ಕುಮಾರನನ್ನು ಅತ್ಯಂತ

ಕಾಳಜಿಯಿಂದ ಸಲಹುತ್ತಾರೆ. ಆದರೆ ಅದ್ರಾಮನ ಪ್ರೀತಿ–ಮೋಹದ ನೆನಪುಗಳಿಂದ ಬಿಡುಗಡೆ ಪಡೆಯಲಾಗಲಿಲ್ಲ. ಸೊರಕ್ಕೆ ಆದಿಯಾಗಿ ಐತುವಿನವರೆಗೆ ಎಲ್ಲರೂ ಅವರವರ ಪಾಲಿನ ಮಮತೆ–ಕಾಳಜಿಯನ್ನು ತೋರಿದವರೆ. ಮಗ ಬೆಳೆಯುತ್ತಿದ್ದಂತೆ ಅವಳ ಬಾಳಿನ ಬಿರುಗಾಳಿಯ ಹೊಡೆತ ಕಡಿಮೆಯಾಗಿ ಮಗ ಭರತ ಕುಮಾರನ ಪ್ರೀತಿಯ ಮೋಡಿಗೆ ಒಳಗಾದಳು. ಜೊತೆಗೆ ಕಾರ್ನಾಡರು ಕೊಟ್ಟ ತಕಲಿ ಅವಳ ಒಂಟಿತನವನ್ನು ನೀಗುವಲ್ಲಿ ಯಶಸ್ವಿಯಾಯಿತು.

ಬ್ರಾಹ್ಮಣ ಸಮುದಾಯದ ಕಠಿಣ ನೀತಿಗೆ ಎದುರಾಗುವ ಶೂದ್ರ ಸಮುದಾಯದವರ ಪ್ರೀತಿ ದ್ರೌಪದಿಯ ಬದುಕನ್ನು ಸಹನೀಯವಾಗಿಸುವಲ್ಲಿ ಯಶಸ್ವಿಯಾಗಿದೆ. ಸನಾತನ ಧರ್ಮದ ಭದ್ರಕೋಟೆಯನ್ನು ಬೇಧಿಸುವ ಕೆಳವರ್ಗ ಜಾತಿಯ ಮಾನವೀಯಧರ್ಮ ಜೀವಪರ ಕಾಳಜಿಯನ್ನು ಎತ್ತಿಹಿಡಿಯುತ್ತವೆ. ಮರುವಿವಾಹವನ್ನು ಸ್ವಜಾತಿಯಲ್ಲೂ ವಿರೋಧಿಸುವ ಬ್ರಾಹ್ಮಣ ಸಂಪ್ರದಾಯಗಳು ಸ್ವಾರ್ಥಪರವಾಗಿ ಚಿಂತಿಸುವುದು ಕಾದಂಬರಿ ಮನನ ಮಾಡಿಸುತ್ತದೆ. ಅದ್ರಾಮನ ಶವಸಂಸ್ಕಾರ ಬಂಟರ ರೀತಿರಿವಾಜಿಗೆ ತಕ್ಕಂತೆ ಆತನ ಗೇಣಿ ತೋಟದಲ್ಲಿ ನಡೆದಾಗ

> *"ಅನ್ಯಮತೀಯನೊಬ್ಬನಿಗೆ ಮತೀಯ ಪರಿಜ್ಞಾನವಿಲ್ಲದೆ ಈ ರೀತಿ ಶವಸಂಸ್ಕಾರ, ಶ್ರಾದ್ಧಮಾಡಿದ್ದನ್ನು ಮುಸ್ಲಿಂ ಬಾಂಧವರೂ ಟೀಕಿಸಿದರು : ಬ್ರಾಹ್ಮಣರೂ ಲೇವಡಿ ಮಾಡಿದರು. ಈತ ಎಲ್ಲೆಲ್ಲಿಗೂ ಸಲ್ಲದ ಪಾಪಿ, ಅಂತರ್‌ಪಿಚಾಚಿಯಾಗಿ ಸುತ್ತಬೇಕಷ್ಟೆ ಎಂದು ಅದ್ರಾಮ ದ್ರೌಪದಿಯ ಕುಲಬಾಂಧವರು ಅಂದರೂ ಗುತ್ತಿನೊಡೆಯರು ಮಾತ್ರ ಇನಿತೂ ತಲೆಕೆಡಿಸಿಕೊಳ್ಳಲಿಲ್ಲ."*[೧]

ಗುತ್ತಿನೊಡೆಯರಿಗೆ ತಲೆಕೆಡಿಸಿಕೊಳ್ಳಲು ಬೇಕಾದಷ್ಟಿತ್ತು. ಗಾಂಧಿಯವರಿಗೆ ಕೊಡಬೇಕಾದ ತಮ್ಮ ಒಡವೆಯನ್ನು ಹೆಬ್ಬಾರರೇ ಸ್ವಾಹ ಮಾಡಿದರೆಂಬ ದ್ವೇಷದಿಂದ ಈ ಮಗುವನ್ನು 'ಬಾಣಲೆಯಿಂದ ಬೆಂಕಿಗೆ ಹಾಕಿದೆನಲ್ಲ' ಎಂದು ತೌಡಶೆಟ್ಟರು ಪಶ್ಚಾತ್ತಾಪ ಪಟ್ಟು ದ್ರೌಪದಿಯ ಭವಿಷ್ಯಕ್ಕಾಗಿ ಚಿಂತಿಸುವುದು ಅವರ ನ್ಯಾಯಪರವಾದ ಕಾಳಜಿಯನ್ನು ಧ್ವನಿಸುತ್ತದೆ. ಅದ್ರಾಮನ ಮರಣ ಮತ್ತೆ ದ್ರೌಪದಿಗೆ 'ವೈಧವ್ಯ'ವನ್ನು ತಂದಾಗ ಸುರಗಿಮತದ ಯಾವ ಬ್ರಾಹ್ಮಣರೂ ಸ್ವತಃ ಹೆಬ್ಬಾರರು ಮತ್ತು ಅವರ ಪತ್ನಿ ರುಕುಣಿಯಮ್ಮನೂ ಸೇರಿದಂತೆ ಸಂಭ್ರಮಿಸುವುದು ಅವರು ಸನಾತನ ಮೌಲ್ಯಗಳ ಬಿಗಿ ಹಿಡಿತಕ್ಕೆ ಸಿಲುಕಿ ಮಾನವಧರ್ಮವನ್ನು ಕಳಚಿಕೊಂಡಿರುವುದಕ್ಕೆ ಸಾಕ್ಷಿಯಾಗಿದೆ.

ಮೂರನೆ ಬಾರಿ ಗಾಂಧಿ ಬರುವ ಸುದ್ದಿ ದ್ರೌಪದಿಯ ಹೃದಯದಲ್ಲಿ ಸಡಗರ ಸಂಭ್ರಮವನ್ನು ತುಂಬಿತು. ಗಾಂಧಿ ಬಂದೇಬಿಟ್ಟರು. ಗಾಂಧಿಗೆ ದ್ರೌಪದಿಯನ್ನು ಪರಿಚಯಿಸುತ್ತಿದ್ದಂತೆ ಹರ್ಷಿತರಾದರು. ಆ ಜನಸ್ತೋಮದ ಎದುರಿಗೇ ದ್ರೌಪದಿ ನೀಡಿದ್ದ ಆಭರಣಗಳಿಂದಲೇ ಮುತ್ತೈದೆಯರು ತೊಟ್ಟುಕೊಳ್ಳುವ ಆಭರಣವನ್ನು

---

೧. ಗಾಂಧಿಬಂದ – ಹೆಚ್.ನಾಗವೇಣಿ–ಲೋಹಿಯಾ ಪ್ರಕಾಶನ – ಬಳ್ಳಾರಿ – ೨೦೦೮ – ಪು – ೨೨೭

ದ್ರೌಪದಿಗೆ ತೊಡಿಸಿ ಮುಡಿಗೆ ಹೂ ಮುಡಿಸಿದರು. ದ್ರೌಪದಿ ಸುಮಂಗಲೆಯಾದಳು. ಆದಿನ ಗಾಂಧಿ ಸಂಪ್ರದಾಯದ ಆಚರಣೆಯ ಬೇರನ್ನೇ ಕಿತ್ತೊಗೆದರು. 'ವೈಧವ್ಯ' ಸಮಾಜ ಹೇರಿದ್ದು ಹೆಣ್ಣು ಹುಟ್ಟುವಾಗ ಪಡೆದದ್ದಲ್ಲ. ಇಂತಹ ಆಚರಣೆಗಳು ಸಮಾಜದ ಸ್ವಾಸ್ತ್ಯವನ್ನು ಹಾಳುಮಾಡುತ್ತವೆ ಎಂದು ಸುಧಾರಣೆಗೆ ಸಜ್ಜಾಗಬೇಕಾದ ತುರ್ತನ್ನು ತಿಳಿಸುತ್ತಾರೆ. ಪ್ರಧಾನ ಸಂಸ್ಕೃತಿಯ ಸಾಂಪ್ರದಾಯಿಕ ಮೌಲ್ಯಗಳು ವೈಚಾರಿಕ ನೆಲೆಯಲ್ಲಿ ಪ್ರಶ್ನೆಗೊಳಗಾಗುವುದನ್ನು ಕಾದಂಬರಿ ತೆರೆದಿಡುತ್ತದೆ.

ವಿಧಿವಂಚಿತಳಾಗಿ ಎರಡುಬಾರಿ ವಿಧವೆಯಾಗುವ ದ್ರೌಪದಿ ಸಾಂಪ್ರದಾಯಿಕ ಸಮಾಜವನ್ನೆದುರಿಸುವುದು ಕಷ್ಟಕರವಾದುದು. ಅದರಲ್ಲೂ ವೈದಿಕ ಸಮುದಾಯದ ಕಟ್ಟುಪಾಡುಗಳು ದ್ರೌಪದಿಯನ್ನು ಇಕ್ಕಟ್ಟಿನಲ್ಲಿ ನಿಲ್ಲಿಸುತ್ತವೆ. ದ್ರೌಪದಿಯ ಅನೇಕ ನಿರ್ಧಾರಗಳನ್ನು ತೌರಿನವರೇ ತೆಗೆದುಕೊಂಡಿದ್ದಾರೆ. ಆಕೆಗೆ ಹೊಸ ಸಮಾಜಕ್ಕೆ ಎದುರಾಗುವ ಸಂದರ್ಭವೇ ಬರುವುದಿಲ್ಲ. ಹೆಬ್ಬಾರರು ತಮ್ಮ ತತ್ವಸಿದ್ಧಾಂತಗಳಿಗೆ ಬದ್ಧರಾಗಿ ಸನಾತನ ಧರ್ಮದ ಪೋಷಣೆಗೆ ಪಣತೊಟ್ಟವರಂತೆ ವರ್ತಿಸುತ್ತಾರೆ. ದ್ರೌಪದಿಯನ್ನು ಸನಾತನ ಧರ್ಮ ರಕ್ಷಣೆಗೆ ಕಾವಲಿಟ್ಟು ಅವಳ ಆಂತರ್ಯವನ್ನು ಅರಿಯದ ಹೆಬ್ಬಾರರು ಸಾವಿರಾರು ವರ್ಷಗಳ ಧರ್ಮವೊಂದರ ಮೌಲ್ಯ ಪೋಷಿಸದೆ ಮೌಢ್ಯವನ್ನು ಪೋಷಿಸುತ್ತಾರೆ. ಆದರೆ ದ್ರೌಪದಿಯ 'ಮರುವಿವಾಹ' ಬದುಕು ಕಟ್ಟಿಕೊಳ್ಳುವ ಮಾನವೀಯ ನೆಲೆಯಲ್ಲಿ ನಡೆಯದೆ ಕುಳ್ಳಾಗುತ್ತಿನ ಶೆಟ್ಟರ ಸ್ವಾಭಿಮಾನದ ದ್ವೇಷ ಸಾಧನೆಗೆ ಅದ್ರಾಮ ದ್ರೌಪದಿ ದಾಳವಾಗುತ್ತಾರೆ. ವ್ಯವಸ್ಥೆಯೊಳಗಿನ ಜಾತಿ ವರ್ಗಗಳ ಸಂಘರ್ಷ, ಅಂತರ್ಜಾತಿ ವಿಧವಾ ವಿವಾಹದೊಂದಿಗೆ ಸುಪ್ತವಾಗಿದೆ.

ಬ್ರಾಹ್ಮಣ ಸಮುದಾಯದ ದ್ರೌಪದಿ ಇಸ್ಲಾಂ ಸಮುದಾಯದ ಅದ್ರಾಮ ದಂಪತಿಗಳಾಗುವುದು ಅದ್ರಾಮನ ತಾಯಿಗೆ ಪಾಪಬೀತಿಯಾಗಿ ಕಾಡುತ್ತದೆ. ಏನೆಲ್ಲ ತಲ್ಲಣಗಳನ್ನುಂಟುಮಾಡಿದ ವಿಧವಾ ವಿವಾಹ ಮತ್ತೆ ದ್ರೌಪದಿ ವಿಧವೆಯಾಗುವುದು ಹತಾಷೆಯ ಪರಮಾವಧಿಯಾಗಿ ಕಾದಂಬರಿ ಕಾಣಿಸಿದೆ. ಯಾಂತ್ರಿಕವಾಗಿ ಬದುಕುವ ದ್ರೌಪದಿಗೆ ಪಾಪಪ್ರಜ್ಞೆಯ ಲೇಪ ಕೊಡುವುದು ಅಸಮಂಜಸ ಎನಿಸುತ್ತದೆ. ಪರಂಪರಾಗತ ಮೌಲ್ಯಗಳ ಪೋಷಣೆಗಾಗಿ ಮುಂದುವರಿಕೆಗಾಗಿ ಮಹಿಳೆಯನ್ನು ಶೋಷಿಸುವವರ ವಿರುದ್ಧ ಬಂಡಾಯವೇಳುವ ಆಲೋಚನೆ ಕಾದಂಬರಿ ಮನಗಾಣಿಸಿದೆ.

"ಸ್ವಾತಂತ್ರ್ಯ ಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ಪ್ರತಿನಿಧೀಕರಣ"ಗೊಂಡ ವೈಧವ್ಯದ ವಿಭಿನ್ನ ನೆಲೆಗಳನ್ನು ಶೋಧಿಸುವುದು ಮುಖ್ಯವಾಗುತ್ತದೆ. 'ವೈಧವ್ಯ'ವನ್ನು ವಿಶ್ಲೇಷಿಸುವಾಗ ಸ್ತ್ರೀಯರ ಅಸ್ತಿತ್ವವನ್ನು ಹಲವು ಅರ್ಥಗಳಲ್ಲಿ ಕುಟುಂಬದ ತಳಹದಿಯಿಂದ ಕಟ್ಟಲ್ಪಟ್ಟಿರುವುದು ಗಮನಾರ್ಹವಾದುದು. ಈ ಗ್ರಹೀತಗಳು

ಮಹಿಳೆಯರ ಬದುಕಿನ ಅನೇಕ ಅನುಭವಗಳಿಗೆ ಅರ್ಥಹೊಮ್ಮಿಸುತ್ತವೆ. ಸ್ವಾತಂತ್ರ್ಯ ಪೂರ್ವದಲ್ಲಿ ರಚನೆಯಾದ ಮೊದಲ ಕಥನ ಸಾಹಿತ್ಯದಿಂದ ಆಧುನಿಕ ಕಾಲಘಟ್ಟದವರೆಗಿನ ಕಥನಗಳು ಒಂದು ಶತಮಾನದ ದೃಷ್ಟಿಕೋನಗಳಾಗಿವೆ. ಹಾಗೂ ಮಹಿಳಾ ಬದುಕಿನ ಇತಿಹಾಸದ ದಾಖಲೆಗಳಾಗಿವೆ. ಹಾಗಾಗಿ ಮಹಿಳಾ ಬದುಕನ್ನು ವಿವಿಧ ಆಯಾಮಗಳಿಂದ ನೋಡಲು ಪ್ರೇರೇಪಿಸಿವೆ. ಸಾಮಾಜಿಕ ಒತ್ತಡವಾಗಿ ಹೇರಿದ ವೈಧವ್ಯಾಚರಣೆಯನ್ನು ಗ್ರಹಿಸುವಾಗ ವಿಧವೆಯ ಬದುಕಿನ, ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ, ಸಾಂಸ್ಕೃತಿಕ ಸಂದರ್ಭಗಳೆಲ್ಲವೂ ಮುಖ್ಯವಾಗುತ್ತವೆ. ಸ್ವಾತಂತ್ರ್ಯ ಪೂರ್ವದ ಹಾಗೂ ಸ್ವಾತಂತ್ರ್ಯೋತ್ತರದ ಸುಮಾರು ನಲವತ್ತಕ್ಕೂ ಹೆಚ್ಚು ಕೃತಿ (ಕಥನ)ಗಳನ್ನು ಈ ಅಧ್ಯಯನದ ಚೌಕಟ್ಟಿಗೆ ಹೊಂದಿಸಿಕೊಳ್ಳಲಾಗಿದೆ. ಈ ಕೃತಿಗಳು ವಿವಾಹ–ಕುಟುಂಬದ ತಳಹದಿಯಿಂದ ಹುಟ್ಟಿಕೊಂಡ 'ವೈಧವ್ಯ'ದ ಚಿತ್ರಣವನ್ನು ಒಳಗೊಳ್ಳುತ್ತವೆ.

ಪ್ರಾರಂಭದ ಕೃತಿಗಳು ವಿಧವಾಬದುಕಿನಲ್ಲಿ ಹೆಣೆದುಕೊಂಡಿದ್ದ ರೂಢಿನಿಯಮಗಳನ್ನು ನಿರಾಕರಿಸುವತ್ತ ಸಾಮಾಜಿಕ ಸುಧಾರಣೆಗಾಗಿ ದುಡಿಯುತ್ತವೆ. ಇದರಿಂದ ಮಹಿಳೆಯರ ಸಂಪ್ರದಾಯನಿಷ್ಠ ಜೀವನ ಕ್ರಮವು ಬಲವಾದ ಹಿಡಿತವನ್ನು ಕಳೆದುಕೊಳ್ಳುವುದನ್ನು ಚಿತ್ರಿಸುತ್ತವೆ. ಹಾಗಾಗಿ ಆರಂಭದ ಕಥನಗಳು ಕುಟುಂಬದೊಳಗಿನ ವಿಧವಾ ಸಮಸ್ಯೆ, ಸ್ತ್ರೀಶಿಕ್ಷಣ, ಬಾಲ್ಯ ವಿವಾಹ ಮುಂತಾದ ಸಮಸ್ಯೆಗಳನ್ನು ಅನಾವರಣಗೊಳಿಸಿವೆ. ಆದರೆ, ನವೋದಯ ಕಾಲಘಟ್ಟದ ಕಥನಗಳು ಸಂಪ್ರದಾಯ ಸಮಾಜದಿಂದ ಬಿಡುಗಡೆ ಬಯಸುವುದನ್ನು ಚಿತ್ರಿಸುತ್ತವೆ. ಆಧುನಿಕ ಸಮಾಜದಲ್ಲಿ ವಿಧವಾ ವಿವಾಹ, ವಿಧವಾಚರಣೆ, ಬಾಲ್ಯವಿವಾಹಗಳು ಅತಿಸೂಕ್ಷ್ಮವಾಗಿಯಷ್ಟೇ ಬದಲಾಗಿವೆ. ವಿಧವಾಚರಣೆಯನ್ನು ಒಪ್ಪಿ ಬದುಕುವ ಆಧುನಿಕ ಮಹಿಳೆಯೂ ವ್ಯವಸ್ಥೆಯೊಂದಿಗೆ ಸದಾ ರಾಜಿಮಾಡಿಕೊಳ್ಳುವವರಾಗಿ ಕಥೆಗಳಲ್ಲಿ ಚಿತ್ರಣಗೊಂಡಿದ್ದಾರೆ. ಈ ಸ್ಥಿತಿ ಅವರ ಆರ್ಥಿಕ ಮತ್ತು ಮಾನಸಿಕ ಪರಾವಲಂಬಿತನವಾಗಿ ಕಾಣಿಸಿದರೂ ಇದರ ಹಿಂದೆ ಪುರುಷಪ್ರಧಾನ ಧೋರಣೆಗಳು ಪ್ರೇರಕವಾಗಿವೆ. ಮಹಿಳಾ ಕಥನ ಸಾಹಿತ್ಯಗಳು ಸ್ಥಿತ್ಯಂತರ ಸಾಂಸ್ಕೃತಿಕ ಸನ್ನಿವೇಶದಲ್ಲಿ ರಚನೆಯಾಗುವಾಗ ಸಾಂಪ್ರದಾಯಿಕ ಪರಂಪರೆಯನ್ನು ಮುಂದುವರಿಸುವ ಕಥಾನಕಗಳಾಗದಿರುವುದು ಗಮನಾರ್ಹವಾದುದಾಗಿದೆ. ರೂಢಿಯಲ್ಲಿದ್ದ ವಿಧವಾಮೌಲ್ಯ, ಲಿಂಗ ಸಂಬಂಧಿ ಅಸಮಾನತೆ, 'ತಾಯ್ತನ' 'ಶೀಲ' 'ಪಾತಿವ್ರತ್ಯ'ದಂತಹ ಮೌಲ್ಯಗಳು ಪುರುಷ ಸಮಾಜದ ಅಪೇಕ್ಷೆಗಳು ಎನ್ನುವುದನ್ನು ಬಯಲು ಮಾಡುತ್ತವೆ. ಸಂಪ್ರದಾಯದಲ್ಲಿ ಬೇರುಬಿಟ್ಟ ವೈಧವ್ಯಾಚಾರಣೆ ಸಾಮಾಜಿಕ ರೋಗವಾಗಿ ಮಹಿಳಾ ಜೀವನವನ್ನು ನಾಶಮಾಡುವುದರ ಶೋಧನೆಯಾಗಿ ಆಯಾಯ ಕಾಲಘಟ್ಟದ ಕೃತಿಗಳು ಅನಾವರಣಗೊಳಿಸಿವೆ.

# ಅಧ್ಯಾಯ – ೮

## ಸಮಾರೋಪ

**ಅನುಬಂಧಗಳು :**

೧. ಆಕರ ಗ್ರಂಥಗಳು

೨. ಪರಾಮರ್ಶನ ಗ್ರಂಥಗಳು

## ಅಧ್ಯಾಯ ೮

## ಸಮಾರೋಪ.

"ಸ್ವಾತಂತ್ರ್ಯ ಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ವೈಧವ್ಯದ ಪ್ರತಿನಿಧೀಕರಣ" ಎಂಬ ಈ ಮಹಾಪ್ರಬಂಧವು ಕನ್ನಡ ಕಥನ ಸಾಹಿತ್ಯದ ಒಂದು ಶತಮಾನದ ಅವಧಿಯಷ್ಟು ವಿಸ್ತಾರವಾದುದು. ಕನ್ನಡ ಸಾಹಿತ್ಯದಲ್ಲಿ ಪ್ರತಿನಿಧೀಕರಣಗೊಂಡ 'ವೈಧವ್ಯ'ದ ಕುರಿತು ಈಗಾಗಲೆ ಹಲವು ದಿಕ್ಕುಗಳಲ್ಲಿ ಚರ್ಚೆಗಳು ನಡೆದಿವೆಯಾದರೂ ವೈಧವ್ಯವೇ ಕೇಂದ್ರವಾಗಿ ಹೆಚ್ಚು ಚರ್ಚೆಗಳು ನಡೆದಿಲ್ಲ. ೧೯೦೦ ರಿಂದ ೨೦೦೦ರ ತನಕ ರಚನೆಯಾದ ಕೃತಿಗಳಲ್ಲಿ 'ವೈಧವ್ಯ'ವೇ ಕೇಂದ್ರವಾಗಿ ನಿರೂಪಿತವಾಗಿರುವ ಕಥನ ಸಾಹಿತ್ಯವನ್ನು ಆಯ್ಕೆಮಾಡಿಕೊಂಡು ಮುಖ್ಯವಾಗಿ ಇಲ್ಲಿ ವಿಶ್ಲೇಷಿಸಲಾಗಿದೆ. ಜಾನಪದ ಸಾಹಿತ್ಯ, ಸ್ವಾತಂತ್ರ್ಯ ಪೂರ್ವದ ಲೇಖಕರು, ಲೇಖಕಿಯರು, ನವೋದಯ ನಂತರದ ಕಾಲಘಟ್ಟದ ಕಥನ ಸಾಹಿತ್ಯದ ಕೃತಿಗಳ ಮೂಲಕ ಅಧ್ಯಯನ ಮಾಡಲಾಗಿದೆ. ಅಂದರೆ 'ವೈಧವ್ಯ'ವೆನ್ನುವ ಪರಿಕಲ್ಪನೆ ಸಾಹಿತ್ಯಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕವಾದ ಗ್ರಹಿಕೆಗಳ ನೆಲೆಯಲ್ಲಿ ವಿಶ್ಲೇಷಣೆಗೆ ಒಳಗಾಗಿದೆ.

'ವೈಧವ್ಯ'ವನ್ನು ಕುರಿತು ಅಧ್ಯಯನ ನಡೆಸುವಾಗ 'ವಿವಾಹ'–'ಕುಟುಂಬ'ದ ವಸ್ತು ವಿಷಯಗಳೊಂದಿಗೆ ಚರ್ಚಿಸುವ ಸಂದರ್ಭ ಎದುರಾದವು. ಇಂತಹ ಸಂದರ್ಭಗಳಲ್ಲಿ ಎದುರಾಗುವ ಸಮಸ್ಯೆಗಳು ಹೆಚ್ಚು ಸಂಕೀರ್ಣವಾದದ್ದು. ಈ ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಕಥನ ಸಾಹಿತ್ಯಗಳ ಕೃತಿಕಾರರು ಪ್ರಾದೇಶಿಕವಾಗಿ, ಕಾಲಘಟ್ಟದ ನೆಲೆಯಲ್ಲಿ ಭಿನ್ನತೆಯನ್ನು ಪ್ರತಿಬಿಂಬಿಸುವವರಾಗಿ ಕಂಡು ಬರುತ್ತಾರೆ. ಜಾನಪದ ಕಥನಗಳಿಂದ ಹಿಡಿದು ಆಧುನಿಕ ಕಾಲದವರೆಗೆ ಪುರುಷ ಪ್ರಧಾನ ಸಂಸ್ಕೃತಿ ಹೇರಿದ್ದ ವಿಧವಾ ಮೌಲ್ಯಗಳನ್ನು, ದಮನಕಾರಿ ನೆಲೆಗಳನ್ನು ಈ ಪ್ರಂಬಂಧ ಗುರುತಿಸುತ್ತದೆ. ಮಾತೃಪ್ರಧಾನ ವ್ಯವಸ್ಥೆಯಿಂದ ಪಿತೃಪ್ರಧಾನ ವ್ಯವಸ್ಥೆಯಾಗಿ ಪರಿವರ್ತನೆಯಾದ ಕಾಲಘಟ್ಟದಿಂದ ರಚನೆಯಾದ ಸಾಮಾಜಿಕ ಮೌಲ್ಯಗಳನ್ನು ಪಾಲಿಸುತ್ತಲೇ ಅನೇಕ ಸಂದರ್ಭಗಳಲ್ಲಿ ಸಂಘರ್ಷಕ್ಕೆಡೆಮಾಡಿಕೊಟ್ಟಿದ್ದನ್ನು ಕಥನ ಸಾಹಿತ್ಯ ತೆರೆದಿಡುತ್ತದೆ. ಭಾರತೀಯ ಸಮಾಜದಲ್ಲಿ 'ಕುಟುಂಬ'ದೊಳಗೆ 'ವಿವಾಹ' ಪದ್ಧತಿ ಅನೇಕ ಸಂಕೀರ್ಣ ಅವಸ್ಥೆಗಳನ್ನು ಹುಟ್ಟು ಹಾಕಿತು. ಅಲ್ಲಿಂದ ಪ್ರಾರಂಭವಾದ 'ಸತಿಪದ್ಧತಿ' 'ವೈಧವ್ಯ' 'ಬಾಲ್ಯವಿವಾಹ' ಮುಂತಾದ ಅನಿಷ್ಟ ಪದ್ಧತಿಗಳಿಗೆ ಭಾರತೀಯ ಸಮಾಜದ ಸಂವೇದನೆಯನ್ನು ಕುರಿತು ಮೊದಲ ಅಧ್ಯಾಯದಲ್ಲಿ ಪರಾಮರ್ಶಿಸಲಾಗಿದೆ. ಆ ಕಾಲಮಾನದಲ್ಲಿ ಸಮಾಜ ಸುಧಾರಕರು ಹಾಗೂ ಸಾಹಿತಿಗಳು ಅನಿಷ್ಟ ಪದ್ಧತಿಗಳ ವಿರುದ್ಧ ಹೋರಾಡಿರುವುದನ್ನು ಅಲ್ಲಿ ಗಮನಿಸಲಾಗಿದೆ.

ಸತಿಪದ್ಧತಿಯನ್ನು ನಿರ್ಮೂಲನ ಮಾಡಿ 'ವಿಧವೆ'ಯಾಗುಳಿದ ಮಹಿಳೆಯರು

ಬಾಣಲೆಯಿಂದ ಬೆಂಕಿಗೆ ಬಿದ್ದಂತಹ ಅನುಭವದೊಂದಿಗೆ ವ್ಯವಸ್ಥೆಗೆ ಎದುರಾಗುವುದನ್ನು ಸ್ವಾತಂತ್ರ್ಯ ಪೂರ್ವದ ಸಾಹಿತ್ಯ ಕೃತಿಗಳು ಅಭಿವ್ಯಕ್ತಿಸುತ್ತವೆ. ಆ ಕಾಲದಲ್ಲಿ ವಿಧವೆಯರು ಎದುರಿಸಿದ ಆತಂಕ ತಲ್ಲಣಗಳು ಅನೇಕ. ಅಂತಹ ಆತಂಕಗಳಿಂದ ಪಾರಂಪರಿಕ ಕಟ್ಟುಪಾಡುಗಳಿಂದ ಹೊರಬರುವ ಕುರಿತು ನಡೆದ ಚಿಂತನೆಗಳು ಬರಹಗಳ ರೂಪದಲ್ಲಿ ಆ ಕಾಲದಲ್ಲಿ ಹೆಚ್ಚಿನ ಮಹತ್ವದವಾಗುತ್ತವೆ. ಆ ಕಾಲದಲ್ಲಿ ಕಟ್ಟಿಕೊಟ್ಟ ತಾತ್ವಿಕ ನೆಲೆಗಳು ಈ ಕಾಲದ ನಮ್ಮ ಅನೇಕ ಪ್ರಶ್ನೆಗಳಿಗೆ ಮುಖ್ಯ ನೆಲೆಯನ್ನು ಒದಗಿಸುತ್ತಿವೆ. ಕೆರೂರು ವಾಸುದೇವಾಚಾರ್ಯರು, ಗುಲ್ವಾಡಿ ವೆಂಕಟರಾವ್, ತಿರುಮಲಾಂಬಾ, ಕಲ್ಯಾಣಮ್ಮ, ಕುವೆಂಪು, ಕಾರಂತ ಮುಂತಾದವರ ಕೃತಿಗಳು ಅಧ್ಯಯನಕ್ಕೆ ಹೊಸ ಬೆಳಕನ್ನು ಚಲ್ಲುತ್ತವೆ.

'ಇಂದಿರಾ' 'ಇಂದಿರಾಬಾಯಿ' ಯಂತಹ ಪ್ರಾರಂಭದ ಕೃತಿಗಳು ಬಾಲ್ಯವಿವಾಹವನ್ನು ವಿರೋಧಿಸುತ್ತ ಬ್ರಾಹ್ಮಣ ಸಮುದಾಯದ ವಿಧವಾ ಮೌಲ್ಯಗಳನ್ನು ಪ್ರಶ್ನಿಸುತ್ತವೆ. ವಿಧವಾ ತತ್ವದೊಳಗೆ ಪ್ರವಹಿಸುವ ಅಮಾನವೀಯ ನೆಲೆಗಳನ್ನು ವಿಮರ್ಶಿಸುತ್ತವೆ. 'ವಿಧವಾ' ಮರುವಿವಾಹ 'ಕೂಡಿಕೆ' 'ಸೀರುಡಿಕೆ'ಯಂತಹ ಸಾಮಾಜಿಕ ಮೌಲ್ಯಗಳು ಆ ಕಾಲಘಟ್ಟದ ನಿರ್ದಿಷ್ಟ ಸಂದರ್ಭಗಳಲ್ಲಿ ತಳೆದ ವಿಶಿಷ್ಟತೆಯನ್ನು ಕುರಿತ ಅಧ್ಯಯನವೂ ಈ ಪ್ರಬಂಧದ ರಚನೆಯಲ್ಲಿ ಒಳಗೊಂಡಿವೆ.

ಆಧುನಿಕ ಶಿಕ್ಷಣದೊಂದಿಗೆ ಭಾರತೀಯ ಸಂಸ್ಕೃತಿಯೊಡನೆ ಸಂಘರ್ಷಕ್ಕೊಳಗಾದ ಮಹಿಳಾ ಬದುಕು ಪ್ರಾರಂಭಿಕ ಕಾಲಘಟ್ಟದ ಕಥನ ಸಾಹಿತ್ಯದಲ್ಲಿ ಅನಾವರಣಗೊಂಡಿವೆ. ಬದಲಾವಣೆಗೆ ಸಜ್ಜಾದ ಸಮಾಜದಲ್ಲಿ, ಸಾಮಾಜಿಕ ಮೌಲ್ಯಗಳು ಪಾರಂಪರಿಕ ನಂಬಿಕೆಗಳಿಗೆ ಎದುರಾದ ರೀತಿಯನ್ನು ಪ್ರಕಟಪಡಿಸುತ್ತವೆ. ಮಹಿಳಾ ಸಮಸ್ಯೆಗಳಿಗೆ ಪರಿಹಾರವಾಗಿ ಬಂದ ಶಿಕ್ಷಣ ಪರಸ್ಪರ ಹೆಣ್ಣು-ಗಂಡು, ಮೇಲುಕೀಳು ಎನ್ನುವ ಲಿಂಗಾಧಾರಿತ ಅಸಮಾನತೆಯನ್ನು ಚರ್ಚಿಸುತ್ತವೆ. ಆರಂಭಿಕ ಘಟ್ಟದ ಬಹುತೇಕ ಕಾದಂಬರಿಗಳು ಸ್ತ್ರೀಪಾತ್ರ ಪ್ರಧಾನವಾದವುಗಳಾಗಿದ್ದು ಸಂಕ್ರಮಣ ಕಾಲದ ಒಂದಲ್ಲ ಒಂದು ಚಿಂತನೆಗಳನ್ನು ದಾಖಲಿಸಿರುವುದರಿಂದ ಕುತೂಹಲಕರವಾದ ಸಾಮಾಜಿಕ ಅಧ್ಯಯನವಾಗಲು ಶ್ರಮಿಸಿದೆ. ಈ ಕಾದಂಬರಿಗಳು ಸಮಾಜಶಾಸ್ತ್ರದ ಸ್ವರೂಪವನ್ನು ಒಳಗೊಂಡಿರುವುದರಿಂದ ಸಮಾಜ ಹಾಗೂ ಕುಟುಂಬ ಕೇಂದ್ರಿತ ಸ್ತ್ರೀಯರ ಸಾಮಾಜಿಕ, ಆರ್ಥಿಕ, ವ್ಯಾವಹಾರಿಕ, ಸಾಂಸ್ಕೃತಿಕ ಅಧ್ಯಯನದ ವ್ಯಾಪ್ತಿಯನ್ನು ಒಳಗೊಂಡಿದೆ. ಇದು ಮಹಿಳಾ ಪ್ರಪಂಚದ ಅಧ್ಯಯನವಾದರೂ ಪುರುಷ ಸಮಾಜದ ನಿಲುವಿನ ಅಧ್ಯಯನವೂ ಆಗಿದೆ. ಆದರೂ ಮಹಿಳಾ ಪರ ಚಿಂತನೆಗಳಾಗಿ ಹೊರಹೊಮ್ಮಿದ ಕಥನ ಸಾಹಿತ್ಯಗಳು ಮಾನವೀಯ ಮೌಲ್ಯಗಳನ್ನು ಜೀವಪರ ಕಾಳಜಿಯನ್ನು ಶೋಧಿಸುತ್ತವೆ.

ಶಿಕ್ಷಣದ ಎಚ್ಚರದೊಂದಿಗೆ ಸಮಕಾಲೀನ ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವುದು ಮುಖ್ಯ ಆಶಯವಾಗಿತ್ತೆಂದು ಇವರ ಕಾದಂಬರಿಗಳ ಅಧ್ಯಯನದಿಂದ ಗ್ರಹಿಸಬಹುದು. ಬದಲಾಗುತ್ತಿದ್ದ ಆ ಕಾಲಮಾನದ ಸಾಮಾಜಿಕ ಚಿಂತನೆಯ ಕೇಂದ್ರವಾಗಿದ್ದವಳು ಮಹಿಳೆ. ಈ ಕಾರಣದಿಂದ ಪತ್ರಿಕೆಗಳಲ್ಲಿ ಮಹಿಳೆಯ ಸ್ಥಾನಮಾನವನ್ನು ಕುರಿತ ವ್ಯಾಪಕವಾದ ಚರ್ಚೆ ನಡೆಯುತ್ತಿದ್ದು ಆರಂಭದ ಕಥನಗಳಲ್ಲೂ ಅದರ ಪ್ರಭಾವವನ್ನು ಗುರುತಿಸಲು ಸಾಧ್ಯವಾಯಿತು. ಮಹಿಳಾ ಸುಧಾರಣೆ ಕುರಿತಾದ ಕಲ್ಪನೆಯಲ್ಲಿ ಭಿನ್ನಾಭಿಪ್ರಾಯಗಳೂ ಉಂಟಾಗಿರುವುದನ್ನು ಕಥನ ಸಾಹಿತ್ಯ ಕೃತಿಗಳು ಮೈಗೂಡಿಸಿಕೊಂಡಿದ್ದವು. ಸುಧಾರಣೆ ಎಂದರೆ ಪಾಶ್ವಾತ್ಯ ಮಾದರಿಯ ಸುಧಾರಣೆ ಚಿಂತನೆ ಒಂದೆಡೆಯಾದರೆ, ಇನ್ನೊಂದೆಡೆ ನಮ್ಮದೇ ಪ್ರಾಚೀನ ಪರಂಪರೆಯ ಪುನರುಜ್ಜೀವನ ಮತ್ತು ಆದರ್ಶಗಳು ಮುಖ್ಯವಾಗುತ್ತವೆ. ಪಾಶ್ವಾತ್ಯ ಮತ್ತು ಪರಂಪರೆಯ ಸಮನ್ವಯದಿಂದ ಮೂಡಿದ ಸ್ವರೂಪವೇ 'ಸುಧಾರಣೆ' ಎನ್ನುವ ತಿಕ್ಕಾಟಗಳೂ ಪ್ರಾರಂಭದಲ್ಲಿ ನಡೆದಿದೆ. ಇಂತಹ ಸುಧಾರಣೆಗಳ ತಿಕ್ಕಾಟದ ಪ್ರತಿಧ್ವನಿಯನ್ನು ಆರಂಭದ ಕಥನ ಸಾಹಿತ್ಯದ ಅಧ್ಯಯನಗಳು ಹೊಮ್ಮಿಸುತ್ತವೆ.

ಭಾರತೀಯ ಸಮಾಜದಲ್ಲಿ ಬೆಳೆದು ಬಂದ ಸಾಂಸ್ಕೃತಿಕ ಪರಂಪರೆ ಮಹಿಳೆಯರನ್ನು ಅನೇಕ ಅಸಮಾನ ನೆಲೆಯಲ್ಲಿ ನಿಲ್ಲಿಸಿರುವುದನ್ನು ಪ್ರಾರಂಭದ ಕಾದಂಬರಿಗಳು ಮಾನವೀಯ ನೆಲೆಯಲ್ಲಿ ನಿಂತು ನೋಡುತ್ತವೆ. ಮುಖ್ಯವಾಗಿ ಲಿಂಗಾಧಾರಿತ ನೆಲೆ ಮಹಿಳೆಯನ್ನು ಅದರಲ್ಲೂ 'ವಿಧವೆ'ಯರನ್ನು ಅಮಾನವೀಯವಾಗಿ ಕಂಡಿದೆ. ಈ ನೆಲೆ ಹೊಮ್ಮಿಸುವ ಕ್ರೌರ್ಯ ವಂಚನೆ ನೋವುಗಳು ದುರ್ಬಲಗೊಳ್ಳುವುದರೆಡೆಗೆ ತುಡಿದಿರುವ ಕೃತಿಗಳ ಅಧ್ಯಯನ ಈ ಪ್ರಬಂಧಕ್ಕಿದೆ.

ಲಿಂಗಾಧಾರಿತ ಅಸಮಾನತೆ ನಮ್ಮ ವ್ಯವಸ್ಥೆಗೆ ಕೊಟ್ಟ ಕೊಡುಗೆಗಳಲ್ಲಿ 'ವೈಧವ್ಯ'ವೂ ಒಂದು. ಪುರುಷ ಪ್ರಧಾನ ವ್ಯವಸ್ಥೆ ವೈಧವ್ಯವನ್ನು 'ರಕ್ಷಣೆ' 'ಸಾಕುವ' ನೆಪದಲ್ಲಿ ಮಹಿಳೆಯರನ್ನು ಪರಾವಲಂಬಿ ಬದುಕಿಗೆ ಒಗ್ಗಿಸಿರುವುದನ್ನು ಕೃತಿಗಳು ಚರ್ಚಿಸುತ್ತವೆ. ಮಹಿಳಾ ಹಕ್ಕುಗಳು ಸ್ಥಗಿತವಾಗಿದ್ದು ಪುರುಷಾಧಿಕಾರ ಮೇಲ್ಮೈಯನ್ನು ಸಾಧಿಸಿದ ದೃಷ್ಟಾಂತಗಳನ್ನು ಆರಂಭದ ಕೃತಿಗಳು ಅಭಿವ್ಯಕ್ತಿಸುತ್ತವೆ. ತನ್ನ ಬಿಗಿ ಹಿಡಿತದಿಂದ ನೆಲೆಗೊಂಡ ಪುರುಷ ಪ್ರಧಾನ ಸಂಸ್ಕೃತಿ ಮಹಿಳಾ ಹಕ್ಕು ಮತ್ತು ಸ್ವಾತಂತ್ರ್ಯವನ್ನು ದುರ್ಬಲಗೊಳಿಸಿ ತನ್ನ ವಿಚಾರ ಮತ್ತು ಸಂಸ್ಕೃತಿಯನ್ನು ಹೇರಿದಾಗ ಅದಕ್ಕೆ ಎದುರಾಗಿ ಕನ್ನಡ ಕಥನ ಸಾಹಿತ್ಯ ಸ್ವಾತಂತ್ರ್ಯ ಪೂರ್ವದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಪ್ರತಿಕ್ರಿಯಿಸಿತು. ಇಂತಹ ಪ್ರತಿಕ್ರಿಯೆಗಳನ್ನು ಕನ್ನಡದ ಮೊದಲ ಕಾದಂಬರಿಗಳಾದ 'ಇಂದಿರಾ', 'ಇಂದಿರಾಬಾಯಿ', 'ನಭಾ', 'ವಿರಾಗಿಣಿ' ಕೃತಿಗಳು

ಮಹತ್ವದ ಮಾದರಿಯನ್ನು ಕಟ್ಟಿಕೊಡುವುದನ್ನು ಈ ಪ್ರಬಂಧದಲ್ಲಿ ಗಮನಿಸಲಾಗಿದೆ. ಕುವೆಂಪು, ಮಾಸ್ತಿ, ಕಾರಂತ, ನಿರಂಜನ, ಚದುರಂಗ, ಭೈರಪ್ಪ, ಲಂಕೇಶ್ ಮುಂತಾದ ಲೇಖಕರ ಕೃತಿಗಳು 'ವಿವಾಹ' ಸಂಸ್ಥೆ ಪ್ರಾಚೀನ ಕಾಲದಿಂದಲೂ ಮಹಿಳೆಗೆ ಹೇರಿದ್ದ ಸಾಮಾಜಿಕ ಮೌಲ್ಯಗಳು ಅಮಾನವೀಯವಾದುದನ್ನು, ಇದರ ನೆಲೆಯಲ್ಲಿ ಮಹಿಳೆ ದೌರ್ಜನ್ಯಕ್ಕೊಳಗಾಗುತ್ತ ಬದುಕಿ ಬಂದಿರುವುದನ್ನು ಪ್ರತಿನಿಧಿಸಿರುವುದು ಚರ್ಚೆಯ ವಿಷಯವಾಗಿದೆ. ಮಹಿಳೆ ಕೌಟುಂಬಿಕ ಚೌಕಟ್ಟಿನಲ್ಲಿ ವೈವಾಹಿಕ ಬಂಧನಕ್ಕೊಳಗಾಗಿ ಪುರುಷ ಪ್ರಧಾನ ಸಂಸ್ಕೃತಿಗೆ ತಲೆಬಾಗಿ ಬದುಕಿ ಬಂದಿರುವುದರೊಂದಿಗೆ 'ಪಾತಿವ್ರತ್ಯ' 'ಶೀಲ' 'ವಿಧವಾ ಮೌಲ್ಯ' ಮುಂತಾದ ಸಾಮಾಜಿಕ ಮೌಲ್ಯಗಳನ್ನು ಒಪ್ಪಿ ಬದುಕಿರುವ ಸ್ಥಿತಿಯನ್ನು ನವೋದಯ ಪೂರ್ವ ಮತ್ತು ನವೋದಯ ಕಾಲಘಟ್ಟದ ಕೃತಿಗಳು ತೆರೆದಿಟ್ಟಿವೆ. ಪ್ರಧಾನ ಸಂಸ್ಕೃತಿ ರೂಪಿಸಿದ ಏಕಮುಖ ಸೂತ್ರವನ್ನು ಮನನ ಮಾಡಿಕೊಂಡು ಬಂದಿರುವ ಮಹಿಳಾ ಸಮಾಜ ವಸಾಹತುಶಾಹಿ ಪ್ರಭಾವಕ್ಕೊಳಗಾಗಿ ಪ್ರಶ್ನಿಸುತ್ತ ಬಂದಿರುವುದನ್ನು ಈ ಪ್ರಬಂಧದ ಅಧ್ಯಯನಕ್ಕೆ ಒಳಪಡಿಸಲಾಗಿದೆ.

'ವಿವಾಹ'ವನ್ನು ಕುರಿತು ಹೇಳುವ ಸ್ತ್ರೀವಾದಿ ಚಿಂತಕಿ ಸಿಮೋನ್‌ದಬೋವಾ ವಿವಾಹ ಮಹಿಳೆಯ ಬದುಕಿನ ಗುರಿಯಾಗಲಾರದು. ಪರಾವಲಂಬಿ ಲಕ್ಷಣ ಅವಳಲ್ಲಿ ಅಂತಸ್ಥವಾಗಿದ್ದು ಅವಳು ತೋರಿಕೆಯ ಧೈರ್ಯವನ್ನು ತೋರಿಸುವಂಥದ್ದು ಇಂತಹ ಬಂಧನ ಅವಳಿಗೆ ಹೇರಿದ್ದು, ವಿವಾಹ ಬಂಧನದಿಂದ ಮುಕ್ತಿ ಸಿಗುವಂತಾಗಬೇಕೆಂದು ಹೇಳುತ್ತಾರೆ. ಹಿಂದೂ ಸಮಾಜದ 'ವಿವಾಹ' 'ವೈಧವ್ಯ' ಮುಂತಾದ ಸಾಮಾಜಿಕ ಮೌಲ್ಯಗಳ ಮುಸುಕಿನೊಳಗೆ ನಲುಗುವ ಮಹಿಳಾ ವಿಮೋಚನೆಗಾಗಿ ಧ್ವನಿಯೆತ್ತುವ ಕನ್ನಡ ಕಥನ ಸಾಹಿತ್ಯದ ವೈಚಾರಿಕ ನಿಲುವನ್ನು ಸ್ತ್ರೀವಾದಿ ಚಿಂತನೆಗಳ ಹೊಸ ಸಾಧ್ಯತೆಯನ್ನು ಗುರುತಿಸಲಾಗಿದೆ. 'ತಾಯ್ತನ'ವನ್ನು ವೈಭವೀಕರಿಸಿ 'ವೈಧವ್ಯ'ವನ್ನು 'ಅನಿಷ್ಟ' ಎಂದು ಪರಿಭಾವಿಸುವ ವ್ಯವಸ್ಥೆಯನ್ನು ಹಲವಾರು ಕೃತಿಗಳು ಅನಾವರಣಗೊಳಿಸಿವೆ. ಮಹಿಳೆಯನ್ನು 'ತಾಯಿ'ಯಾಗಿ 'ಮುತ್ತೈದೆ'ಯಾಗಿ ಆರಾಧಿಸುವ ಪರಂಪರೆಯೇ ಆಕೆಯನ್ನು 'ವಿಧವೆ' ಎಂದು ಅವಗಣನೆಗೆ ಗುರಿಮಾಡುವ ಹುನ್ನಾರ ಮಾಡಿದೆ. ಇಂತಹ ಅಸಮಾನತೆಯನ್ನು ನವೋದಯದ ಕಥನಗಳು ನಿರಾಕರಿಸುತ್ತವೆ. ಸಾಮಾಜಿಕವಾಗಿ ಮಹಿಳಾ ಅಪಮೌಲೀಕರಣವಾಗುವ ಸಂದರ್ಭಗಳನ್ನು ಅತ್ಯಂತ ಕಾಳಜಿಯಿಂದ ವಿರೋಧಿಸುತ್ತ ವಿಧವೆಯರನ್ನು 'ವೈಚಾರಿಕತೆ', 'ಜ್ಞಾನ' 'ಮಾನವೀಯತೆ' ಮುಂತಾದ ಉದಾತ್ತ ಗುಣಗಳೊಂದಿಗೆ ಕಡೆದಿರಿಸಲಾಗಿರುವುದನ್ನು ಈ ಅಧ್ಯಯನ ಗುರುತಿಸಿದೆ.

'ವಿಧವಾವಿವಾಹ' ಮತ್ತು 'ಬಾಲ್ಯವಿವಾಹ'ಗಳ ಸಮರ್ಥನೆ ಭಾರತೀಯ ಸಂದರ್ಭಕ್ಕೆ ವಿಶಿಷ್ಟವಾಗಿತ್ತು. ಇವುಗಳ ಖಂಡನೆಯಾಗಲಿ, ಸಮರ್ಥನೆಯಾಗಲಿ

ಶಾಸ್ತ್ರಾಧಾರಗಳ ನೆಲೆಯಲ್ಲಿ ನಡೆಯುತ್ತಿದ್ದುದು ಆ ಕಾಲದಲ್ಲಿ ಪ್ರಶ್ನೆಗೊಳಪಟ್ಟವು. ಬಾಲವಿಧವೆಯರ ಕೇಶಮುಂಡನವನ್ನು ಶಾಸ್ತ್ರಾಧಾರಗಳ ಮೂಲಕ ಸಮರ್ಥಿಸುವ ಸಂಪ್ರದಾಯಸ್ಥರ ನಿಲುವಿಗೆ ವಿರೋಧವನ್ನೊಡ್ಡುವುದರೊಂದಿಗೆ ಆರಂಭದ ಕಥನ ಸಾಹಿತ್ಯದಲ್ಲಿ ಜಿಜ್ಞಾಸೆಗೊಳಗಾಗುತ್ತದೆ.

ಕನ್ನಡದ ಮೊದಲ ಕಾದಂಬರಿಗಳು ಪ್ರಾದೇಶಿಕ ಸಂಸ್ಕೃತಿಯಲ್ಲಿದ್ದ ಅನಿಷ್ಟಗಳನ್ನು ವಿರೋಧಿಸುತ್ತ ಕುಟುಂಬದಲ್ಲಿ ಮಹಿಳೆಯು ಕ್ರಿಯಾಶೀಲಳಾಗಿದ್ದು ತನ್ನ ಬುದ್ಧಿಮತ್ತೆಯನ್ನು ಅನುಕರಿಸುವಂತೆ ಪ್ರಭಾವಿಸುತ್ತಾ ಬಂದಿರುವುದನ್ನು ಗುರುತಿಸುತ್ತದೆ. ಪ್ರಾಚೀನ ಸಂಸ್ಕೃತಿಯಲ್ಲಿ ಬೇರುಬಿಟ್ಟ ಅಸಮಾನತೆಯನ್ನು ಕೌಟುಂಬಿಕ ಜೀವನದ ಕಡೆಗೆ ಮುಖಮಾಡಿಯೇ ಪ್ರತಿಭಟಿಸಿದ್ದಾಳೆಂದು ಕಥನಸಾಹಿತ್ಯ ನಿರೂಪಿಸುವುದನ್ನು ಈ ಪ್ರಬಂಧದ ಅಧ್ಯಯನ ಒಳಗೊಂಡಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಬರೆದ ಲೇಖಕಿಯರು ವೈವಾಹಿಕ ಬದುಕಿನಿಂದ ದುರ್ಬಲಳಾದ ಮಹಿಳೆ ನಿರ್ಬಂಧಿತ ವೈವಾಹಿಕ ಬದುಕಿನಿಂದಲೇ ಉತ್ತರವನ್ನು ಕಂಡುಕೊಂಡಿದ್ದಾಳೆ ಎಂದು ಬಿಂಬಿಸಿದ್ದಾರೆ. ವೈಯಕ್ತಿಕ ಸಂಬಂಧಗಳಲ್ಲಿ ಹೆಣ್ಣು ಗಂಡು ಪರಸ್ಪರ ಸಹಾನುಭೂತಿ, ಪ್ರೀತಿ-ಕರುಣೆ ಹೊಂದಿದ್ದರೂ ಸಮಾಜದ ಹಿಡಿತ ವ್ಯಕ್ತಿಯ ನೋವನ್ನು ಮರೆತು ತುಳಿದಿದೆ. ಇವು ಆರ್ಥಿಕ ಬದುಕಿನೊಂದಿಗೆ ಹೆಣೆದುಕೊಂಡಿವೆ ಎನ್ನುವುದನ್ನು ಗಮನಿಸಬಹುದು ಹಾಗಾಗಿ ಕೌಟುಂಬಿಕ ಮೌಲ್ಯಗಳು ಹಾಗೂ ಆರ್ಥಿಕ ಅವಲಂಬನೆ ಮಹಿಳೆಯನ್ನು ಪ್ರತಿಭಟನೆಯ ಜಾಡಿನಿಂದ ಹಿಮ್ಮೆಟ್ಟಿಸಿವೆ ಎನ್ನುವುದು ಲೇಖಕಿಯರ ಕೃತಿಗಳಲ್ಲಿ ವ್ಯಕ್ತವಾಗಿರುವುದು ಈ ಅಧ್ಯಯನ ಚರ್ಚಿಸುತ್ತದೆ. ತಿರುಮಲಾಂಬಾ, ಕಲ್ಯಾಣಮ್ಮ, ಸರಸ್ವತಿಬಾಯಿ ರಾಜವಾಡೆ, ಕೊಡಗಿನ ಗೌರಮ್ಮ ಮುಂತಾದವರ ಕೃತಿಗಳ ಮೂಲಕ ಮಹತ್ವದ ಮಾದರಿಗಳನ್ನು ಕಂಡುಕೊಳ್ಳಲಾಯಿತು. 'ಬಾಲ್ಯವಿವಾಹ' 'ವೈಧವ್ಯ'ದಂತಹ ಮೌಲ್ಯಗಳ ವಿರುದ್ಧ ಹೋರಾಡುವುದಕ್ಕಿಂತ ಮೊದಲು ಕೇಶಮುಂಡನ, ದೇಹದಂಡನೆಯಂತಹ ವಿಕೃತಿಗಳನ್ನು ವಿರೋಧಿಸುವುದು ಅನಿವಾರ್ಯವಾಗಿತ್ತು. ಇಂತಹ ಸಂದರ್ಭಗಳಲ್ಲಿ ಲೇಖಕಿಯರು ಏಕನೆಲೆಯಲ್ಲಿ ಚಿಂತಿಸುತ್ತಾರೆ. ತಿರುಮಲಾಂಬಾರವರು 'ವೈಧವ್ಯ'ವನ್ನು ಕರ್ಮಸಿದ್ಧಾಂತದ ಹಿನ್ನೆಲೆಯಲ್ಲಿ ಚರ್ಚಿಸುವುದರೊಂದಿಗೆ 'ನಭಾ' 'ವಿರಾಗಿಣಿ' ಕೃತಿಗಳಲ್ಲಿ ವಿಧವಾ ವಿವಾಹವನ್ನು ನಿರಾಕರಿಸುತ್ತಾರೆ, ಕಲ್ಯಾಣಮ್ಮನವರು ಮಹಿಳೆಯ ದುಡಿಮೆಯ ಮಹತ್ವ ಮತ್ತು ಆರ್ಥಿಕ ಸ್ವಾವಲಂಬನೆಯ ಪರವಾದ ನಿಲುವಿನೊಂದಿಗೆ ವಿಧವಾ ವಿವಾಹದ ಪರವಾಗಿ ನಿಲ್ಲುತ್ತಾರೆ. ಈ ಇಬ್ಬರೂ ಲೇಖಕಿಯರು ಸ್ವಾನುಭವದಿಂದ ಚರ್ಚಿಸುವುದನ್ನು ಈ ಅಧ್ಯಯನ ತನ್ನ ವ್ಯಾಪ್ತಿಯಲ್ಲಿ ಶೋಧಿಸುತ್ತದೆ.

ಆರಂಭದ ಕಾದಂಬರಿಗಳು ಶಿಕ್ಷಣದಿಂದ ಪಡೆಯುವ 'ಜ್ಞಾನ' ಮತ್ತು 'ಮೌಲ್ಯ'ಗಳನ್ನು ಕುರಿತು ಚರ್ಚಿಸುತ್ತವೆ. ಹಿಂದೂ ಧರ್ಮದ ಚೌಕಟ್ಟಿನೊಳಗೇ

ಸುಧಾರಣೆ ಅಸಾಧ್ಯ, ಹೊರಗಿನಿಂದಲೂ ಬರಬೇಕಾಗುತ್ತದೆ. ಶಿಕ್ಷಣ ಮಾತ್ರ ಪ್ರತಿಭಟನೆಯ ಶಕ್ತಿ ನೀಡಬಲ್ಲದು ಎಂದು ಅಭಿಪ್ರಾಯ ಪಡುವ 'ಇಂದಿರಾ' ಮತ್ತು 'ಇಂದಿರಾಬಾಯಿ' ಕಾದಂಬರಿಗಳು ಸಾಂಪ್ರಾದಾಯಿಕತೆಯನ್ನು 'ಆಧುನಿಕತೆ'ಯೊಂದಿಗೆ ಮುಖಾಮುಖಿಯಾಗಿಸುತ್ತವೆ. ಭ್ರಷ್ಟ ಆಚರಣೆಗಳು ಧರ್ಮದ ಪರದೆಯ ಹಿಂದೆ ನುಸುಳಿಕೊಂಡಿರುವುದನ್ನು ಅನಾವರಣಗೊಳಿಸುವ, ವಸಾಹುತಶಾಹಿ ಪ್ರವೇಶದಿಂದ ಇಂಗ್ಲಿಶ್ ಶಿಕ್ಷಣದ ಅರಿವಿನಿಂದ ಧಾರ್ಮಿಕ ಸಿದ್ಧಾಂತಗಳು ಪ್ರಶ್ನೆಗೊಳಗಾಗುತ್ತವೆ. ಇದರಿಂದ ಮಠಾಧೀಶರಿಗೂ ಸಮಾಜ ಸುಧಾರಕರಿಗೂ ನಡುವೆ ತಾತ್ವಿಕ ಹಾಗೂ ಧಾರ್ಮಿಕ ಘರ್ಷಣೆಗಳುಂಟಾಗುವುದನ್ನು ಈ ಅಧ್ಯಯನದಲ್ಲಿ ಬಿಂಬಿಸಲಾಗಿದೆ.

ವಸಾಹತುಶಾಹಿ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ಹೊಸ ಸಾಂಸ್ಕೃತಿಕ ಚಿಂತನೆಗಳು ಶತಮಾನದ ಕೊನೆಯವರೆಗೂ ನಡೆದಿದೆ. ಈ ನಿಟ್ಟಿನಲ್ಲಿ ಕುವೆಂಪು, ಕಾರಂತ, ಮಾಸ್ತಿ, ಗೊರೂರು, ನಿರಂಜನ, ಎಂ.ಕೆ. ಇಂದಿರಾ, ತ್ರಿವೇಣಿ ದೇವಾಂಗನಶಾಸ್ತ್ರಿ, ಚದುರಂಗ, ಎಸ್.ಎಲ್.ಭೈರಪ್ಪ, ಪಿ.ಲಂಕೇಶ್, ಅನಂತಮೂರ್ತಿ ಮುಂತಾದ ಪ್ರಮುಖ ಲೇಖಕರ ಕೃತಿಗಳು ಈ ಅಧ್ಯಯನಕ್ಕೊಳಪಟ್ಟಿವೆ. ಕುವೆಂಪು, ಕಾರಂತ, ಮಾಸ್ತಿ, ಗೊರೂರರ ಕೃತಿಗಳು ಮಹಿಳೆಯ ಅವಲಂಬಿತ ಬದುಕಿಗೆ ಕಟ್ಟುಪಾಡುಗಳನ್ನು ಮೀರುವ ಅವಕಾಶಗಳಿಲ್ಲದೆ ಭ್ರಷ್ಟಪರಂಪರೆಯೊಳಗೆ ಹೂತು ಹೋಗಿರುವುದನ್ನು ಬಿಂಬಿಸುತ್ತವೆ. ಸಾಂಪ್ರದಾಯಿಕ ಕೋಟೆಯಲ್ಲಿ ಬಂಧಿತಳಾದ ಮಹಿಳೆ ಕಷ್ಟಪರಂಪರೆಯೊಂದಿಗೆ ಬೆರೆತು ಹೋಗಿರುವುದನ್ನು ಪುರುಷ ಸಮಾಜದ ಅಮಾನವೀಯ ದೌರ್ಜನ್ಯದಿಂದ ಪಾರಾಗುವುದೇ ದೊಡ್ಡ ಸಾಧನೆ ಎಂದು ಪ್ರತಿಬಿಂಬಿಸಿದ್ದಾರೆ. ಎಸ್.ಎಲ್.ಬೈರಪ್ಪ, ಅನಂತಮೂರ್ತಿ, ಲಂಕೇಶ್, ಚದುರಂಗ ಮುಂತಾದ ಲೇಖಕರು ಕುಟುಂಬದ ನಿಯಂತ್ರಣದಲ್ಲಿದ್ದ ಮಹಿಳೆಗೆ ಆಯ್ಕೆಗಳಿರಲಿಲ್ಲ. ಆಕೆಯನ್ನು ಬೌದ್ಧಿಕವಲಯದಿಂದ ದೂರ ಇಟ್ಟು ಪುರುಷ ಪ್ರಧಾನ ಸಂಸ್ಕೃತಿಯೊಳಗೆ ಸೇವೆಗಾಗಿ ಮೀಸಲಿಟ್ಟಿರುವುದನ್ನು ಚಿತ್ರಿಸಿದ್ದಾರೆ. ವಿಧವಾ ಮೌಲ್ಯಗಳು ವಿಧವೆಯರಿಗೆ ಹೇರಲ್ಪಟ್ಟು ನೈತಿಕ ಸಂಬಂಧದ ಏಕಮುಖ ಸೂತ್ರವನ್ನು ಮನನ ಮಾಡಿಸುತ್ತ ಬಂದಿರುವುದನ್ನು ಹಾಗೂ ಅನೈತಿಕ ಸಂಬಂಧಕ್ಕೊಳಗಾದ ವಿಧವೆ ಹೆಚ್ಚು ದುಃಖಿಯಾಗಿರುವುದನ್ನು ಈ ಅಧ್ಯಯನ ಶೋಧಿಸಿದೆ.

ತ್ರಿವೇಣಿ, ಎಂ.ಕೆ.ಇಂದಿರಾ ಮುಂತಾದ ಲೇಖಕಿಯರು ಹೊಸ ಎಚ್ಚರದಲ್ಲಿ ಬರೆದರು. ಶಿಕ್ಷಣ ತಂದುಕೊಟ್ಟ ಎಚ್ಚರ ಪ್ರತಿಭಟನೆಯ ಹಾದಿಯನ್ನು ಹಿಡಿಸುತ್ತದೆ. ಮಹಿಳೆಯ ಅಂತರ್ಯದಲ್ಲಿ ಸ್ಥಗಿತವಾದ 'ಸಹನೆ', 'ಕ್ಷಮೆ' ವಿಧೇಯತೆಯನ್ನು ಸದಾ ಚಲಾವಣೆಯಲ್ಲಿಟ್ಟ ವ್ಯವಸ್ಥೆ ಹಕ್ಕು ಸ್ಥಾಪನೆಯಮಾರ್ಗವನ್ನು ಬೆಂಬಲಿಸುವುದಿಲ್ಲ. ಇದರಿಂದ ಪ್ರತಿಭಟನೆ ಸ್ವಾಭಾವಿಕವಾಗಿದೆ ಎಂದು ಚಿತ್ರಿಸುತ್ತಾರೆ. ಆದರೆ ಆ ಕಾಲದ

ಸಮಸ್ಯೆಗಳು ಈ ಕಾಲದ ಸಮಸ್ಯೆಗಳಾಗಿ ಉಳಿದಿಲ್ಲ. ವಿಧವಾ ಮರುವಿವಾಹ ಮಹಿಳಾ ಹಕ್ಕು ಸ್ಥಾಪನೆ ಉದ್ಯೋಗದಲ್ಲಿ ಸಮಾನ ಅವಕಾಶ ವಿಧವಾ ಮೀಸಲಾತಿಗಳಿಗಾಗಿ ಹೋರಾಡುವ ತುರ್ತನ್ನು ಇವರ ಕೃತಿಗಳು ಅನಾವರಣಗೊಳಿಸುತ್ತವೆ. ಶಿಷ್ಟ ಕನ್ನಡ ಸಾಹಿತ್ಯದಲ್ಲಿ ಬೌದ್ಧಿಕ ಚಟುವಟಿಕೆಗಳಿಗೆ ಆ ಕಾಲದಲ್ಲಿ ಪ್ರೋತ್ಸಾಹ ದೊರೆತದ್ದರ ಫಲವಾಗಿ ತಮ್ಮನ್ನು ಅಭಿವ್ಯಕ್ತಿಸಿಕೊಳ್ಳುವ ಪ್ರಯತ್ನ ಮಾಡಿರುವುದು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಕೆಳವರ್ಗದ ಮಹಿಳೆಯರ ನಿರಂತರ ಸಾಮಾಜಿಕ ಉತ್ಪಾದನೆ ಆರ್ಥಿಕ ಸ್ವಾತಂತ್ರ್ಯ ನೀಡಲು ವಿಫಲವಾಗಿರುವುದು, ಅದರಲ್ಲೂ ವಿಧವೆಯ ಆರ್ಥಿಕ ಸ್ಥಿತಿ ಚನ್ನಾಗಿಲ್ಲದ ಕಾರಣ ಆಕೆ ಅಂಚಿಗೆ ಸರಿಯುವುದನ್ನು ಲೇಖಕಿಯರು ಗುರುತಿಸಿದ್ದಾರೆ. ವಿಧವೆಯ ದೌರ್ಬಲ್ಯಗಳು ಆಳುವವರ ಇಚ್ಚೆಗೆ ಅನುಕೂಲವಾದಾಗ ಸೇವಾಶ್ರಮ ಬೆಳೆದು ನಿಂತಿದೆ. ಇದನ್ನು ಪ್ರಶ್ನಿಸಲಾರದ ವಿಧವೆ ದಮನಿತ ಜೀವನಕ್ಕೆ ತನ್ನನ್ನು ಒಡ್ಡಿಕೊಂಡಿರುವುದನ್ನು ಸ್ವಾತಂತ್ರ್ಯ ಪೂರ್ವದ ಕಥನ ಸಾಹಿತ್ಯ ತೆರೆದಿಡುವುದನ್ನು ಈ ಅಧ್ಯಯನ ಶೋಧಿಸಿಕೊಳ್ಳುತ್ತದೆ.

'ವೈಧವ್ಯ' ತಂದ ಅಮಾನವೀಯ ಬದುಕನ್ನು ಸ್ವಾತಂತ್ರ್ಯ ಪೂರ್ವ ಕಥನ ಸಾಹಿತ್ಯ ವಿಭನ್ನ ಬಗೆಗಳಲ್ಲಿ ಜಿಜ್ಞಾಸೆಗೊಳಿಸುತ್ತದೆ. ಪರಂಪರೆಯಿಂದ ಬಂದ ಸಾಮಾಜಿಕ ಮೌಲ್ಯಗಳನ್ನು ಪ್ರಶ್ನಿಸುತ್ತ, ಸಂಪ್ರದಾಯ ಬದ್ಧ ವಿಧವಾ ಮೌಲ್ಯಗಳನ್ನು ಸಂಸ್ಕೃತಿ ವಿಶಿಷ್ಟ ನೆಲೆಯಲ್ಲಿ ಪರಿಶೀಲಿಸಿದ್ದಾರೆ. ಈ ಹಿನ್ನೆಲೆಯಿಂದ ಕುವೆಂಪು, ಕಾರಂತರ ಕೃತಿಗಳು ಮುಖ್ಯವಾಗುತ್ತವೆ. ಸ್ವಾತಂತ್ರ್ಯಾ ನಂತರದ ಕಥನ ಸಾಹಿತ್ಯ 'ವೈಧವ್ಯ'ವನ್ನು 'ಶಿಕ್ಷಣ', 'ಉದ್ಯೋಗ', 'ವಿಧವಾ ಮರುವಿವಾಹ'ದ ನೆಲೆಯಲ್ಲಿ ಚರ್ಚಿಸುತ್ತವೆ. 'ವೈಧವ್ಯ'ವನ್ನು ವಿಶಿಷ್ಟ ಆಚರಣೆಯನ್ನಾಗಿ ವಿಧವೆಯರಿಗೆ ಹೇರುವ ಕ್ರಮವನ್ನು ಈ ಸಂದರ್ಭದ ಕೃತಿ ಅತ್ಯಂತ ತೀವ್ರವಾಗಿ ವಿರೋಧಿಸುವುದನ್ನು ಗಮನಿಸಲಾಗಿದೆ. ಪರಂಪರಾಗತ ಅರ್ಥರಹಿತ ಮೌಲ್ಯಗಳನ್ನು 'ಕನ್ಯಾಬಲಿ', 'ಅವಳ ಉದ್ಧಾರ', 'ಫಣಿಯಮ್ಮ' ' ದೂರದ ಬೆಟ್ಟ' 'ಶುಭದಾ' ಮುಂತಾದ ಕೃತಿಗಳು ಗಂಭೀರವಾಗಿ ವಿಶ್ಲೇಷಿಸುತ್ತವೆ.

ಸ್ವಾತಂತ್ರ್ಯೋತ್ತರದಲ್ಲಿ ಒಡಮೂಡಿದ ಕಥನ ಸಾಹಿತ್ಯದಲ್ಲೂ 'ವೈಧವ್ಯ' ಪ್ರಧಾನ ನೆಲೆಯಲ್ಲಿ ಚರ್ಚೆಗೊಳಪಟ್ಟಿರುವುದೂ ವಿಶೇಷ ಸಂಗತಿ. ವಿಧವಾ ಮೌಲ್ಯಗಳು ವಿಧವೆಯರನ್ನು ಕಾಣುತ್ತಿದ್ದ ರೀತಿ ಅಮಾನವೀಯವಾಗಿದ್ದು ಆಕೆಯನ್ನು ಸೇವೆಗೆ ಸೀಮಿತಗೊಳಿಸಿಕೊಂಡಿದ್ದು ಅನೇಕ ಕೃತಿಗಳು ಬಹುಮುಖ್ಯ ಆಯಾಮವಾಗಿ ಚಿಂತಿಸಿದುದನ್ನು ಈ ಪ್ರಬಂಧದಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಇದನ್ನು ಕಾರಂತರ 'ಮರಳಿಮಣ್ಣಿಗೆ' 'ಅಳಿದ ಮೇಲೆ' 'ಮಲೆಗಳಲ್ಲಿಮದುಮಗಳು' ಕೃತಿಗಳು ವಿಶ್ಲೇಷಿಸುತ್ತವೆ. ಶೈಕ್ಷಣಿಕ ಪ್ರಗತಿಯಿಂದ ಹೊರಜಗತ್ತಿಗೆ ಅಡಿಯಿಟ್ಟ ವಿಧವೆ ಅನೇಕ ಹೊಸ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಬದಲಾದ ಬದುಕಿನಲ್ಲುಂಟಾದ

ದುರ್ದೆಸೆಗಳನ್ನು ಅಭಿವ್ಯಕ್ತಿಗೆ ಗುರಿಪಡಿಸುವ ಸ್ವಾತಂತ್ರ್ಯೋತ್ತರ ಕೃತಿಗಳು ಮುಖ್ಯವಾಗುತ್ತವೆ.

ಬ್ರಾಹ್ಮಣ ಸಮಾಜದ 'ವೈಧವ್ಯ' ಬಹುದೊಡ್ಡ ಸಮಸ್ಯೆಯಾಗಿ ಹರಡಿಕೊಂಡು ವಿಧವೆ ಕ್ರೌರ್ಯಕ್ಕೊಳಗಾಗುವುದನ್ನು ಕೆರೂರು, ಗುಲ್ವಾಡಿ, ತಿರುಮಲಾಂಬಾ, ಕಲ್ಯಾಣಮ್ಮ, ರಾಜವಾಡೆ, ಗೌರಮ್ಮ, ತ್ರಿವೇಣಿ, ಎಂ.ಕೆ. ಇಂದಿರಾ, ಎಸ್.ಎಲ್.ಬೈರಪ್ಪ, ಶಿವರಾಮಕಾರಂತ, ಅನಂತಮೂರ್ತಿ, ಮಾಸ್ತಿ, ಗೊರೂರು ಮುಂತಾದ ಪ್ರಮುಖ ಲೇಖಕರು ತಮ್ಮ ಕೃತಿಗಳಲ್ಲಿ ವಿಶ್ಲೇಷಿಸುತ್ತಾರೆ. ಪ್ರಾರಂಭದ ಕೃತಿಗಳು 'ಬಾಲ್ಯವಿವಾಹ' – ವೈಧವ್ಯವನ್ನು ಕರ್ಮಸಿದ್ಧಾಂತದ ನೆಲೆಯಲ್ಲಿ ರೂಢಿಯಲ್ಲಿ ಸ್ಥಾಪಿತ ಮೌಲ್ಯವಾಗಿರುವುದನ್ನು ಪ್ರಶ್ನಿಸುತ್ತವೆ. 'ವಿಧವೆ'ಯ ತ್ಯಾಗ, ಔದಾರ್ಯವನ್ನು ಪುರುಷ ಪ್ರಧಾನ ಸಂಸ್ಕೃತಿ ಬಹಳವಾಗಿ ನಿರೀಕ್ಷಿಸುವುದನ್ನು ಕೆಲವು ಕೃತಿಗಳು ಎತ್ತಿ ಹಿಡಿಯುತ್ತವೆ. ಸಾಂಪ್ರದಾಯಿಕ ಇಬ್ಬಗೆಯ ಮೌಲ್ಯಗಳು ಶೋಷಣಾ ಚಕ್ರದಿಂದ ಹೊರಬರದಂತೆ ತಡೆಯುವುದನ್ನು ಚರ್ಚಿಸುತ್ತವೆ.

ಮಹಿಳೆಯ ಬದುಕಿಗೆ ಪುರುಷನ ರಕ್ಷಣೆ ಅಗತ್ಯ ಎಂದು ಭಾವಿಸುವ ವ್ಯವಸ್ಥೆ 'ವಿಧವೆ'ಯ ಬದುಕನ್ನು ಮರುವಿವಾಹದಿಂದ ದೂರ ಇಡುವ ಹುನ್ನಾರದ ಹಿಂದಿನ ಪುರುಷ ಸಮಾಜದ ಇಂಗಿತವನ್ನು ಪ್ರಶ್ನಿಸುತ್ತವೆ. ತನ್ನ ಕಾಮಕ್ಕಾಗಿ 'ವಿಧವೆ'ಯನ್ನು ಬಳಸಿಕೊಳ್ಳುವ ಪುರುಷ ಕಳಂಕವನ್ನು ತಾನು ಹೊರದೆ ಆಕೆಗೆ ಹೊರಿಸಿ ಅಪರಾಧಿ ಸ್ಥಾನದಲ್ಲಿರಿಸುವ ಕೃತ್ಯವನ್ನು 'ಬನಶಂಕರಿ' ಕಾದಂಬರಿಯಲ್ಲಿ ಅತ್ಯಂತ ಖಚಿತವಾಗಿ ಪ್ರಶ್ನಿಸುವುದನ್ನು ಈ ಪ್ರಬಂಧದಲ್ಲಿ ಗಮನಿಸಲಾಗಿದೆ. ಕಾಮಸಂಬಂಧಿ ವಿಚಾರದಲ್ಲಿ ಗಂಡು ಹೆಣ್ಣು ಸಮಾನಭಾಗಿಗಳಾದರೂ ಅನ್ಯಾಯಕ್ಕೊಳಗಾಗುವುದು ಮಹಿಳೆ. ಇಂತಹ ಅನ್ಯಾಯಕ್ಕೆ ಕಾರಣವಾದ ಪುರುಷ ರಾಜಕಾರಣದ ಬಗೆಗೆ ತೀವ್ರ ಅಸಮಾಧಾನವನ್ನು ಚದುರಂಗರ 'ವೈಶಾಖ' ಕಾದಂಬರಿ ವ್ಯಕ್ತಪಡಿಸುತ್ತದೆ. ಇಂತಹ ಕಾಮಸಂಬಂಧಿ ನ್ಯಾಯಗಳು ದ್ವಿಸ್ತರ ನೀತಿಯನ್ನು ಅನುಸರಿಸುವುದನ್ನು ಈ ಕಾದಂಬರಿ ಅನ್ವೇಷಿಸುತ್ತದೆ. ಇಂಥ ಅನ್ವೇಷಣೆಗಳಿಂದಲೇ 'ವಿಧವೆ'ಯಾದ ಒಂಟಿ ಮಹಿಳೆಯ ಮೇಲೆ ನಡೆಯುವ ಆಕ್ರಮಣಶೀಲತೆಯ ನೆಲೆಗಳನ್ನು ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ.

ಮಹಿಳೆಯ ಬದುಕನ್ನು 'ವಿವಾಹ' ಮತ್ತು 'ಕುಟುಂಬ'ದ ಸಂಸ್ಥೆಗಳಿಗೆ ಸೀಮಿತಗೊಳಿಸಿದ ಸಾಮಾಜಿಕ ಸನ್ನಿವೇಶದಲ್ಲಿ ಅವಳ ಆಲೋಚನೆಗಳೂ ಈ ಪರಧಿಯೊಳಗೆ ಗಸ್ತು ತಿರುಗುವುದು ಸಹಜ. ವಿಧವೆಯ ಬದುಕು ನೆಲೆಕಳೆದುಕೊಂಡಾಗ 'ಮರುವಿವಾಹ'ಕ್ಕೂ ಪುರುಷ ಪ್ರಧಾನ ಸಮಾಜದ ಪರವಾನಗಿ ಸಿಗದೆ 'ವಿವಾಹ' 'ಕುಟುಂಬ' ಸಂಸ್ಥೆಯಿಂದ ದೂರ ಸರಿದಿದ್ದಾಳೆ. ಇಂಥ ಸಂದರ್ಭಗಳಲ್ಲೆಲ್ಲ ನೈಸರ್ಗಿಕ ಆಸೆಗಳು ಪುರುಷನ ಪ್ರಲೋಭನೆಗಳಿಗೆ ಸಿಲುಕಿ ವಿಧವೆ

ಬದುಕು ದುರಂತಕ್ಕೊಳಗಾಗಿರುವುದನ್ನು ಅನೇಕ ಕೃತಿಗಳು ಶೋಧಿಸುತ್ತವೆ. ಘಟಾಶ್ರಾದ್ಧ ವೈಶಾಖ, ಬನಶಂಕರಿ ಕೃತಿಗಳು ಆ ಕಾಲಘಟ್ಟದ ಸಾಮಾಜಿಕ ವ್ಯವಸ್ಥೆ ವಿಧವೆಯ ಮಾನಸಿಕ ಒಳತೋಟಿಗಳನ್ನು ಗ್ರಹಿಸಿರುವ ಬಗೆಯನ್ನು ಸ್ವಎಚ್ಚರದಿಂದ ಪ್ರತಿಪಾದಿಸಿದ ಅಭಿವ್ಯಕ್ತಿ ನೆಲೆಗಳನ್ನು ಕುರಿತು ಈ ಪ್ರಬಂಧ ವಿಶ್ಲೇಷಿಸುತ್ತದೆ. 'ಮರುವಿವಾಹ' ವಿಧವೆಗೆ ನಿಷೇಧವಾಗಿದ್ದು ವಿಧುರರು ಎಷ್ಟು ಮದುವೆಯಾದರೂ ಪ್ರಶ್ನೆಮಾಡದ ಸಮಾಜದ ದ್ವಿಮುಖ ನೀತಿ ಅಲಿಖಿತ ಶಾಸನವಾಗಿದ್ದು ಒಪ್ಪಿತ ಮೌಲ್ಯವಾಗಿರುವುದನ್ನು ಕುವೆಂಪು ತಮ್ಮ 'ಆದರ್ಶ ಸಾಧನೆ' 'ಔದಾರ್ಯ' ಕೃತಿಯಲ್ಲಿ ವಿಶ್ಲೇಷಿಸುತ್ತಾರೆ. ಹಾಗೆಯೇ 'ನನ್ನದೇವರು' ಕೃತಿಯ ನಾಯಕಿ ವಿಧವೆ ತನ್ನ ಭಾವ ಅವಿವಾಹಿತನಾದವನನ್ನು ಮನಸಾರೆ ಅಪೇಕ್ಷೆ ಪಟ್ಟು ಮರುಮದುವೆಯಾಗಲಾರದೆ ಹತಾಶಳಾಗಿ ಬದುಕುವುದು ಚರ್ಚಿತವಾಗಿದೆ. ಇಂಥ ಏಕಮುಖ ನೀತಿ ಸಾಮಾಜಿಕ ಮೌಲ್ಯವಾಗಿ ವಿಧವೆಯರ ಬದುಕನ್ನು ದಮನ ಮಾಡಿ ಲಿಂಗಅಸಮಾನತೆಯನ್ನು ಹುಟ್ಟುಹಾಕಿರುವುದನ್ನು ಈ ಪ್ರಬಂದ ಚರ್ಚಿಸುತ್ತದೆ. ಚಿಕ್ಕ ವಯಸ್ಸಿನ ಸುಂದರ ಯುವತಿಯರನ್ನು 'ಮರುವಿವಾಹ'ವಾಗುವ ವಿಧುರರನ್ನು ವಿರೋಧಿಸುವ ಮನಸ್ಸುಗಳು ಆ ಕಾಲಮಾನದಲ್ಲಿ ಎಚ್ಚರಗೊಂಡಿದ್ದವು. ಆದರೆ ಈ ಎಚ್ಚರ ಪ್ರತಿಭಟನೆಗಳು ಫಲಕಾರಿಯಾಗುತ್ತಿರಲಿಲ್ಲ ಎನ್ನುವುದೂ ಕುವೆಂಪುರವರ 'ಮೀನಾಕ್ಷಿಯ ಮನೆ ಮೇಷ್ಟರು' ನಿರೂಪಿಸುತ್ತದೆ. ಮಕ್ಕಳನ್ನು ಪಡೆದು ಮರಣ ಹೊಂದುವ ಮಹಿಳೆ ತನ್ನ ಪತಿಗೆ ಇನ್ನೊಂದು 'ವಿವಾಹ' ಮಾಡಿಕೊಳ್ಳಲು ಕಾರಣಳಾಗುತ್ತಾಳೆ. ಆದರೆ ಮಕ್ಕಳ ತಾಯಿಯಾದವಳು ಪತಿಯನ್ನು ಕಳೆದುಕೊಂಡು ವಿಧವೆಯಾದರೆ 'ಮರುಮದುವೆ'ಗೆ ಅವಕಾಶವಿಲ್ಲದೆ ವಂಚಿತಳಾಗುತ್ತಾಳೆ. ವ್ಯವಸ್ಥೆ 'ಮರುವಿವಾಹ'ದ ಆಯ್ಕೆಯನ್ನು ಗಂಡಿಗೆ ಮಾತ್ರ ನೀಡಿರುವುದನ್ನು ಕುವೆಂಪುರವರ 'ಔದಾರ್ಯ' ಕಥೆ ವಿವರಿಸುತ್ತದೆ. 'ಮರುವಿವಾಹ'ದ ಅವಕಾಶಗಳಿಂದ ಬದುಕು ಕಟ್ಟಿಕೊಳ್ಳುವ 'ಪುರುಷ' ಸಮಾಜದ ಮೇಲ್‌ಸ್ತರದಲ್ಲೂ ಮಹಿಳೆ ಕೆಳಸ್ತರದಲ್ಲೂ ನಿಲ್ಲುತ್ತಾರೆ. ವಿಧವೆ ತನ್ನ ಸಹಜ ಕಾಮನೆಗಳನ್ನು ಈಡೇರಿಸಿಕೊಳ್ಳಲು ಅನ್ಯಮಾರ್ಗದಲ್ಲಿ ಸಾಗುವಾಗ ಆಕೆ 'ವ್ಯಭಿಚಾರಿಣಿ'ಯಾಗಿ ಬಿಂಬಿತವಾಗುವುದನ್ನು ಕುವೆಂಪುರವರ 'ವೈರಾಗ್ಯದ ಮಹಿಮೆ' 'ಕಾನೂರು ಹೆಗ್ಗಡತಿ' ಕೃತಿಗಳು ವಿಶ್ಲೇಷಿಸುತ್ತವೆ. ಪುರುಷ ಪ್ರಧಾನ ವ್ಯವಸ್ಥೆಯಿಂದ ವಿಧವೆಯರನ್ನು ಬಂಧಿಸಿದ್ದ ವಿಧವಾ ಮೌಲ್ಯಗಳು 'ಮರುವಿವಾಹ'ದ ಆಯ್ಕೆಯಿಂದ ವಂಚಿಸಿ ದುರ್ಭರವಾದ ಬದುಕಿಗೆ ದಾರಿಮಾಡಿಕೊಟ್ಟ ಪುರುಷ ಸಮಾಜದ ಪ್ರಲೋಭನೆಗಳನ್ನು ತೆರೆದಿಡುವ ಕಥನ ಸಾಹಿತ್ಯವನ್ನು ಈ ಪ್ರಬಂಧ ಶೋಧಿಸುತ್ತದೆ.

ಸ್ವಾತಂತ್ರ್ಯ ಪೂರ್ವದ ಕಾಲಘಟ್ಟದಲ್ಲಿ ಕೆಳಜಾತಿ, ಕೆಳವರ್ಗಗಳಲ್ಲಿ ವಿರಳವಾಗಿದ್ದ 'ಕೂಡಿಕೆ' 'ಸೀರುಡಿಕೆ' ಪದ್ಧತಿಗಳು 'ವಿಧವೆ' ಬಾಳಿಗೆ ಬೆಳಕು

ನೀಡಿರುವುದು ಗಮನಾರ್ಹವಾದುದು. ಈ ಪದ್ಧತಿಯನ್ನು ಕುವೆಂಪುರವರು 'ಮಲೆಗಳಲ್ಲಿ ಮದುಮಗಳು' ಕೃತಿಯಲ್ಲಿ ಪುರುಷ ಹಿತಾಸಕ್ತಿ ನೆಲೆಯಲ್ಲಿ ಚರ್ಚಿಸುತ್ತಾರೆ. ವೈಯಕ್ತಿಕ ದೌರ್ಬಲ್ಯದೊಂದಿಗೆ ಸಾಮಾಜಿಕ ಒತ್ತಡವೂ ಸೇರಿದಂತೆ ಲೈಂಗಿಕ ಶೋಷಕತೆಗೆ ತಮ್ಮನ್ನು ತೆತ್ತುಕೊಳ್ಳುವ ಸ್ತ್ರೀ ಪಾತ್ರಗಳು ಕುವೆಂಪುರವರ ಕಾದಂಬರಿಗಳಲ್ಲಿ ಅನಾವರಣಗೊಂಡಿವೆ. 'ಸಹನೆ', 'ತ್ಯಾಗ', 'ಔದಾರ್ಯ'ಗಳು ಮಹಿಳೆಗೆ ಮೌಲ್ಯಗಳಾಗಿದ್ದು ಅವುಗಳನ್ನು ಮೀರುವ ಪ್ರಯತ್ನಗಳು ವಿಫಲವಾಗಿ ದುರಂತದಲ್ಲಿ ಕೊನೆಯಾಗುವ ವಿಧವೆಯರ ಜೀವನ ಹಲವಾರು ನೆಲೆಗಳಲ್ಲಿ ನವೋದಯ ಮತ್ತು ಪ್ರಗತಿಶೀಲ ಸಂದರ್ಭದ ಕಥನ ಸಾಹಿತ್ಯ ಕಟ್ಟಿಕೊಡುತ್ತವೆ. ಪುರುಷ ಪ್ರಧಾನ ವ್ಯವಸ್ಥೆಯ ಆಳುವ ನೀತಿಯನ್ನು ಹಾಗೂ ದಮನಕಾರಿ ನೆಲೆಯನ್ನು ಸ್ವಾತಂತ್ರ್ಯಪೂರ್ವದ ಕನ್ನಡ ಕಥನ ಸಾಹಿತ್ಯ ಬಹುಮುಖ ನೆಲೆಯಲ್ಲಿ ಪ್ರಶ್ನಿಸುತ್ತವೆ. ಸಾಂಪ್ರದಾಯಿಕ ಮೌಲ್ಯಗಳ ಬಲೆಯಿಂದ ಕಳಚಿಕೊಳ್ಳುವ ಪ್ರಯತ್ನದಲ್ಲಿ ಮತ್ತೆ ಮತ್ತೆ ಸೋಲುವುದನ್ನು ಆ ಸೋಲಿಗೆ ಕಾರಣವಾದ ವ್ಯವಸ್ಥೆ ದಮನಕಾರಿಯಾಗಿರುವುದನ್ನು ಮನಗಾಣಬಹುದು.

ಸ್ವಾತಂತ್ರ್ಯ ಪೂರ್ವದಿಂದ ಇಲ್ಲಿಯ ತನಕ ಬಂದ ಕಥನ ಸಾಹಿತ್ಯ ವಿಧವೆಯ ಪ್ರತಿರೋಧವನ್ನು ಅತ್ಯಂತ ಕಾಳಜಿಯಿಂದ, ನೈಜತೆಯಿಂದ, ವಿಭಿನ್ನ ಸೂಕ್ಷ್ಮಗಳೊಂದಿಗೆ ದಾಖಲಿಸುತ್ತ ಬಂದಿರುವುದು ಬಹುಮುಖ್ಯ ಸಂಗತಿಯಾಗಿದೆ. ಆದರೂ ಪ್ರಾರಂಭಿಕ ಘಟ್ಟದಲ್ಲಿ ರಚನೆಯಾದ ಕೃತಿಗಳಲ್ಲಿ ವಿಧವೆಯರ ಪ್ರತಿಭಟನೆಗಿಂತ ಮುಖ್ಯವಾಗಿ ಪರಿಸ್ಥಿತಿಯೊಂದಿಗೆ ರಾಜಿಮಾಡಿಕೊಳ್ಳುವುದೇ ಚಿತ್ರಣಗೊಂಡಿವೆ. ವಿಧವೆಯ ಬದುಕು ಸ್ವಲ್ಪ ಎಚ್ಚರ ತಪ್ಪಿ ವರ್ತಿಸಿದಾಗಲೂ ಅತ್ಯಂತ ಹೀನವಾಗುವ ಅಪಾಯಗಳು ಅಭಿವ್ಯಕ್ತವಾಗಿವೆ. ಇಂತಹ ಅಪಾಯದಿಂದ ಪಾರಾಗಲಾರದೆ ದುರಂತದಲ್ಲಿ ಸಾಯುವುದು ಸಮಾಜದ ದೃಷ್ಟಿಯಲ್ಲಿ ಅನಿಷ್ಟವಾಗುತ್ತದೆ. ಪುರುಷನ ಸ್ವೇಚ್ಛಾಚಾರ ಸಮಾಜದ ದೃಷ್ಟಿಯಲ್ಲಿ ಹೊಸದಾಗಿ ತೋರುವುದಿಲ್ಲ. ಇವುಗಳನ್ನು ಕಥೆ ಕಾದಂಬರಿಗಳು ತೆರೆದಿಡುತ್ತವೆ. ಅನೇಕ ಸಂದರ್ಭಗಳಲ್ಲಿ ವಿಧವೆಯರು ಆಂತರ್ಯದಲ್ಲಿ ಹೊಂದಿದ್ದ ವೈಚಾರಿಕತೆಗೆ ಬದ್ಧರಾಗಿರುವುದೂ ಆ ಮೂಲಕ ದಿಟ್ಟತನದಿಂದ ಪ್ರತಿಭಟಿಸುವುದೂ ಹೊರಹೊಮ್ಮಿದೆ. 'ವೈಧವ್ಯ' ಎಂಬ ಸಂಸ್ಥೆಯನ್ನು ಕಟುವಾಗಿ ಟೀಕಿಸುವ ಮೂಲಕ ಒಳಗಿನ ಮತ್ತು ತೋರಿಕೆಯ ನಿಜಗಳನ್ನು ಮುಖಾಮುಖಿಯಾಗಿಸುತ್ತಲೇ ವೈಧವ್ಯ ಮತ್ತು ದಾಂಪತ್ಯದಲ್ಲಿರುವ ಸಖ್ಯದ ಅರ್ಥವನ್ನು ಶೋಧಿಸಿಕೊಳ್ಳುತ್ತವೆ.

ಪುರುಷನ ಸ್ವೇಚ್ಛಾಚಾರಕ್ಕೆ ಅಡ್ಡಿಯಾಗದೆ ವಿಧವೆಯರ ಬದುಕು ಪಾಪಪ್ರಜ್ಞೆಯಿಂದ ಸಾವಿನೊಂದಿಗೆ ಸೆಣಸಾಡುವ ಪಾತ್ರಗಳ ಸೃಷ್ಟಿಯೊಂದಿಗೆ ಹಲವಾರು ಕೃತಿಗಳು ವ್ಯವಸ್ಥೆಯ ಭ್ರಷ್ಟತೆಯನ್ನು ಬಯಲಿಗೆಳೆದಿವೆ. ಕರ್ಮಸಿದ್ಧಾಂತದ ಹಿನ್ನೆಲೆಯಲ್ಲಿ

‘ವಿಧವಾಮರುವಿವಾಹ’ ವಿಫಲವಾಗುವುದನ್ನು ಎಸ್.ಎಲ್.ಭೈರಪ್ಪನವರ ‘ವಂಶವೃಕ್ಷ’ ಕಾದಂಬರಿ ಧರ್ಮ ಅಧರ್ಮಗಳ ಜಿಜ್ಞಾಸೆಯೊಂದಿಗೆ ಮಂಡಿಸುತ್ತದೆ. ವ್ಯವಸ್ಥೆಯಿಂದ ನೂರಾರು ವರ್ಷಗಳಿಂದ ಬಳುವಳಿಯಾಗಿ ಬಂದ ನೈತಿಕ ಸಂಬಂಧದ ಏಕಮುಖ ಸೂತ್ರ ವಿಧವೆಗೆ ಮನನವಾಗಿಸುವುದರೊಂದಿಗೆ ಈ ಸೂತ್ರವನ್ನು ಪಾಲಿಸುವುದು ತಪ್ಪಿದಾಗ ತನ್ನ ತಪ್ಪಿಗೆ ತನ್ನನ್ನೇ ಆರೋಪಿಸಿಕೊಂಡಿದ್ದಾಳೆ. ಇಂತಹ ಮಾನಸಿಕ ಒತ್ತಡವನ್ನು ಸಮಾಜ ಹೇರುವುದನ್ನು ಕಥನ ಸಾಹಿತ್ಯ ಪ್ರಶ್ನಿಸುವುದನ್ನು ಈ ಪ್ರಬಂಧ ಶೋಧಿಸುತ್ತದೆ.

ವೈಧವ್ಯದ ಸಮಸ್ಯೆ ಮಹಿಳೆಗೆ ಹೊರೆಯಾಗಿ ಸಂಭವಿಸಿದಾಗ, ಇದರಿಂದ ಹೊರಬರಲು ಶತಮಾನಗಳೇ ಕಳೆದರೂ ಸಾಧ್ಯವಾಗದಿರುವುದು ವ್ಯವಸ್ಥೆಯ ದುರಂತ. ಕಳೆದ ಐವತ್ತು ವರ್ಷಗಳಲ್ಲಿ ಮಹಿಳೆಯರ ವೈವಾಹಿಕ ಜೀವನದಲ್ಲಿ ಕೆಲಮಟ್ಟಿನ ಬದಲಾವಣೆಗಳಾಗಿವೆ. ಆದರೆ ಕ್ರಮಿಸಿದ ದಾರಿಗಿಂತ ತಲುಪಬೇಕಾದ ಗುರಿಯ ದೂರ ಹೆಚ್ಚಾಗಿದೆ. ಹಲವಾರು ರಂಗಗಳಲ್ಲಿ ಸಾಧನೆಮಾಡಿ ಸಾಮಾಜಿಕ ಕಟ್ಟುಪಾಡುಗಳಿಂದ ನೊಂದ ವಿಧವೆಯರು ಬದುಕುವ ದಾರಿಯನ್ನು ಸುಗಮಗೊಳಿಸಿಕೊಂಡಿದ್ದಾರೆ. ಇಂದಿನ ವೈಚಾರಿಕ ಯುಗದಲ್ಲಿಯೂ ವೈರುದ್ಯಗಳನ್ನು ಅರಗಿಸಿಕೊಂಡು ಬದುಕಿ ಬಂದ ಸನಾತನ ಮೌಲ್ಯ ವಿಧವಾ ಮೌಲ್ಯ, ಇಂಥ ಮೌಲ್ಯಗಳ ಅಂಧ ಸಂಸ್ಕೃತಿಯ ಪೊರೆಕಳಚುವಲ್ಲಿ ಸ್ವಾತಂತ್ರ್ಯ ನಂತರದ ಕನ್ನಡ ಕಥನ ಸಾಹಿತ್ಯ ನಡೆಸಿರುವ ಪ್ರಯತ್ನಗಳು ಅನಾವರಣಗೊಂಡಿವೆ.

ಸ್ವಾತಂತ್ರ್ಯ ಪೂರ್ವದ ಕಥನ ವಿನ್ಯಾಸವನ್ನು ಸಾಹಿತ್ಯದ ಸಂಸ್ಕೃತಿ ಗ್ರಹಿಸಿಕೊಂಡ ಕ್ರಮದೊಂದಿಗೆ ಸ್ವಚ್ಛರದಿಂದ ಪ್ರತಿಪಾದಿಸಿದ ಅಭಿವ್ಯಕ್ತಿ ನೆಲೆಗಳನ್ನು ಈ ಮಹಾಪ್ರಬಂಧದಲ್ಲಿ ಗಮನಿಸಲಾಗಿದೆ. ನಮ್ಮ ಪ್ರಾಚೀನ ಸಂಸ್ಕೃತಿ, ಪರಂಪರೆಯ ನೆಲೆಗಳು ಕಟ್ಟಿಕೊಂಡ ವಿಧವಾ ಮೌಲ್ಯಗಳು ಶೈಕ್ಷಣಿಕ ಪ್ರಭಾವಲಯದಲ್ಲಿ ಪ್ರಶ್ನೆಗೊಳಗಾಗುತ್ತವೆ. ಇದನ್ನು ಸ್ವಾತಂತ್ರ್ಯ ನಂತರದ ಕಥನ ಸಾಹಿತ್ಯಗಳು ಚರ್ಚೆಗೊಳಪಡಿಸಿರುವುದು ಈ ಪ್ರಬಂಧದ ಮುಖ್ಯ ಆಶಯವಾಗಿದೆ. ಬಾಲವಿಧವೆಯರು ಮೌಲ್ಯಗಳ ಮುಸುಕಿನಲ್ಲಿ ಕ್ರೌರ್ಯಕ್ಕೊಳಗಾಗುವುದನ್ನು ಕಟ್ಟಿಕೊಟ್ಟ ಕೃತಿಗಳು ಪ್ರೌಢವಿಧವೆಯರ ಹೋರಾಟದ ಬದುಕಿನ ಮೇಲೆ ಬೆಳಕು ಚೆಲ್ಲುತ್ತವೆ.

ಸ್ವಾತಂತ್ರ್ಯ ಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ವೈಧವ್ಯದ ಪ್ರತಿನಿಧೀಕರಣ ಎಂಬ ಅಧ್ಯಯನದಲ್ಲಿ ಕನ್ನಡದ ಮೊದಲ ಘಟ್ಟದ ಲೇಖಕರು, ಲೇಖಕಿಯರು ಮಹಿಳಾಪರ ಚಿಂತನೆಗೆ ಕಥನ ಪ್ರಕಾರವನ್ನು ಬಳಸಿಕೊಂಡಿರುವುದು, ಹಾಗೂ ಅವರ ಸಾಮಾಜಿಕ ಹಿನ್ನೆಲೆಯ ಸ್ವರೂಪವನ್ನು ವಿವೇಚಿಸಲಾಗಿದೆ. ಭಾರತದ ಸ್ವಾತಂತ್ರ್ಯ ಹೋರಾಟ ತೀವ್ರವಾಗುತ್ತಿದ್ದಂತೆ ಮಹಿಳೆಯರು ಕ್ರಿಯಾಶೀಲರಾಗಿರುವುದನ್ನು

ಗುರುತಿಸಬಹುದು. ಸ್ತ್ರೀಶಿಕ್ಷಣವೂ ವ್ಯಾಪಕವಾಗತೊಡಗಿತು. ಇದರಿಂದ ಸಂವೇದನಾಶೀಲ ಬರಹಗಾರರು ಮಹಿಳಾ ಸಮಸ್ಯೆಗಳನ್ನು ಆಯ್ದುಕೊಂಡು ಗಟ್ಟಿ ಬರಹಗಳನ್ನು ನೀಡಿದರು. ನವೋದಯ ಹಾಗೂ ಪ್ರಗತಿಶೀಲ ಸಾಹಿತ್ಯದಲ್ಲಿ ಗುರುತಿಸಿಕೊಂಡ ಬರಹಗಾರರು ಸ್ತ್ರೀಸಂವೇದನೆಯ ನಿಜದ ಶೋಧಕ್ಕೆ ಪ್ರಾಮಾಣಿಕವಾಗಿ ಪ್ರಯತ್ನಿಸಿದರು. ಆರಂಭಿಕ ಕಾಲಘಟ್ಟದ ಸ್ತ್ರೀಪರವಾದ ಬರವಣಿಗೆಗಳನ್ನು ಇಪ್ಪತ್ತನೇ ಶತಮಾನದ ಅಂಚಿನಲ್ಲಿ ನಿಂತು ಗಮನಿಸುವುದು, ಗುರುತಿಸಿ ದಾಖಲಿಸುವುದು ಅತ್ಯಂತ ಕುತೂಹಲಕರವಾದ ಹಾಗೂ ಫಲಪ್ರದವಾದ ಅಧ್ಯಯನವಾಗಿದೆ.

ಸ್ವಾತಂತ್ರ್ಯ ಪೂರ್ವದ ಕನ್ನಡ ಕಥನ ಸಾಹಿತ್ಯದಲ್ಲಿ ಪ್ರತಿನಿಧೀಕರಣಗೊಂಡ 'ವೈಧವ್ಯ' ಸಾಮಾಜಿಕ 'ಅನಿಷ್ಟ ಪದ್ಧತಿ'ಯಾಗಿ, ಸಾಮಾಜಿಕ ರೋಗವಾಗಿ ಹರಡಿಕೊಂಡಿರುವುದನ್ನು ಈ ಅಧ್ಯಯನ ವಿಶ್ಲೇಷಿಸುತ್ತದೆ. ಆದರೆ, ಸ್ವಾತಂತ್ರಪೂರ್ವದ ಮತ್ತು ಸ್ವಾತಂತ್ರ್ಯೋತ್ತರ ಕನ್ನಡ ಕಥನ ಸಾಹಿತ್ಯದ ಮುಖ್ಯ ನೆಲೆಗಳನ್ನು ಮತ್ತೆ ಮತ್ತೆ ಹೊಸ ಸಾಧ್ಯತೆಗಳೊಂದಿಗೆ ವಿಶ್ಲೇಷಣೆಗೆ ಒಳಪಡಿಸುವುದರಿಂದ ನಮ್ಮ ಸಮಕಾಲೀನ ಸಾಹಿತ್ಯ ಸಂಸ್ಕೃತಿಯ ಸ್ಪಷ್ಟವಾದ ಚರ್ಚೆ ಸಾಧ್ಯವಾಗುತ್ತದೆ.

'ವೈಧವ್ಯ'ದಂತಹ ಸಾಮಾಜಿಕ ಸಮಸ್ಯೆ ಮಹಿಳಾ ಬದುಕನ್ನು ಅಂಚಿಗೆ ಸರಿಸಿರುವುದರ ಕುರಿತು ಕಾಲಕಾಲಕ್ಕೂ ಚರ್ಚೆಗೊಳಗಾಗುತ್ತ ಸಾಗಬೇಕಾಗಿದೆ. ಸ್ವಾತಂತ್ರ್ಯಪೂರ್ವದಿಂದ ಇಲ್ಲಿಯತನಕ ಪ್ರತಿರೋಧ ವ್ಯಕ್ತಪಡಿಸುತ್ತ ಬಂದಿರುವುದೂ ಮುಖ್ಯ ಸಂಗತಿಯಾಗಿದೆ. ಅಧ್ಯಯನದ ವ್ಯಾಪ್ತಿ ಹೆಚ್ಚಿದಂತೆ ಚರ್ಚೆಯನ್ನು ವಿಭಿನ್ನ ಸೂಕ್ಷ್ಮಗಳೊಂದಿಗೆ ದಾಖಲಿಸುವ ಹೆಚ್ಚಿನ ಅವಕಾಶಗಳಿವೆ. ಈ ಚರ್ಚೆಯನ್ನು ಇತರ ಭಾರತೀಯ ಭಾಷೆಯ ಸಾಹಿತ್ಯ ಕೃತಿಗಳಿಗೂ ಅನ್ವಯಿಸಿ ವಿವೇಚಿಸಬಹುದಾಗಿದೆ. ಅಲ್ಲದೆ ಸಾಹಿತ್ಯದ ಆಂತರ್ಯದಲ್ಲಿ ಹುದುಗಿರುವ ಸಾಂಸ್ಕೃತಿಕ ಒತ್ತಡವು ಹೊಸ ಓದನ್ನು ಕಟ್ಟಲು ಸಹಾಯವಾಗುತ್ತದೆ. ವಿಧವಾಮೌಲ್ಯಾಚರಣೆಯ ನಿರಾಕರಣೆಯೊಂದಿಗೆ ಮಹಿಳಾ ಬದುಕಿನ ಶೋಧನೆ ಈ ಮಹಾಪ್ರಬಂಧದ ಆಶಯವಾಗಿದೆ. ಮಹಿಳೆಯ ಸಾಮಾಜಿಕ ಜೀವನದಲ್ಲಿ ನಡೆದ ಸ್ಥಿತ್ಯಂತರಗಳ ಕಡೆಗೆ ಬೆಳಕು ಚಲ್ಲುತ್ತ ಸಾಗುವುದೇ ಮುಂದಿನ ಅಗತ್ಯವಾಗಿದೆಯೆಂದು ಈ ಅಧ್ಯಯನ ಸ್ಪಷ್ಟಪಡಿಸುತ್ತದೆ. ಈ ಅನ್ವೇಷಣೆಯು ಹೊಸ ಎಚ್ಚರದ ಓದಿಗೆ ಮತ್ತು ಅರ್ಥಸಾಧ್ಯತೆಗಳಿಗೆ ಸ್ಪಷ್ಟವಾದ ರೂಪವನ್ನು ನೀಡಬಹುದಾಗಿದೆ.

ಅನುಬಂಧಗಳು

## ೨. ಶ್ರೀ ರಸ್ತು
## (ಲೇಖಕಿ : ಶ್ರೀಮತಿ ಆರ್. ಕಲ್ಯಾಣಮ್ಮನವರು)
## (ಶ್ರೀ ಶಾರದಾ ಸ್ತ್ರೀ ಸಮಾಜದ ಗೌರವ ಕಾರ್ಯದರ್ಶಿನಿ, ಚಾಮರಾಜಪೇಟೆ, ಬೆಂಗಳೂರು.)
## ಬಾಲ್ಯವಿವಾಹ ಖಂಡನ

ಈ ನಮ್ಮ ಹಿಂದುದೇಶದಲ್ಲಿ ಬ್ರಾಹ್ಮಣರೆ ಮೊದಲಾದವರಲ್ಲಿ ನಡೆಯುತ್ತಿರುವ ಅತಿ ಬಾಲ್ಯವಿವಾಹವು ಕೇವಲ ಅನುಚಿತವಾಗಿರುವ ಪದ್ಧತಿಗಳಲ್ಲಿ ಒಂದಾಗಿರುವುದು. ಚಿಕ್ಕಮಕ್ಕಳು ಬೊಂಬೆಯ ಮದುವೆಯನ್ನು ಮಾಡಿ ಸಂತೋಷಪಡುವಂತೆ ದೊಡ್ಡ ಮಕ್ಕಳಾದ ತಾಯಿತಂದೆಗಳು ತಮ್ಮ ಮಕ್ಕಳಾದ ಬೊಂಬೆಗಳಿಗೆ ವಿವಾಹವನ್ನು ಮಾಡಿ ಸಂತೋಷಪಡುತ್ತಿರುವರು. ಚಿಕ್ಕಮಕ್ಕಳು ಕೇವಲ ಬೊಂಬೆಗಳಂತೆ ಅಚರವಸ್ತುಗಳಾಗಿದ್ದರೆ ತಾಯಿತಂದೆಗಳು ಶಿಶುವಿವಾಹವನ್ನು ಮಾಡಿ ಸಂತೋಷಪಡುವುದರಲ್ಲಿ ಆಕ್ಷೇಪವೇನೂ ಇರಲಾರದು ಜೀವಕಳೆಗಳಿಂದ ಪರಿಪೂರ್ಣರಾದ ಮಕ್ಕಳಿಗೆ ಬಾಲ್ಯವಿವಾಹವನ್ನು ನಡೆಸುವುದರಿಂದ ಅನೇಕ ವೈಪರೀತ್ಯಗಳಿಗೆ ಮಾರ್ಗವುಂಟಾಗುವುದು.

ಈ ನಮ್ಮ ಹಿಂದು ದೇಶದಲ್ಲಿ ಹೊರತು ಮತ್ತಾವ ದೇಶದಲ್ಲಿಯೂ ಬಾಲ್ಯ ವಿವಾಹವು ಆಚರಣೆಯಲ್ಲಿಲ್ಲ. ಯುರೋಪ, ಅಮೆರಿಕಾ, ಆಸ್ಟ್ರೇಲಿಯಾ, ಮೊದಲಾದ ಪಾಶ್ಚಾತ್ಯ ದೇಶಗಳಲ್ಲಿ ಪ್ರಾಪ್ತವಯಸ್ಕರಾದ ಮೇಲೆ ವಿವಾಹಮಾಡುವರೇ ಹೊರತು ಬಾಲ್ಯವಿವಾಹವೆನ್ನುವ ಪ್ರಸಕ್ತಿಯೆ ಇಲ್ಲ. ನಮ್ಮ ಹಿಂದುದೇಶದಲ್ಲಿಯೂ ಬ್ರಾಹ್ಮಣರ ಹೊರತು ಇತರ ಜಾತಿಗಳಲ್ಲಿ ಬಾಲ್ಯವಿವಾಹವು ಅಷ್ಟಾಗಿ ಆಚರಣೆಯಲ್ಲಿಲ್ಲ. ಮಹಮ್ಮದೀಯರು, ಕ್ರೈಸ್ತರು, ಮೊದಲಿಯಾರ್ ಇವರೆ ಮೊದಲಾದವರು ವಧುವಿಗೂ ವರನಿಗೂ ತಕ್ಕವಯಸ್ಸಾದ ಮೇಲೆಯೆ ವಿವಾಹವನ್ನು ಮಾಡುವರು.

ಧರ್ಮಶಾಸ್ತ್ರದಲ್ಲಿ ಬಾಲ್ಯವಿವಾಹವು ವಿಧಿಸಲ್ಪಟ್ಟಿದೆಯೆಂದು ಕೆಲವರು ಆಕ್ಷೇಪಿಸಬಹುದು. ಧರ್ಮಶಾಸ್ತ್ರದಲ್ಲಿ ಬಾಲ್ಯವಿವಾಹವನ್ನು ಮಾಡಿಯೆ ತೀರಬೇಕೆಂದು ಆಜ್ಞಾಪಿಸಲ್ಪಟ್ಟಿಲ್ಲ. ಪೂರ್ವಿಕ ಋಷಿಗಳೂ ರಾಜರುಗಳೂ ಇತರರೂ ಸ್ತ್ರೀಪುರುಷರಿಗೆ ಪಕ್ವಕಾಲ ಒದಗಿದ ಮೇಲೆಯೆ ವಿವಾಹ ಮಾಡುತ್ತಿದ್ದಂತೆ ಕಂಡುಬರುತ್ತದೆ. ಶ್ರೀಕೃಷ್ಣ ಪರಮಾತ್ಮನ ಪತ್ನಿ ರುಕ್ಮಿಣಿ, ಶ್ರೀರಾಮಚಂದ್ರನ ಪತ್ನಿ ಸೀತೆ, ಧರ್ಮರಾಜನ ಪತ್ನಿ ದ್ರೌಪದಿ, ಹರಿಶ್ಚಂದ್ರನ ಪತ್ನಿ ಚಂದ್ರಮತಿ, ನಳಮಹಾರಾಯನ ಪತ್ನಿ ದಮಯಂತಿ, ಮೊದಲಾದ ಸ್ತ್ರೀರತ್ನಗಳು ಯೌವನವಯಸ್ಕರಾದ ಅನಂತರ ತಮ್ಮ ತಮ್ಮ ನಾಯಕರನ್ನು ತಾವೇ ಆರಿಸಿ ಸ್ವಯಂವರ ಮಾಡಿಕೊಂಡರೆಂದು ಪುರಾಣಗಳೆಲ್ಲಾ ಘಂಟಾಘೋಷವಾಗಿ ಸಾರುತ್ತಿರುವವು. ಇವರೆಲ್ಲರೂ ಕ್ಷತ್ರಿಯರು. ಬ್ರಾಹ್ಮಣರಲ್ಲಿ

ಪೂರ್ವಕಾಲದಲ್ಲಿ ಕೂಡ ಪ್ರೌಢವಿವಾಹಗಳಿಲ್ಲವೆಂದು ಕೆಲವರು ವಿತಂಡವಾದ ಮಾಡುವರು. ಇದು ಸರಿಯಲ್ಲ.

**ಶ್ಲೋಕ :–** ಪಿತಾ ದೃಷ್ಟ್ವಾ ಸುಮತೋಪಿ ಸ್ತ್ರೀಚಿಹ್ನಾಂ ಯವ್ವನೇ ಸ್ಥಿತಾಂ ।
ಕಸ್ಮೈದೇಯಾ ಮಯಾ ಕನ್ಯೇತ್ಯಚಿಂತಯವತೀವಸಃ ॥
ಮುನೀ ಕೌಂಡಿನ್ಯನಾಮಾವ್ಯೈವಿವಾಹೇಚ್ಛು ರಥಾಗತಃ ।
ತಸ್ಮೈಪ್ರದೇಯಾ ಕನ್ಯೇತಿ ಸುಮಂತೇನಾಪಿ ನಿಶ್ಚಿತಂ ॥ (ಭವಿಷ್ಯೋತ್ತರ ಪುರಾಣಂ)

**ಅರ್ಥ :–** ಸುಮಂತನೆಂಬ ಬ್ರಾಹ್ಮಣನು "ಸ್ತ್ರೀ ಚಿಹ್ನೆಗಳು ಧರಿಸಿ ಯವ್ವನವತಿಯಾಗಿದ್ದ ತನ್ನ ಮಗಳನ್ನು ಕೌಂಡಿನ್ಯನೆಂಬ ಬ್ರಾಹ್ಮಣನಿಗೆ ಕೊಟ್ಟು ವಿವಾಹ ಮಾಡಿದನೆಂದು ನಮ್ಮ ಪೂರ್ವಗ್ರಂಥಗಳಲ್ಲಿ ಹೇಳಲಿಲ್ಲವೆ?

ಆದ್ದರಿಂದ ಪೂರ್ವಕಾಲದಲ್ಲಿಲ್ಲದ ಬಾಲ್ಯವಿವಾಹಪದ್ಧತಿ ಈಗ ಮಾತ್ರ ಬ್ರಾಹ್ಮಣರಲ್ಲಿ ಹೇಗೆ ನೆಲೆಗೊಂಡಿತೆಂದರೆ, ಮುಸಲ್ಮಾನರ ಆಳಿಕೆ ಈ ನಮ್ಮ ಭರತಖಂಡದಲ್ಲಿ ನಡೆಯುತ್ತಿದ್ದ ಕಾಲದಲ್ಲಿ ಕ್ರೂರಕರ್ಮಿಗಳಾದ ಅವರಿಗೆ ಹೆದರಿ ಜನಗಳು ಬಾಲ್ಯದಲ್ಲಿಯೆ ವಿವಾಹವನ್ನು ನೆರವೇರಿಸುತ್ತಿದ್ದರು. ಆ ಪದ್ಧತಿ ಎಲ್ಲೆಲ್ಲಿಯೂ ಶಾಂತಿಯಿಂದ ತುಂಬಿ ತುಳುಕಾಡುತ್ತಿರುವ ಈ ಕಾಲದಲ್ಲೆಷ್ಟು ಮಾತ್ರವೂ ಅವಶ್ಯಕವಿಲ್ಲ. ಬಾಲ್ಯವಿವಾಹದಿಂದುಂಟಾಗುವ ಕೆಡಕುಗಳನ್ನು ಇಲ್ಲಿ ಸ್ವಲ್ಪಮಟ್ಟಿಗೆ ವಿವರಿಸಬೇಕಾಗುವುದು. ವರನಿಗೂ ವಧುವಿಗೂ ಈಡುನೋಡಿ ವಿವಾಹ ಮಾಡುವುದು ಬಹಳ ಅವಶ್ಯವಾಗಿರುವುದು. ಬಾಲ್ಯದಲ್ಲಿ ಈಡನ್ನು ಯಾವ ರೀತಿ ನಿರ್ಧರಿಸಬೇಕು? ಬಾಲ್ಯದಲ್ಲಿ ಉದ್ದವಾಗಿ ಬೆಳೆದಿರುವವರು ದೊಡ್ಡವರಾದ ಮೇಲೆ ಗಿಡ್ಡರಾಗಬಹುದು. ಬಾಲ್ಯದಲ್ಲಿ ಸೌಂದರ್ಯವುಳ್ಳವರು ಪ್ರಾಯದಲ್ಲಿ ಕುರೂಪಿಗಳಾಗಬಹುದು. ಪುರುಷರ ಗುಣ, ವಿದ್ಯೆ, ಬುದ್ಧಿ ಮೊದಲಾದವುಗಳನ್ನು ತಿಳಿದುಕೊಂಡು ಕನ್ಯಾದಾನ ಮಾಡ್ವಂತೆಯೆ ಸ್ತ್ರೀಯರ ಗುಣಗಳನ್ನೂ ಚೆನ್ನಾಗಿ ಪರಿಶೀಲಿಸಿ ವಿವಾಹವನ್ನು ಮಾಡಬೇಕೆಂಬುದನ್ನು ಸರ್ವರೂ ಒಪ್ಪುವರಲ್ಲವೆ? ಪ್ರೌಢವಯಸ್ಕರಾದ ಸ್ತ್ರೀಯರ ಗುಣಾವಗುಣಗಳನ್ನು ಒಂದು ಬಗೆಯಾಗಿ ನಿರ್ಧರಿಸುವಂತೆ ಕೇವಲ ಬಾಲ್ಯಸ್ಥಿತಿಯಲ್ಲಿ ನಿರ್ಧರಿಸುವುದು ಅಸಾಧ್ಯವು. ಆದುದರಿಂದ ವಧೂವರರ ದೇಹಸ್ಥಿತಿಯನ್ನೂ ಗುಣಾವಗುಣಗಳನ್ನೂ ಚೆನ್ನಾಗಿ ಪರಿಶೀಲಿಸದೆ ವಿವಾಹಮಾಡುವುದು ಆಳವರಿಯದೆ ಸಮುದ್ರದಲ್ಲಿ ಬಿದ್ದಂತೆಯೂ ಕಣ್ಣುಮುಚ್ಚಿಕೊಂಡು ಅಡವಿಯಲ್ಲಿ ಸಂಚರಿಸುವಂತೆಯೂ ಆಗುವುದಲ್ಲವೆ ? ಈ ಕಾರಣಗಳಿಂದೆ ಅನೇಕ ಭಾರ್ಯಾಭರ್ತೃಗಳು. "ಇಲಿ–ಬೆಕ್ಕು"ಗಳಂತೆ ಸದಾ ವ್ಯಾಜ್ಯವಾಡುತ್ತಿರುವರು.

ಇನ್ನೂ ಸಿಡುಬು ಎಳವು ಮೊದಲಾದ ರೋಗಗಳಿಗೆ ಬಾಲ್ಯಾವಸ್ಥೆಯೇ ತಕ್ಕ ಕಾಲವಾದ್ದರಿಂದ ಆ ಕಾಲವು ಕಳೆಯುವುದಕ್ಕೆ ಮುಂಚೆಯೆ ವಿವಾಹವನ್ನು

ಮಾಡುವುದು ವಿಪತ್ತನ್ನು ಬೆಲೆಕೊಟ್ಟುಕೊಂಡಂತಾಗುವುದು. ಬಾಲ್ಯವಿವಾಹಿತ ದಂಪತಿಗಳಿಗೆ ಪಕ್ವ ಕಾಲವೊದಗಲು ಕನಿಷ್ಠ ಹನ್ನೆರಡು ವರುಷಗಳಾದರೂ ಬೇಕು. ಅಷ್ಟೊಂದು ವರುಷಗಳು ಕಳೆದ ಮೇಲೆಯೆ ಅವರು ವಿವಾಹದ ಪ್ರಯೋಜನವನ್ನು ಹೊಂದುವರು. ಈ ಹನ್ನೆರಡು ವರುಷಗಳ ಮಧ್ಯದಲ್ಲಿ ಎಷ್ಟೋ ವಿಪತ್ತುಗಳು ಇವರನ್ನಿದಿರು ನೋಡುತ್ತಾ ಕಾದುನಿಂತಿರುವವು. ಈ ವಿಪತ್ತುಗಳಿಗೆಲ್ಲಾ ತಪ್ಪಿ ಜೀವಂತವಾಗಿರುವರೆಂಬ ನಂಬಿಕೆಯೇನು? ಈ ಕಾರಣದಿಂದಲೆ ಬಾಲ್ಯವಿವಾಹಾಚರಣೆಯುಳ್ಳ ನಮ್ಮ ಭರತಖಂಡದಲ್ಲಿ ಹಿಂದುವಿಧವೆಯರು ಅಸಂಖ್ಯಾತರಾಗಿರುವರು. ಮೇಲೆ ಹೇಳಿದಂತೆ ಹನ್ನೆರಡು ವರ್ಷಗಳಾದ ಅನಂತರ ನಡೆಯತಕ್ಕ ಕಾರ್ಯಕ್ಕೆ ಈಗ ಅಂಥ ಅವಸರ ಪಡಲೇತಕ್ಕೆ ? ಕನ್ಯೆಯ ಅಂಗೀಕಾರವು ಲೇಶವೂ ಇಲ್ಲದೆಯೆ ಅವಳಿಗೆ ವರನನ್ನು ಏರ್ಪಡಿಸುವ ಅಧಿಕಾರವನ್ನು ತಾಯಿತಂದೆಗಳೆ ವಹಿಸಬಾರದು.

**ಶ್ಲೋಕ :–** "ಪ್ರದಾನಮಪಿಕನ್ಯಾಯಾಃ ಪಶುವತ್ಸೋನುಮಾನ್ಯತೆ ।
ವಿಕ್ರಯಂ ಚಾಪ್ಯಸತ್ಯ ಕುರ್ಯಾತ್ಪುರುಷೋಭುವಿ"
(ಮಹಾಭಾರತ ಆದಿಪರ್ವ)

ಹಾಗೆ, ತಾಯಿತಂದೆಗಳು ಸ್ವೇಚ್ಛೆಯಾಗಿ ಕನ್ಯೆಗೆ ಮದುವೆಮಾಡುವುದಾದರೆ ಅದು ಪಶುವನ್ನು ಸ್ವೇಚ್ಛೆಯಾಗಿ ವಿಕ್ರಯಿಸುವಂತೆ ಕನ್ಯೆಯೆಂಬ ಪಶುವನ್ನು ವಿಕ್ರಯಿಸಿದಂತಾಗುದೆಂದು ಶ್ರೀಕೃಷ್ಣಪರಮಾತ್ಮನು ಅಪ್ಪಣೆಕೊಡಿಸಿರುವನಲ್ಲವೆ? ಹಸು, ಕರು, ಕುದುರೆ ಮೊದಲಾದ ಸಾಧುಪ್ರಾಣಿಗಳನ್ನು ಕೂಡ ನಮಗೆ ಬೇಕಾದಾಗ ಬೆಲೆ ಕೊಟ್ಟು ಕೊಂಡುಕೊಳ್ಳುವೆವೆ ವಿನಾ ಚಿಕ್ಕವರಿರುವಾಗ ನಾವು ಕೊಂಡುಕೊಳ್ಳುವುದಿಲ್ಲವಲ್ಲವೆ! ಹಾಗೆ ಕಂಡರೂ ಕೂಡ ಅವು ಸಾಯದೆ ಬದುಕಿದ್ದೂ ಇನ್ನೂ ಹನ್ನೆರಡು ವರುಷಗಳಾದ ಅನಂತರ ನಮ್ಮ ಕೆಲಸಕ್ಕೆ ಉಪಯೋಗವಾಗುವುವೆಂಬ ನಂಬಿಕೆಯೇನು? ಕರು, ಕುದುರೆ ಮುಂತಾದುವುಗಳು ಮುಂದೆ ನಮ್ಮ ಉಪಯೋಗಕ್ಕೆ ತಕ್ಕವೊ ಅಲ್ಲವೊ ಎಂಬ ವಿಷಯವನ್ನು ಪ್ರಕೃತ ನಾವು ನಿರ್ಧರಿಸಲು ಹೇಗೆ ಅಸಮರ್ಥರೊ ಅದರಂತೆಯೆ ಬಾಲ್ಯವಿವಾಹಿತ ವಧೂವರರ ಗುಣ ವಿಶೇಷಗಳನ್ನು ಕೂಡ ನಿರ್ಧರಿಸಲು ಅಸಮರ್ಥರೆ ಅಹುದು. ಪ್ರೌಢಾವಿವಾಹ ಮಾಡಿದ್ದೆ ಆದರೆ ಕೂಡಿದಮಟ್ಟಿಗೆ ವಿದ್ಯೆ, ಬುದ್ಧಿ, ದೇಹಸ್ಥಿತಿ ಮೊದಲಾದುವುಗಳನ್ನು ತಿಳಿಯಲು ಸುಲಭವಾಗಿರುವುದು.

ಕೆಲವು ಮಕ್ಕಳು ಬಾಲ್ಯದಲ್ಲಿ ಆರೋಗ್ಯದೃಢಕಾಯರಾಗಿದ್ದರೂ ಬೆಳೆಯುತ್ತ ಬೆಳೆಯುತ್ತ ಯವ್ವನಕಾಲದಲ್ಲಿ ಅಸಾಧ್ಯರೋಗಗ್ರಸ್ತರಾಗಿ ಸಂಸಾರಕ್ಕೆ ಕೇವಲ ಅನರ್ಹರಾಗುವರು. ಆದುದರಿಂದ ಕೂಡಿದ ಮಟ್ಟಿಗೆ ವಯಸ್ಸಾದ ಅನಂತರ ವಿವಾಹ

ಮಾಡಿದರೆ ಈ ಅನರ್ಥಗಳಿಗೆ ಅವಕಾಶವಿಲ್ಲದಂತಾಗುವುದು. ಈ ದೇಶದಲ್ಲಿ ಕೆಲವು ಸ್ತ್ರೀಯರು "ಹೀಚುಹಣ್ಣು" ಆಗುವಂತೆ ಅತಿ ಶೀಘ್ರದಲ್ಲಿಯೆ ಸಂಸಾರದಲ್ಲಿ ಪ್ರವೇಶಿಸಿ ಇಪ್ಪತ್ತೈದು ವರ್ಷಗಳಿಗೆಲ್ಲಾ ಏಳೆಂಟು ಮಕ್ಕಳುಗಳ ತಾಯಿಯರಾಗುವರು. ಪುರುಷರು ಮೂವತ್ತು ವರ್ಷಗಳಿಗೆಲ್ಲಾ ಮೊಮ್ಮಕ್ಕಳನ್ನು ಪಡೆದಿರುವುದನ್ನು ಎಲ್ಲೆಲ್ಲಿಯೂ ನೋಡಬಹುದು. ತಾಯಿಯರ ಶರೀರಸ್ಥಿತಿ ಇಷ್ಟರಲ್ಲಿರುವಾಗ ಅವರಿಗೆ ಉಂಟಾಗುವ ಸಂತಾನಗಳು ಎಷ್ಟು ಬಲವುಳ್ಳದ್ದಾಗಿರುವದೆಂಬುದನ್ನು ನಾವೆ ಊಹಿಸಿಕೊಳ್ಳಬಹುದು. ಆ ಅರ್ಥವನ್ನೆ:-

**ಶ್ಲೋಕ** : "ಊನಷೋಡಶವರ್ಷಾಯಾನಪ್ರಾಪ್ತಃ ಪಂಚವಿಂಶತಿಂ।
ಯದ್ಯಾದತ್ತೇಪುಮಾನ್‌ಗರ್ಭಃ ಕುಕ್ಷಿಸ್ಥಸ್ಸವಿಪದ್ಯತೇ ॥
ಜಾತೋವಾನ ಚಿರಂಜೀವೇಜ್ಜೀವೋವಾದುರ್ಬಲೇಂದ್ರಿಯಃ।
ತಸ್ಮಾದತ್ಯಂತಬಾಲಾಯಾಂ ಗರ್ಭಾಧಾನಂ ನಕಾರಯೇತ್॥"

ಶರೀರಗುಣಧರ್ಮಲಕ್ಷಣಪಂಡಿತನಾದ "ಧನ್ವಂತರಿ"ಯಿಂದ ಒಕ್ಕಣಿಸಲ್ಪಟ್ಟಿರುವ ಈ ವಾಕ್ಯವು ಬಾಲದಂಪತಿಗಳಿಂದ ಸಂತಾನವು ನಾಶವಾಗುವುದೆಂದು ಹೇಳಿರಲಿಲ್ಲವೆ?

ಹೀಗೆ ತಾವು ತಮ್ಮ ತಂದೆತಾಯಿಗಳ ಸಂರಕ್ಷಣೆಯಲ್ಲಿರತಕ್ಕ ಕಾಲದಲ್ಲಿ ಅವರನ್ನು ಸಂಸಾರಸಾಗರದಲ್ಲಿ ಮುಳುಗಿಸುವ ಮಹಾಪಾತಕವು ಮತ್ತಾವದೂ ಇಲ್ಲ.

ಮನೆಯಲ್ಲಿರುವ ಸ್ತ್ರೀಯರಿಗೆ ಅದರಲ್ಲೂ ಸಾಯುವ ಮುದುಕಿಯರಿಗೆ ತಮ್ಮ ಮನೆಯಲ್ಲಿ ಚಿಕ್ಕಮಕ್ಕಳಿದ್ದರೆ ತಾವು ಸಾಯುವುದಕ್ಕೆ ಮುಂಚೆ ಅವರಿಗೆ ವಿವಾಹ ಮಾಡಿ ನೋಡಬೇಕೆಂಬ ಆಶೆಯಿಂದ ವಯಸ್ಸನ್ನು ಕೂಡ ಲಕ್ಷಿಸದೆ ವಿವಾಹವನ್ನು ಮಾಡಿಬಿಡುವರು. ಅಯ್ಯೋ! ಅಜ್ಜಿಯ ಮರಣಾನಂತರ ಮೊಮ್ಮಕ್ಕಳು ಅನುಭವಿಸುವುದು ಸುಖವೋ ದುಃಖವೋ? ಈ ವಿವಾಹವನ್ನು ನೋಡಿ ಸಂತೋಷಪಟ್ಟ ಅಜ್ಜಿ ವಿವಾಹದ ಫಲವನ್ನೂ ಕಣ್ಣಾರೆ ಕಂಡಿದ್ದರೆ ತಿರಿಗಿ ಅಜ್ಜಿಯರಿಗೆ ಅಂಥ ಆಶೆಯೆ ಹುಟ್ಟಲಾರದು. ಮಗಳಿಗೆ ವಯಸ್ಸಾಗುವುದೆನ್ನುವ ಭಯದಿಂದ ವೃದ್ಧರಿಗೂ ರೋಗಿಗಳಿಗೂ ಕನ್ಯೆಯನ್ನು ಕೊಡುವುದರಿಂದಲೂ ಅನೇಕರು ಕಷ್ಟಗಳನ್ನನುಭವಿಸುತ್ತಿರುವರು. ವಿವಾಹ ವಿಷಯದಲ್ಲಿರುವ ಮುಖ್ಯವಾದ ಕಾರ್ಯವೊಂದನ್ನು ನಾವು ಗಮನಿಸಬೇಕಾಗಿರುವುದು. ಅದೇನೆಂದರೆ, ವಿವಾಹವೆನ್ನುವುದು ಸ್ತ್ರೀಪುರುಷರಿಬ್ಬರೂ ಸೇರಿ ಮಾಡಿಕೊಳ್ಳುವ ಒಡಂಬಡಿಕೆಯೆ ಅಲ್ಲದೆ ಮತ್ತೇನೂ ಅಲ್ಲ. ಆಗ ನಡೆಸತಕ್ಕ ಕ್ರಿಯೆಗಳೂ, ಮಂತ್ರಗಳೂ, ವಿಧಿಗಳೂ ಸ್ತ್ರೀ ಪುರುಷರು ಮುಂದೆ ನಡೆದುಕೊಳ್ಳಬೇಕಾದ ಕ್ರಮಗಳ ವಿಷಯದಲ್ಲಿ ಮಾಡಿಕೊಳ್ಳುವ ಕ್ರಮಗಳಲ್ಲಿ ಪರಸ್ಪರ ನಿಬಂಧನಗಳಾಗಿರುವವು. ಆ ನಿಬಂಧನಗಳ ಉದ್ದೇಶಗಳನ್ನೂ ಅಭಿಪ್ರಾಯಗಳನ್ನೂ ವಿವಾಹವೆಂಬುದರ ಅರ್ಥವೇನೆಂಬುದನ್ನೂ ಕೂಡ ತಿಳಿದುಕೊಳ್ಳಲಸಮರ್ಥರಾದರೆ ಕೇವಲ ಬಾಲ್ಯದಲ್ಲಿ ವಿವಾಹ ಮಾಡುವುದರಿಂದಾಗುವ

ಪ್ರಯೋಜನವೇನು? ಈ ಬಾಲಪ್ರಾಯದಲ್ಲಿ ವಿವಾಹವೆಂದರೇನು? ಗಂಡನೆಂದರೇನು? ಯಾತಕ್ಕಾಗಿ ವಿವಾಹವನ್ನು ಮಾಡಿಕೊಳ್ಳಬೇಕು? ಎನ್ನುವುದನ್ನು ಕೂಡ ಅವರು ಅರಿಯಲಾರರು. ಇದಕ್ಕೊಂದುದಾಹರಣೆಯನ್ನು ತಿಳಿಸುವೆನು.

ಒಂದೂರಿನಲ್ಲಿ ಮೂರುವರ್ಷ ವಯಸ್ಸುಳ್ಳ ಹೆಣ್ಣುಮಗುವೊಂದಕ್ಕೆ ವಿವಾಹ ಮಾಡಲು ನಿಶ್ಚೈಸಿ ಅದಕ್ಕಾಗಿ ಚಪ್ಪರಗಳನ್ನು ಇನ್ನೂ ಬೇಕಾದ ಸಲಕರಣೆಗಳನ್ನೂ ಒದಗಿಸುತ್ತಿದ್ದರು. ಇದನ್ನೆಲ್ಲಾ ನೋಡುತ್ತಿದ್ದ ಮಗುವಿಗೆ ಯಾತಕ್ಕೋಸ್ಕರ ಇಷ್ಟು ಏರ್ಪಾಡುಗಳನ್ನು ಮಾಡುತ್ತಿರುವರೊ ತಿಳಿಯದೆ ತಾಯಿಯ ಬಳಿ ಬಂದು ನಿಂತಿತು. ತರುವಾಯ ತಾಯಿಗೂ ಮಗುವಿಗೂ ಕೆಳಗೆ ಕಂಡಂತೆ ಸಂಭಾಷಣೆ ಜರಗಿತು. ಆ ಸಂಭಾಷಣವನ್ನು ವಾಚಕರ ಅವಗಾಹನೆಗೆ ಇಲ್ಲಿ ತಿಳಿಸಿರುವೆನು.

"**ಮಗು:–** ಅಮ್ಮಾ, ನಮ್ಮ ಮನೆಯಲ್ಲಿ ಇಷ್ಟು ಸಂಭ್ರಮವಾಗಿರುವದಲ್ಲ! ಇದಕ್ಕೆ ಕಾರಣವೇನು ?"

"**ತಾಯಿ:–** ಮಗೂ, ನಿನಗೆ ನಾಳೆ ಮದುವೆಯಮ್ಮಾ"

"**ಮಗು:–** ಅಮ್ಮಾ, ಮದುವೆಯೆಂದರೇನು?"

"**ತಾಯಿ:–** ಮದುವೆಯೆಂದರೆ ಮಾಂಗಲ್ಯಧಾರಣ ಮಾಡುವದು."

"**ಮಗು : –** ಅಮ್ಮಾ, ಮಾಂಗಲ್ಯವೆಂದರೇನು?"

"**ತಾಯಿ:–** ಇಲ್ಲಿ ನೋಡು. ನನ್ನ ಕತ್ತಿನಲ್ಲಿರುವುದಲ್ಲಾ. ಇದಕ್ಕೆ ಮಾಂಗಲ್ಯವೆಂದು ಹೆಸರು. ಮದುವೆಯ ದಿನ ಇಂಥದನ್ನ ನಿನಗೂ ಕಟ್ಟುವರು. (ಎಂದು ಹೇಳಿ ತನ್ನ ಕತ್ತಿನಲ್ಲಿರುವ ಮಾಂಗಲ್ಯವನ್ನು ಮಗುವಿಗೆ ತೋರಿಸಿದಳು.)

"**ಮಗು:–** ನಿನ್ನ ಕತ್ತಿನಲ್ಲಿರುವುದನ್ನು ತೆಗೆದು ನೀನೇ ನನ್ನ ಕತ್ತಿನಲ್ಲಿ ಕಟ್ಟಿಬಿಡಬಾರದೆ? ಇದಕ್ಕಾಗಿ ಕಷ್ಟವೇತಕ್ಕೆ? ಸಂಭ್ರಮವೇತಕ್ಕೆ?"

"**ತಾಯಿ:–** ಹೆಂಗಸರು ಮಾಂಗಲ್ಯವನ್ನು ಕಟ್ಟಕೂಡದು. ನಿನ್ನ ಗಂಡನಾಗುವವನು ಕಟ್ಟಬೇಕು."

"**ಮಗು:–** ಅಮ್ಮಾ, ಹಾಗಾದರೆ ನಿನಗೆ ಕಟ್ಟಿದವರಾರು?"

"**ತಾಯಿ:–** ನಿಮ್ಮಪ್ಪನು ನನಗೆ ಮಾಂಗಲ್ಯವನ್ನು ಕಟ್ಟಿದವರು."

"**ಮಗು:–** ಅಮ್ಮಾ, ಹಾಗಾದರೆ ಅಪ್ಪನೆ ಕಟ್ಟಲಿ. ಇಲ್ಲದಿದ್ದರೆ ಅಣ್ಣ ಕಟ್ಟಲಿ. ಅವನೂ ಇಲ್ಲದಿದ್ದರೆ ಪರಿಚಾರಕರಾದರೂ ಕಟ್ಟಲಿ. ಯಾರಾದರೂ ಗಂಡಸರು ತಾನೆ ಕಟ್ಟಬೇಕು" ಎಂದಿತಂತೆ.

ಏನೂ ತಿಳಿಯದ ಇಂಥ ಬಾಲ ಹಸುಳೆಗಳಿಗೆ ವಿವಾಹವನ್ನು ಮಾಡುವುದರಿಂದಾಗುವ ಪ್ರಯೋಜನವೇನು? ಎಷ್ಟು" ಎಂಬುದನ್ನು ವಾಚಕಮಹನೀಯರೆ ಊಹಿಸಿಕೊಳ್ಳಬೇಕಾಗಿರುವದು.

ಇದಲ್ಲದೆ ಕೆಲವು ವೇಳೆಗಳಲ್ಲಿ ಸ್ತನ್ಯಪಾನಮಾಡುತ್ತಿರುವ ಮಕ್ಕಳಿಗೆ ಕೂಡ ವಿವಾಹಮಾಡುತ್ತಿದ್ದರಂತೆ. ಆ ಮಕ್ಕಳಿಗೆ ವಿವಾಹ ಮಾಡುವ ಕಾಲದಲ್ಲಿ ಆಭರಣವನ್ನು ಧರಿಸಿ ಅಲಂಕಾರ ಮಾಡುವ ವೇಳೆಯಲ್ಲಿ ಆ ಬಾಧೆಯನ್ನು ಸಹಿಸದೆ ಅವು ಅಳುವಾಗ ತಾಯಿ ಸ್ತನ್ಯಪಾನ ಮಾಡಿಸಿ ಅಳುವನ್ನು ನಿಲ್ಲಿಸುವಳು. ಅನುಭವವಿಲ್ಲದ ವರನಿಗೆ ಯಾರ ಕೊರಳಿಗೆ ಮಾಂಗಲ್ಯವನ್ನು ಕಟ್ಟುವುದೋ ತಿಳಿಯದೆ ಕೆಲವು ವೇಳೆ ಅತ್ತೆಯ ಕೊರಳಿಗೆ ಕಟ್ಟಲು ಹೋಗುವುದು ಮತ್ತಷ್ಟು ವಿನೋದವಲ್ಲವೆ? ಈಯರ್ಥವನ್ನೆ ವೆಂಕಟಾಧ್ವರಿಯೆಂಬ ಪಂಡಿತನು "ಉಪನಯನ ವಿವಾಹಾವುತ್ಸವೈಕಪ್ರಧಾನೌ" ಎಂದು ವಿಶ್ವಗುಣಾದರ್ಶದಲ್ಲಿ ಹೇಳಿರುವನು.

ಈ ಹಳೆ ಪದ್ಧತಿಗಳೆಲ್ಲ ಈ ನಾಗರಿಕ ಕಾಲದಲ್ಲಿ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಅಷ್ಟಾಗಿಲ್ಲದಿದ್ದರೂ ನಾಗರಿಕತನವಿಲ್ಲದ ಅನೇಕ ಗ್ರಾಮಗಳಲ್ಲೂ ಈಗಲೂ ಹಾಗೆಯೆ ನಡೆಯುತ್ತಿರುವವು. ನಮ್ಮ ಮೈಸೂರು ಸರಕಾರದವರು ತಮ್ಮಿಂದಾದಷ್ಟು ಮಾಡಿ ಏಳು ವರ್ಷಗಳೊಳಗೆ ಮದುವೆ ಮಾಡಕೂಡದೆಂದು ನಿರ್ಬಂಧ ಮಾಡಿರುವರು. ಎಷ್ಟೊ ಜನರು ತಮ್ಮ ವೃದ್ಧಾಚಾರವನ್ನು ಬಿಡದೆ ಸರಕಾರದವರ ಕಣ್ಣಿಗೆ ಮಣ್ಣನ್ನೆರಚಿ ತಮ್ಮ ಕೆಲಸವನ್ನು ಬಿಡದೆ ನೆರವೇರಿಸಿಕೊಳ್ಳುತ್ತಿರುವರು. ಇವರುಗಳು ಹತ್ತು ವರುಷಗಳಾದ ಅನಂತರ ತಮ್ಮ ಪುತ್ರಿಯರಿಗೆ ವಿವಾಹ ಮಾಡಿದರೆ ತಮ್ಮ ಜಾತಿಯೆ ಹೋಗುವುದೆಂದೂ ಮಠಾಧಿಪತಿಗಳು ತಮಗೆ ಬಹಿಷ್ಕಾರ ಹಾಕುವರೆಂದೂ ಹೆದರಿ ಬಾಲ್ಯವಿವಾಹವನ್ನಾಚರಿಸುತ್ತಿರುವರು. ಇವರು ಪೂರ್ವಾಚಾರವನ್ನು ಆಚರಿಸಿದರೆ ಇದರ ಫಲವನ್ನನುಭವಿಸುವವರಾರು? ಕೇವಲ ಅರಿವಿಲ್ಲದ ಬಾಲಪ್ರಾಯದ ಕನ್ಯೆಯರೂ ಬಾಲಕರೂ ಅಲ್ಲವೆ? ಕೊನೆಯ ಪಕ್ಷ ಹದಿಮೂರು ವರ್ಷಗಳಿಗಾದರೂ ವಿವಾಹ ಮಾಡುವುದಾದರೆ ಇದರಿಂದ ದೇಶಕ್ಕೆಷ್ಟೊ ಮೇಲುಂಟಾಗುವುದು. ಏಳು ವರ್ಷ ವಯಸ್ಸಿನಲ್ಲಿ ವಿವಾಹವಾದರೆ ಪಾಠಶಾಲೆಗೆ ಕಳುಹಿಸುವುದು ಕೂಡದೆಂದು ಕೆಲವರು ಮುಷ್ಕರಹಿಡಿಯುವುದರಿಂದ ಹೆಣ್ಣುಮಕ್ಕಳು ಯಾವ ಕೆಲಸಕ್ಕೂ ಬಾರದೆ ಕೇವಲ ವಿದ್ಯಾವಿಹೀನೆಯರಾಗುವರು. ಪೂರ್ವಕಾಲದಲ್ಲಿ ದೀರ್ಘದೇಹಿಗಳೂ ಕಾಯಪುಷ್ಟಿಯುಳ್ಳವರೂ ಆಗಿದ್ದ ನಮ್ಮ ಜನಾಂಗದವರು ಬಾಲ್ಯವಿವಾಹ ಕಾರಣದಿಂದ ಈಗ ಕಡಲೆಗಿಡಕ್ಕೆ ಏಣಿಯನ್ನು ಹಾಕುವರೆನ್ನುವುದಕ್ಕೆ ಸರಿಯಾಗಿಯೆ ಇರುವರು. ಪೂರ್ವಕಾಲದವರಿಗಿಂತ ಬಲಹೀನರೂ ರೋಗಿಷ್ಟರೂ ಆಗಿರುವರು. ಇದಕ್ಕೆಲ್ಲ ಬಾಲ್ಯವಿವಾಹವು ಮೂಲಕಾರಣವೆಂದು ಹೇಳದೆಯೆ ತಿಳಿಯುವುದು. ಆದ್ದರಿಂದ ನಮ್ಮ ಈ ಭರತಖಂಡವು ಏಳಿಗೆಗೆ ಬರುವಂತೆ, ಬಲಶಾಲಿಗಳೂ, ಶೂರರೂ, ವಿದ್ಯಾವಂತರೂ ಆದ ಭಾರತಪುತ್ರರು ಉದಯಿಸಬೇಕಾದರೆ ಬಾಲ್ಯವಿವಾಹವು ನಿಂತು ಪ್ರೌಢವಿವಾಹವು ಆಚರಣಕ್ಕೆ ಬಂದ ಹೊರತು ಅಸಾಧ್ಯವು. ನಮ್ಮ

ಭರತಖಂಡದಲ್ಲಿರುವಷ್ಟು ಬಾಲವಿಧವೆಯರು ಪ್ರಪಂಚದ ಇನ್ನಾವಭಾಗದಲ್ಲಿಯಾದರೂ ಇಲ್ಲವೆಂದು ನಮ್ಗೆ ಚೆನ್ನಾಗಿ ತಿಳಿದಿರುವುದು. ಇದಕ್ಕೆ ಬಾಲ್ಯವಿವಾಹವೆ ಕಾರಣವೆಂದು ಬಾರಿಬಾರಿಯೂ ಹೇಳಿದರೂ ಸಾಲದಲ್ಲವೆ? ಪೂರ್ವಕಾಲದ ವೃದ್ಧ ಸ್ತ್ರೀಯರನ್ನು ಕೇಳಿದರೆ ತಮಗೆ ಮದುವೆಯಾದದ್ದೆ ಗೊತ್ತಿಲ್ಲವೆಂದು ಹಲವರೂ, ತಮ್ಮ ಗಂಡನ ಮುಖವನ್ನೆ ಕಾಣೆವೆಂದು ಕೆಲವರೂ ಹೇಳುವರು. ನಮ್ಮ ದೇಶದ ವಿಧವೆಯರನ್ನೂ ಅವರ ಶೋಚನೀಯವಾದ ಸ್ಥಿತಿಯನ್ನೂ ನೆನಸಿಕೊಂಡರೆ ಎಂಥ ಕಟುಕರ ಮನಸ್ಸೂ ಕೂಡ ಕರಗಿ ನೀರಾಗಿ ಹೋಗುವುದು. "ಅವರವರ ಹಣೆಬರಹವನ್ನು ಅವರವರೆ ಅನುಭವಿಸಬೇಕು. ಅದನ್ನು ತಡೆಯಲು ನಮ್ಮಿಂದ ಸಾಧ್ಯವೆ" ಎಂದು ಹೇಳಬಹುದು. ಆರುವರ್ಷಕ್ಕೆ ಮದುವೆ ಮಾಡುವುದನ್ನು ನಿಲ್ಲಿಸಿ ಹನ್ನೆರಡು ವರ್ಷಕ್ಕೆ ಮದುವೆಮಾಡುವುದು ಕೂಡ ನಮ್ಮಿಂದ ಅಸಾಧ್ಯವೆ? ನಾನು ನಮ್ಮ ಮನುಷ್ಯ ಪ್ರಯತ್ನಕ್ಕೆ ಸಾಧ್ಯವಾದಷ್ಟು ಮಾಡಿದರೆ ತರುವಾಯ ಈಶ್ವರೇಚ್ಛೆ ಇದ್ದಂತಾಗಲಿ. ಈ ವಿಷಯದಲ್ಲಿ ಎಷ್ಟೊ ಜನ ಮಹನೀಯರು ಮುಂದಾಳುಗಳಾಗಿ ನಿಂತು ಕೆಲಸ ಮಾಡುತ್ತಿರುವರು. ಎಷ್ಟೋ ಜನ ದೇಶವತ್ಸಲರು ತಮ್ಮ ಸಂಕಷ್ಟವನ್ನು ಕೂಡ ಲಕ್ಷಿಸದೆ ದೇಶೋದ್ಧಾರಕ್ಕಾಗಿ ಪಾಡುಪಡುತ್ತಿರುವರು. ಆದರೂ ಇನ್ನೂ ಈ ವಿಷಯದಲ್ಲಿ ಶ್ರದ್ಧೆ ಬೇಕಾಗಿರುವದು. ಆದ್ದರಿಂದ ಭರತಮಾತೆಯ ಪುತ್ರಪುತ್ರಿಯರಾದ ಸ್ತ್ರೀಪುರುಷರೆಲ್ಲರೂ ಏಕೀಭವಿಸಿ ಈ ವಿಷಯದಲ್ಲಿ ಶ್ರದ್ಧೆವಹಿಸಿ ಕೆಲಸ ಮಾಡಿದ ಹೊರತು ಭರತ ಸಂತಾನದ ಕಷ್ಟವು ನೀಗುವುದು ಅಸಾಧ್ಯವು. ಆದ್ದರಿಂದ ಸರ್ವಪ್ರಯತ್ನದಿಂದಲೂ ಬಾಲ್ಯವಿವಾಹಗಳನ್ನು ಕಡಿಮೆ ಮಾಡಿ ಬಾಲಕಬಾಲಿಕೆಯರ ಕಷ್ಟನಷ್ಟಗಳನ್ನು ಪರಿಹರಿಸಬೇಕಾದದ್ದೆ ಪ್ರತಿಯೊಬ್ಬ ಮಾತಾಪಿತೃಗಳ ಕರ್ತವ್ಯವಾಗಿರುವುದು. ಸರ್ವದಯಾಪರನಾದ ಭಗವಂತನು ಕ್ಷಿಪ್ರದಲ್ಲಿಯೆ ಈ ಕೋರಿಕೆಗಳನ್ನು ಸಲ್ಲಿಸಲಿ.

**ತತ್ಸತ್**

(ಕನ್ನಡ ಕೋಗಿಲೆ, ಅಗೋಸ್ತು ೧೯೧೭.)

(ಪುಟ ೧೪೨-೧೪೯)

(**ಕೃತಜ್ಞತೆ** : ಮಹಾಜನ ಸಂಸ್ಕೃತ ಕಾಲೇಜು, ನೀರ್ಚಾಲು – ಇದರ ಗ್ರಂಥಾಲಯ)
(**ಕೃಪೆ** : 'ಇದು ಮಾನುಷಿಯ ಓದು'–ಮಹೇಶ್ವರಿ .ಯು – ಶಿವರಾಮಕಾರಂತ ಅಧ್ಯಯನ ಕೇಂದ್ರ – ವಿವೇಕಾನಂದ ಕಾಲೇಜು, ಪುತ್ತೂರು – ೨೦೦೧)

## ಆಕರ ಗ್ರಂಥಗಳು


೧. ಅವಳ ಉದ್ಧಾರ–ಸರಸ್ವತಿ ಬಾಯಿ ರಾಜವಾಡೆ–ಸಾಹಿತ್ಯ ವಾಚಿಕೆ–ಶ್ರೀವಳ್ಳಿ ಟಿ.ಎಸ್–ಕರ್ನಾಟಕ ಸಾಹಿತ್ಯ ಅಕಾಡೆಮಿ –೧೯೯೪

೨. ಆದರ್ಶಸಾಧನೆ – ಕುವೆಂಪು–(ನನ್ನ ದೇವರು ಕಥಾಸಂಕಲನ)–ಉದಯ ರವಿ ಪ್ರಕಾಶನ ಮೈಸೂರು–೧೯೯೦

೩. ಅಪರಾಧಿ ಯಾರು ?– ಕೊಡಗಿನ ಗೌರಮ್ಮ– ಜೀವನ ಪ್ರೀತಿ–(ಸಂ) ಕಾಳೇಗೌಡ ನಾಗವಾರ

೪. ಇಂದಿರಾ–ಕೆರೂರು ವಾಸುದೇವಾಚಾರ್ಯ–ಉಷಾ ಸಾಹಿತ್ಯಮಾಲೆ–ಮೈಸೂರು ೧೯೮೪

೫. ಇಂದಿರಾಬಾಯಿ – ಗುಲ್ವಾಡಿ ವೆಂಕಟರಾಯರು–ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ–ಬೆಂಗಳೂರು ೧೯೮೫

೬. ಉತ್ತರಾಯಣ–ವ್ಯಾಸರಾಯ ಬಲ್ಲಾಳ – ಗೀತಾ ಬುಕ್ ಹೌಸ್ – ಮೈಸೂರು ೧೯೯೦

೭. ಒಂದು ಪುಟ್ಟ ಚಿತ್ರ – ಕೊಡಗಿನ ಗೌರಮ್ಮ –ಜೀವನ ಪ್ರೀತಿ–(ಸಂ) ಕಾಳೇಗೌಡ ನಾಗವಾರ–ಕನ್ನಡ ಪುಸ್ತಕ ಪ್ರಾಧಿಕಾರ–ಬೆಂಗಳೂರು–೨೦೦೨

೮. ಔದರ್ಯ – ಕುವೆಂಪು –ನನ್ನ ದೇವರು ಕಥಾಸಂಕಲನ– ಉದಯ ರವಿ ಪ್ರಕಾಶನ ಮೈಸೂರು–೧೯೯೦

೯. ಕಲ್ಲು ಕರಗಿತು – ಪ. ರಾಮಕೃಷ್ಣಶಾಸ್ತ್ರಿ – ಲಲಿತ ಪ್ರಕಾಶನ–ಪುತ್ತೂರು ದ.ಕ. ೧೯೮೩

೧೦. ಕನ್ಯಾಬಲಿ–ಶಿವರಾಮಕಾರಂತ –ಐ.ಬಿ.ಹೆಚ್. ಪ್ರಕಾಶನ–ಬೆಂಗಳೂರು–೧೯೭೪

೧೧. ಕಾನೂರು ಹೆಗ್ಗಡತಿ – ಕುವೆಂಪು– ಉದಯರವಿ ಪ್ರಕಾಶನ–ಮೈಸೂರು ೨೦೦೯

೧೨. ಗೃಹಭಂಗ –ಎಸ್.ಎಲ್. ಭೈರಪ್ಪ – ಸಾಹಿತ್ಯ ಭಂಡಾರ – ಬೆಂಗಳೂರು– ೧೯೮೩

೧೩. ಗಾಜಿನ ಗೊಂಬೆಗಳು – ಲೀಲಾಮಣ್ಣಾಲ–ನಿಸರ್ಗ ಪ್ರಕಾಶನ – ಮೈಸೂರು ೧೯೯೮

೧೪. ಗಾಂಧಿಬಂದ–ಹೆಚ್.ನಾಗವೇಣಿ –ಲೋಹಿಯಾ ಪ್ರಕಾಶನ–ಬಳ್ಳಾರಿ–೨೦೦೮

೧೫. ಘಟಾಶ್ರಾದ್ಧ–ಯು.ಆರ್. ಅನಂತಮೂರ್ತಿ – ಮೊದಲ ಓದು–ಅಕ್ಷರ ಪ್ರಕಾಶನ, ಹೆಗ್ಗೋಡು

೧೬. ದೂರದ ಬೆಟ್ಟ –ತ್ರಿವೇಣಿ– ವಿಷ್ಣು ಪ್ರಕಾಶನ –ಮೈಸೂರು –೨೦೦೪

೧೭. ನಭಾ –ತಿರುಮಲಾಂಬಾ–ಹಿತೈಷಿಣಿಯ ಹೆಜ್ಜೆಗಳು – (ಸಂ) ವಿಜಯಾದಬ್ಬೆ–ಕನ್ನಡ ಮತ್ತು ಸಂಸ್ಕೃತಿ ಇಲಾಖೆ–ಬೆಂಗಳೂರು–೧೯೯೨

೧೮. ನನ್ನ ದೇವರು–ಕುವೆಂಪು– ನನ್ನ ದೇವರು ಕಥಾಸಂಕಲನ– ಉದಯ ರವಿ ಪ್ರಕಾಶನ– ಮೈಸೂರು–೧೯೯೧

೧೯. ನಿರ್ಭಾಗ್ಯವನಿತೆ – ಆರ್ ಕಲ್ಯಾಣಮ್ಮ–(ಸಂ) ಬಿ.ಎನ್.ಸುಮಿತ್ರಬಾಯಿ – ಲೇಖಕಿಯರ ಸಂಘ – ಬೆಂಗಳೂರು – ೧೯೯೨

೨೦. ಪುನರ್ವಿವಾಹ – ಕಲ್ಯಾಣಸರಸ್ವತಿ–(ಸಂ)ಬಿ.ಎನ್. ಸುಮಿತ್ರಾಬಾಯಿ – ಕರ್ನಾಟಕ ಲೇಖಕಿಯರ ಸಂಘ ಬೆಂಗಳೂರು–೧೯೯೨

೨೧. ಪುನರ್ವಿವಾಹ –ಕೊಡಗಿನ ಗೌರಮ್ಮ–ಜೀವನ ಪ್ರೀತಿ(ಸಂ) ಕಾಳೇಗೌಡ ನಾಗವಾರ–ಕನ್ನಡ ಪುಸ್ತಕ ಪ್ರಾಧಿಕಾರ–ಬೆಂಗಳೂರು ೨೦೦೨

೨೨. ಫಣಿಯಮ್ಮ – ಎಂ.ಕೆ. ಇಂದಿರಾ – ಇಂದಿರಾ ಪ್ರಕಾಶನ – ಬೆಂಗಳೂರು – ೧೯೭೫

೨೩. ಬನಶಂಕರಿ – ನಿರಂಜನ – ಡಿ.ವಿ.ಕೆ ಮೂರ್ತಿ – ಮೈಸೂರು – ೨೦೦೨

೨೪. ಮಲೆಗಳಲ್ಲಿ ಮದುಮಗಳು – ಕುವೆಂಪು– ಉದಯರವಿ ಪ್ರಕಾಶನ– ಮೈಸೂರು ೨೦೦೯

೨೫. ಮರಳಿ ಮಣ್ಣಿಗೆ – ಶಿವರಾಮಕಾರಂತ – ಎಸ್.ಬಿ.ಎಸ್. ಪಬ್ಲಿಷರ್ಸ್ – ಡಿಸ್ಟ್ರಿಬ್ಯೂಟರ್ಸ್ – ಬೆಂಗಳೂರು – ೨೦೦೨

೨೬. ಮೂಕಜ್ಜಿಯ ಕನಸುಗಳು –ಶಿವರಾಮಕಾರಂತ – ಎಸ್.ಬಿ.ಎಸ್. ಪಬ್ಲಿಷರ್ಸ್ – ಡಿಸ್ಟ್ರಿಬ್ಯೂಟರ್ಸ್ – ಬೆಂಗಳೂರು – ೧೯೯೮

೨೭. ಮಧುವನ – ಎಂ.ಕೆ. ಇಂದಿರಾ – ಹೇಮಂತ ಸಾಹಿತ್ಯ – ಬೆಂಗಳೂರು – ೧೯೭೬

೨೮. ಮರಳಿ ಮಣ್ಣಿಗೆ – ಶಿವರಾಮಕಾರಂತ – ಸಪ್ನಬುಕ್ ಹೌಸ್ – ಬೆಂಗಳೂರು –೨೦೧೦

೨೯. ಮುಸ್ಸಂಜೆ ಕಥಾ ಪ್ರಸಂಗ–ಪಿ.ಲಂಕೇಶ್–ಪತ್ರಿಕೆ ಪ್ರಕಾಶನ–ಬೆಂಗಳೂರು–೨೦೦೩

೩೦. ಮುಖವಾಡ – ಮನೋರಮಾ ಎಂ.ಭಟ್ – ಕನ್ನಡ ಪ್ರಪಂಚ ಪ್ರಕಾಶನ – ಪುತ್ತೂರು ದ.ಕ. ೧೯೯೪

೩೧. ಮೀನಾಕ್ಷಿಯ ಮನೆ ಮೇಷ್ಟರು – ಕುವೆಂಪು –ನನ್ನ ದೇವರು ಕಥಾಸಂಕಲನ ಉದಯ ರವಿ ಪ್ರಕಾಶನ–ಮೈಸೂರು–೧೯೯೦

೩೨. ವಾಣಿಯ ಸಮಸ್ಯೆ – ಕೊಡಗಿನ ಗೌರಮ್ಮ – ಜೀವನ ಪ್ರೀತಿ – (ಸಂ) ಕಾಳೇಗೌಡ ನಾಗವಾರ – ಕನ್ನಡ ಪುಸ್ತಕ ಪ್ರಾಧಿಕಾರ – ಬೆಂಗಳೂರು – ೨೦೦೨

೩೩. ವೇಣಿಸಂಹಾರ – ದೇವಾಂಗನಾಶಾಸ್ತ್ರಿ – (ಸಂ) ಯಶೋಧಾಭಟ್ – ಅವನಿ ರಸಿಕ ರಂಗ ಧಾರವಾಡ – ೨೦೦೫
೩೪. ವೈರಾಗ್ಯದ ಮಹಿಮೆ – ಕುವೆಂಪು –ನನ್ನ ದೇವರು ಕಥಾಸಂಕಲನ–ಉದಯ ರವಿ ಪ್ರಕಾಶನ ಮೈಸೂರು–೧೯೯೦
೩೫. ವೈಯಾರಿ – ಗೊರೂರು ರಾಮಸ್ವಾಮಿ ಐಯ್ಯಂಗಾರ್ – ಐ.ಬಿ.ಹೆಚ್. ಪ್ರಕಾಶನ – ಬೆಂಗಳೂರು – ೨೦೦೪
೩೬. ವೈಶಾಖ – ಚದುರಂಗ – ನವ್ವಾಲೆ ಪ್ರಕಾಶನ – ಮೈಸೂರು – ೧೯೯೩
೩೭. ವಂಶವೃಕ್ಷ – ಎಸ್.ಎಲ್. ಭೈರಪ್ಪ – ಸಾಹಿತ್ಯ ಭಂಡಾರ – ಬೆಂಗಳೂರು – ೨೦೦೯
೩೮. ವ್ಯಾಮೋಹ – ಬಿಳುಮನೆ ರಾಮದಾಸ್ – ಮಲೆನಾಡು ಪ್ರಕಾಶನ – ಬೆಂಗಳೂರು – ೧೯೯೦
೩೯. ಶುಭದಾ – ಶರಶ್ಚಂದ್ರ ಚಟರ್ಜಿ(ಅನು) ಅಹೋಬಲಶಂಕರ – ಕಾವ್ಯಾಲಯ ಪ್ರಕಾಶನ – ಮೈಸೂರು – ೧೯೭೦
೪೦. ಶೇಷಮ್ಮ – ಮಾಸ್ತಿ ವೆಂಕಟೇಶ ಐಯ್ಯಂಗಾರ್ – ಪ್ರಗತಿ ಪ್ರಕಾಶನ – ಬೆಂಗಳೂರು –೧೯೮೯
೪೧. ಸದಾನಂದ –ಎಂ.ಕೆ. ಇಂದಿರಾ – ಇಂದಿರಾ ಪ್ರಕಾಶನ – ಬೆಂಗಳೂರು – ೨೦೦೪
೪೨. ಹಣ್ಣೆಲೆ ಚಿಗುರಿದಾಗ – ತ್ರಿವೇಣಿ –ವಿಷ್ಣು ಪ್ರಕಾಶನ – ಮೈಸೂರು–೨೦೦೪
೪೩. ಹೆಣ್ಣಿನ ಆಕಾಂಕ್ಷೆ – ಎಂ.ಕೆ. ಇಂದಿರಾ– ಇಂದಿರಾ ಪ್ರಕಾಶನ – ಬೆಂಗಳೂರು –೨೦೦೪
೪೪. ಹೊಸಹೆಜ್ಜೆ – ಗಂಗಾಪಾದೇಕಲ್ – ಕನ್ನಡ ಸಂಘ, ವಿವೇಕಾನಂದ ಕಾಲೇಜು – ಪುತ್ತೂರು ದ.ಕ. – ೧೯೯೬

